# ಕುಂಕುಮ ಭಾಗ್ಯ

(ಸಾಮಾಜಿಕ ಕಾದಂಬರಿ)

ಎಂ. ವಿ. ಸೀತಾರಾಮಯ್ಯ, ಎಂ.ಎ.

ಉಷಾ ಸಾಹಿತ್ಯ ಮಾಲೆ
ಮೈಸೂರು

# ಬಿನ್ನಹ

ಕಳೆದ ವರ್ಷ ಪ್ರಕಟವಾದ ನನ್ನ ಕಾದಂಬರಿ 'ತಾಯ ಬಯಕೆ'ಗಿಂತ ೩ದಲು ರಚಿತವಾದ ಕಾದಂಬರಿ ಇದು. ಆದರೂ, ಕಾರಣಾಂತರಗಳಿಂದ ಃಗ ಪ್ರಕಟಗೊಳ್ಳುತ್ತಿದೆ.

'ಮಾದನ ಮಗಳು' ಕಾದಂಬರಿಯು ಘಟನೆಗಳ ಕಾರ್ಯಕ್ಷೇತ್ರವಾದ ೋಳಲೂರೆ ಈ ಕಾದಂಬರಿಯ ಪೂರ್ವಭಾಗದ ಮುಖ್ಯ ಘಟನೆಗಳ ಕಾರ್ಯ ಕ್ಷೇತ್ರ. ಅಲ್ಲದೆ, ಆ ಕಾದಂಬರಿಯ ಕೆಲವು ಪಾತ್ರಗಳು ಇಲ್ಲಿಯೂ ಾ ಾಸಿ ಕೊಂಡಿವೆ; ಅಲ್ಲಿ ನಾಮಮಾತ್ರನಾಗಿರುವ ಸುಬ್ಬಾಭಟ್ಟ ಇಲ್ಲಿ ಪ್ರಮುಖ ಪಾತ್ರ ವಾಗಿದ್ದಾನೆ. ಅಲ್ಲಿ ಕಥಾನಾಯಕನಾದ ಸುಂದರಮೂರ್ತಿ ಇಲ್ಲಿ ಉಲ್ಲೇಖಿತ ನಾಗಿರುವನಷ್ಟೆ. ಅಂತೂ, ಒಟ್ಟಿನಲ್ಲಿ, ಕೋಳಲೂರಿನಂಥ ಗ್ರಾಮದ ಜೀವನದ ಚಿತ್ರಣವೇ ಆಗಲಿ ಮೈಸೂರು ಬೆಂಗಳೂರುಗಳ ಜೀವನದ ಚಿತ್ರಣವೇ ಆಗಲಿ, ಬಹುಮಟ್ಟಿಗೆ ಭಾರತ ಸ್ವಾತಂತ್ರ್ಯಪೂರ್ವದ ತಲೆಮಾರಿನ ಚಿತ್ರಣವೇ ಎರಡೂ ಕಾದಂಬರಿಗಳಲ್ಲಿ ಕಂಡುಬರತಕ್ಕದ್ದು.

ಒಂದು ತಲೆಮಾರು ಎಲ್ಲಿಗೆ ವಿರಮಿಸಿ ಇನ್ನೊಂದು ತಲೆಮಾರು ಎಲ್ಲಿಂದ ಪ್ರಾರಂಭವಾಗುತ್ತದೆ ಎಂದು ಗೆರೆ ಹಾಕಿ ನಿರ್ದೇಶಿಸುವುದು ಕಷ್ಟ. ಸೂರ್ಯಾಸ್ತ ವಾದರೂ ಸೂರ್ಯಕಾಂತಿಯ ಕೆಂಬೆಳಕು ಇನ್ನೂ ಉಳಿದಿರುವಂತೆ, ಹೊಳೆಗೆ ನೆರೆ ಬಂದಾಗ ಹೊಸ ನೀರಿನೊಂದಿಗೆ ಹಳೆಯ ನೀರೂ ಬೇರ್ಪಡಿಸಲಾಗದಂತೆ ಬೆರೆತಿರುವಂತೆ, ಹಳೆಯ ತಲೆಮಾರಿನ 'ಜೀವನ' ಹೊಸ ತಲೆಮಾರಿನ 'ಜೀವನ'ದೊಂದಿಗೆ ಅಂತರ್ಗಾಮಿಯಾಗಿ ಇದ್ದೇ ಇರುತ್ತದೆ. ಈ ಕಾದಂಬ ರಿಯ ಮೊದಲ ಭಾಗದ ಸೀತೆಯಂಥ ತೀರ ಚಿಕ್ಕ ವಯಸ್ಸಿನ ವಿಧವೆಯರು ಈಗ ಕಾಣಸಿಕ್ಕದಿರಬಹುದು; ಗೌರಿಯಂಥವರೂ ಇಲ್ಲದಿರಬಹುದು; ಆದರೆ ಇವರ ಹಾಗೆ ಅಂದು ವಿಧವೆಯರಾದವರು ಇಂದು ಇನ್ನೂ ಬದುಕಿರಬಹುದು; ದುಕಿದ್ದಾರೆ. ಇಂಥವರ ಕಥೆ ಹೇಳಹೊರಟರೆ, ಹಿಂದಣ ತಲೆಮಾರುಗಳ ರಣ ಅವಶ್ಯ ಮಾತ್ರವಲ್ಲ, ಅನಿವಾರ್ಯವಾಗುತ್ತದೆ. ಅಲ್ಲದೆ, ಬೆಳೆದ ಸೀತೆ- ರಿಯರು ಎದುರಿಸಬೇಕಾಗಿ ಬಂದ ಸಮಸ್ಯೆಗಳು ಹೆಣ್ಣಿನ ಪಾಲಿಗೆ ಇಂದೂ

ಇದ್ದೇ ಇವೆ. ನಂಜುಂಡಶಾಸ್ತ್ರಿಗಳು, ವೆಂಕಟಸುಬ್ಬಯ್ಯನವರು, ಸುಬ್ಬರಾಯರು, ಪಾರ್ವತಮ್ಮನವರು, ರಂಗಸ್ವಾಮಿ, ಸುಬ್ಬಸ್ವಾಮಿ, ಬಡ್ಡಿ ಭೀಮರಾಯರು ಇವರೇ ಮೊದಲಾದ ವ್ಯಕ್ತಿಗಳಂಥವರು ಇಂದಿನ ತಲೆಮಾರಿನಲ್ಲಿಯೂ ಕಾಣಸಿಕ್ಕತಕ್ಕವರು. ರಾಮಸ್ವಾಮಿ, ಪುಟ್ಟಣ್ಣಯ್ಯ ಇವರಂಥ ವ್ಯಕ್ತಿಗಳು ಎಲ್ಲ ಕಾಲದಲ್ಲೂ ಇರತಕ್ಕವರು. ನಿಜವಾಗಿ, ಇದು ತೀರ ಹಳೆಯ ತಲೆಮಾರಿನ ಚಿತ್ರವೂ ಅಲ್ಲ; ಆತ್ಯಾಧುನಿಕ ಪ್ರವೃತ್ತಿಗಳನ್ನು, ರಾಜಕೀಯ ಪ್ರಶ್ನೆಗಳನ್ನು ಪ್ರತಿಬಿಂಬಿಸುವ ಸಮಕಾಲೀನ ಸಮಾಜಭಾಗದ ಚಿತ್ರವೂ ಅಲ್ಲ. ಮೊದಲೇ ಹೇಳಿದಂತೆ. ಸ್ವಾತಂತ್ರ್ಯಪೂರ್ವದ ಪರಿವರ್ತನಶೀಲ ಸಮಾಜದ ಚಿತ್ರ.

ಇದು ಪ್ರಮುಖವಾಗಿ ಸೀತೆಯ ಬದುಕಿನ ಕಥೆ; ಆದರೂ, ಇದಕ್ಕೆ ಪೋಷಕವಾಗಿ ಗೌರಿಯ ಕಥೆಯೂ ಸಾಗಿದೆ. ಸಹಜವಾಗಿಯೆ ಒಂದು ವಿಸ್ತೃತ, ಬಹುಮುಖಿ, ದೀರ್ಘ; ಇನ್ನೊಂದು ಸಂಕ್ಷಿಪ್ತ, ಏಕಮುಖಿ. ಅದೇಕೆ ಗೌರಿ ಹಾಗಾದಳು, ಸೀತೆ ಹೀಗಾದಳು ? ಪ್ರತಿಯೊಬ್ಬನೂ ಸನ್ನಿವೇಶ–ಸಂದರ್ಭಗಳ ಶಿಶು—ಬಹುಮಟ್ಟಿಗೆ. ಸೀತೆ–ಗೌರಿ ಹೇಗೆ ಹೊರತಾದಾರು ?

ಸೀತೆಯ ಕಥೆಗೆ ಹಿನ್ನೆಲೆಯಾಗಿ ವೆಂಕಟಸುಬ್ಬಯ್ಯನವರು, ಶಾಮಣ್ಣನವರು, ಸುಬ್ಬಸ್ವಾಮಿ, ರಂಗಸ್ವಾಮಿ, ಮೈಲಾರಯ್ಯನವರು, ರಾಮಕೃಷ್ಣಯ್ಯನವರು, ಬಡ್ಡಿ ಭೀಮರಾಯರು—ಇವರ ಸಂಸಾರಗಳ ಚಿತ್ರಣವೂ ರೂಪಗೊಂಡಿದೆ. ಒಂದು ಸಂಸಾರವನ್ನು ಹೂಡಿ, ಕಟ್ಟಿ, ಬೆಳಸುವ ಭಾಗ್ಯವನ್ನು—'ಕುಂಕುಮ ಭಾಗ್ಯ'ವನ್ನು—ಪಡೆದುಕೊಂಡು ಬಂದಿರದ ಅಥವಾ ಕಳೆದುಕೊಂಡ ಸೀತೆ, ಈ ಎಲ್ಲ ಸಂಸಾರಗಳೊಂದಿಗೂ ಸಂಬಂಧ ಹೊಂದಬೇಕಾಗಿ ಬಂದು, ಈ ಸಂಸಾರಗಳ ಕಥೆಗಳನ್ನು ಕೂಡಿಸುವ ಕೊಂಡಿಯಾಗಿದ್ದಾಳೆ. ಅಥವಾ ಅವಳ ಕಥೆಯೇ ಈ ಸಂಸಾರಗಳ ಕಥೆಯಾಗಿ ಕವಲೊಡೆದಿದೆ. ಅವಳ ಬದುಕಿನ ವಿವಿಧಾನುಭವಗಳ ವ್ಯಾಪಕತೆಯೆ ಕಾದಂಬರಿಯ ಪಾತ್ರ ಸಂಖ್ಯಾಬಾಹುಳ್ಯಕ್ಕೆ ಕಾರಣ; ನಾನಲ್ಲ! ಅದು ಹೇಗಾದರೂ ಇರಲಿ. ಲೇಖನ ಕಾರ್ಯ ಸಾಗುತ್ತ ಬಂದಂತೆ ನನ್ನ ಸೌಕರ್ಯಕ್ಕೆಂದು ಗುರುತು ಮಾಡಿಟ್ಟು-ಕೊಂಡ ಪಾತ್ರಪರಿಚಯ ಪಟ್ಟಿಕೆಯನ್ನು ಪ್ರಕಟಿಸಲಾಗಿದೆ. ಇದರಿಂದ ಓದುಗರಿಗೂ ಅನುಕೂಲವಾದೀತೆಂದು ನನ್ನ ನಂಬಿಕೆ.

# ಕುಂಕುಮ ಭಾಗ್ಯ

## ಪ್ರಕರಣ ಒಂದು

### ೧

ಈಚೆಗೆ ಸೀತೆ ಮನೆ ಬಿಟ್ಟು ಹೊರಕ್ಕೆ ಹೊರಡುವುದು ಎಷ್ಟು ವಿರಳವಾಗಿತ್ತೋ ರಾಮಸ್ವಾಮಿ ಮನೆ ಸೇರುವುದೂ ಅಷ್ಟೇ ಅಪೂರ್ವವಾಗಿತ್ತು. ಆದರೆ ಇಂದು ಅವನು ಬೆಳಗ್ಗೆ ಕಾಫಿ ಕುಡಿದವನು ಮಡಿಸಿದ ಕಂಬಳಿಯ ಮೇಲೆ ತಲೆಯಿಟ್ಟು ಮಂದಲಗೆಯ ಮೇಲೆ ಮಲಗಿಬಿಟ್ಟಿದ್ದಾನೆ; ನಿದ್ದೆಮಾಡುತ್ತಿಲ್ಲ, ಆದರೂ ಕಣ್ಣು ಮುಚ್ಚಿದ್ದಾನೆ. ಮಂದಲಗೆಯ ಅಳತೆಗೆ ಕಾಲು ಮಡಿಸಿಕೊಂಡಿದ್ದಾನೆ; ಆದರೂ ಎಡಮಗ್ಗುಲಾಗಿ ಮಲಗಿದ್ದ ಅವನ ಬಲಗಾಲಿನ ಹೆಬ್ಬೆರಳು ನೆಲ ಸೋಕುತ್ತಿದೆ.

ಅವನು ಮಲಗಿದ್ದಷ್ಟು ಎಡೆಯನ್ನು ಬಿಟ್ಟು, ತೊಟ್ಟಿಯ ಉಳಿದ ಭಾಗವನ್ನೆಲ್ಲಾ ಸೀತೆ ಸೆಗಣಿಯಿಂದ ಸಾರಿಸಿ, ಗೋಡೆಯ ಅಂಚಿಗೂ ಕಂಬದ ಸುತ್ತಲೂ ರಂಗೋಲಿಯ ಎಳೆಯಿಟ್ಟು, ಹಜಾರದ ಕೆಳಭಾಗದಲ್ಲಿ ಒಂದು ಹಸೆ ಬರೆದು, ಈಗ ಮೇಲುಭಾಗದಲ್ಲಿ ಆ ಕೊನೆಯಿಂದ ಈ ಕೊನೆಯವರೆಗೆ ಒಂದು ದೊಡ್ಡ ಹಸೆ ಬರೆಯುವುದರಲ್ಲಿ ನಿರತಳಾಗಿದ್ದಾಳೆ.

ಮನೆಯಲ್ಲಿ ಇನ್ನುಳಿದವರು ಯಾರೂ ಇಲ್ಲ. ತಂದೆ ವೆಂಕಟಸುಬ್ಬಯ್ಯನವರು ತಮ್ಮ ನಿತ್ಯದ ಕೆಲಸದ ಮೇಲೆ ಹೊರಕ್ಕೆ ಹೋಗಿದ್ದಾರೆ; ತಾಯಿ ಪಾರ್ವತಮ್ಮ ಒಟ್ಟೆಯೊಗೆದು, ಮಡಿಯುಟ್ಟು, ನೀರು ತರಲು ಹೊಳೆಗೆ ಹೋಗಿದ್ದಾರೆ.

ಹಸೆಯಿಕ್ಕುತ್ತಿದ್ದ ಸೀತೆಯ ಕೈಯ ಎರಡೇ ಚಿನ್ನದ ಬಳೆ ಆಗಿಂದಾಗ್ಗೆ ಒಂದಕ್ಕೊಂದು ತಗುಲಿ ಬಹುಮೆಲ್ಲನೆ ಝಣತ್ಕಾರ ಮಾಡುತ್ತಿವೆ; ಆ ಸಪ್ಪಳ ರಾಮಸ್ವಾಮಿಯ ಕಿವಿಗೂ ಬಿದ್ದು, ಅವನೂ ಆಗೊಮ್ಮೆ ಈಗೊಮ್ಮೆ ಚಿನ್ನದ ಬಳೆ ತೊಟ್ಟ ಆ ಹೊಂಬಣ್ಣದ ಕೈಯನ್ನು ನಿರುಕಿಸುತ್ತಾನೆ.

ಅವನ ದೃಷ್ಟಿ ಕ್ಷಣಕಾಲ ಆ ಚಿನ್ನದ ಬಳೆಗಳ ಮೇಲೆ ನೆಲಸುತ್ತದೆ; ಮತ್ತೆ ಕಣ್ಣು ಮುಚ್ಚಿಕೊಳ್ಳುತ್ತಾನೆ; ಕಣ್ಣು ಹನಿಗೂಡುತ್ತವೆ.

ಆರು ತಿಂಗಳ ಹಿಂದೆ ಆ ಚಿನ್ನದ ಬಳೆಗಳೊಂದಿಗೆ ಬಣ್ಣಬಣ್ಣದ ಗಾಜಿನ ಬಳೆಗಳೂ ತನ್ನ ತಂಗಿಯ ಕೈಗಳನ್ನಲಂಕರಿಸಿದ್ದುವು. ಈಗ ಆ ಬಳೆಗಳೂ ಇದ್ದಿದ್ದರೆ, ರಂಗೋಲಿಯಿಡುವಾಗ ಅವಳ ದುಂಡನೆಯ ಕೈ ಇನ್ನೂ ಹೆಚ್ಚಿನ ಮಂಜುಳನಾದವನ್ನು ಮಾಡುತ್ತಿರಬೇಕು. ಅವಳ ಕೈ ತೀರ ಬರಿದಾಗಿಲ್ಲ; ಆದರೆ ಅವಳ ಬಾಳು ಪೂರ್ತ ಬರಿದಾಗಿದೆ. ಈ ದುಃಖದ ಭಾವನೆ ಬಂದು, ಅವನ ಸ್ವಾರ್ಥದ ಬಯಕೆಯನ್ನು ಮೆಟ್ಟಿ, ಕಣ್ಣಲ್ಲಿ ಹನಿ ತಂದಿದೆ. ದುಃಖ ವನ್ನು ಮರೆಯಲೋ, ಇಲ್ಲವೆ ಕಣ್ಣೀರು ತಂಗಿಯ ಕಣ್ಣಿಗೆ ಕಾಣಬಾರದೆಂದೋ, ಅವನದನ್ನು ಒರೆಸಿಕೊಂಡನು; ಮನಸ್ಸನ್ನು ಸಮಾಧಾನಕ್ಕೆ ತಂದುಕೊಂಡು ನೀಳವಾಗಿ ಉಸಿರೆಳೆದುಕೊಂಡನು.

'ಇವಳನ್ನು ಯಾವ ಬಾಯಿಂದ ಕೇಳಲಿ? ಕೇಳದೆ ಬೇರೆ ಮಾರ್ಗವೇ ಇಲ್ಲವಲ್ಲ? ಇದೇ ಕಡೆಯ ಸಲ. ಇನ್ನು ಅತ್ತ ಕಡೆ ಸುಳಿಯುವುದಿಲ್ಲ.'—ನಿರ್ಧಾರ ನುಡಿಯಾಗಿ ಹೊಮ್ಮಿತು:

"ಸೀತಾ....ಸೀತಾ...."

ಸೀತೆಯ ರಂಗೋಲಿಯಿಕ್ಕುತ್ತಿದ್ದ ಕೈ ನಿಂತಿತು; ಅಣ್ಣನ ಕಡೆ ತಿರುಗಿ, ಕೇಳಿದಳು:

"ಏನು, ರಾಮಣ್ಣ?...."

"ಸ್ವಲ್ಪ ಬಾಮ್ಮ ಇಲ್ಲಿ."

ಸೀತೆ ರಂಗೋಲಿಯ ಚಿಪ್ಪನ್ನು ಕೆಳಗಿಟ್ಟು ಅಣ್ಣನ ಹತ್ತಿರ ಹೋಗಿ ಕುಳಿತಳು.

"ತಲೆನೋವು ಈಗ ಹೇಗಿದೆ, ರಾಮಣ್ಣ?"

"ಹಾಗೇ ಇದೆಯಮ್ಮ....ನೋಡು....ಏನೂ ಅಂದರೆ...."

ಇನ್ನೇನು ತಾಯಿ ಹೊಳೆಯಿಂದ ಹಿಂದಿರುಗುವ ಹೊತ್ತು. ಅಷ್ಟರೊಳ ಗಾಗಿ ತನ್ನ ಉದ್ದೇಶವನ್ನು ಸೀತೆಗೆ ತಿಳಿಸದೆ ಹೋದರೆ ಮತ್ತೆ ಸಮಯ ಸಿಕ್ಕು ವುದೋ ಇಲ್ಲವೋ. ಅವನ ಮನಸ್ಸು ಇಬ್ಬಗೆಯಾಗಿದೆ; ಬಾಯಿ ಬಿಟ್ಟು ಕೇಳುವುದಕ್ಕೆ ಮನಸ್ಸು ಬಾರದು. ಕೇಳದಿದ್ದರೆ, ಒಟ್ಟಿಗೆ ನೂರು ರೂಪಾಯನ್ನು

ಯಾರು ತಾನೇ ಕೊಡುತ್ತಾರೆ? ಹೇಗಾದರೂ ಮಾಡಿ ರಾಮಶೆಟ್ಟಿಗೆ ನೂರು ರೂಪಾಯಿಗಳನ್ನು . ಈ ದಿನ ಸಂಜೆಯೊಳಗೆ ಕೊಡುವುದಾಗಿ ಮಾತು ಕೊಟ್ಟಾಗಿದೆ; ಮಾತು ಉಳಿಸಿಕೊಳ್ಳದೆ ಹೋದರೆ ಪತ್ರ ಬರೆದುಕೊಡಬೇಕು; ರೂಪಾಯಿಗೆ ಎರಡಾಣೆ ಬಡ್ಡಿ, ಅಬ್ಬಾ! ಅಲ್ಲದೆ, ಜಾಮೀನು ಬೇರೆ ಕೊಡಬೇಕು. ಜಾಮೀನಾಗಲು ಯಾರೂ ಒಪ್ಪುವಂತಿಲ್ಲ. ತಂದೆಯ ಹತ್ತಿರ ಕೇಳಲು ಮುಖವಿಲ್ಲ; ತಾಯಿಯ ಹತ್ತಿರ ಏನೂ ಹುಟ್ಟುವಹಾಗಿಲ್ಲ. ಸೀತೆಯನ್ನೇ ಕೇಳಬೇಕು. ಬೇರೆಯ ಗತ್ಯಂತರವೇ ಇಲ್ಲ ಅವಳೇನಾದರೂ ಒಪ್ಪಿ ಎರಡು ಬಳೆ ಕೊಟ್ಟರೆ, ಅವನ್ನು ರಾಮಶೆಟ್ಟಿಯ ಬಳಿಯೇ ಅಡವಿಟ್ಟು, ಸದ್ಯಕ್ಕೆ ಅವನ ಸಾಲದಿಂದ ಬಿಡುಗಡೆ ಹೊಂದಬಹುದು.....

ಕೇವಲ ಎರಡು ಮೂರು ಕ್ಷಣಗಳಲ್ಲಿ ಇಷ್ಟೆಲ್ಲ ಆಲೋಚನೆ ರಾಮಸ್ವಾಮಿಯ ತಲೆಯಲ್ಲಿ ಹಾದುಹೋಯಿತು.

" ಏನೂ ಇಲ್ಲವಮ್ಮಾ....ನಿನ್ನ ಕೈಯಲ್ಲಿ...."

ಮುಂದಕ್ಕೆ ಮಾತು ಹೊರಡಲಿಲ್ಲ.

'....ಕೈಯಲ್ಲಿ ಬಳೆ ಇಲ್ಲದೆ ಬೋಳಾಗಿದೆಯಲ್ಲವಮ್ಮಾ....' ಎಂಬ ಉಳಿದ ಮಾತುಗಳನ್ನು ಸೀತೆಯೇ ಮನಸ್ಸಿನಲ್ಲಿ ಭರ್ತಿಮಾಡಿಕೊಂಡಳು. ಅವಳ ಮನಸ್ಸಿನಲ್ಲಿ ಆಗ ಕೆಲವು ನೆನಪುಗಳು ಮೂಡಿ ಮಾಯವಾದುವು; ಅದೇ ಕ್ಷಣದಲ್ಲಿ ಅವೇ ನೆನಪುಗಳು ರಾಮಸ್ವಾಮಿಯ ಮನಸ್ಸಿನಲ್ಲಿಯೂ ಮೂಡಿ ಸೀತೆಯ ಸ್ಥಿತಿಗಾಗಿ ಅವನು ಮರುಗುವಂತೆ ಮಾಡಿದುವು.

೨

ಆರು ತಿಂಗಳ ಹಿಂದೆ, ಸೀತೆಯ ಗಂಡ ನಂಜುಂಡಯ್ಯ ಇದ್ದಕ್ಕಿದ್ದಹಾಗೆ 'ಪ್ಲೇಗು' ರೋಗಕ್ಕೆ ಬಲಿಯಾದಾಗ ಅವಳಿಗೆ ಗಂಡನ ಮುಖದರ್ಶನ ದೊರಕಿಸುವುದಕ್ಕೆ ಜೊತೆಯಲ್ಲಿ ಹೋಗಿದ್ದವನೇ ರಾಮಸ್ವಾಮಿ. ಬಸವಾಪಟ್ಟಣದಿಂದ ನಂಜುಂಡಯ್ಯನ ಸಾವಿನ ಸುದ್ದಿಯನ್ನು ರೈತನೊಬ್ಬನು ಬಂದು ತಿಳಿಸಿದಾಗ ವೆಂಕಟಸುಬ್ಬಯ್ಯನವರು ಊರಿನಲ್ಲಿಯೇ ಇರಲಿಲ್ಲ; ಕಾರ್ಯಾಂತರದಮೇಲೆ ಹೊಳೇನರಸೀಪುರಕ್ಕೆ ಹೋಗಿದ್ದರು. ಸೀತೆಯಲ್ಲದೆ, ಮನೆಯಲ್ಲಿ ಇದ್ದವರು ಇಬ್ಬರೇ: ಪಾರ್ವತಮ್ಮ, ರಾಮಸ್ವಾಮಿ. ತಾಯಿ ಮಗ ಒಬ್ಬರನ್ನೊಬ್ಬರು

ತಬ್ಬಿಕೊಂಡು ಬಿಕ್ಕಿಬಿಕ್ಕಿ ಅತ್ತರು; ಗಂಡ ಹೋದನೆಂದು ತಿಳಿದು, ತಾನು ಇನ್ನು ಮುಂದೆ ಗಂಡನಿಲ್ಲದವಳು ಎಂಬ ಅರಿವುಂಟಾಗಿ ದುಃಖವುಂಟಾದರೂ ಬಿಕ್ಕಿಬಿಕ್ಕಿ ಅಳದೆ, ಏನೂ ತೋರದೆ, ಕಲ್ಲುಬೊಂಬೆಯಂತೆ ಕುಳಿತಿದ್ದ ಸೀತೆಯನ್ನು ಒಬ್ಬರಾದಮೇಲೆ ಒಬ್ಬರಂತೆ ಇಬ್ಬರೂ ತಬ್ಬಿಕೊಂಡು ಅತ್ತರು; ಆ ಬಳಿಕ ತಾನೂ ಅಳಬೇಕಾದ್ದು ಕರ್ತವ್ಯವೋ ಏನೋ ಎಂದು ತಿಳಿದು ಸೀತೆಯೂ ಅಪ್ರಯತ್ನವಾಗಿಯೇ ಅಳತೊಡಗಿದ್ದಳು. ತಡ ಮಾಡಲು ಕಾಲಾವಕಾಶವಿರಲಿಲ್ಲ; ಯಾರಾದರೂ ಸೀತೆಯನ್ನು ಕರೆದುಕೊಂಡು ಹೋಗಬೇಕಾಗಿತ್ತು. ತಾಯಿಯ ಅಪ್ಪಣೆ ಪಡೆದು, ಬಂದಿದ್ದ ರೈತನ ಗಾಡಿಯಲ್ಲೇ ರಾಮುಸ್ವಾಮಿಯೂ ಸೀತೆಯೂ ತೆರಳಿದರು. ಮಾರನೆಯ ದಿನ ವೆಂಕಟಸುಬ್ಬಯ್ಯನವರು ಹಿಂದಿರುಗಿದಾಗ ಮಗಳಿಗೆ ಪ್ರಾಪ್ತವಾದ ವೈಧವ್ಯದ ಸಂಗತಿ ತಿಳಿದು, ಅವರೂ ಬಸವಾಪಟ್ಟಣಕ್ಕೆ ಧಾವಿಸಿದರು.

ನಂಜುಂಡಯ್ಯನ ಅಣ್ಣ ಶಂಕರಪ್ಪ ಒಂದು ವರ್ಷದ ಹಿಂದೆ ತಾನೇ ವಿಷಮಶೀತಜ್ವರದಲ್ಲಿ ಕಾಲವಾಗಿದ್ದ. ಹೊಸ ಬೀಗರ ದುಃಖ ವಿಚಾರಿಸುವುದಕ್ಕೆಂದು ವೆಂಕಟಸುಬ್ಬಯ್ಯನವರು ಬಸವಾಪಟ್ಟಣಕ್ಕೆ ಹೋಗಿದ್ದರು. ವಿಧವೆಯಾದ ಮಗಳನ್ನು ಕರೆದುಕೊಂಡು ಶಾಮಣ್ಣನವರು ಹಾಸನದಿಂದ ಬಂದಿದ್ದರು. ಶಂಕರಪ್ಪನ ಹೆಂಡತಿ ಗೌರಮ್ಮ ತುಂಬ ಚೆಲುವೆ; ನಿಷೇಕಪ್ರಸ್ತವಾಗಿ ಆರು ತಿಂಗಳಾಗಿತ್ತು ಅಷ್ಟೆ. ತಮ್ಮನ ಮುಂಜಿಗೆಂದು ತವರುಮನೆಗೆ ಹೋಗಿದ್ದವಳು ಅಲ್ಲಿಯೇ ಉಳಿದುಕೊಂಡಿದ್ದಳು; ಗಂಡನ ಶವವನ್ನು ನೋಡುವುದಕ್ಕೆ ಹಿಂದಿರುಗಿದ ಹಾಗಾಯಿತು. ಚಿಕ್ಕವಳಾದರೂ ಕೂಡ ವಿಧವೆಯ ಕೂದಲು ತೆಗೆಯಿಸುವುದೇ ಸರಿಯಾದ್ದೆಂದು ಹಠಹಿಡಿದು ಹಾಗೆ ಮಾಡಿಸಿದವರಲ್ಲಿ ವೆಂಕಟಸುಬ್ಬಯ್ಯನವರೂ ಒಬ್ಬರು. ವಿಧಿಯ ಮಾರೇಟಿಗೆ ಮುಂದೆ ತಲೆಯೊಡ್ಡಬೇಕೆಂದು ಅವರು ಅಂದು ಮುಂಗಂಡಿರಲಿಲ್ಲ.

ಇಂದು ತಮ್ಮ ಮಗಳಿಗೇ ಆ ಗತಿ ಪ್ರಾಪ್ತವಾಗಿದೆ. ಶಾಸ್ತ್ರವನ್ನು ತೃಪ್ತಿಪಡಿಸುವ ಸಂದರ್ಭ ಬಂದಾಗ, ವೆಂಕಟಸುಬ್ಬಯ್ಯನವರು ಏನು ಹೇಳುವುದಕ್ಕೂ ತೋರದೆ ಶೋಕಭರದಿಂದ ಮೂಕರಾಗಿ ಹೋಗಿದ್ದಾರೆ. "ವೆಂಕಟಸುಬ್ಬಯ್ಯನವರ ಅಪ್ಪಣೆಯಾದಹಾಗೆ...." ಎಂದು ಜೋಯಿಸರು ಉತ್ತರಕ್ಕಾಗಿ ಕಾದಿದ್ದಾರೆ. ವೆಂಕಟಸುಬ್ಬಯ್ಯನವರ ಧರ್ಮಸಂಕಟವನ್ನು ಅವರ ಬೀಗರು

ಮೈಲಾರಯ್ಯನವರು—ನಂಜುಂಡಯ್ಯನ ತಂದೆ—ಎರಡು ವರ್ಷಗಳ ಅವಧಿ ಯಲ್ಲಿ ಇಬ್ಬರು ಪುತ್ರರನ್ನು ಕಳೆದುಕೊಂಡು ಅದೃಷ್ಟಹೀನರಾದ ತಂದೆ—ಅರ್ಥ ಮಾಡಿಕೊಂಡರು; " ಬೇಡಿ ಜೋಯಿಸರೆ, ನಮ್ಮ ಸೀತಾ ಇನ್ನೂ ಚಿಕ್ಕಮಗು; ದೊಡ್ಡವಳು ಕೂಡ ಆಗಿಲ್ಲ " ಎಂದು ಗದ್ಗದಿಸುತ್ತಲೇ ವೆಂಕಟಸುಬ್ಬಯ್ಯನವರ ಪರವಾಗಿ ನುಡಿದರು. ಸಂದರ್ಭ ಏನು ಎನ್ನುವುದು ಆಗ ರಾಮುಸ್ವಾಮಿಗೆ ಸ್ಪಷ್ಟವಾಗಿ, " ಖಂಡಿತಾ ಕೂಡದು. ನಾನು ಒಪ್ಪುವುದಿಲ್ಲ. ಅವಳು ದೊಡ್ಡವ ಳಾದಮೇಲೆ ನೋಡಿಕೊಳ್ಳೋಣ " ಎಂದು ತಂಗಿಗೆ ರಕ್ಷಣೆ ನೀಡುವ ರೀತಿಯಲ್ಲಿ ಅವಳನ್ನು ತಬ್ಬಿಕೊಂಡು, ಸಿಡಿದು ನುಡಿದ. ಸೀತೆಯ ಹಣೆಯ ಕುಂಕುಮ ವಂತೂ ಅಳಿಸಿಹೋಯಿತು ; ಮಂಗಲಸೂತ್ರ ಹರಿದದ್ದಾಯಿತು ; ಕರಿಮಣಿ ಗಳ ನಡುವೆ ಪೋಣಿಸಿದ್ದ ಚಿನ್ನದ ಗುಂಡುಗಳನ್ನೂ ಕೆಲವು ಚಿನ್ನದ ಕಾಸು ಗಳನ್ನೂ ವೆಂಕಟಸುಬ್ಬಯ್ಯನವರ ವಶಕ್ಕೆ ಒಪ್ಪಿಸಿದ್ದಾಯಿತು ; ಸೀತೆಯ ಕೈಯ ಗಾಜಿನ ಬಳೆಗಳನ್ನು ಒಡೆದದ್ದೂ ಆಯಿತು. ವೆಂಕಟಸುಬ್ಬಯ್ಯನವರ ಹೃದಯ ಒಡೆಯುವುದಕ್ಕೆ ಇಷ್ಟೇ ಸಾಕಾಯಿತು.

೩

ಈ ಹಿಂದಿನ ನೆನಪಿನ ಚಿತ್ರಗಳು ಇಬ್ಬರ ಮನಸ್ಸಿನಲ್ಲಿಯೂ ಮೂಡಿದುವು.

ಸೀತೆಯ ಮಾವನವರಿಗೆ ಸ್ವಲ್ಪಮಟ್ಟಿನ ಭೂಮಿ ಕಾಣಿಯಿದ್ದಿತು. ಈಗ ಅವರ ಇಬ್ಬರ ಪುತ್ರರೂ ಇರಲಿಲ್ಲವಾಗಿ, ಗಂಡನ ಕಡೆಯಿಂದ ಅವಳಿಗೆ ಏನಾ ದರೂ ಆಸ್ತಿ ಇಲ್ಲವೆ ಜೀವನಾಂಶ ದೊರಕಬಹುದೋ ಏನೋ ಎಂಬ ಬಗ್ಗೆ ವೆಂಕಟಸುಬ್ಬಯ್ಯನವರೇ ಇನ್ನೂ ಯೋಚಿಸತೊಡಗಿರಲಿಲ್ಲ. ಇನ್ನು ರಾಮು ಸ್ವಾಮಿಗೆ ಆ ಆಲೋಚನೆ ಹೊಳೆಯುವುದಕ್ಕೆ ಕಾರಣವಿರಲಿಲ್ಲ. ಸೀತೆಯ ಕೈಯಲ್ಲಿದ್ದ ಬಳೆಗಳೇ ಅವಳ ಆಸ್ತಿ ಎಂದು ರಾಮುಸ್ವಾಮಿಗೆ ತೋರಿತು ; ಅದರೊಂದಿಗೆಯೇ ಅವಳು ಹಿಂದೆ ಧರಿಸಿದ್ದ ಚಿನ್ನದ ಗುಂಡುಗಳ ಮತ್ತು ಕಾಸುಗಳ ನೆನಪಾಯಿತು.

' ನಿನ್ನ ಕೈಯಲ್ಲಿ ಇರುವ ಬಳೆಗಳಲ್ಲಿ ಎರಡನ್ನು ಕೊಟ್ಟಿದ್ದು ಉಪಕಾರ ಮಾಡಮ್ಮಾ. ಮಾನ ಹೋಗುವ ಪ್ರಸಂಗ ಬಂದಿದೆ. ಅವನ್ನು ಅಡವಿಟ್ಟು

ಹಣ ಪಡೆದಿರುತ್ತೇನೆ. ಅನುಕೂಲವಾದಾಗ ಬಿಡಿಸಿ ಕೊಡುತ್ತೇನೆ. ಈ ವಿಷಯ ಅಪ್ಪ ಅಮ್ಮನಿಗೆ ತಿಳಿಸಬೇಡ' ಎಂದು ನುಡಿಯುವುದರಲ್ಲಿತ್ತು ಅವನ ಬಾಯಿ. ಆಗಲೇ ಬೋಳಾದ ತಂಗಿಯ ಕೈಯನ್ನು ಇನ್ನೂ ಬೋಳು ಮಾಡಬೇಕಲ್ಲ ಎಂಬ ಮರುಕವೊಂದು ಕಡೆ; 'ಮಾನ ಹೋಗುವ ಪ್ರಸಂಗ ಅದು ಯಾವುದು?' ಎಂದು ತಂಗಿಯೇ ಕೇಳಿಬಿಟ್ಟರೆ ಅವಳಿಗೆ ಏನು ವಿವರಣೆ ಕೊಡುವುದು ಎಂಬ ಪೇಚಾಟ ಮತ್ತೊಂದು ಕಡೆ; ತಂಗಿಯು ಒಪ್ಪಿ ಬಳೆಗಳನ್ನು ಕಳಚಿ ಕೊಟ್ಟರೂ ಆ ಸಂಗತಿ ಅಪ್ಪ ಅಮ್ಮನಿಗೆ ಗೊತ್ತಾಗದೆ ಇದ್ದೀತೆ ಎಂಬ ಸಂದೇಹ ಮಗುದೊಂದು ಕಡೆ; ಸದ್ಯದಲ್ಲಿ ಸೀತೆಯು ವೈವೇಲಿಲ್ಲದ ಚಿನ್ನದ ಗುಂಡು ಕಾಸುಗಳನ್ನು ಪತ್ತೆಮಾಡಿ ಅವನ್ನು ತೆಗೆದುಕೊಂಡು ಉಪಯೋಗಿಸಿಕೊಳ್ಳುವುದು ಅತ್ಯಂತ ಸುಲಭವಾದ ಉಪಾಯವಲ್ಲವೆ ಎಂಬ ಪ್ರತ್ಯಾಸೆ ಇನ್ನೊಂದು ಕಡೆ. ಈ ಭಾವನೆಗಳ ತುಮುಲ ಯುದ್ಧದಲ್ಲಿ ಕಡೆಯದಕ್ಕೆ ಗೆಲುವಾಗಿ, ಅವನು ಆಡ ಹೊರಟಿದ್ದ ಮಾತುಗಳು ಗಂಟಲಲ್ಲಿಯೇ ಉಳಿದುವು.

ಈಗ ಸೀತೆಯ ಕೈ ರಾಮುಸ್ವಾಮಿಯ ಹಣೆಯ ಮೇಲಿತ್ತು; ಪ್ರೀತಿಯಿಂದ ತನ್ನ ಹಣೆಯನ್ನು ಮುಟ್ಟಿ ನೋಡುತ್ತಿದ್ದ ಮೃದುವಾದ ಕೈಯನ್ನು ರಾಮುಸ್ವಾಮಿಯ ಕೈ ಮೆಲ್ಲನೆ ಹಿಡಿದಿತ್ತು. ಆ ಕೈಯ ಬೆರಳುಗಳು ಅನೈಚ್ಛಿಕವಾಗಿ ಸೀತೆಯ ಕೈಯ ಬಳೆಗಳನ್ನು ಹಿಡಿದಾಡಿಸುತ್ತಿದ್ದುವು.

"ಸ್ವಲ್ಪ ಜ್ವರ ಬಂದಿರುವ ಹಾಗಿದೆ, ರಾಮಣ್ಣ."

"ಜ್ವರ–ಗಿರ ಏನೂ ಇದ್ದ ಹಾಗೆ ಕಾಣಲಿಲ್ಲಮ್ಮ. ತುಂಬ ತಲೆನೋವು. ಪಟಪಟ ಅಂತ ಸಿಡಿಯುತ್ತಿದೆ."

"ಸುಬ್ರಮಣ್ಯಪಂಡಿತರ ಹತ್ತಿರ ಔಷಧಿ ತಂದು ಕೊಡಲೆ?"

"ಏನೂ ಬೇಡವಮ್ಮಾ. ಆಮೇಲೆ ನಾನೇ ಹೋಗಿ ಆಸ್ಪತ್ರೆಯಲ್ಲಿ ಔಷಧಿ ತೆಗೆದುಕೊಳ್ಳುತ್ತೇನೆ....ಅಮ್ಮ ಇನ್ನೂ ಹೊಳೆಯಿಂದ ಬಂದ ಹಾಗೆ ಕಾಣಲಿಲ್ಲ...."

"ಇನ್ನೇನು ಬರುವ ಹೊತ್ತು."

"ಹಾಲು ಏನೂ ಉಳಿದಿಲ್ಲ ಅಂತ ಕಾಣುತ್ತೆ, ಅಲ್ಲವೆ?"

"ಕಾಫಿ ಬೇಕೇನು, ರಾಮಣ್ಣ?"

"ಹ್ಞೂ ಕಣಮ್ಮ. ತುಂಬ ತಲೆನೋವು. ಹಾಲು ಉಳಿದಿಲ್ಲ ಅಂತ

ಕಾಣುತ್ತೆ. ಅಮ್ಮ ಬರುವ ಹೊತ್ತಿಗೆ ಶಾನುಭೋಗರ ಮನೆಗೆ ಹೋಗಿ ಒಂದು ಬಟ್ಟಲು ಹಾಲು ಈಸಿಕೊಂಡು ಬರುತ್ತೀಯಾ ಅಮ್ಮ?"

"ಆಗಲಿ, ರಾಮಣ್ಣ" ಎಂದು ಸೀತೆ ರಂಗೋಲಿಯ ಚಿಪ್ಪನ್ನು ಮುಂಗಡೆಯ ಕಿಟಕಿಯ ಗೂಡಿನಲ್ಲಿರಿಸಿ, ಕೈಯನ್ನು ಸೀರೆಯ ಸೆರಗಿನಿಂದಲೇ ಒರಸಿಕೊಂಡು, ಅಡಿಗೆಮನೆಗೆ ಹೋಗಿ ಒಂದು ಸಣ್ಣ ಒಟ್ಟಲನ್ನು ತೆಗೆದುಕೊಂಡು ಶಾನುಭೋಗರ ಮನೆಯ ಕಡೆ ಹೊರಟಳು. ಶಾನುಭೋಗರ ಮನೆಯವರು ಉಪಕಾರಬುದ್ಧಿಯವರು; ಏನು ಬೇಕಾದರೂ ಅವರ ಮನೆಗೇ ಹೋಗುವುದು ವೆಂಕಟಸುಬ್ಬಯ್ಯನವರ ಮನೆಯ ಪದ್ಧತಿ.

ಅತ್ತ ಸೀತೆ ಹೋದಳೋ ಇಲ್ಲವೋ ಇತ್ತ ರಾಮಸ್ವಾಮಿ ತಲೆನೋವೇ ಇರಲಿಲ್ಲವೇನೋ ಎಂಬಂತೆ ಚಂಗನೆ ಮೇಲಕ್ಕೆದ್ದ.

ಪುಡಿಗಾಸು ನಗನಾಣ್ಯಗಳನ್ನು ತನ್ನ ತಾಯಿ ಉಗ್ರಾಣದ ಕೋಣೆಯಲ್ಲಿ ಒಂದು ಸಣ್ಣ ಮರದ ಪೆಟ್ಟಿಗೆಯಲ್ಲಿ ಭದ್ರಪಡಿಸುತ್ತಿದ್ದುದು ಅವನಿಗೆ ತಿಳಿಯದ ವಿಷಯವೇನಲ್ಲ. ಪಾರ್ವತಮ್ಮನವರು ಹಿಂದೆಲ್ಲಾ ಸಾಧಾರಣವಾಗಿ ಪುಡಿಗಾಸುಗಳನ್ನು ಸಾಸಿವೆ ಡಬ್ಬಿಯಲ್ಲೋ ಮೆಣಸಿನಕಾಳಿನ ಡಬ್ಬಿಯಲ್ಲೋ ಹಾಕಿರುತ್ತಿದ್ದುದು ಪದ್ಧತಿ. ಆದರೆ ರಾಮಸ್ವಾಮಿ ಸ್ವಲ್ಪ ದೊಡ್ಡವನಾದ ಮೇಲೆ, ಕಾಯಿಚೂರು ಬೆಲ್ಲದ ಚೂರುಗಳೊಂದಿಗೆ ಪುಡಿಗಾಸುಗಳೂ ಮಾಯವಾಗುತ್ತಿದ್ದುದು ಅವರ ಗಮನಕ್ಕೆ ಬಂದಿತು. ತಿಂಡಿತಿನಿಸುಗಳ ಚೌರ್ಯವನ್ನು ರಾಮಸ್ವಾಮಿಯ ಮೇಲೂ ಪುಡಿಗಾಸುಗಳ ಅಪಹರಣವನ್ನು ಪತಿದೇವನ ಮೇಲೂ ಸಕಾರಣವಾಗಿ ಆಕೆ ಆರೋಪಿಸಿದಾಗ—"ಹೌದು. ನಾನು ಯಾವಾಗಲೂ ಎಲೆ ಮೆಲ್ಲುತ್ತೇನೆ. ಹೊಗೆಸೊಪ್ಪಿಗೆ ಕಾಸು ಬೇಕು. ಒಂದು ಸಂಸಾರ ನಿಭಾಯಿಸುವವನಿಗೆ ಹೊಗೆಸೊಪ್ಪಿಗೂ ಕಾಸಿಲ್ಲದೆ ಹೋಗಬಹುದು ಒಂದೊಂದು ವೇಳೆ. ನಾನೇ ನಿನಗೆ ಕೊಟ್ಟ ದುಡ್ಡನ್ನು ನಾನೇ ತೆಗೆದುಕೊಳ್ಳುವುದಕ್ಕೆ ನನಗೆ ಹೆದರಿಕೆಯೇ? ಅಥವಾ ನಿನ್ನನ್ನು ಕೇಳುವುದಕ್ಕೆ ನಾಚಿಕೆಯೇ? ನನ್ನ ತುಟಿ ಸದಾ ಕೆಂಪಗಿರುವುದನ್ನು ಕಂಡು ನಿನ್ನ ಕಣ್ಣೂ ಕೆಂಪಾಗಿಬಿಡುತ್ತೆ. ಅದಕ್ಕೆ ನಾನೇನು ಮಾಡಲಿ?" ಎಂದು ವೆಂಕಟಸುಬ್ಬಯ್ಯನವರು ತಮ್ಮ ಕಣ್ಣುಗಳನ್ನು ಕೆಂಪಗೆ ಮಾಡಿಕೊಳ್ಳುತ್ತಿದ್ದರು. "ನೀವಲ್ಲದಿದ್ದರೆ ನಿಮ್ಮ ಮಗ" ಎಂದು ಪಾರ್ವತಮ್ಮ ತುಟಿ ಉರುಗಿಸಿಕೊಂಡು ಹೇಳುತ್ತಿದ್ದರು. "ಹಾಗೆ ಹೇಳು.

ನೋಡದೆ ಮಾಡದೆ ನನ್ನ ದೂರಬೇಡ. ನೀನುಂಟು, ನಿನ್ನ ಮಗ ಉಂಟು" ಎಂದು ಒಂದು ಚೂರು ಹೊಗೆಸೊಪ್ಪನ್ನು ಜೇಬಿನಿಂದ ತೆಗೆದು ಬಾಯಿಗೆ ಎಸೆದು ಕೊಂಡು, "ಶರಿ. ನಿನ್ನ ದುಡ್ಡು ಕಾಸಿನ ಜೋಪಾನ ನೀನು ಮಾಡ್ಕೊ ಇನ್ಮೇಲೆ. ನನ್ನ ದೂಯ್(ರ್)ಬೇಡ" ಎಂದು ತಂಬುಲ ರಸ ತುಂಬಿದ ಬಾಯಿಂದ ಅಸ್ಪಷ್ಟವಾಗಿ ಒದರಿ, ಹೊರಕ್ಕೆ ಹೊರಟುಬಿಡುತ್ತಿದ್ದರು. ಹಿರಿಯ ಮಗ ಸುಬ್ಬಸ್ವಾಮಿ ಮನೆಯಲ್ಲಿ ಬೆಳೆದವನೇ ಅಲ್ಲ; ಅವನ ವಿದ್ಯಾಭ್ಯಾಸ ಮೈಸೂರಿನಲ್ಲೇ ಅವನ ಚಿಕ್ಕಮ್ಮನ ಮನೆಯಲ್ಲಿ ಸಾಗಿ, ಬೆಂಗಳೂರಿನಲ್ಲಿ ಕೆಲಸಕ್ಕೆ ಸೇರಿದವನು. ಹೆಣ್ಣುಮಕ್ಕಳ ಮೇಲೆ ದೂರು ಹೊರಿಸಲು ಸಾಧ್ಯವೂ ಇರಲಿಲ್ಲ, ಕಾರಣವೂ ಇರಲಿಲ್ಲ; ಮನಸ್ಸೂ ಬಾರದು. ಹೀಗಾಗಿ ತಾಯಿಯ ಗುಮಾನಿಗೆ ರಾಮಸ್ವಾಮಿ ಎಂದಿನಿಂದಲೂ ಗುರಿಯಾಗಿದ್ದ. ಗುಮಾನಿಯೇನು, ರಾಮಸ್ವಾಮಿಯೇ ಕಾಸುಗಳ್ಳನೆಂದು ಅವರಿಗೆ ಖಚಿತವಾಗಿತ್ತು. ಮೊದಲಂತೂ ಚಿಕ್ಕವನು : ಕಡಲೆಕಾಯಿಗೋ ಮಿಠಾಯಿಗೋ ಹಲಸಿನತೊಳೆಗೊ ಕಾಸು ಕದಿ ಯುತ್ತಾನೆ, ಹುಡುಗತನ—ಎಂದು ಸಮಾಧಾನ ಪಟ್ಟುಕೊಂಡು, ಮಗನನ್ನು ಗದರಿಸಿಕೊಂಡು, ಸುಮ್ಮನಾಗಿಬಿಡಬಹುದಾಗಿತ್ತು. ಆದರೆ ರಾಮಸ್ವಾಮಿ ದೊಡ್ಡವನಾದಮೇಲೂ ಅವನ ಕಾಸುಗಳ್ಳತನ ನಿಂತಿರಲಿಲ್ಲ; ಅಲ್ಲದೆ, ಬರು ಬರುತ್ತ ಕಾಸುಗಳ ಲೆಕ್ಕದಲ್ಲಿ ಹಣ ಮಾಯವಾಗುತ್ತಿರಲಿಲ್ಲ: ಆಣೆ, ಪಾವಲಿ, ರೂಪಾಯಿಗಳ ಲೆಕ್ಕದಲ್ಲಿ ಮಾಯವಾಗುತ್ತಿತ್ತು. ಪಾರ್ವತಮ್ಮನವರು ಚಿಲ್ಲರೆ ಹಣವನ್ನು ನಗನಾಣ್ಯಗಳ ಪೆಟ್ಟಿಗೆಯಲ್ಲಿ ಇಡಲು ಮೊದಲುಮಾಡಿದಮೇಲೆ ಅದು ಹೆಚ್ಚು ಸುರಕ್ಷಿತವಾಯಿತು. ಅಭ್ಯಾಸಬಲದಿಂದ ಅಡುಗೆಯ ಮನೆಯ ಡಬ್ಬಿಗಳಲ್ಲಿಯೇ ಹಣ ಇಟ್ಟಾಗ ಅದು ತಪ್ಪದೆ ಮಾಯವಾಗುತ್ತಿತ್ತು.

ರಾಮಸ್ವಾಮಿ ಅಡುಗೆಯ ಮನೆಗೆ ಹೋಗಿ ಕೆಲವು ಡಬ್ಬಿಗಳನ್ನು ತಡಕಾ ಡಿದ: ಕಾಸಿಗೋಸ್ಕರ ಅಲ್ಲ; ತಾಯಿಯ ಒಡವೆಯ ಪೆಟ್ಟಿಗೆಯ ಬೀಗದಕ್ಕೆ ಗಾಗಿ. ಅವನು ನಿರೀಕ್ಷಿಸಿದ್ದಂತೆ, ಒಂದು ದಾರಕ್ಕೆ ಪೋಣಿಸಿದ್ದ ಎರಡು ಮೂರು ಬೀಗದಕ್ಕೆಗಳು ಒಂದು ಸಣ್ಣ ಖಾಲಿ ಡಬ್ಬಿಯಲ್ಲಿತ್ತು. ಅದನ್ನು ತೆಗೆದುಕೊಂಡು ಉಗ್ರಾಣದ ಕತ್ತಲೆ ಕೋಣೆಗೆ ಧಾವಿಸಿ, ಬಾಗಿಲನ್ನು ಮುಂದು ಮಾಡಿದ. ಆ ಕೋಣೆಗೆ ಕಿಟಕಿ ಇರಲಿಲ್ಲ; ಹಗಲಿನಲ್ಲಿಯೂ ಇರುಳುಗತ್ತಲೆ. ರಾಮಸ್ವಾಮಿ ತಡಕಿ ತಡಕಿ ಬೀಗವನ್ನು ಕೈಯಲ್ಲಿ ಹಿಡಿದು, ಎಲ್ಲ ಬೀಗದಕ್ಕೆಗಳಿಂದಲೂ

ಪ್ರಯತ್ನಿಸಿ ನೋಡಿ, ಕಡೆಗೆ ಬೀಗವನ್ನು ತೆಗೆದ. ಜೇಬಿನಲ್ಲಿ ಬೆಂಕಿಯ ಪೆಟ್ಟಿಗೆ ಸಿದ್ಧವಾಗಿಯೇ ಇತ್ತು. ಒಡವೆಯ ಪೆಟ್ಟಿಗೆಯ ಬಾಗಿಲು ತೆರೆದು, ಒಂದು ಬೆಂಕಿಯ ಕಡ್ಡಿಯನ್ನು ಗೀರಿ, ಬಗ್ಗಿ ನೋಡಿದ. ತಾಯಿಯ ಕೊರಳ ಚಿನ್ನದ ಬಂದಿ ಮೊದಲು ಕಣ್ಣಿಗೆ ಬಿದ್ದಿತು. ಅದನ್ನು ಮುಟ್ಟಲು ಧೈರ್ಯವಾಗಲಿಲ್ಲ. ಆರುತ್ತಿದ್ದ ದೀಪದ ಕಡ್ಡಿಯ ಬೆಳಕಿನಲ್ಲಿ ಇನ್ನೊಂದು ಸಣ್ಣ ಗಂಟು ಕಂಡಿತು. ಅದನ್ನು ಕೈಯಿಂದ ತೆಗೆದುಕೊಂಡು ತೂಗಿನೋಡಿದ; ತಕ್ಕಮಟ್ಟಿಗೆ ಭಾರ ವಾಗಿತ್ತು; ಸದ್ದಿನಿಂದ, ಆಕೃತಿಯಿಂದ, ನಾಣ್ಯಗಳ ಗಂಟಾಗಿ ಕಂಡಿತು. ಜೇಬಿಗೆ ಹಾಕಿ ನೋಡಿದ; ಜೇಬು ಹಿಡಿಯಲಿಲ್ಲ. ಬರಿಯ ಕಾಸು, ಆಣೆ, ಪಾವಲಿ, ಹೆಚ್ಚೆಂದರೆ ೧೦-೨೦ ರೂಪಾಯಿ—ಎಲ್ಲ ಸೇರಿದರೂ ಐವತ್ತು ರೂಪಾಯಿ ಮೇಲಾಗದೆಂದು ಅವನಿಗೆನ್ನಿಸಿತು. ಅಲ್ಲದೆ ಹಣದ ಗಂಟು ಮಾಯವಾದರೆ ಕಳ್ಳತನ ಬೇಗ ಪತ್ತೆಯಾಗುತ್ತದೆ. ರಾಮಸ್ವಾಮಿ ಬಹಳ ದೂರಾಲೋಚನೆ ಮಾಡಿ ಹಣದ ಗಂಟನ್ನು ಅದರ ಸ್ಥಳದಲ್ಲಿಯೇ ಇರಿಸಿದ. ಇನ್ನು ಎರಡು ಮೂರು ಕಡ್ಡಿಗಳನ್ನು ಗೀರಿ ಪೆಟ್ಟಿಗೆಯನ್ನೆಲ್ಲಾ ಬಹು ಬೇಗನೆ ಶೋಧನೆ ಮಾಡಿದ. ರೇಶ್ಮೆ ಬಟ್ಟೆಯಲ್ಲಿ ಸುತ್ತಿದ್ದ ಸಣ್ಣ ಗಂಟೊಂದು ಕಣ್ಣಿಗೆ ಬಿತ್ತು; ಅದನ್ನು ಬಿಚ್ಚಿದ; ಅದರೊಳಗೊಂದು ಕಾಗದದ ಪೊಟ್ಟಣ; ಅದನ್ನೂ ಬಿಚ್ಚಿದ, ಒಳಗಿದ್ದು ದನ್ನು ಕೈಯಿಂದ ಮುಟ್ಟಿ ನೋಡಿದ; ಚಿನ್ನದ ಗುಂಡುಗಳು ಕಾಸುಗಳು ಕೈಗೆ ಸೋಕಿ, ಅವನಿಗೆ ಹರ್ಷರೋಮಾಂಚನವನ್ನುಂಟುಮಾಡಿದುವು. ಬಿಚ್ಚಿದ್ದ ಗಂಟನ್ನು ಹಾಗೆಯೇ ಜೇಬಿಗೆ ತುರುಕಿಕೊಂಡು, ಪೆಟ್ಟಿಗೆಯ ಬೀಗ ಹಾಕಿ, ಬೀಗದಕೈಯ ಸರವನ್ನು ಅದರ ಸ್ಥಳದಲ್ಲಿ ಇರಿಸಿ, ಮತ್ತೆ ಮಂದಲಗೆಯ ಮೇಲೆ ಹಿಂದಿನಂತೆ ಮಲಗಿದ.

ಅವನು ಮಲಗಿ ಒಂದೆರಡು ನಿಮಿಷಗಳಾಗಿರಬಹುದು, ಅಷ್ಟೆ; ಸೀತೆ ಹಾಲಿನ ಬಟ್ಟಲು ಹಿಡಿದುಕೊಂಡು ಬಂದಳು. ಸ್ವಲ್ಪ ಹೊತ್ತಾದಮೇಲೆ ಪಾರ್ವತಮ್ಮನವರು ಹಿಂಡಿ ಸೆಣೆದ ಸೀರೆ ಪಂಚೆಗಳನ್ನು ಹೆಗಲ ಮೇಲೆ ಹಾಕಿ ಕೊಂಡು, ತಲೆಯ ಮೇಲೊಂದು ತಪ್ಪಲೆ, ಸೊಂಟದ ಮೇಲೊಂದು ಬಿಂದಿಗೆ, ಕೈಲೊಂದು ಚೆಂಬು ಹಿಡಿದುಕೊಂಡು, 'ಉಸ್ಸಪ್ಪಾ' ಎನ್ನುತ್ತ ಒಳಕ್ಕೆ ಕಾಲಿಟ್ಟರು.

ರಾಮಸ್ವಾಮಿಗೆ ಕಾಫಿಗೋಸ್ಕರ ಹಾಲು ತಂದ ವಿಷಯವನ್ನು ಸೀತೆ

ತಾಯಿಗೆ ತಿಳಿಸಿದಳು; ಆಗ ಏನೂ ಮಾತನಾಡದೆ ಪಾರ್ವತಮ್ಮನವರು ಒಂದು ದೊಡ್ಡ ಲೋಟದ ತುಂಬ ಬಿಸಿಬಿಸಿಯಾಗಿ ಕಾಫಿ ಮಾಡಿ ತಂದು ಕೊಟ್ಟರು. ರಾಮುಸ್ವಾಮಿ ಸೀತೆಯನ್ನು ಕೂಗಿ ಕರೆದ. ಸೀತೆ ಬಂದಳು. "ಈಗ ತಲೆನೋವು ಎಷ್ಟೋ ಮೇಲು ಕಣಮ್ಮಾ. ಇಷ್ಟೊಂದು ಕಾಫಿ ನನಗೆ ಬೇಡ. ಒಂದು ಬಟ್ಟಲು ತೆಗೆದುಕೊಂಡು ಬಾ, ನೀನು ಸ್ವಲ್ಪ ತೆಗೆದುಕೊಳ್ಳುವೆ ಯಂತೆ" ಎಂದು ರಾಮುಸ್ವಾಮಿ ಸೀತೆಗೆ ಹೇಳಿದ. ಮೊದಲು ಕಾಫಿಯನ್ನು ಬೇಡವೆಂದಳು ಸೀತೆ; ಅಣ್ಣನ ಬಲವಂತಕ್ಕೆ ಆಮೇಲೆ ಸ್ವಲ್ಪ ತೆಗೆದು ಕೊಂಡಳು.

ಅರ್ಧ ಗಂಟೆಯಾದಮೇಲೆ, "ಆಸ್ಪತ್ರೆಗೆ ಹೋಗಿ ಔಷಧಿ ಕುಡಿದು ಬರುತ್ತೇನೆ" ಎಂದು ರಾಮುಸ್ವಾಮಿ ಎದ್ದು ಹೊರಕ್ಕೆ ಹೊರಟ. ಅವನ ಮನಸ್ಸಿನ ಭಾರ ತಪ್ಪಿ, ತಲೆನೋವು ಇದ್ದರೂ ಇಲ್ಲದಂತೆ ಎನಿಸಿತ್ತವನಿಗೆ. ಆಸ್ಪತ್ರೆಗೆ ಹೋಗದೆ ನೇರವಾಗಿ ರಾಮಶೆಟ್ಟಿಯ ಅಂಗಡಿಗೆ ಹೋದ.

೪

ಅತ್ತ ರಾಮುಸ್ವಾಮಿ ಹೊರಕ್ಕೆ ಹೊರಟ ಕೂಡಲೆ ಇತ್ತ ಪಾರ್ವತಮ್ಮ ನವರು ಮಗಳನ್ನು ಮೃದುವಾಗಿ ಆಕ್ಷೇಪಿಸಿದರು :

"ಅಮ್ಮಾ ಸೀತಾ, ರಾಮುಸ್ವಾಮಿ ಹೇಳಿದ ಅಂತ ನೀನು ಹಾಗೆಲ್ಲಾ ಹೋಗಬಾರದಾಗಿತ್ತಮ್ಮ. ಶಾನುಭೋಗರ ಮನೆ ಇರುವುದು ಪೇಟೆಯ ದಾರಿಯಲ್ಲಿ. ಅದು ಪುಂಡರು ಪೋಕರಿಗಳು ತಿರುಗಾಡುವ ಸ್ಥಳ. ನಿನಗೆ ಬಿಡಿಸಿ ಹೇಳದೆ ಇದ್ದರೆ ಯತ್ನವಿಲ್ಲ, ಏನು ಮಾಡಲಿ ಹೇಳು. ಮುತ್ತೈದೆ ಯಾದವಳು ದುಷ್ಟರ ಕಣ್ಣಿಗೆ ಬಿದ್ದರೂ ಬದುಕಬಹುದು; ನಿನ್ನಂಥ ನಿರ್ಭಾಗ್ಯೆ ಬದುಕುವುದು ಕಷ್ಟವಮ್ಮ. ಅಲ್ಲದೆ ಈಗ ನೀನು ಮೊದಲಿನ ಹಾಗಲ್ಲ, ದೊಡ್ಡವ ಳಾಗಿದ್ದೀಯೆ. ಸ್ವಲ್ಪ ಎಚ್ಚರಿಕೆಯಿಂದ ಇರಬೇಕಮ್ಮ. ಇನ್ನುಮೇಲೆ ನನಗೆ ತಿಳಿಸದೆ ಹೊರಕ್ಕೆ ಹೋಗಕೂಡದು, ತಾಯಿ."

ತಾಯಿ ಗಂಭೀರ ವಾಣಿಯಲ್ಲಿ ನುಡಿದ ಉಪದೇಶವಾಕ್ಯಗಳನ್ನು ಸೀತೆ ಆಲಿಸಿದಳು; ಮೌನವಾಗಿದ್ದಳು. ವಿನೋದಕ್ಕೆ ಎಸೆದ ಸಣ್ಣ ಹರಳುಗಲ್ಲು ತಿಳಿ ಗೊಳದಲ್ಲಿ ತರಂಗಮಾಲೆಯನ್ನು ರಚಿಸುವಂತೆ, ಸದುದ್ದೇಶದಿಂದಲೇ ಆಡಿದ

ನೀತಿಯ ಮೇಲು ಮಾತುಗಳು ಸೀತೆಯ ಇದುವರೆಗೂ ತಿಳಿಯಾಗಿದ್ದ ಮುಗ್ಧ ಮನಸ್ಸಿನಲ್ಲಿ ಒಂದು ಸಣ್ಣ ಭಾವತರಂಗವನ್ನು ಎಬ್ಬಿಸಿತು. ತಾನು ಮದುವೆ ಯಾಗಿದ್ದು ಗಂಡನಿಲ್ಲದವಳು ಎಂಬ ಭಾವನೆ ಬಲಿಯುವುದಕ್ಕೆ ಮೊದಲೇ ಅದು ಹೇಗೋ ತನಗೆ ತಾನೇ ಮಾಯವಾಗಿತ್ತು. ಈಗ ತಾಯಿಯ ಮಾತು ಮೊತ್ತ ಮೊದಲಿಗೆ ಆ ಭಾವನೆಯನ್ನು ಮನಸ್ಸಿನಲ್ಲಿ ಊರಿತು. ಬೀಜ ಮೊಳೆತು, ಕುಡಿಯೊಡೆದು ಬಳ್ಳಿವರಿಯುವಂತೆ ಆ ಭಾವನೆಯೂ ಕುಡಿಯಿಟ್ಟು ಮುಂದು ವರಿಯಲು ಹವಣಿಸತೊಡಗಿತು—ಅಂದಿನಿಂದ.

'ನಾನು ಇನ್ನುಮೇಲೆ ಹೊರಕ್ಕೆ ಹೋಗಕೂಡದು. ಯಾಕೆ? ದುಷ್ಟರ ಕಣ್ಣಿಗೆ ಬೀಳುತ್ತೇನೆ. ಅಮ್ಮ ಹೇಳಿದ್ದು ದಿಟ. ಗುಡಿಯ ಸುಬ್ಬಾಭಟ್ಟ ಅದು ಹೇಗೆ ನನ್ನನ್ನು ಕಣ್ಣಾಗಲಿಸಿಕೊಂಡು ನೋಡಿ ನಕ್ಕ! ಅದೇನೋ ಆಸೆ ತೋರಿಸುವ ಹಾಗೆ ನೋಡಿ ನಕ್ಕ. ಇಲ್ಲದೆ ಹೋದರೆ ಹಾಸ್ಯಮಾಡಿದನೋ? ಏನಾದರೂ ಆಗಲಿ, ಅಮ್ಮ ಹೇಳಿದ್ದು ದಿಟ ಅಂತ ಕಾಣುತ್ತೆ. ಇನ್ನೂ ಯಾರು ಯಾರೋ ದುರುಗುಟ್ಟಿಕೊಂಡು ನೋಡಿದರು. ಒಳ್ಳೆಯವರೂ ಹಾಗೆಯೇ ನೋಡಿದರಲ್ಲಾ? ಸೀತಮ್ಮನವರು, ಜಾನಕಮ್ಮನವರು, ಪುಟ್ಟ ತಾಯಕ್ಕ ಎಲ್ಲರೂ ಹಾಗೆಯೇ ನೋಡಿದರು! ಸುಂದರಮ್ಮನವರು ಕೇಳಿಯೇ ಬಿಟ್ಟರಲ್ಲ: 'ಇದೇನೇ, ಒಬ್ಬಳೇ ಹೀಗೆ ಹೊರಟುಬಿಟ್ಟೆಯಲ್ಲ?' ಅಂತ. ಅಮ್ಮ ಹೇಳಿದ ಹಾಗೆ ಇನ್ನುಮೇಲೆ ಹೊರಕ್ಕೆ ಹೋಗದೆ ಇದ್ದರೆ ಆಯಿತು. ಹೆಂಗಸರು ಒಬ್ಬೊಬ್ಬರೇ ಹೊರಗೆ ತಿರುಗಬಾರದೆಂದು ಎಲ್ಲರೂ ಹೇಳುತ್ತಾರೆ. ನಾನು ಚಿಕ್ಕ ಹುಡುಗಿ. ಯಾರಾದರೂ ನನ್ನ ಕೈಯಿನ ಬಳೆ ಕಿತ್ತುಕೊಳ್ಳ ಬಹುದು. ಅದಕ್ಕೇ ಅಂತ ಕಾಣುತ್ತೆ, ರಾಮಣ್ಣ ಸುಮ್ಮನೆ ನನ್ನ ಕೈಯಿನ ಬಳೇನೇ ನೋಡುತ್ತಿದ್ದ; ಅದನ್ನ ಮುಟ್ಟಿ ಮುಟ್ಟಿ ನೋಡಿದ; ಅದರ ವಿಷಯ ಅದೇನೋ ಹೇಳಬೇಕೂ ಅಂತಿದ್ದ. ಹಾಗೇ ಆಗಲಿ, ಇನ್ನುಮೇಲೆ ಹೋಗದೆ ಇದ್ದರಾಯಿತು.'

ಸೀತೆ ಹಾಲು ತರುವುದಕ್ಕೆ ಹೋದಾಗ ಅವರಿವರು ದುರುಗುಟ್ಟಿಕೊಂಡು ನೋಡಿದ್ದು, ವ್ಯಂಗ್ಯವಾಗಿ ಮಾತಾಡಿಸಿದ್ದು—ಇವೆಲ್ಲ ಅವಳ ದೃಷ್ಟಿಯಲ್ಲಿ ವಿಚಿತ್ರವಾಗಿಯೇ ಕಂಡಿತ್ತು; ಆದರೆ ಏಕೆಂದು ಸ್ಪಷ್ಟವಾಗಿರಲಿಲ್ಲ. ಹಿಂದೆಲ್ಲ —ಮದುವೆಯಾಗುವುದಕ್ಕೆ ಮುಂಚೆ, ಮದುವೆಯಾದಮೇಲೆ ಕೂಡ—ಅವಳು

ಹೊರಕ್ಕೆ ಹೊರಟರೆ ಸರಿ, ಎಲ್ಲರೂ ಅವಳನ್ನು ಕರೆಯುವವರೆ, ಎಲ್ಲರೂ ಅವಳನ್ನು ಮಾತನಾಡಿಸಿ ಕೀಟಲೆ ಮಾಡಿ, ನಕ್ಕು ನಗಿಸುವವರೆ. ಸೀತೆ ಅಂಥ ಒಳ್ಳೆಯ ಹುಡುಗಿ, ಚೆಲುವೆಯಾದ ಹುಡುಗಿ, ಎಂದು ಎಲ್ಲರ ತಿಳಿವಳಿಕೆ; ತಿಳಿವಳಿಕೆಯೇನು, ಕೊಳಲೂರಿನ ಕೋಟೆಯ 'ದೇವಕನ್ಯೆ' ಎಂದು ಎಲ್ಲರ ಒಮ್ಮತದ ತೀರ್ಮಾನ. 'ರತಿ' ಎಂದು ಒಬ್ಬರು, 'ರಂಭೆ' ಎಂದು ಮತ್ತೊಬ್ಬರು. 'ಸಾಕ್ಷಾತ್ ಸೀತಾದೇವಿ ಕಣಮ್ಮಾ' ಎಂದು ಪೂಜಾರಿ ಶಿವರಾಮಭಟ್ಟರು ನಿರ್ಮಾಲ್ಯದ ಹೂವನ್ನೆಲ್ಲ ಸೀತೆಗೇ ಮೀಸಲು ಮಾಡಿದ್ದರು. ಮದುವೆಯ ವಯಸ್ಸಿಗೆ ಬಂದ ಕೋಟೆಯ ತರುಣರೆಲ್ಲ ಮನಸ್ಸಿನಲ್ಲಿ ಸೀತೆ ಯನ್ನು ಕೈಹಿಡಿಯಬಯಸಿದ್ದರು. ಅಂಥವರಲ್ಲಿ ಸುಬ್ಬಾಭಟ್ಟನೂ ಒಬ್ಬ. ಅವನು ಸೀತೆಯಮೇಲೆ ಎಲ್ಲರಿಗಿಂತ ಹೆಚ್ಚು ಆಸೆಯಿಟ್ಟುಕೊಳ್ಳಲು ಕಾರಣವೂ ಇತ್ತು. ಅದು ಹಾಗಿರಲಿ. ಸೀತೆ ಅತ್ಯಂತ ಚೆಲುವೆ ಎನ್ನುವುದು ಮಾತ್ರ ನಿಜವಾಗಿತ್ತು. ಈ ಮಾತಿನ ಅರಿವು ಅವಳಲ್ಲಿ ಬಲವಾಗಿ ಅಚ್ಚೊತ್ತಿ ನೆಲಸಿತ್ತು. ದಿವ್ಯ ಸೌಂದರ್ಯವುಳ್ಳವಳು ಎಂಬ ಅರ್ಥದಲ್ಲಿ 'ದೇವಕನ್ಯೆ' ಎಂಬ ಮಾತು ಸೀತೆಗೆ ಸಂಪೂರ್ಣವಾಗಿ ಒಪ್ಪುತ್ತಿತ್ತು.

ತಿದ್ದಿದ ಹುಬ್ಬು ; ಕಪ್ಪೆಚ್ಚಿದೆಯೋ ಎನ್ನುವ ಹಾಗೆ ಕಾಣುವ ತುರುಗೆವೆ; ಹೊಳೆಯುವ ಬೆಳ್ಳಂಬೆಳ್ಳನೆಯ ಬೊಗಸೆಗಣ್ಣು ; ಅರಳಿದ ಮಲ್ಲಿಗೆಯ ಮೇಲೆ ಕದ್ದುಂಬಿ ಕುಳಿತಿದೆಯೋ ಎಂಬ ಭ್ರಾಂತಿಯನ್ನು ಹುಟ್ಟಿಸುವ, ನೇರಿಳೆ ಬಣ್ಣದ ಕಣ್ಣುಗುಡ್ಡೆ ; ನೀಳವೂ ಅಲ್ಲದ ಮೋಟೂ ಅಲ್ಲದ ದಪ್ಪವೂ ಅಲ್ಲದ, ಹವಣಾದ ಮೂಗು; ಸಣ್ಣ ವಜ್ರದ ಓಲೆಯಿಡಲು ತಕ್ಕುವಾದ ಕಿವಿಗಳು; ನಾಲ್ಕು ಬೆರಳಗಲದ, ಸಮತಟ್ಟಾದ ಹಣೆ; ದಾಳಿಂಬದ ಹೂಗೆಂಪಿನ ತುಟಿ; ಉಬ್ಬೂ ಅಲ್ಲದ ಚಪ್ಪಟೆಯೂ ಅಲ್ಲದ ತುಂಬುಗೆನ್ನೆ ; ಅದರ ಬದಿಯಲ್ಲೆ ಅದರ ಹೊಳ ಪನ್ನು ಎತ್ತಿ ತೋರುವ, ಕಂಡೂ ಕಾಣದ ಪನ್ನೆಗೂದಲು ; ನಕ್ಕರೆ ಸ್ವಲ್ಪ ಗುಳಿಬೀಳುವ ನುಣುಪು ಗಲ್ಲ ; ದೃಷ್ಟಿಬೊಟ್ಟಿಟ್ಟಂತೆ ಗಲ್ಲಕ್ಕೂ ಕೆನ್ನೆಗೂ ನಡುವೆ ಕಿರಿದಾದ ಕರಿಯ ಮಚ್ಚೆ ; ಈ ಎಲ್ಲ ಬೇರೆ ಬೇರೆ ಚೆಲುವನ್ನೂ ಒಳಗೊಂಡು ಒಟ್ಟಿನ ಚೆಲುವನ್ನು ಹೆಚ್ಚಿಸುವಂತಹ ಮುಖದ ಮಾಟ ; ಆ ಮಾಟದ ಅಂದ ವನ್ನು ಹೆಚ್ಚಿಸುವ ಮುಂಗುರುಳು ; 'ಮುಂಗುರುಳಿಂದ ಮಾತ್ರ ಮೋಸ ಹೋದೀರಿ, ನಾನೂ ಇದ್ದೇನೆ, ಇಕೋ ನೋಡಿ' ಎಂದು ತೊಡೆಯುವರೆಗೂ

ಜೋತು ಜಡೆಯಾಗಿ ಅತ್ತ ಇತ್ತ ಒಲೆದು ಇಣಿಕಿನೋಡಿದಂತೆ ಕಾಣುವ ಹೊರವಾದ ನೀಳವಾದ ಕೂದಲ ರಾಶಿ; ಮೇಲಾಯ ಕಡಮೆಯಾಗಿ ಕೀಳಾಯ ಹೆಚ್ಚಾಗಿ ಮೆರೆಯುವ ಹೆಣ್ಣಿಗೆ ತಕ್ಕ ಸಹಜವಾದ ಒಯ್ಯಾರದಿಂದ ಬಳುಕುವ ಬಳ್ಳಿಯೊಡಲು; ಈ ಚೆಲುವನ್ನು ಮೆರೆಯಿಸುವ ಮೈಯ ಹೊಂಬಣ್ಣ. ಪಕ್ಕದ ಮನೆಯ ಸಾತಮ್ಮನವರು ಹೇಳುತ್ತಿದ್ದ ಹಾಗೆ 'ಸೀತೆ ಸ್ವರ್ಣಗೌರಿ'; ನಾಗರಿಕ ಕನ್ಯೆಯಾಗಿದ್ದರೆ,'ಸ್ವರ್ಣಲತೆ'. ಈ ಸೀತೆ ಹುಡುಗಿ ಸೀತೆ; ಬೆಳೆದ ಹೆಣ್ಣು ಊಹಾರಾಜ್ಯದ ರಾಣಿಯಾಗಿರಲಿ.

೫

ಈ ಚೆಲುವೆ ಸೀತೆ ಹೊರಕ್ಕೆ ಹೊರಟಾಗ ಕೊಳಲೂರಿನ ಕೋಟೆಯ ಬೀದಿ ಕಳವಳಿಸಿತು.

ಹೊರಗಡೆ ರಂಗೋಲಿಯಿಡುತ್ತಿದ್ದ ಪಕ್ಕದ ಮನೆಯ ಸಾತಮ್ಮನವರೇ ಅಚ್ಚರಿಗೊಂಡು ಕೇಳಿದ್ದರು :

"ಏನೇ ಸೀತಾ, ನಿಮ್ಮ ತಾಯಿ ನಿನ್ನನ್ನ ನಮ್ಮ ಮನೆಗೇ ಕಳಿಸುತ್ತಿರ ಲಿಲ್ಲ, ಈಗ ಎಲ್ಲೋ ಒಬ್ಬಳೇ ಹೊರಟುಬಿಟ್ಟಿದ್ದೀಯೆ ?"

ಆಗ ತಟ್ಟನೆ, ತನ್ನ ತಾಯಿ ತನಗೆ ಹಿಂದೊಮ್ಮೆ ಹೇಳಿದ್ದ ಮಾತುಗಳು ಸೀತೆಗೆ ನೆನಪಾದುವು :

'ಸೀತಾ, ನೀನು ಇನ್ನುಮೇಲೆ ಸಾತಮ್ಮನವರ ಮನೆಗೆ ಹೋಗಿ ಅಲ್ಲಿ ಚಕ್ಕಂದ ಹೊಡೆಯುತ್ತ ಕುಳಿತುಕೊಳ್ಳಬೇಡ. ಅವರ ಮನೆಯಲ್ಲಿ ಬೆಳೆದ ಗಂಡುಮಕ್ಕಳಿದ್ದಾರೆ.'

ಸೀತೆ ಕೊಡಬೇಕಾದ ಉತ್ತರ ಕೊಟ್ಟಳು :

"ರಾಮಣ್ಣನಿಗೆ ತುಂಬ ತಲೆನೋವು. ಸ್ವಲ್ಪ ಕಾಫಿಗೆ ಹಾಲು ಬೇಕಾ ಗಿತ್ತು. ಶಾನುಭೋಗರ ಮನೆಗೆ ಹೋಗುತ್ತಿದೇನೆ."

ಸಾತಮ್ಮನವರ ಮನೆಯಲ್ಲಿ ಹಾಲು ಇತ್ತೋ ಇಲ್ಲವೋ, ತಾವೇ ಬೇಕಾ ದರೆ ಸ್ವಲ್ಪ ಹಾಲು ಕೊಡುವುದಾಗಿಯಂತೂ ಅವರು ಹೇಳಲಿಲ್ಲ.

ಶಾನುಭೋಗ ಕೃಷ್ಣಪ್ಪನವರ ಮನೆ ಕೋಟೆಯಿಂದ ಪೇಟೆಗೆ ಹೋಗುವ ದಾರಿಯಲ್ಲಿತ್ತು. ಕೋಟೆಯಲ್ಲೆಲ್ಲ ಬ್ರಾಹ್ಮಣರ ಮನೆಗಳೇ; ಕೋಟೆಯನ್ನು

ಬಿಟ್ಟು ಪೇಟೆಗೆ ಹೊರಟರೆ, ನಡುವೆ ಸಾಲಾಗಿ ಮತ್ತೆ ಎಂಟು ಹತ್ತು ಬ್ರಾಹ್ಮಣರ ಮನೆಗಳು. ಕೊಳಲೂರಿನ ಪೇಟೆಯ ಜನ ಇದನ್ನು 'ಬ್ರಾಂಬರ ಕೇರಿ' ಎಂದು ಕರೆಯುತ್ತಿದ್ದರು. ಈ ಮುಖ್ಯಬೀದಿಯ ಹಿಂದುಗೂಡಿ ಇನ್ನೊಂದು ಸಣ್ಣ ಬೀದಿ; ಇಲ್ಲೊಂದು ಐದಾರು ಬ್ರಾಹ್ಮಣರ ಮನೆಗಳು, ಒಂದೆರಡು ವೇಶ್ಯೆಯರ ಮನೆಗಳು. ಈ ಬ್ರಾಹ್ಮಣರ ಕೇರಿಯನ್ನು ಹಾದು ಹೋದರೆ ನಡುವೆ ಐವತ್ತು ಅರವತ್ತು ಗಜಗಳು ತೆರಪು. ಬಹುಶಃ ಪೇಟೆಯ ಜನದ ಮೈಲಿಗೆಯ ಸೋಂಕು ಬ್ರಾಹ್ಮಣರ ಬೀದಿಗೆ ಹೆಚ್ಚಾಗಿ ಅಂಟದಿರಲಿ ಎಂದು ಈ ರೀತಿ ಇದ್ದಿತೋ ಏನೋ. ಇದರಿಂದ ಆಚೆಗೆ ಮುಖ್ಯವಾದ ಪೇಟೆಯ ಬೀದಿ. ಕೋಟೆಗಿಂತ ಇಲ್ಲಿನ ಜನವಸತಿ ಹೆಚ್ಚು. ಪೇಟೆಯ ಆಚೆ ಈಚೆ ವಕ್ರವಾಗಿ ಐದಾರು ಬೀದಿಗಳು. ಇಲ್ಲಿ ಹೆಸರಿಗೂ ಬ್ರಾಹ್ಮಣರ ಮನೆ ಒಂದೂ ಇಲ್ಲ. ಹೀಗೆ ಬ್ರಾಹ್ಮಣರೂ ಬ್ರಾಹ್ಮಣೇತರರೂ ಪ್ರತ್ಯೇಕ ವಾಗಿದ್ದರೂ ಪ್ರತ್ಯೇಕತಾ ಭಾವನೆಯೇನೂ ಇದ್ದಂತೆ ಕಾಣಲಿಲ್ಲ. ಹರಿಜನರು ಹೊರತು ಉಳಿದೆಲ್ಲ ಬ್ರಾಹ್ಮಣರಲ್ಲದ ಹಿಂದೂಗಳು ಕೋಟೆಯ ಶ್ರೀರಾಮ ದೇವರ ಗುಡಿಗೆ ಮತ್ತು ಗಣಪತಿ ಗುಡಿಗೆ ದೇವರ ಸೇವೆಗೆ ಬಂದುಹೋಗುತ್ತಿ ದ್ದರು. ಕೋಟೆಯ ರಾಮೋತ್ಸವ ಎಂದರೆ ಪಾನಕ-ಪಣಿಯಾರದ ವಿತರಣೆ ಎಷ್ಟೋ ಅಷ್ಟೆ; ನಿಜವಾದ ಉತ್ಸವ ಆಗುತ್ತಿದ್ದುದು ಪೇಟೆಯಲ್ಲಿ; ಅದರಲ್ಲಿ ಬ್ರಾಹ್ಮಣರೂ ಭಾಗವಹಿಸುತ್ತಿದ್ದರು.

ಬ್ರಾಹ್ಮಣರ ಬೀದಿಯಿಂದ ಉತ್ತರಕ್ಕೆ ಹೋದರೆ ಪೇಟೆ. ಪೇಟೆಗೂ ಆಚೆ, ಊರಿನ ಆಚೆ, ಆಸ್ಪತ್ರೆ. ಅಂಚೆ ಕಚೇರಿ, ಮಾಧ್ಯಮಿಕ ಶಾಲೆ ಮಾತ್ರ ಬ್ರಾಹ್ಮಣರ ಬೀದಿಯ ದಕ್ಷಿಣದ ಕೊನೆಯಾಚೆ—ಕೋಟೆಯ ಹತ್ತಿರವೇ— ಇದ್ದುವು. ಹೀಗಾಗಿ, ಪೇಟೆಯ ಜನ ಈ ಬ್ರಾಹ್ಮಣರ ಬೀದಿಯಲ್ಲಿ ಓಡಾಡಲೇ ಬೇಕಾಗಿದ್ದಿತು. ಜೊತೆಗೆ ಬಸ್ಸುಗಳು, ಗಾಡಿಗಳು—ಇವುಗಳ ಓಡಾಟವೂ ಈ ಮಾರ್ಗದಲ್ಲಿಯೆ. ಅಂತೂ ಕೋಟೆಯಲ್ಲಿದ್ದ ಶಾಂತ ವಾತಾವರಣ ಪೇಟೆಗೆ ಹೊಂದಿಕೊಂಡಿದ್ದ ಈ ಬೀದಿಯಲ್ಲಿರಲಿಲ್ಲ. ಈ ಬೀದಿ ಪೇಟೆಗೂ ಕೋಟೆಗೂ ಮಧ್ಯೆ ಕೊಂಡಿಯಂತಿತ್ತು. ಊರ ಶಾನುಭೋಗರ ಮನೆ ಇಲ್ಲಿದ್ದುದು ಸ್ವಾಭಾವಿಕವೆ.

ಸೀತೆ ಕೋಟೆಯನ್ನು ಬಿಟ್ಟು ಬ್ರಾಹ್ಮಣರ ಬೀದಿಗೆ ಬರಬೇಕಾದರೆ

ಹತ್ತು ಹನ್ನೆರಡು ಮನೆಗಳನ್ನು ಹಾದುಬರಬೇಕಾಗಿತ್ತು. ತೀರ ಬಲಪಕ್ಕದ ಮನೆ ಸಾತಮ್ಮನವರ ಮನೆ; ಬಳಿಕ ಜಾನಕಮ್ಮನವರು, ಪುಟ್ಟತಾಯಮ್ಮನವರು. ಅನಂತರ ರಾಮಾಜೋಯಿಸರ ಮನೆ, ಶಿವರಾಮಭಟ್ಟರ ಮನೆ. ಶಿವರಾಮಭಟ್ಟರ ಮನೆ ಬಲಗಡೆಯಾದರೆ, ಎಡಗಡೆಯೇ—ಕೋಟೆಯ ನಟ್ಟ ನಡುವೆ—ಉತ್ತರಾಭಿಮುಖವಾಗಿದ್ದ ಶ್ರೀರಾಮದೇವರ ಗುಡಿ; ಇದರ ಎದುರು ಮೂಲೆಯಲ್ಲಿ ಗಣಪತಿಯ ಗುಡಿ.

ಸೀತೆ ಹೋಗುವಾಗ ಸಾತಮ್ಮನವರು ಅವಳನ್ನು ಮಾತನಾಡಿಸಿದರು. ಜಗಲಿಯ ಮೇಲೆ ನಿಂತಿದ್ದ ಜಾನಕಮ್ಮನವರು ಸಾತಮ್ಮನವರು ಕೇಳಿದ ಪ್ರಶ್ನೆಯನ್ನೇ ತಾವು ಕೇಳಬೇಕಾದ್ದು ಅಪ್ರಕೃತವೆಂದು ಭಾವಿಸಿ ಸುಮ್ಮನಿದ್ದರೂ, ಅಚ್ಚರಿಯಿಂದ ಕಣ್ಣರಳಿಸಿ ಬಾಯಿಬಿಟ್ಟುಕೊಂಡು ಸೀತೆಯನ್ನು ನೋಟ ಮಾತ್ರದಿಂದಲೇ ಝುಂಕಿಸುವಂತೆ ಕಂಡರು. ಹೊಳೆಯಿಂದ ಮಡಿಯುಟ್ಟು ಬರುತ್ತಿದ್ದ ಪುಟ್ಟತಾಯಮ್ಮನವರು ಸೀತೆಯನ್ನು ಎದುರುಗೊಂಡು, ಏನೂ ಮಾತನಾಡದೆ, ಮೂರು ಹೆಜ್ಜೆ ಹಾಕಿದಮೇಲೆ—'ಪಾತಮ್ಮನಿಗೆ ಹೇಳಬೇಕು. ಇದು ಚೆನ್ನಲ್ಲ' ಎಂದು ಸೀತೆಗೆ ಕೇಳಬೇಕೆಂದೇ ಗಟ್ಟಿಯಾಗಿ ಗೊಣಗಿಕೊಂಡು ಹೋದರು. ಆಮೇಲೆ ಕಂಡವನೆಂದರೆ, ಜಗಲಿಯ ಮೇಲೆ ನಿಂತಿದ್ದ ಸುಬ್ಬಾಭಟ್ಟ—ಶಿವರಾಮಭಟ್ಟರ ಮಗ; ಮದುವೆಯ ವಯಸ್ಸಿಗೆ ಬಂದು ಮದುವೆಯಾಗದಿದ್ದ ಬ್ರಹ್ಮಚಾರಿ; ಎರಡು ವರ್ಷದ ಹಿಂದೆ ಸೀತೆಯನ್ನು ತನಗಾಗಿ ಮನಸ್ಸಿನಲ್ಲೇ ಗೊತ್ತುಮಾಡಿಕೊಂಡಿದ್ದವನು. ಈ ಸುಬ್ಬಾಭಟ್ಟ ಸೀತೆಯನ್ನು ನೋಡಿ ಮುಗುಳುನಗೆ ನಕ್ಕ. ಹಿಂದೆಲ್ಲ ಮಾತಾಡುವ ಸಲಿಗೆ ವಹಿಸುತ್ತಿದ್ದರೂ, ಈಗ ಅವನು ಮೌನವಾಗಿಯೇ ಇದ್ದ; ಸೀತೆಯೂ ತಲೆ ಬಗ್ಗಿಸಿಕೊಂಡೇ ನಡೆದುಹೋದಳು. ಅವನು ನಕ್ಕದ್ದು ಏಕೆಂದು ಅರ್ಥವಾಗದಿದ್ದರೂ ಅವನ ನಗೆ ಅವಳ ಅರಿವಿಲ್ಲದೆಯೇ ಅವಳ ಅಂತರಂಗವನ್ನು ಕಲಕಿದಂತಾಯಿತು.

ಇಷ್ಟಕ್ಕೇ ಮುಗಿಯಲಿಲ್ಲ. ಸೀತೆ ಕೋಟೆಯನ್ನು ಬಿಟ್ಟು ಪೇಟೆಗೆ ಒಯ್ಯುವ 'ಬ್ರಾಹ್ಮಣರ ಕೇರಿ'ಗೆ ತಿರುಗಿದಾಗ, ಪೋಸ್ಟ್‌ಮಾಸ್ಟರ್ ಪುಟ್ಟಣ್ಣಯ್ಯ ಪೇಟೆಯ ಕಡೆಯಿಂದ ಬರುತ್ತಿದ್ದವನು ಸೀತೆಯನ್ನು ಕಂಡು ಮೊದಲು ಮುಗುಳುನಗೆ ಬೀರಿದ, ನಿಂತು ಮಾತನಾಡಿಸಿಯೇಬಿಟ್ಟ: "ಏನಮ್ಮ, ರಾಮಸ್ವಾಮಿಯ ತಂಗಿಯಲ್ಲವೇ ನೀನು? ಈಗ ಏನು ಪೋಸ್ಟಾಫೀಸಿನ ಕಡೆ

ಬರುವುದೇ ಇಲ್ಲ? ಮೊದಲೆಲ್ಲ ಆಗಾಗ್ಗೆ ಬರುತ್ತಲೇ ಇದ್ದೆ?....ಓಹೋ, ಸರಿಯಮ್ಮ ಸರಿ. ರಾಮುಸ್ವಾಮಿ ನನಗೆ ತಿಳಿಸಿದ್ದ; ಮರೆತೇ ಹೋಯಿತು.... ಅಯ್ಯೋ ಪಾಪ!....ಯಾವಾಗಲಾದರೂ ಬಂದು ಹೋಗಮ್ಮ, ನನ್ನ ಹೆಂಡತಿ ನಿನ್ನನ್ನ ನೆನಸಿಕೊಳ್ಳುತ್ತಲೇ ಇರುತ್ತಾಳೆ. ಅಂದರೆ, ಅವಳು ಈಗ ಊರಿನಲ್ಲಿ ಇಲ್ಲ. ಬಂದಮೇಲೆ ಬಾರಮ್ಮ." ಮದುವೆಯಾಗುವುದಕ್ಕೆ ಮುಂಚೆ ಸೀತೆ ಪದೇ ಪದೇ ಪೋಸ್ಟಾಫೀಸಿಗೆ ಹೋಗುತ್ತಲೇ ಇದ್ದಳು; ಆಗ ಪುಟ್ಟಣ್ಣಯ್ಯ ಇರಲಿಲ್ಲ; ರಿಟೈರಾಗುವುದರಲ್ಲಿದ್ದ ಬೇರೊಬ್ಬರು ಪೋಸ್ಟ್‌ಮಾಸ್ಟರಾಗಿದ್ದರು. ಮದುವೆಯಾದಮೇಲೂ ಎಂದಿನಂತೆಯೇ ಆಗೊಮ್ಮೆ ಈಗೊಮ್ಮೆ ಹೋಗ ಬೇಕಾಗಿ ಬರುತ್ತಿತ್ತು. ಹೋದಾಗಲೆಲ್ಲ 'ಕಾರ್ಡು ಕೊಡಿ', 'ಕವರು ಕೊಡಿ' —ಇಷ್ಟೇ ಅವಳು ಆಡುತ್ತಿದ್ದ ಮಾತು. ಎಲ್ಲೋ ಒಂದು ದಿನ ಮಾತ್ರ ಪುಟ್ಟಣ್ಣಯ್ಯನ ಹೆಂಡತಿ ಶಾರದಮ್ಮ ಸೀತೆಯನ್ನು ಒಳಕ್ಕೆ ಕರೆದು ಮಾತ ನಾಡಿಸಿ, ಹೊಸದಾಗಿ ಮದುವೆಯಾದವಳೆಂದು ಕುಂಕುಮ ತಾಂಬೂಲ ಕೊಟ್ಟು ಕಳಿಸಿದ್ದಳು. ಪುಟ್ಟಣ್ಣಯ್ಯನ ಮಾತುಗಳು ವಿಚಿತ್ರವಾಗಿ ಕಾಣದಿದ್ದರೂ, ಆತ ಎಂದೂ ಇಲ್ಲದ್ದು ಬೀದಿಯಲ್ಲಿ ನಿಂತು ಮೊದಲು ಸಲಿಗೆ ವಹಿಸಿ ಮಾತ ನಾಡಿಸಿದ್ದು ವಿಚಿತ್ರವಾಗಿಯೇ ಕಂಡಿತು.

ಇದನ್ನೆಲ್ಲಾ ನೆನೆದು, ತಾಯಿ ಇಂದು ಹೇಳಿದ—ಈಗ ಕೆಲಕಾಲದಿಂದ ಹೇಳುತ್ತಿದ್ದ—ಮಾತಿನಲ್ಲಿ ಏನೋ ನಿಜವಿದೆಯೆಂದು ಎನ್ನಿಸಿತು ಸೀತೆಗೆ. ಆದರೂ ಸಾತಮ್ಮನವರ ಪ್ರಶ್ನೆಯಲ್ಲಾಗಲಿ, ಸುಬ್ಬಾಭಟ್ಟನ ನಗೆಯಲ್ಲಾಗಲಿ, ಪುಟ್ಟಣ್ಣಯ್ಯನವರ ಮಾತಿನಲ್ಲಾಗಲಿ ಕಹಿಯೇನೂ ಇದ್ದಂತೆ ಅವಳಿಗೆ ನೆನಪಾಗಲಿಲ್ಲ. ಆದರೂ, ತಾಯಿ ಬೇಡ ಎಂದದ್ದನ್ನು ಏಕೆ ಮಾಡಬೇಕು? ಅವರು ಹೇಳುವುದೆಲ್ಲ ತನ್ನ ಒಳ್ಳೆಯದಕ್ಕೇ ಅಲ್ಲವೆ? ಅವರು ಹೇಳಿದ ಹಾಗೇ ಕೇಳಿದರಾಯಿತು ಎಂದು ಮತ್ತೊಮ್ಮೆ ಸಮಾಧಾನಪಟ್ಟುಕೊಂಡಳು.

# ಪ್ರಕರಣ ಎರಡು

## ೧

ರಾಮಶೆಟ್ಟಿ ಅಂಗಡಿಯ ಗಲ್ಲದ ಮೇಲೆ ಕುಳಿತಿದ್ದ. ಅವನು ರಾಮಸ್ವಾಮಿಯ ಓರಗೆಯವನೆ. ವಯಸ್ಸಾಗಿಲ್ಲದಿದ್ದರೂ ವಯಸ್ಕನಂತೆ ಕಾಣುತ್ತಿದ್ದ. ಬೊಜ್ಜು ಬೆಳೆಯುವ ಮುಂಗುರುಹು ಆಗಲೇ ಕಾಣುತ್ತಿತ್ತು. ಕಿವಿಯಲ್ಲಿ ಹತ್ತಕಡಕು; ಹಣೆಯಲ್ಲಿ ದೂರಕ್ಕೂ ಕಾಣುವ ನಾಮ; ಎಡಗೈಯಲ್ಲಿ ಎರಡು ಹರಳಿನ ಉಂಗುರ. ಗುಂಡಿ ಕಳಚಿದ ಷರಟಿನ ತೆರಪಿನ ನಡುವೆ ದಪ್ಪ ಜೊತೆ ಜನಿವಾರ. ತಲೆಯ ಮೇಲೆ ಹಾಸನದ ಟೋಪಿ. ಪದ್ಮಾಸನ ಹಾಕಿ ಕುಳಿತಿದ್ದ ಅವನು ಸಾಕ್ಷಾತ್ ವಿಘ್ನೇಶ್ವರ.

ರಾಮಸ್ವಾಮಿಯ ಗೆಲವಾದ ಮುಖ ಕಂಡ ಕೂಡಲೆ ರಾಮಶೆಟ್ಟಿಯ ಮುಖವೂ ಅರಳಿ, ಹಲ್ಲುಗಳ ಹೊಳಪು ನಾಮದ ಹೊಳಪನ್ನು ಮರೆಸಿತು.

ಯಾರೋ ಇಬ್ಬರು ಮೂವರು ವ್ಯಾಪಾರಕ್ಕೆ ಬಂದಿದ್ದರು. ಒಬ್ಬಳು ಬೂಬಿತಿ ಒಂದು ಶೀಸೆಯಲ್ಲಿ ಅರೆಪಾವು ಒಳ್ಳೆಣ್ಣೆ ಹಾಕಿಸಿಕೊಂಡು ಹೋದಳು; ಒಬ್ಬ ಹುಡುಗ ಮೂರು ಕಾಸಿನ ಉಪ್ಪುಗಡಲೆ ಕೊಂಡುಹೋದ; ಇನ್ನೊಬ್ಬ ರೈತ ಒಂದು ಚಕ್ಕುಲಿ ಎರಡು ಕಡಲೆ ಉಂಡೆ ಕೊಂಡುಕೊಂಡು, ಶೆಟ್ಟಿಯೊಡನೆ ಜಗಳವಾಡಿ ಹಿಟ್ಟಿನ ಜೊತೆಗೆ ಕಡಿಯುವುದಕ್ಕೆ ಒಂದು ಈರುಳ್ಳಿಯನ್ನು ಬಿಟ್ಟಿ ಈಸಿಕೊಂಡು, ನಿಲ್ಲಿಸಿದ್ದ ಜೋಡೆತ್ತಿನ ಬೋಳುಗಾಡಿಯನ್ನು ಏರಿ ಹೊರಟ. ಗಿರಾಕಿಗಳೆಲ್ಲ ಹೋದಂತಾಯಿತು.

ಈ ಹೊತ್ತಿಗೆ ರಾಮಸ್ವಾಮಿ ಜೇಬಿಗೆ ಕೈಹಾಕಿ ಬೆಂಕಿಯ ಪೆಟ್ಟಿಗೆ ಹೊರಕ್ಕೆ ತೆಗೆದು, ಬೀಡಿ ಸಿಕ್ಕದಿರಲು, ಗಿರಾಕಿಗಳು ಹೋಗುವುದಕ್ಕಾಗಿಯೇ ಚಡಪಡಿಸುತ್ತ ಕುಳಿತಿದ್ದ. ಗಿರಾಕಿಗಳೆಲ್ಲ ಹೋದಕೂಡಲೆ ಒಂದೇ ಉಸಿರಿನಲ್ಲಿ ಕೇಳಿದ :

"ಎಲ್ಲಿ ಶೆಟ್ಟಿ, ಮೊದಲು ಒಂದು ಕಟ್ಟು ಜಾಡಿ ಬೀಡಿ ಕೊಡು. ಆಮೇಲೆ ಉಳಿದ ಮಾತು."

"ಯಾಕೆ, ಬಹಳ ಆತುರ? ಸ್ವಲ್ಪ ನಿಧಾನವಾಗಿ...."

" ಮೊದಲು ಬೀಡಿ ಕಟ್ಟು ಇಲ್ಲಿ ಎಸಿ. ಆಮೇಲೆ ಮಾತು."

" ಅದು ಸರಿಯಪ್ಪ. ನಿನ್ನೆಯೇ ಹೇಳಲಿಲ್ಲವೆ, ಸಾಧ್ಯವಿಲ್ಲ ಅಂತ. ನೂರು ರೂಪಾಯಿ ಬಟುವಾಗಿದೆ...."

" ಇವೊತ್ತಿನಿಂದ ಹೊಸ ಲೆಕ್ಕ ಇಡು " ಎಂದು ರಾಮುಸ್ವಾಮಿ ತಾನು ತಂದಿದ್ದ ಕಾಗದದ ಪೊಟ್ಟಣವನ್ನು ರಾಮುಶೆಟ್ಟಿಯು ತೊಡೆಯ ಮೇಲಕ್ಕೆ ಎಸೆದ.

ರಾಮುಶೆಟ್ಟಿ ಪೊಟ್ಟಣ ಬಿಚ್ಚಿ ನೋಡಿದ : ಚಿನ್ನದ ಗುಂಡುಗಳು, ಕಾಸುಗಳು ! ಆಶ್ಚರ್ಯದಿಂದ ಒಂದು ಸಲ ರಾಮುಸ್ವಾಮಿಯ ಮುಖವನ್ನು ದುರುಗುಟ್ಟಿಕೊಂಡು ನೋಡಿದ.

" ಅದೇಕೆ ಹಾಗೆ ನೋಡುತ್ತಿ, ಶೆಟ್ಟಿ ? ಅದೇನೂ ಕದ್ದ ಮಾಲಲ್ಲ."

" ನಾನು ಹಾಗೆಂದೆನೆ ? ಕಳ್ಳನ ಮನಸ್ಸು ಹುಳ್ಳಹುಳ್ಳಗೆ ಅಂದ ಹಾಗೆ. ನಾನು ಯಾರಿಗೂ ಹೇಳೋದಿಲ್ಲ, ಇದು ನಿಜವಾಗಿ ಯಾರದ್ದು ಹೇಳು ? "

" ಯಾರದ್ದು ಅಂದರೆ ? ನನ್ನದು ; ನಮ್ಮ ಮನೇದು. ಅದರ ಪುರಾಣ ಕಟ್ಟಿಕೊಂಡು ನಿನಗೇನು ? ಅದಕ್ಕೆ ಬೆಲೆ ಕಟ್ಟು, ಕೊಡಬೇಕಾದ್ದನ್ನು ವಜಾ ಕಟ್ಟಿಕೋ, ಉಳಿದ ಹಣ ಕೊಡು. ನಿನಗೆ ಇಷ್ಟವಿಲ್ಲದಿದ್ದರೆ ಕೊಡು ಇಲ್ಲಿ. ಬೇರೆಯ ಕಡೆ ವಿಲೇ ಮಾಡಿ ನಿನ್ನ ನೂರು ರೂಪಾಯಿ ತಂದು ಬಿಸಾಡುತ್ತೇನೆ."

" ಕೋಪಿಸಿಕೋಬೇಡ, ರಾಮುಸ್ವಾಮಿ. ಇರಲಿ, ಸ್ವಲ್ಪ ಕುಳಿತಿರು, ಬಂದೆ " ಎಂದು ರಾಮುಶೆಟ್ಟಿ ಗಲ್ಲ ಬಿಟ್ಟು ಎದ್ದು ಒಳಕ್ಕೆ ಹೋದ.

ರಾಮುಶೆಟ್ಟಿಯು ತಂದೆ ಸುಬ್ಬಯ್ಯಶೆಟ್ಟರು ಕೆಲವು ವರ್ಷಗಳ ಹಿಂದೆ ಪಾರ್ಶ್ವವಾಯು ಹೊಡೆದು, ಅಂದಿನಿಂದ ಹಾಸಿಗೆ ಹಿಡಿದು ಮಲಗಿದ್ದರು. ರಾಮುಶೆಟ್ಟಿ ಹಾಸಿಗೆಯ ಬಳಿ ಕುಳಿತು, ಪೊಟ್ಟಣವನ್ನು ತಂದೆಯ ಕೈಗೆ ಕೊಟ್ಟ. ಸುಬ್ಬಯ್ಯಶೆಟ್ಟರು ಪೊಟ್ಟಣವನ್ನು ಬಲಗೈಲಿ ಕೆಲಹೊತ್ತು ತೂಗಿ, ತೆಲುಗಿನಲ್ಲಿ " ನೂರೈವತ್ತು " ಎಂದು ತೀರ್ಪು ಹೇಳಿದರು.

" ಯಾರದ್ದು ? "

" ವೆಂಕಟಸುಬ್ಬಯ್ಯನವರ ಮಗ ರಾಮುಸ್ವಾಮಿ ತಂದಿದ್ದಾನೆ."

" ಅವನಿಗೆ ಮದುವೆಯಾಯಿತೆ ? "

" ಇಲ್ಲ."

"ಹಾಗಾದರೆ ಅವನಿಗೆ ಇದು ಹೇಗೆ ಸಿಕ್ಕಿತು, ಕೇಳಿದೆಯಾ?"

"ತಮ್ಮ ಮನೆಯದೇ ಎಂದ. ಹೆಚ್ಚಿಗೆ ಏನೂ ಹೇಳಲಿಲ್ಲ."

"ಸರಿ, ಅವರಪ್ಪನೂ ಹೀಗೇ ನನ್ನ ಬಳಿ ಬರುತ್ತಿದ್ದ. ಅವರಪ್ಪನಿಗಂತೂ ಸಂಸಾರದ ತಾಪತ್ರಯ, ಮಕ್ಕಳ ಮದುವೆ ಮುಂಜಿ, ಅದು ಇದು. ಇವನಿಗೇನು ಅಂಥ ಹಣದ ದರದು, ಈ ಚಿಕ್ಕ ವಯಸ್ಸಿನಲ್ಲಿ? ಇವನ ಅಣ್ಣ....ಅದು ಯಾರು?...."

"ಸುಬ್ಬಸ್ವಾಮಿ...."

"ಹೌದು, ಸುಬ್ಬಸ್ವಾಮಿ. ಅವನೂ ಚಿಕ್ಕವನಾಗಿದ್ದಾಗ ದುರ್ಚಾಳೀಗೆ ಬಿದ್ದಿದ್ದ. ಅವರಪ್ಪ ಅವನನ್ನ ಮೈಸೂರಿಗೆ ಕಳಿಸಿ ಓದಿಸಿದರು. ಬೆಂಗಳೂರಿನ ದೊಡ್ಡ ಮನುಷ್ಯರ ಮನೆ ಹೆಣ್ಣು ತಂದು ಮದುವೇನೂ ಮಾಡಿದರು. ಬೆಂಗಳೂರಿನಲ್ಲೇ ಕೆಲಸಾನೂ ಸಿಕ್ಕಿತು. ಅವನು ಈಗಲೂ ಅಲ್ಲೇ ಇದಾನೆ ಅಲ್ಲವೆ?"

"ಇರಬಹುದು. ನನಗೆ ಸರಿಯಾಗಿ ಗೊತ್ತಿಲ್ಲ."

"ಅಂತೂ ಹುಷಾರಾಗಿರು. ಒಡವೇನ ಮನೆಯಿಂದ ಹೊಡೆದುಕೊಂಡು ಬಂದಿದಾನೆ ಅಂತ ಕಾಣುತ್ತೆ. ಇದನ್ನು ಅವನು ನಿನ್ನ ಕೈಗೆ ತಂದುಕೊಟ್ಟಾಗ ಎದುರಿಗೆ ಯಾರಾದರೂ ಇದ್ದರೋ?"

"ಯಾರೂ ತಿಳಿದವರು ಇರಲಿಲ್ಲ."

"ಸರಿಯಾಗಿ ತೂಕಮಾಡಿ ನೋಡು. ನೋಡೋಣ."

ರಾಮಶೆಟ್ಟಿ ಸಣ್ಣ ತ್ರಾಸನ್ನು ತಂದು ಚಿನ್ನವನ್ನು ತಂದೆಯ ಎದುರಿಗೇ ತೂಕ ಮಾಡಿದ.

"ನೀವು ಹೇಳಿದ್ದು ಸರಿ, ಅಪ್ಪ."

"ಸರಿ. ಅವನಿಂದ ಬರಬೇಕಾದ ಬಾಕಿ ಏನಾದರೂ ಇದೆಯೋ?"

"ಇದೆ"

"ಎಷ್ಟು?"

"ನೂರು."

"ಆ್ಞಾ! ನೂರೇ! ನೂರು ರೂಪಾಯಿ!"

"ಹ್ಞಾ."

"ಅವರಪ್ಪನಿಗಂತೂ ಹೊಲ ತೋಟ ಇತ್ತು; ಮನೆ ಇತ್ತು; ಸ್ವಲ್ಪ

ನಗನಾಣ್ಯವೂ ಇತ್ತು. ಎಲ್ಲ ಸಂಸಾರದ ಖರ್ಚಿನ ಸಾಲಗಳಿಗಾಯಿತು. ಈಗ ಉಳಿದಿರುವುದು ಒಂದು ಮನೆ ಅಂತ ಕಾಣುತ್ತೆ. ಈ ರಾಮುಸ್ವಾಮಿಗೆ ಏನು ಸಿಕ್ಕುತ್ತೆ ? ಅವನಿಗೆ ಏನಾದರೂ ಕೆಲಸ ಇದೆಯೇನು ? "

" ಇಲ್ಲ."

" ಮತ್ತೆ ಯಾಕೆ ಅವನಿಗೆ ನೂರರ ವರೆಗೆ ಸಾಲ ಕೊಟ್ಟೆ ? "

" ಇನ್ನು ಮೇಲೆ ಕೊಡುವುದಿಲ್ಲ."

" ಸರಿ. ಈಗ ಬಂದದ್ದನ್ನು ಬಿಡಬೇಡ. ಇನ್ನು ಮೇಲೆ ಇವನ ವಿಷಯ ಹುಷಾರಾಗಿರು."

" ಆಗಲಿ " ಎಂದು ರಾಮುಶೆಟ್ಟಿ ಎದ್ದು ಹೊರಕ್ಕೆ ಬಂದು ಗಲ್ಲದ ಮೇಲೆ ಕುಳಿತ.

ರಾಮುಶೆಟ್ಟಿ ಹಿಂದಕ್ಕೆ ಬರುವ ವೇಳೆಗೆ, ರಾಮುಸ್ವಾಮಿ ಆಗಲೇ ಅರ್ಧ ಕಟ್ಟು ಬೀಡಿಯನ್ನು ಸೇದಿ ಮುಗಿಸಿದ್ದ. ಅವನ ಮುಖದಲ್ಲಿ ಆತಂಕ ಆತುರ ಮುದ್ರೆಯೊತ್ತಿದ್ದುವು. ರಾಮುಶೆಟ್ಟಿ ಕುಳಿತನೋ ಇಲ್ಲವೋ, ರಾಮುಸ್ವಾಮಿ ಪ್ರಶ್ನಿಸಿದ :

" ನಿಮ್ಮ ಅಪ್ಪನನ್ನು ಕೇಳೋದಕ್ಕೆ ಹೋಗಿದ್ದೆ ಅಂತ ಕಾಣುತ್ತೆ. ಅವರು ಇದು ಯಾರದ್ದು ಏನು ಎತ್ತ ಅಂತ ಕೇಳಿದ್ದಾರೆ. ನೀನು ನಿಜ ಹೇಳಿದ್ದರೂ ನನಗೇನೂ ಭಯವಿಲ್ಲ. ನಾನು ಮೊದಲೇ ಹೇಳಿದೆನಲ್ಲ, ಇದು ಕದ್ದ ಮಾಲಲ್ಲ. ಇರಲಿ, ಏನಾದರೂ ಹಣ ಕೊಡುವ ಹಾಗಿದ್ದರೆ ಕೊಡು ; ಇಲ್ಲವೋ ಒಡವೆ ತಾ ಇಲ್ಲಿ."

" ಅದು ಯಾಕೆ ಇಷ್ಟು ಆತುರ ? ಕೊಡುವ ತನಕ ಸ್ವಲ್ಪ ತಾಳು. ಯಾರಾದರೂ ಕಾಣುತ್ತಾರೆ ಅಂತ ಭಯವೇನೋ ? "

" ನಿನ್ನ ಹಾಗೆ ನಾನೇನು ಪುಕ್ಕಲನೇನೋ. ಕಾಲು ಮುರಿದುಕೊಂಡು ಮಲಗಿರೋ ಅಪ್ಪ ಅಂದರೆ ಗಡಗಡ ಅಂತ ನಡುಗುತ್ತೀ ನೀನು. ಕೂರುವುದಕ್ಕೆ ನಿಲ್ಲುವುದಕ್ಕೆ ಎಲ್ಲದಕ್ಕೂ ನಿನಗೆ ಅಪ್ಪನ ಅಪ್ಪಣೆಯಾಗಬೇಕು. ಮೊದಲು ಎಷ್ಟು ಬರುತ್ತೋ ಅಷ್ಟು ದುಡ್ಡು ಕೈಗೆ ಹಾಕು. ಆಮೇಲೆ ಉಳಿದ ಮಾತು."

"ಹೌದು ಕಣೋ, ರಾಮುಸ್ವಾಮಿ. ನನಗೆ ನಮ್ಮ ಅಪ್ಪ ಅಂದರೆ ದಿಗಿಲು. ನಾನೇನು ನಿನ್ನ ಹಾಗೆ ಕನ್ನಡ ಲವರ್ ಸೆಕೆಂಡರಿ ಪ್ಯಾಸು ಮಾಡಿದೇನೆಯೋ ?

ನಿನಗೆ ಯಾವತ್ತೂ ಅಂದರೆ ಅವತ್ತು ಸ್ಕೂಲು ಮೇಷ್ಟರ ಕೆಲಸ ಖಾತ್ರಿ. ನನಗೆ ನಮ್ಮ ಅಪ್ಪನ ಅಂಗಡಿ ಬಿಟ್ಟರೆ ಬೇರೆ ಗತಿ ಏನಿದೆ? ಅವರನ್ನ ಕಂಡರೆ ನನಗೆ ಭಯ ಅನ್ನುತಿ. ತಂದೆತಾಯಿಯಲ್ಲಿ ಭಯಭಕ್ತಿ ಇಡುವುದು ತಪ್ಪೆ?"

"ನಿನ್ನ ನೀತಿ ನನಗೆ ಬೇಡವೋ, ಶೆಟ್ಟಿ. ನನಗೆ ಬೇಕಾಗಿರುವುದು ಹಣ. ಬೇಗ 'ಫೈಸಲು' ಮಾಡು."

"ಏನು ಅಷ್ಟು ಆತುರ? ತಗೊಂಡು ಹೋಗಿ ಆ ರಾಮಯ್ಯಂಗಾರಿ, ಕರಿಯಣ್ಣ, ಹುಸೇನಿ ಇವರ ಕೈಗೆ ಇಡುವುದಕ್ಕೆ ತಾನೆ?"

"ನಿನಗೆ ಯಾರೋ ಇದನ್ನೆಲ್ಲ ಹೇಳಿದವರು?"

"ಯಾರೋ, ಅದೆಲ್ಲಾ ಕಟ್ಟಿಕೊಂಡು ನಿನಗೇನು. ನೀನು ಜೂಜಾಡೋದು ಸುಳ್ಳೊ? ಅದನ್ನ ಒಪ್ಪಿಕೋ. ಆಮೇಲೆ ನನಗೆ ಯಾರು ಹೇಳಿದರು ಅನ್ನುವುದನ್ನ ಹೇಳುತೀನಿ."

"ಲೋ ಶೆಟ್ಟಿ, ವ್ಯಾಪಾರ ಬಿಟ್ಟು ಅವರ ಇವರ ವ್ಯವಹಾರ ಕಟ್ಟಿಕೊಂಡು ನಿನಗೇನೋ? ನಿನಗೆ ಇಷ್ಟವಿಲ್ಲದಿದ್ದರೆ ಹೇಳಿಬಿಡು. ನಿನ್ನ ಬಳಿ ನನ್ನ ಲೆಕ್ಕ 'ಕ್ಲೋಸ್' ಮಾಡಿಬಿಟ್ಟು, ರಾಮಪ್ಪನವರ ಅಂಗಡಿಯಲ್ಲಿ ಲೆಕ್ಕ ಇಡುತೀನಿ."

"ನಿನ್ನ ಒಳ್ಳೆಯದಕ್ಕೇ ಕಣೋ ಹೇಳಿದ್ದು. ಇವತ್ತಲ್ಲ ನಾಳೆ ನಿಮ್ಮ ತಂದೆ ನಮ್ಮ ಅಂಗಡಿಗೆ ಈ ವ್ಯವಹಾರವನ್ನೆಲ್ಲ ವಿಚಾರಿಸೋದಕ್ಕೆ ಬರುತ್ತಾರೆ. ಆಗ ನಾವು ಏನು ಹೇಳೋದು? ಊರಲ್ಲಿ ನಮ್ಮ ಹೆಸರು ಮರ್ಯಾದೆ ಏನಾಗುತ್ತೆ? ನೀನು ಸಂಪಾದಿಸುವವನಾದರೆ ನಿನ್ನ ಹತ್ತಿರ ಲೇವಾದೇವಿ ಇಟ್ಟುಕೊಂಡರೂ ಪರವಾಯಿಲ್ಲ. ತಿಳಿದೂ ತಿಳಿದೂ ನಿನ್ನ ಹತ್ತಿರ ಇಂಥ ವ್ಯವಹಾರ ಹೇಗಪ್ಪಾ ಇಟ್ಟುಕೊಳ್ಳೋದು ಅಂತ ಭಯವಾಗುತ್ತಾ ಇದೆ, ಅಷ್ಟೆ."

"ಈಗ ಏನು? ಹಣ ಕೊಡುತ್ತೀಯೋ ಇಲ್ಲವೋ—ಅಷ್ಟು ಹೇಳು."

"ಕೊಡೋಣ, ಅದಕ್ಕೇನು. ಇನ್ನುಮೇಲೆ ಇಂಥ ವ್ಯವಹಾರ ಬೇಡ ಅಂತ, ಅಷ್ಟೆ. ನಗದು ಸಾಲ ಕೊಡೋದಿಲ್ಲ. ಬೀಡಿ ಗೀಡಿ ತೆಗೆದುಕೊಂಡು ಹೋಗು."

"ಮುಂದಿನ ವಿಚಾರ ಕುಂದೂರಿನಲ್ಲಿ ವಿಚಾರಿಸಿಕೊಳ್ಳೋಣ. ಸದ್ಯ ಹಣ ಕೊಡು."

ರಾಮಶೆಟ್ಟಿ ಲೆಕ್ಕದ ಪುಸ್ತಕ ತೆಗೆದುಕೊಂಡು, ರಾಮಸ್ವಾಮಿಯ ಲೆಕ್ಕದ

ಪುಟ ತೆಗೆದು, ರಾಮುಸ್ವಾಮಿಯ ಕೈಗೆ ಪುಸ್ತಕವನ್ನು ನೀಡಿದ.

"ನೂರು ರೂಪಾಯಿ ಜಮಾ ಕಟ್ಟಿಬಿಟ್ಟು ಮೇಲೆ ಹತ್ತು ರೂಪಾಯಿ ಕೊಡುತೀನಿ."

"ಹ್ಹಾ! ಮೇಲೆ ಐವತ್ತಾದರೂ ಬೇಕಲ್ಲೋ ಶೆಟ್ಟಿ!" ಎಂದು ರಾಮುಸ್ವಾಮಿ ಗೋಗರೆದ.

"ಯಾರು ಯಾರಿಗೆ ಎಷ್ಟು ಕೊಡಬೇಕು?"

"ಅದೆಲ್ಲಾ ಕಟ್ಟಿಕೊಂಡು ನಿನಗೇನೋ ಶೆಟ್ಟಿ? ಹಣ ಕೊಡುತ್ತೀಯೋ ಇಲ್ಲವೊ, ಅಷ್ಟು ಹೇಳು."

"ಕೊಡೋ ಮಾತು ಇರಲಿ. ನಮ್ಮಯ್ಯ ಎಲ್ಲಾನೂ ಕೇಳ್ತಾರೆ. ನನಗೇನೂ ಗೊತ್ತಿಲ್ಲ ಅಂದರೆ ಸುಮ್ಮನೆ ಬಿಡುತ್ತಾರೆಯೇ? ನಾನು ಅದಕ್ಕೋಸ್ಕರ ಕೇಳಿದೆನಪ್ಪ."

"ನಿಮ್ಮಪ್ಪನಿಗಲ್ಲದೆ ಇನ್ನು ಯಾರಿಗೂ ಹೇಳುವುದಿಲ್ಲವೋ?"

"ಖಂಡಿತಾ ಇಲ್ಲ."

"ಹಾಗಾದರೆ, ಮುಚ್ಚುಮರೆ ಏನು. ಆ ಮೂರು ಜನಕ್ಕೂ ಒಟ್ಟು ಮೂವತ್ತು ರೂಪಾಯಿ ತೆರಬೇಕು. ನನ್ನ ಕೈಗೊಂದು ಇಪ್ಪತ್ತು ರೂಪಾಯಿ ಬೇಡವೆ?"

ಇಬ್ಬರೂ ಬಹಳ ಹೊತ್ತು ಚೌಕಾಶಿ ಮಾಡಿದರು. ರಾಮುಸ್ವಾಮಿಯ ಲೆಕ್ಕಕ್ಕೆ ನೂರು ರೂಪಾಯಿಗಳನ್ನು ಜಮಾ ಕಟ್ಟಿದಮೇಲೆ ರಾಮಶೆಟ್ಟಿ ರಾಮುಸ್ವಾಮಿಯ ಕೈಗೆ ಮೂವತ್ತು ರೂಪಾಯಿಗಳನ್ನು ಹಾಕಿ, ಇನ್ನು ಹತ್ತು ರೂಪಾಯಿಗಳನ್ನು ಅವನ ಲೆಕ್ಕದಲ್ಲಿಯೇ ಮುಂಗಡವಾಗಿ ಇಟ್ಟುಕೊಂಡನು. ಈ ವ್ಯವಹಾರದಿಂದ ಇಬ್ಬರಿಗೂ ತೃಪ್ತಿಯಾಯಿತು. ರಾಮುಸ್ವಾಮಿ ಹಣವನ್ನು ಜೇಬಿಗೆ ಹಾಕಿಕೊಂಡು, ಸಂತೋಷಸೂಚಕಾರ್ಥವಾಗಿ ಒಂದು ಬೀಡಿಯನ್ನು ಬಾಯಲ್ಲಿ ಕಚ್ಚಿಕೊಂಡು ಸೇದತೊಡಗಿದನು.

"ಅದಿರಲಿ ಶೆಟ್ಟಿ, ಮೂರು ಹೊತ್ತೂ ಗಲ್ಲದ ಮೇಲೆ ಕುಳಿತಿರುವ ನಿನಗೆ ಇದನ್ನೆಲ್ಲಾ ಯಾರು ಹೇಳಿದರು?" ಎಂದು ರಾಮುಸ್ವಾಮಿ ಕೇಳಿದನು. ರಾಮಶೆಟ್ಟಿ ಬಿಗಿ ಹಿಡಿಯುವುದನ್ನು ತನ್ನ 'ಅಯ್ಯ'ನಿಂದ ಚೆನ್ನಾಗಿ ಕಲಿತಿದ್ದನು; ಆದರೆ ಅವನ ಬಾಯಿ ಯಾವಾಗಲೂ ಸಡಿಲ. ಆದರೂ ರಾಮಶೆಟ್ಟಿ ಬಡ

ಪಟ್ಟಿಗೆ ಬಾಯಿ ಬಿಡಲಿಲ್ಲ. ರಾಮುಸ್ವಾಮಿ ತುಂಬ 'ಪುಸಲಾಯಿಸಿ'ದ ಮೇಲೆ, "ಸುಬ್ಬಾಭಟ್ಟ ಹೇಳಿದ" ಎಂದು ಹೇಳಿಬಿಟ್ಟನು. ರಾಮುಸ್ವಾಮಿಗೆ ರೋಷ ಉಕ್ಕಿಬಂದಿತು: "ಇರಲಿ, ಆ ಭಟ್ಟನ್ನ ವಿಚಾರಿಸಿಕೊಳ್ಳುತ್ತೇನೆ" ಎಂದು ಸೇದಿದ ಬೀಡಿಯ ತುಂಡನ್ನು ಕೆಳಕ್ಕೆ ಹಾಕಿ, ಭಟ್ಟನನ್ನು ತುಳಿಯು ವಂತೆ ತುಳಿದು, ಹೊಸಕಿ, ಹಲ್ಲುಕಡಿಯುತ್ತ ಹೊರಟುಬಿಟ್ಟನು.

"ನಾನು ಹೇಳಿದೆ ಅಂತ ಹೇಳಬೇಡವೋ, ಮಹಾರಾಯ" ಎಂದು ರಾಮುಶೆಟ್ಟಿ ಕೂಗಿಕೊಂಡನು.

ಅಂದು ಮಧ್ಯಾಹ್ನ ಊಟವಾದಮೇಲೆ ರಾಮುಶೆಟ್ಟಿ ರಾಮುಸ್ವಾಮಿ ಯೊಡನೆ ನಡಸಿದ ಮಾತುಕತೆ ವ್ಯವಹಾರ ಇವುಗಳ ವಿಚಾರಗಳನ್ನು ತಂದೆಗೆ ಪಾಠವೊಪ್ಪಿಸಿದನು. ಸುಬ್ಬಯ್ಯಶೆಟ್ಟರು ಸಂತೋಷಪಟ್ಟರು. ಆದರೆ ರಾಮು ಸ್ವಾಮಿಗಾಗಿ ಮರುಗಿಯೂ ಮರುಗಿದರು.

## ೨

ರಾಮುಸ್ವಾಮಿ ಚಿಕ್ಕ ವಯಸ್ಸಿನಲ್ಲಿಯೇ ಕೆಟ್ಟ ಸಹವಾಸಕ್ಕೆ ಬಿದ್ದಿದ್ದನು. ಹುಡುಗುತನದ ಕೆಟ್ಟಸಹವಾಸವೆಂದರೆ ಹೆಚ್ಚಿನ ವಿವರಣೆಯೇನೂ ಬೇಕಿಲ್ಲವಲ್ಲ. ಮನೆಯಲ್ಲೆ ಪುಡಿಗಾಸು ತಿಂಡಿತಿನಿಸುಗಳನ್ನು ಕದಿಯುವುದು, ಜೊತೆಯವರ ಜೇಬಿನಿಂದಲೇ ಪದಾರ್ಥಗಳನ್ನು 'ಎಗುರಿಸು'ವುದು, ಕೆಟ್ಟ ಬಯ್ಗುಳ ಬಯ್ಯು ವುದು, ಅವರಿವರ ತೋಟಗಳಲ್ಲಿ ಬಾಳೆಗೊನೆ ಹಣ್ಣುಹಂಪಲುಗಳನ್ನು ಗುಂಪು ಕಟ್ಟಿ ಕದ್ದು ಸಂತೆಗಳಲ್ಲಿ ಮಾರಿಸುವುದು, ಪಂದ್ಯ ಕಟ್ಟಿ ಗೋಲಿ ಹುಲಿಕಲ್ಲು ಆಟ ಗಳನ್ನು ಆಡುವುದು—ಇವೆಲ್ಲವೂ ರಾಮುಸ್ವಾಮಿಗೂ ಮತ್ತು ಅವನ ಅಣ್ಣ ನಿಗೂ ಸಣ್ಣ ವಯಸ್ಸಿನಲ್ಲೇ ಸಹವಾಸದೋಷದಿಂದ ಕಲಿಯದೆ ಬಂದುಬಿಟ್ಟಿ ದ್ದುವು. ಈ ಸಂಗತಿ ವೆಂಕಟಸುಬ್ಬಯ್ಯನವರ ಗಮನಕ್ಕೂ ಬಾರದಿರಲಿಲ್ಲ. ಸುಬ್ಬ ಸ್ವಾಮಿಗೆ ಎರಡು ವರ್ಷ ಕನ್ನಡ ಲವರ್ ಸೆಕಂಡರಿ ಪರೀಕ್ಷೆಯಲ್ಲಿ ಫೇಲಾದ ಮೇಲೆ ಅವನನ್ನು ತಮ್ಮ ಷಡ್ಡಕಂದಿರ ಮನೆಯಲ್ಲಿ ಓದಲು ಮೈಸೂರಿಗೆ ಕಳಿಸಿ ಬಿಟ್ಟರು. ಸುಬ್ಬಸ್ವಾಮಿಯ ಭಾಗ್ಯಚಕ್ರ ಆಗ ಬೇರೆಯ ದಿಕ್ಕಿಗೆ ಹೊರಳಿತು. ಅವನು ವಿದ್ಯಾಭ್ಯಾಸದಲ್ಲಿ ಮುಂದುವರಿದು ಪಟ್ಟಣಿಗನೆನ್ನಿಸಿಕೊಂಡನು. ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆಯಾದಕೂಡಲೆ ಬೆಂಗಳೂರಿನ ದೊಡ್ಡ

ಮನುಷ್ಯರೊಬ್ಬರು ಹೆಣ್ಣನ್ನೂ ಕೊಟ್ಟರು. ಮಾವನವರ ಶಿಫಾರಸಿನಿಂದ ಬೆಂಗಳೂರಿನಲ್ಲಿ ಆಬಾರಾ ಕಚೇರಿಯಲ್ಲಿ ಉದ್ಯೋಗವೂ ದೊರಕಿತು.

ರಾಮಸ್ವಾಮಿಯೂ ಲವರ್ ಸೆಕೆಂಡರಿ ಪರೀಕ್ಷೆಯಲ್ಲಿ ಎರಡು ಸಲ ಫೇಲಾಗಿ, ಮೂರನೆಯ ಸಲ ಪ್ಯಾಸುಮಾಡಿದ್ದ. ಈ ಹೊತ್ತಿಗೆ ಸುಬ್ಬಸ್ವಾಮಿಯ ವಿದ್ಯಾಭ್ಯಾಸ ಮುಗಿದಿತ್ತು. ರಾಮಸ್ವಾಮಿಯನ್ನು ಬಲವಂತಮಾಡಿ ಮೈಸೂರಿಗೆ ಕಳಿಸಿದ್ದಾಯಿತು. ಆದರೆ ಅವನು ಅಲ್ಲಿ ಇಷ್ಟಪಡದೆ ಊರಿಗೆ ಹಿಂದಿರುಗಿದ. ಅದೇ ತಾನೆ ಬೆಂಗಳೂರಿನಲ್ಲಿ ಕೆಲಸಕ್ಕೆ ಸೇರಿದ್ದ ಅಣ್ಣನ ಮನೆಯಲ್ಲಿಯೂ ಅವನು ಇರಲೊಲ್ಲನಾದ. ಅತ್ತಿಗೆ ತನ್ನನ್ನು ತುಂಬ ತಿರಸ್ಕಾರವಾಗಿ ಕಾಣು ತ್ತಾಳೆ ಎಂದು ಅಲ್ಲಿಂದಲೂ ಓಡಿಬಂದುಬಿಟ್ಟನು. ಅಂತೂ, ರಾಮಸ್ವಾಮಿ ಮೈಸೂರು ಬೆಂಗಳೂರುಗಳ ಮುಖ ನೋಡಿಕೊಂಡು ಬಂದಿದ್ದನು. ಸಾಧ್ಯ ವಾದರೆ ತಾನೂ ಬೆಂಗಳೂರಿನಲ್ಲಿಯೋ ಮೈಸೂರಿನಲ್ಲಿಯೋ ನೆಲಸಬೇಕೆಂಬ ಆಸೆಯ ಮೊಳಕೆಯನ್ನು ಮನಸ್ಸಿನಲ್ಲಿ ನಾಟಿಕೊಂಡನು. ಆದರೆ ಅದಕ್ಕೆ ಬೇಕಾದ ಕೃಷಿಯನ್ನು ಮಾತ್ರ ಮಾಡಲಿಲ್ಲ.

ರಾಮಸ್ವಾಮಿ ಬೆಂಗಳೂರಿನಿಂದ ಹಿಂದಿರುಗಿದಮೇಲೆ ಅವನಿಗೆ ತನ್ನ ಬಾಲ್ಯದ ಗೋಲಿಯ ಗೆಳೆಯರಲ್ಲಿ ರುಚಿ ತಪ್ಪಿಹೋಗಿತ್ತು. ರಾಮಶೆಟ್ಟಿಯೂ ಅಂತಹ ಹಳೆಯ ಗೆಳೆಯ. ಅವನು ಆಗಲೇ ತಂದೆಯ ಸ್ಥಳದಲ್ಲಿ ಕೂರಬೇಕಾಗಿ ಬಂದಿದ್ದಿತು. ತಂದೆಯ ಹದ್ದುಕಟ್ಟಿನಲ್ಲಿ ಅವನು ಊರ್ಜಿತಕ್ಕೂ ಬರುತ್ತಿದ್ದನು. ರಾಮಸ್ವಾಮಿ ಬೆಂಗಳೂರಿನಿಂದ ಹಿಂದಿರುಗಿದ ಕೂಡಲೆ—ನಲ್ಲಿಯ ನೀರು ಕುಡಿ ದವನು, ಯಾಲಕ್‌ಶೆಟ್ರ ದೀಪ (ಎಲೆಕ್ಟ್ರಿಕ್ ದೀಪ) ಕಂಡವನು, ಹೋಟಲು ತಿಂಡಿ ತಿಂದವನು, ನಾಟಕ ನೋಟ ನೋಡಿದವನು—ಎಂದು ಅವನ ಬೆಲೆ ಊರಿನಲ್ಲಿ ತುಂಬ ಹೆಚ್ಚಿತು. ಸಮವಯಸ್ಕರೆಲ್ಲ ಅವನ ಸ್ನೇಹವನ್ನು ಬಯಸಿ ಅವನ ಸುತ್ತ ಮುತ್ತಿಕೊಂಡರು. ಹಾಗೆ ಮುತ್ತಿಕೊಂಡವರಲ್ಲಿ ಸುಬ್ಬಾಭಟ್ಟನೂ ಒಬ್ಬ. ಸುಬ್ಬಾಭಟ್ಟನ ಮೂಲಕ ರಾಮಸ್ವಾಮಿಗೆ ರಾಮಯ್ಯಂಗಾರ್ ಮತ್ತು ಕರಿಯಣ್ಣ ಇವರ ಪರಿಚಯವಾಯಿತು. ಇವರ ಪರಿಚಯವಾದಮೇಲೆ, 'ವೈದಿಕ ಗೊಡ್ಡು' ಎಂದು ಸುಬ್ಬಾಭಟ್ಟನನ್ನು ಗುಂಪಿನಿಂದ ಓಡಿಸುವುದಕ್ಕೆ ಪ್ರಯತ್ನ ನಡೆಯಿತು. ರಾಮಸ್ವಾಮಿ ಅವನೊಂದಿಗೆ ಸಿಕ್ಕಾಬಟ್ಟೆ ಕಲಹವಾಡಿ ಅವನನ್ನು ಓಡಿಸಿಯೇ ಬಿಟ್ಟನು. ಸುಬ್ಬಾಭಟ್ಟ ನಿಷ್ಕ್ರಮಿಸಿದಮೇಲೆ ಹುಸೇನಿ ಈ ಗುಂಪಿಗೆ

ಹೊಸದಾಗಿ ಬಂದು ಸೇರಿಕೊಂಡ. ರಾಮಯ್ಯಂಗಾರ್ ಎಲ್ಲರಿಗೂ ಇಸ್ಪೀಟಿನ ದೀಕ್ಷೆಯನ್ನು ಕೊಟ್ಟ; ಹುಸೇನಿ ರಾಮಸ್ವಾಮಿಗೆ 'ಅಗ್ನಿಹೋತ್ರ'ವನ್ನು ಕಲಿಸಿಕೊಟ್ಟ. ಕರಿಯಣ್ಣನಿಗೆ ಯಾರೂ ಏನೂ ಕಲಿಸಿಕೊಡಬೇಕಾಗಿರಲಿಲ್ಲ. ಈ ಗುಂಪಿನಿಂದ ಕಳಚಿಕೊಳ್ಳಬೇಕಾಗಿ ಬಂದದ್ದು ತನ್ನ ಒಳ್ಳೆಯದಕ್ಕೇ ಎಂದು ಸುಬ್ಬಾಭಟ್ಟನ ಅರಿವಿಗೆ ಬರಲಿಲ್ಲ. ಅವನಿಗೆ ರಾಮಸ್ವಾಮಿಯ ಮೇಲೆ ಹಗೆಯ ಬಗೆ ಮೂಡಿತು.

ಕೊಳಲೂರಿನ ಕಾವೇರಿಯ ದಂಡೆಯ ಸ್ನಾನಘಟ್ಟದ ಬಳಿ ಒಂದು ಕಲ್ಲಿನ ಮುರುಕು ಮಂಟಪವಿದೆ. ಅದು ಬಹಳ ಪ್ರಾಚೀನ ಕಾಲದ್ದು. ಅದು ನಾನಾ ಕಾರ್ಯಗಳ ಕೇಂದ್ರ ಸ್ಥಳ. ಒಂದಾನೊಂದು ಕಾಲದಲ್ಲಿ ಊರಿನ ಬ್ರಾಹ್ಮಣರು ಅಪರ ಕರ್ಮಗಳಿಗೆ ಆ ಮಂಟಪವನ್ನು ಉಪಯೋಗಿಸಿಕೊಳ್ಳುತ್ತಿದ್ದರು. ಆ ಮಂಟಪದಿಂದ ಮುಂದಣ ಹೊಳೆಯ, ಹೊಳೆಯಾಚೆಯ ಹೊಲ ಗದ್ದೆ ತೋಟಗಳ ನೋಟ ಬಹು ಚೆಲುವಾಗಿ ಕಾಣುತ್ತದೆ. ಹೊತ್ತು ಮೂಡುವ ಮುಳುಗುವ ಸಮಯಗಳಲ್ಲಿ ಅಲ್ಲಿ ಕುಳಿತರೆ, ಸ್ಥಳ ಬಿಟ್ಟು ಬರುವುದಕ್ಕೇ ಮನಸ್ಸಾಗುವುದಿಲ್ಲ. ಯಾವಾಗಲೋ ಒಮ್ಮೆ ಕೊಳಲೂರ ಸಂತೆಗೆ ಬಂದ ದೊಂಬರ ಬಳಗವೊಂದು ಅಲ್ಲಿ ಬಿಡಾರಮಾಡಿ, ಬಹುಕಾಲ ಅದನ್ನು ತಮ್ಮ ವಾಸಸ್ಥಳವಾಗಿ ಮಾಡಿಕೊಂಡುಬಿಟ್ಟಿತು. ಅಂದಿನಿಂದ ಆ ಸ್ಥಳ ಬ್ರಾಹ್ಮಣರ ಕರ್ಮಗಳಿಗೆ ಅಪವಿತ್ರವಾಯಿತು. ದೊಂಬರು ಅಲ್ಲಿಂದ ತಮ್ಮ ಬಿಡಾರ ಕಿತ್ತಮೇಲೆ, ಅದು ಯಾವ ಒಂದು ನಿರ್ದಿಷ್ಟ ಕಾರ್ಯಕ್ಕೂ ಉಪಯೋಗವಾಗುತ್ತಿರಲಿಲ್ಲ. ಹೊಳೆಯ ಕಡೆಗೆ ಜನ ಹೋಗಿ ಬರುವುದು ಕಡಮೆಯಾದ ವೇಳೆಯಲ್ಲಿ ಊರಿನ ತೊಂಡು ಬಿದ್ದ ತರುಣರು ಅಲ್ಲಿ ಕಾಡು ಹರಟೆಗೂ ಜೂಜಾಡುವುದಕ್ಕೂ ಸೇರುತ್ತಿದ್ದರು. ರಾಮಯ್ಯಂಗಾರ್ ಗೆಳೆಯರು ಕೂಡ ಇಲ್ಲಿ ತಮ್ಮ ಹಕ್ಕನ್ನು ಹೂಡಿದ್ದರು. ರಾಮಸ್ವಾಮಿ ಈ ಇಸ್ಪೀಟ್ ಕೂಟಕ್ಕೆ ಸೇರಿಕೊಂಡಮೇಲೆ ಸುಬ್ಬಾಭಟ್ಟನಿಗೆ ಉಚ್ಚಾಟನೆಯಾಯಿತಷ್ಟೆ. ರಾಮಸ್ವಾಮಿ ರಾಮಶೆಟ್ಟಿಯ ಅಂಗಡಿಗೆ ಪದೇ ಪದೇ ಹೋಗುತ್ತಿದ್ದು, ಅಲ್ಲಿ ಸಾಲದ ಲೆಕ್ಕ ಇಟ್ಟಿರುವುದು ಸುಬ್ಬಾಭಟ್ಟನಿಗೆ ತಿಳಿದ ವಿಷಯ. ರಾಮಸ್ವಾಮಿ ಆ ಮೂವರ ಗೆಳೆತನ ಬೆಳೆಸಿ ಅವರೊಂದಿಗೆ ಜೂಜಾಡುವನೆಂದೂ, ಅವನಿಗೆ ಸಾಲಸೋಲ ಕೊಟ್ಟರೆ ಕೈಲಾಸ ಕಡವಾಗುವುದೆಂದೂ ಸುಬ್ಬಾಭಟ್ಟ ರಾಮಶೆಟ್ಟಿಗೆ ಎಚ್ಚರಿಕೆ ಕೊಟ್ಟಿದ್ದನು. ರಾಮಸ್ವಾಮಿ

ಹಣಕ್ಕಾಗಿ ಬಂದಾಗ ಅವನ ದರದಿನ ಕಾರಣ ಏನೆಂಬುದು ರಾಮಶೆಟ್ಟಿಗೆ ಸ್ವಯಂ ಸ್ಪಷ್ಟವಾಗಿತ್ತು.

೩

ಸುಬ್ಬಾಭಟ್ಟನಿಗೆ ಸೀತೆಯನ್ನು ತಂದುಕೊಳ್ಳಬೇಕೆಂದು ಶಿವರಾಮಭಟ್ಟರಿಗೆ ತುಂಬ ಆಸೆಯಿತ್ತು. ಸೀತೆ ಚಿಕ್ಕ ಹುಡುಗಿಯಾಗಿದ್ದಾಗ ಬೆಳಗ್ಗೆ ಸಂಜೆ ದೇವಸ್ಥಾನದಲ್ಲಿಯೇ ಆಟವಾಡುತ್ತ ಕಾಲ ಕಳೆಯುತ್ತಿದ್ದಳು. ಏನೂ ಅರಿಯದ ವಯಸ್ಸಿನಲ್ಲಿ ಅವರನ್ನು ಹಿರಿಯರು ಗಂಡಹೆಂಡಿರನ್ನಾಗಿ ಮಾಡಿದ್ದರು. ಸೀತೆಗೇನೋ ಸಣ್ಣ ವಯಸ್ಸಿನಲ್ಲೇ ಗಂಡ, ಮದುವೆ ಎಂಬ ಮಾತುಗಳ ಪರಿಚಯವಾಗಿದ್ದರೂ ಹಾಗೆಂದರೇನೆಂಬುದು ಅರ್ಥವಾಗಿರಲಿಲ್ಲ. ಆದ್ದರಿಂದ ಹಿರಿಯರ ಮಾತೂ ಅವಳಿಗೆ ಒಂದು ಆಟವೇ ಆಗಿದ್ದಿತು. ಜೊತೆಯ ಹುಡುಗ ಹುಡುಗಿಯರೆಲ್ಲ ಆಗಾಗ್ಗೆ ದೇವಾಲಯದ ಪ್ರಾಂಗಣದಲ್ಲಿ ಸೇರಿ ಬಗೆಬಗೆಯ ಆಟವಾಡುತ್ತಿದ್ದರು. ಅದರಲ್ಲಿ ಮದುವೆಯ ಆಟವೂ ಒಂದು. ಸಾಧಾರಣವಾಗಿ ಬೊಂಬೆಗಳೇ ವಧೂವರರಾದರೂ ಒಂದೊಂದು ವೇಳೆ ತಮ್ಮತಮ್ಮಲ್ಲೆ ಗಂಡು ಹೆಣ್ಣುಗಳು ಜೊತೆಯಾಗಿ ಮದುವೆಯ ಆಟ, ಮನೆಯ ಆಟಗಳನ್ನು ಆಡುತ್ತಿದ್ದರು. ಹೀಗೆ ಹಲವು ಸಲ ಸೀತೆಯೂ ಸುಬ್ಬಾಭಟ್ಟನೂ ಗಂಡ ಹೆಂಡಿರಾಗಿ ಹಸೆಯ ಮೇಲೆ ಕುಳಿತಿದ್ದುದು ಉಂಟು. ಅಂತೂ ಒಟ್ಟಿನ ಮೇಲೆ ಇಬ್ಬರೂ ಸಲಿಗೆಯಲ್ಲಿ ಬೆಳೆದಿದ್ದರು. ಸುಬ್ಬಾಭಟ್ಟ ರೂಪವಂತನೇನಲ್ಲ; ಬಣ್ಣವೂ ಕಪ್ಪು. ಸೀತೆಗೆ ರೂಪ–ಕುರೂಪಗಳ ಪ್ರಜ್ಞೆಯಿದ್ದರೂ ಅವನ ಸಾಧಾರಣ ರೂಪದ ಬಗ್ಗೆ ತಿರಸ್ಕಾರವೇನಿರಲಿಲ್ಲ. ಸ್ನೇಹಸಲಿಗೆಗಳು ಸೀತೆಯ ರೂಪವಿವೇಚನಾದೃಷ್ಟಿಯನ್ನು ಮರೆಮಾಡಿದ್ದುವು. ಆದರೆ ಸುಬ್ಬಾಭಟ್ಟನು ಸೀತೆಗಿಂತ ದೊಡ್ಡವನಷ್ಟೆ. ಅಲ್ಲದೆ, ಗಂಡುಜಾತಿಯಲ್ಲಿ ಹೆಣ್ಣಿನ ರೂಪಕಾಮ ಬಹು ಬೇಗನೆ ಜಾಗ್ರತಗೊಳ್ಳುವಂತೆಯೂ ಕಾಣುತ್ತದೆ. ಪುಟ್ಟ ಹುಡುಗಿ ಸೀತೆಯ ಚೆಲುವು ಸುಬ್ಬಾಭಟ್ಟನ ಮನಸ್ಸನ್ನು ಎಂದಿನಿಂದಲೂ ಆಕರ್ಷಿಸಿ ಬಿಟ್ಟಿದ್ದಿತು. ಹಿರಿಯರ ಹಾಸ್ಯದ ಮಾತು, ಒಡನಾಟ, ಸಲಿಗೆ, ಸ್ವಜನ ಎಂಬ ಸಹಜ ಅಭಿಮಾನ—ಈ ಎಲ್ಲ ಕಾರಣಗಳಿಂದ ಸೀತೆ ತನ್ನ ಮಡದಿಯಾಗುವಳೆಂಬ ಸುಂದರ ಸ್ವಪ್ನವನ್ನು ತಾರುಣ್ಯದ ಹೊಸಿಲು ತುಳಿಯುತ್ತಿದ್ದ ಸುಬ್ಬಾಭಟ್ಟ

ಕಾಣುತ್ತಿದ್ದನು. ದೇವರಿಗೆ ಪೂಜೆಮಾಡಿದ ಒಳ್ಳೆಯ ಹೂಗಳ ಪ್ರಸಾದವೆಲ್ಲ ಸೀತೆಗೇ ಮೀಸಲು: ಅದು ಅವನ ಪ್ರೀತಿಯ ಕಾಣಿಕೆ, ತನ್ನ ಮೆಚ್ಚಿನ ಕನ್ಯೆಗೆ. ಹುಡುಗುತನದ ಕಾಲ ಕಳೆದು ಮದುವೆಯ ಕಾಲವೇ ಬಂದಿತು. ಶಿವರಾಮ ಭಟ್ಟರು ತಮ್ಮ ಮನಸ್ಸಿನ ಇಂಗಿತವನ್ನು ವೆಂಕಟಸುಬ್ಬಯ್ಯನವರ ಮುಂದೆ ಇಟ್ಟರು. ಆದರೆ ಅವರ ಹೆಂಡತಿ ಪಾರ್ವತಮ್ಮನವರಿಗೆ ಮಗಳನ್ನು ವೈದಿಕರ, ಅದರಲ್ಲಿಯೂ ಪೂಜಾರಿಗಳ ಮನೆತನಕ್ಕೆ ಕೊಡುವುದು ಇಷ್ಟವಾಗಲಿಲ್ಲ. ಏನೋ ಕುಂಟು ನೆಪ ಹೇಳಿ, ಸೀತೆಯನ್ನು ಬೇರೆಯ ವರನಿಗೆ ಕೊಟ್ಟರು. ಸುಬ್ಬಾ ಭಟ್ಟನಿಗೆ ನಿರಾಶೆಯಾಯಿತು.

ಸುಬ್ಬಾಭಟ್ಟನಿಗೆ ಬೇರೆ ಬೇರೆ ಊರುಗಳಿಂದ ಹೆಣ್ಣುಗಳೇನೋ ಬಂದಿದ್ದುವು. ಶಿವರಾಮಭಟ್ಟರು ಅಪ್ಪಟ ವೈದಿಕರು; ಮೇಲಾಗಿ ಪೂಜಾರಿಗಳು; ಜೊತೆಗೆ ಜ್ಯೋತಿಷ್ಯ ಬಲ್ಲವರು. ಅವರಿಗೆ ಹೆಣ್ಣಿನ ಚೆಲುವಿಗಿಂತ ಜಾತಕ ಮುಖ್ಯ. ಯಾವ ಹೆಣ್ಣಿನ ಜಾತಕವೂ ಕೂಡಿ ಬರದೆ, ಸುಬ್ಬಾಭಟ್ಟನ ಮದುವೆ, ಅವನ ದುರದೃಷ್ಟಕ್ಕೆ, ವಿನಾಯಕನ ಮದುವೆಯಾಗಿತ್ತು. ಅವನು ಮದುವೆಯಾಗಲು ಪ್ರಾಪ್ತವಯಸ್ಕನಾಗಿದ್ದನು. ಮದುವೆಯ ಆಸೆಗಿಂತ ಹೆಚ್ಚಾಗಿ ಒಂದು ಹೆಣ್ಣಿನ ಸ್ನೇಹದ ಆಸೆ ಅವನ ಹೃದಯದಲ್ಲಿ ಬೇರೂರಿ ಬೆಳೆಯುತ್ತಿತ್ತು. ಇದು ತಾರುಣ್ಯಕ್ಕೇ ಸಹಜವಾದದ್ದು. ಈ ನಿಯಮಕ್ಕೆ ಸುಬ್ಬಾಭಟ್ಟ ಹೇಗೆ ಹೊರಗಾದಾನು, ಪಾಪ! ಸೀತೆ ತಪ್ಪಿಹೋದಮೇಲೆ ನಿರಾಶೆಗೊಂಡ ಅವನು ಸೀತೆ ತನ್ನ ಪಾಲಿಗಿಲ್ಲವೆಂದು ಕ್ರಮಕ್ರಮವಾಗಿ ಸಮಾಧಾನಗೊಳ್ಳುತ್ತ ಬಂದನು. ಹೀಗೆ ಕೆಲ ಕಾಲ ಕಳೆಯಿತು. ಈ ಕಾಲದಲ್ಲಿ ಅವನಿಗೆ ಬೇರೆ ಹೆಣ್ಣು ಯಾವುದೂ ಬಂದಿರಲಿಲ್ಲ. ಸೀತೆ ವಿಧವೆಯಾದಮೇಲೆ ಅವಳ ವಿಚಾರದಲ್ಲಿ ಅವನಿಗೆ 'ಅಯ್ಯೋ ಪಾಪ' ಎನ್ನಿಸಿತು. ತನ್ನ ದೀರ್ಘಾಯುಷ್ಯದ ಬಗ್ಗೆ ತನ್ನ ತಂದೆಯ ವಚನದಲ್ಲಿ ಅವನಿಗೆ ಸಂಪೂರ್ಣ ನಂಬಿಕೆ. ಅಲ್ಪಾಯುಷಾದ ಬಸವಾಪಟ್ಟಣದ ನಂಜುಂಡಯ್ಯನನ್ನು ಮದುವೆಯಾಗುವ ಬದಲು ತನ್ನನ್ನು ಮದುವೆಯಾಗಿದ್ದರೆ ಸೀತೆಗೆ ಈ ದುರ್ಗತಿ ಬರುತ್ತಿರಲಿಲ್ಲ; ತಾನೂ ಸುಖವಾಗಿರಬಹುದಾಗಿದ್ದಿತು. ಈ ಒಂದು ಮನಃಸ್ಥಿತಿಯಲ್ಲಿ ಅವನು ಬಾಲವಿಧವೆಯಾದ ಸೀತೆಯನ್ನು ಕಾಮಿಸ ತೊಡಗಿದ್ದು ಸಹಜವೇ ಎಂದು ಕಾಣುತ್ತದೆ. ಅವನ ದೃಷ್ಟಿಯಲ್ಲಿ ಸೀತೆ ಈಗ ಹೆರರ ಹೆಣ್ಣಲ್ಲ. ತನಗೇ ಸೇರಬೇಕಾಗಿದ್ದ ಸ್ವತ್ತನ್ನು ತನ್ನದಾಗಿ ಮಾಡಿಕೊಂಡರೆ

ತಪ್ಪೇನು? ವಾಸ್ತವವಾಗಿ, ಮದುವೆಯಾದ ಸೀತೆಯನ್ನು ತನ್ನವಳು ಎಂದು ಮೋಹಿಸುವುದನ್ನು ಅವನು ಬಿಟ್ಟುಬಿಟ್ಟಿದ್ದನು. ಮದುವೆಯಾದಮೇಲೆ ಸೀತೆ ಗುಡಿಗೆ ಬರುವುದು ಅಪರೂಪವಾಗಿದ್ದರೂ, ತಾಯಿಯೊಡನೆ ಆಗಾಗ್ಗೆ ಬರುತ್ತಿದ್ದಳು; ಬಂದಾಗ, ಅನೇಕ ವೇಳೆ ಅವನು ಅವಳೊಡನೆ ಎಂದಿನಂತೆ ಸಲಿಗೆಯಿಂದಲೇ ನಡೆದುಕೊಳ್ಳಲು ಪ್ರಯತ್ನಿಸುತ್ತಿದ್ದನು. ಎಷ್ಟೋ ವೇಳೆ, "ನಿನ್ನ ಗಂಡನ ಹೆಸರು ಹೇಳಿದರೆ ಪ್ರಸಾದ, ಇಲ್ಲದೆ ಹೋದರೆ ಇಲ್ಲ" ಎಂದು ಅವಳಿಂದ ಗಂಡನ ಹೆಸರನ್ನು ಹೇಳಿಸಿ, ತಾನು ಬಲ್ಲಂತೆ ಅವಳಿಗೆ ಆಶಿರ್ವದಿಸಿ ಪ್ರಸಾದದ ಹೂವನ್ನು ಕೊಡುತ್ತಿದ್ದನು. ಮದುವೆಯಾದ ಸೀತೆಯಲ್ಲಿ ಅವನ ಮೋಹ ಮುರಿಯುತ್ತ ಬಂದು, ಅದರೆಡೆಯಲ್ಲಿ ಒಂದು ಬಗೆಯ ಸೋದರೀ ಭಾವವೇ ಮೂಡುತ್ತ ಬರುತ್ತಿತ್ತು. ಒಂದು ಮಾತಿನಲ್ಲಿ, ಅವನು ಅವಳೊಂದಿಗೆ ಸಂಯಮದಿಂದ ವ್ಯವಹರಿಸುವುದನ್ನು ಅಭ್ಯಾಸ ಮಾಡಿಕೊಂಡನು. ಆದರೆ ವಿಧಿ ಸೀತೆಯನ್ನು ವಿಧವೆಯನ್ನಾಗಿ ಮಾಡಿ, ಸುಬ್ಬಾಭಟ್ಟನ ಸಂಯಮದ ಕಟ್ಟನ್ನು ಮುರಿದು ಹಾಕಿತು. ಆದರೂ ಮನೆಯನ್ನು ಬಿಟ್ಟು ಹೊರಕ್ಕೆ ಕಾಲಿಡದ ಸೀತೆ ಬಹುಮಟ್ಟಿಗೆ ಅವನ ಮನಸ್ಸಿನಿಂದಲೂ ಮರೆಯಾಗಿದ್ದಳು. ಒಮ್ಮೊಮ್ಮೆ ಮಾತ್ರ ಅವಳ ನೆನಪು ಬಂದು ಅವನನ್ನು ಕಾಡುತ್ತಿತ್ತು. ಅಂದು ಹಾಲಿಗಾಗಿ ಹೊರಟಿದ್ದ ಸೀತೆಯನ್ನು ಮೊತ್ತಮೊದಲು ಕಂಡಾಗ ಅವನ ಮನಸ್ಸಿನಲ್ಲಿ ಮೋಹ ಮರುಕಳಿಸಿತು, ಬಯಕೆ ಬೆನ್ನಂಟಿತ್ತು, ಬಾಡಿದ್ದ ಕಾಮ ಕೊನರತೊಡಗಿತು. ಅವನು ಸೀತೆಯನ್ನು ನೋಡಿ ತುಂಟನಗೆ ನಕ್ಕನು. ಆ ನಗೆ ಏನೆಂದು ಏಕೆಂದು ಅವಳಿಗೆ ಅರ್ಥವಾಗದಿದ್ದರೂ ಅದರ ಕೊಂಡಿ ಅವಳ ಅಂತರ್ಯವನ್ನು ಕುಟುಕಿತು.

ಸುಬ್ಬಾಭಟ್ಟನಿಗೆ ರಾಮಸ್ವಾಮಿಯ ಮೇಲೆ ಹಗೆ ಮೂಡಿತಷ್ಟೆ. ಆದರೆ ಪ್ರತ್ಯಕ್ಷವಾಗಿ ಅವನಮೇಲೆ ಹಗೆ ತೀರಿಸಿಕೊಳ್ಳಲು ಸುಬ್ಬಾಭಟ್ಟ ಸಮರ್ಥನಾಗಿರಲಿಲ್ಲ. ಆ ಹಗೆ ಅವನ ತಂಗಿಯನ್ನು ಕೆಡಿಸಿ ಸೇಡು ತೀರಿಸಿಕೊಳ್ಳುವ ಬಗೆಯನ್ನು ಹುಡುಕುತ್ತಿತ್ತು.

೪

ರಾಮುಸ್ವಾಮಿ ರಾಮಶೆಟ್ಟಿಯಿಂದ ಮೂವತ್ತು ರೂಪಾಯಿಗಳ ನಿಧಿಯನ್ನು ಪಡೆದು ಜೇಬಿನಲ್ಲಿಟ್ಟುಕೊಂಡು, ಅದನ್ನು ಪದೇ ಪದೇ ಮುಟ್ಟಿನೋಡುತ್ತಾ, ಬೀಡಿಯನ್ನು ಸೇದುತ್ತಾ, ಹೊಳೆಯ ದಾರಿ ಹಿಡಿದನು. ಹೊಳೆಯ ದಾರಿಯೆಂದರೆ ಊರ ಜನವೆಲ್ಲಾ ಅಲ್ಲಿಗೆ ಹೋಗಿ ಬರುವ ದಾರಿಯಲ್ಲ. ಕೆಲವು ಹೊಲೆಯರು, ರೈತರು ಮಾತ್ರ ಉಪಯೋಗಿಸುತ್ತಿದ್ದ ತೋಟಗಳ ನಡುವಣದೊಂದು ಕಿರುದಾರಿ. ಈ ದಾರಿಯಲ್ಲಿ ಶಿವರಾಮುಭಟ್ಟರು, ಜೋಯಿಸರ ನಂಜುಂಡಶಾಸ್ತ್ರಿಗಳು, ಶ್ಯಾನುಭೋಗ ಕೃಷ್ಣಪ್ಪನವರು, ಇವರಾರನ್ನೂ ಸಂಧಿಸುವ ಹೆದರಿಕೆಯಿರಲಿಲ್ಲ. ರಾಮುಸ್ವಾಮಿ ಎಷ್ಟೇ ಕೆಟ್ಟರೂ, ಇವರ ಎದುರಿಗೆ ಬೀಡಿ ಸೇದುವಷ್ಟು ಇನ್ನೂ ಧೈರ್ಯವಹಿಸಿರಲಿಲ್ಲ. ರಾಮುಸ್ವಾಮಿ ನೇರವಾಗಿ ಮುರುಕುಮಂಟಪವನ್ನು ಸೇರಿದನು. ಅಲ್ಲಿ ಅವನ ಗೆಳೆಯರು ಇವನಿಗಾಗಿ ಕಾದಿದ್ದರು. ಇವನನ್ನು ಕಂಡಕೂಡಲೆ ರಾಮಯ್ಯಂಗಾರ್ " ಹಣ್ಣೋ ಕಾಯೋ ? " ಎಂದು ಕೇಳಿದನು.

" ಹಣ್ಣು " ಎಂದ ರಾಮುಸ್ವಾಮಿ.

ರಾಮಯ್ಯಂಗಾರಿಯ ಮುಖ ಅರಳಿತು. ಏಕೆಂದರೆ, ಸಾಲದ ಹೆಚ್ಚಿನ ಪಾಲು ಅವನಿಗೆ ಸಲ್ಲಬೇಕಾಗಿತ್ತು.

" ಮೊದಲು ತತ್ತಾ ಇಲ್ಲಿ " ಎಂದು ಕೈ ನೀಡಿದ ರಾಮಯ್ಯಂಗಾರಿ.

" ನನ್ನದು ಮಡಗಿಬಿಡಪ್ಪಾ " ಎಂದು ಕರಿಯಣ್ಣನೂ ಕೈ ನೀಡಿದ.

" ನಂದೂಕೆ ಮರೀಬೇಡ, ರಾಮುಸ್ವಾಮೀ " ಎಂದು ಹುಸೇನಿ ತನ್ನ ಹಕ್ಕನ್ನೂ ಸ್ಥಾಪಿಸಿಬಿಟ್ಟ.

" ನಿನ್ನದು ಯಾವುದೋ ? ನೀನೇ ನನಗೆ ಕೊಡಬೇಕಲ್ಲೋ " ಎಂದು ರಾಮುಸ್ವಾಮಿ ನೆನಪಿಸಲು, ಅವನು ಹಲ್ಲುಕಿರಿದ.

ನಾಲ್ವರೂ ಮುರುಕು ಮಂಟಪದ ಒಂದು ಮೂಲೆಯಲ್ಲಿ ಕುಳಿತರು. ತಾನು ತಂದಿದ್ದ ಕಡಲೆಕಾಯಿಯನ್ನು ಕರಿಯಣ್ಣ ನೆಲದ ಮೇಲೆ ಸುರಿದ. ಎಲ್ಲರೂ ಗುಪ್ಪೆಗೆ ಕೈಹಾಕಿ, ಸಿಪ್ಪೆ ಸುಲಿದು, ನೆಲಗಡಲೆ ಬೀಜವನ್ನು ನಿಧಾನವಾಗಿ ತಿನ್ನ ತೊಡಗಿದರು. ರಾಮುಸ್ವಾಮಿ ಬೀಡಿಯ ಕಟ್ಟನ್ನು ಗೆಳೆಯರ ಮುಂದೆ ನೀಡಿದ. ಕರಿಯಣ್ಣ, " ಇನ್ನು ಮೇಲೆ ಬೀಡಿ ಬಿಟ್ಟುಬಿಡಬೇಕಪ್ಪ. ಗಂಟಲು ಕಟ್ಟುತದೆ ಸಿಗರೇಟು ಶುರುಮಾಡಬೇಕು " ಎಂದು ಎರಡು ಬೀಡಿಯನ್ನು ತೆಗೆದುಕೊಂಡ

"ನಿಂದು ಬೀಡಿ ಪಸಂದ್ ಇಲ್ಲಾ, ರಾಮುಸ್ವಾಮಿ. ನಂದು ನೋಡು, ಒಳ್ಳೆ ಮಂಗಳೂರು ಬೀಡಿ. ಮೊನ್ನೆ ಆಸನಕ್ಕೆ ಓಗಿದ್ದೆ ನೋಡು, ಆಗ ಮೂರು ಕಟ್ಟು ಕೊಂಡುಕೊಂಡಿ ಬಂದೆ" ಎಂದು ತನ್ನ ಎರಡು ಬೀಡಿಯನ್ನು ರಾಮುಸ್ವಾಮಿಗೆ ಕೊಟ್ಟು ಅವನು ಕೊಟ್ಟ ಎರಡು ಬೀಡಿಯನ್ನು ಬೇಡವೆನ್ನದೆ ತೆಗೆದುಕೊಂಡ. ಇಸ್ಪೀಟು ಆಡುವುದನ್ನು ಬಿಟ್ಟು ಉಳಿದಂತೆ ರಾಮಯ್ಯಂಗಾರ್ ಬಹು ಶೀಲ ವಂತನೆಂದು ಎಲ್ಲರಿಗೂ ಗೊತ್ತು. ಆದ್ದರಿಂದ ರಾಮುಸ್ವಾಮಿ ಅವನಿಗೆ ಬೀಡಿ ಯನ್ನು ಕೊಡಲೇ ಇಲ್ಲ. ರಾಮಯ್ಯಂಗಾರಿ ಜೂಜಾಡಿ ಹಣ ಗಳಿಸುವುದಕ್ಕೆ ಮಾತ್ರ ಇವರ ಗೆಳೆತನವನ್ನು ಬೆಳಸಿದ್ದ.

ರಾಮುಸ್ವಾಮಿ ತಾನು ತಂದಿದ್ದ ಮೂವತ್ತು ರೂಪಾಯಿಯಲ್ಲಿ ಇಪ್ಪತ್ತೈದು ರೂಪಾಯಿಯನ್ನು ರಾಮಯ್ಯಂಗಾರಿಯ ಕೈಗೆ ಹಾಕಿದ. ತನಗೆ ಏನೂ ದೊರೆ ಯದಿದ್ದುದನ್ನು ಕಂಡು ಕರಿಯಣ್ಣ,

"ಏನು ರಾಮುಸ್ವಾಮಿ, ನನಗೆ ಕೊಡಬೇಕಾದ್ದು ಎಲ್ಲಿ?" ಎಂದು ಕೇಳಿದನು.

"ನಿನಗೆ ಎಷ್ಟೋ ಕೊಡಬೇಕಾದದ್ದು? ಹದಿನೈದು ರೂಪಾಯಿ ತಾನೇ? ಹುಸೇನ್, ನೀನು ನನಗೆ ಕೊಡಬೇಕಾದ ಹತ್ತು ರೂಪಾಯನ್ನ ಕರಿಯಣ್ಣನಿಗೆ ಕೊಟ್ಟುಬಿಡಪ್ಪಾ. ಸರಿಯೇನಪ್ಪ, ಕರಿಯಣ್ಣ?" ಎಂದು ರಾಮುಸ್ವಾಮಿ ಕರಿಯಣ್ಣನ ಮುಖವನ್ನು ನೋಡಿದನು.

"ಒಳ್ಳೆ ಹವಾಲ್ತಿ ಮಾಡಿದೆ ಕಣೋ. ಹುಸೇನಿ ಹತ್ತಿರ ಹಣ ವಸೂಲು ಮಾಡುವುದೂ ಒಂದೇ, ಮರಳು ಭೂಮಿಯಲ್ಲಿ ಜೇಸಾಯ ಮಾಡುವುದೂ ಒಂದೇ. ಅವನ ಕೈಗೆ ಸಿಕ್ಕಿದ ಕಾಸು ಹೊಳೆಯಲ್ಲಿ ಹಾಕಿದ ಹುಣಿಸೆಹಣ್ಣು. ಈಗಂತೂ ಅವನು ಕುಡಿಯೋದು ಬೇರೆ ಕಲಿತುಬಿಟ್ಟಿದ್ದಾನೋ. ಎರಡಾಣೆ ಸಿಕ್ಕಿದರೆ ಅಷ್ಟೇ ಸಾಕು ಅವನಿಗೆ. ಜೊತೆಗೆ ಆ ದೊಂಬರ ಚೆನ್ನಿ ಬೇರೆ...." ಎಂದು ಕರಿಯಣ್ಣ ನಕ್ಕ.

"ಓಹೋ! ಹಾಗಾದರೆ ಹುಸೇನಿ ಮೊನ್ನೆ ಹಾಸನಕ್ಕೆ ಹೋಗಿದ್ದು ಆ ದೊಂಬರ ಚೆನ್ನಿಯನ್ನು ಹುಡುಕಿಕೊಂಡೋ?" ಎಂದು ರಾಮುಸ್ವಾಮಿ ಕುತೂಹಲದಿಂದ ಪ್ರಶ್ನಿಸಿದ.

"ಇನ್ನು ಯಾಕೆ ಅಂತ ತಿಳಿದುಕೊಂಡಿದ್ದೆ ಮತ್ತೆ? ಹೋದ ವರುಷ

ಆ ದೊಂಬರ ಸಂಸಾರ ಬಂದು ಇದೇ ಮಂಟಪದಲ್ಲಿ ತಳವೂರಿರಲಿಲ್ಲವೆ ? ನಾವು ಈ ಜಾಗ ಬಿಟ್ಟುಹೊರಡಿ ಅಂತ ಗಲಾಟೆ ಮಾಡಿದಾಗ, ಹುಸೇನಿ ಅವರ ಕಡೆ ವಹಿಸಿಕೊಂಡು, 'ಬಡಬಡ್ಡೀಮಕ್ಕಳು, ಇದ್ಕೊಳ್ಳಿ ಬಿಡಿರೊ' ಅಂತ ಹೇಳಿದ್ದು ಯಾಕೆ ಅಂತ ತಿಳಿದುಕೊಂಡೆ ? "

"ಆ ದೊಂಬರವನ ಮಗಳೋ—ಈ ಚೆನ್ನಿ ?" ಎಂದು ರಾಮುಸ್ವಾಮಿ ಕುತೂಹಲದಿಂದ ಪ್ರಶ್ನಿಸಿದನು.

"ಅವಳೇ ಅವಳೇ, ನಾನು ಹಾಸನಕ್ಕೆ ಹೋಗಿದ್ದಾಗ ನೋಡಿದೆ. ಈ ಹುಸೇನೀನೂ ನನಗೆ ಅಲ್ಲೇ ಸಿಕ್ಕಿದ. ಅವನು ಐದು ರೂಪಾಯಿ ಕೇಳಿದಾಗಲೇ ಯಾತಕ್ಕೆ ಅಂತ ಗೊತ್ತಾಯಿತು" ಎಂದ ಕರಿಯಣ್ಣ.

"ಲೋ ಕರಿಯಣ್ಣ, ಹಂಗಾದರೆ ನೀನು ಹಾಸನಕ್ಕೆ ಹೋಗಿದ್ದು ಯಾತಕ್ಕೆ ಹೇಳು ನೋಡೋಣ."

"ನಾನು ಪೇಟೆಗೆ ಜಿನಸಿ ಹೊಡೆದುಕೊಂಡು ಹೋಗಿದ್ದೆ. ನಾನು ಹೋಗುತಾನೇ ಇರುತೀನಿ" ಎಂದು ಕರಿಯಣ್ಣ ಮುಗುಳ್ನಗೆ ನಕ್ಕ. ಆ ಮುಗುಳ್ನಗೆಯ ಅರ್ಥ ರಾಮುಸ್ವಾಮಿಗೂ ರಾಮಯ್ಯಂಗಾರಿಗೂ ಹೊಳೆಯದೇ ಹೋಗಲಿಲ್ಲ.

"ಅವಳೇ ಆದರೆ ಒಳ್ಳೇ ಚೆನ್ನಾಗಿದ್ದಾಳೆ !" ಎಂದು ರಾಮುಸ್ವಾಮಿ ಉದ್ಗಾರ ತೆಗೆದ.

"ಚೆನ್ನು ಅನ್ನೋ ಮಾತು ಸಪ್ಪೆ. ಮೈಬಣ್ಣ ಎಣ್ಣೆಗೆಂಪಾದರೂ ಮೈ ಕಟ್ಟು ಹೇಗಿದೆ ! ನಮ್ಮ ಜನದಲ್ಲೂ ಅಂಥ ಹೆಣ್ಣು ಇಲ್ಲ. ಬೇಲೂರಿನ ಗುಡಿ ಕಲ್ಲುವಿಗ್ರಹ ಜೀವ ಬಂದು ನಡೆದಾಡುವ ಹಾಗೆ ಕಾಣುತಾಳೆ. ಒಳ್ಳೆ ರಸಪೂರಿ ಮಾವಿನಹಣ್ಣು ! ಎಂಥೋರಿಗಾದರೂ ಬಾಯಲ್ಲಿ ನೀರು ಊರುವುದೇ. ಆದರೆ, ಥತ್ ! ದೊಂಬರ ಚೆನ್ನಿ ದೊಂಬರ ಚೆನ್ನಿಯೇ" ಎಂದು ರಾಮಯ್ಯಂಗಾರಿ ದೊಂಬರ ಚೆನ್ನಿಯನ್ನು ಮನಮುಟ್ಟಿ ಬಣ್ಣಿಸಿದರೂ ಅವಳ ಬಗ್ಗೆ ಅಸಹ್ಯ ಭಾವನೆಯನ್ನು ವ್ಯಕ್ತಪಡಿಸಿದ.

"ಲೋ, ರಾಮಯ್ಯಂಗಾರಿ, ಹೆಣ್ಣಿನ ವಿಚಾರದಲ್ಲಿ ನಿನ್ನ ಹಾಗೆ ಮಡಿ ಮೈಲಿಗೆ, ಕುಲ ಗೋತ್ರ ನೋಡಿದರೆ ಆಗುತ್ತೇನೋ ? ನಿನ್ನ ಮಡಿಯೆಲ್ಲಾ ಕಂಡಿದೀನಿ. ಅವಳನ್ನು ಹೊಳೆಯಲ್ಲಿ ಮುಳುಗಿಸಿ ಕರೆದುಕೊಂಡು ಬಂದರೆ

ನೀನು 'ಈಗ ಬಾಧಕವಿಲ್ಲ' ಎನ್ನುತ್ತಿ, ಅಲ್ಲವೇನೋ" ಎಂದು ರಾಮುಸ್ವಾಮಿ ಕೀಟಲೆ ಮಾಡುವ ರೀತಿಯಲ್ಲಿ ನುಡಿದು ನಕ್ಕ.

"ನನಗೆ ಯಾಕಪ್ಪಾ ಈ ವಿಚಾರ. ಅದೆಲ್ಲಾ ನೀವು ನೀವು ನೋಡಿಕೊಳ್ಳಿ. ಈಗ ಒಂದು ಆಟ ಹಾಕೋಣೋ ಹೇಗೆ" ಎಂದು ರಾಮಯ್ಯಂಗಾರಿ ಆಟಕ್ಕಾಗಿ ಆತುರ ತೋರಿದ.

"ಇವೊತ್ತು ಬೇಡ" ಎಂದು ರಾಮುಸ್ವಾಮಿ ಹೇಳಿದ.

ರಾಮುಸ್ವಾಮಿ ಬಂದದ್ದೇನೋ ಎಲ್ಲರ ಸಾಲವನ್ನೂ ತೀರಿಸಿ, ತನ್ನಲ್ಲಿದ್ದ ಐದು ರೂಪಾಯಿಯನ್ನು ಪಣವೊಡ್ಡಿ, ತೀರಿಸಿದ ಸಾಲದಲ್ಲಿ ಸ್ವಲ್ಪವನ್ನಾದರೂ ಮತ್ತೆ ಗೆದ್ದು ಪಡೆಯಬೇಕೆಂಬ ಉದ್ದೇಶದಿಂದ. ಆದರೆ ಈ ದೊಂಬರ ಚೆನ್ನಿಯ ಮಾತೆದ್ದು ಅವನ ಮನಸ್ಸು ಬೇರೆಯ ಕಡೆಗೆ ಹರಿಯಿತು. ಈ ವಿಚಾರವನ್ನು ಹುಸೇನಿಯಲ್ಲಿ ಪ್ರಸ್ತಾಪಿಸಬೇಕೆಂದು ಅವನ ಬಯಕೆ. ರಾಮಯ್ಯಂಗಾರಿಗೆ ಹೆಣ್ಣಿನ ವಿಚಾರದಲ್ಲಿ ಆಸಕ್ತಿ, ಧೈರ್ಯ ಎರಡೂ ಇರಲಿಲ್ಲವೆಂಬುದು ಎಲ್ಲರಿಗೂ ತಿಳಿದ ವಿಷಯ. ರಾಮಯ್ಯಂಗಾರಿ ಮಾನಕ್ಕೆ ಹೆದರುತ್ತಿದ್ದ ಮನುಷ್ಯ. ರಾಮುಸ್ವಾಮಿ ಕ್ರಮಕ್ರಮವಾಗಿ ಮಾನವನ್ನು ತೊರೆಯುತ್ತಾ ಬಂದಿದ್ದು, ಈಗ ಅದಕ್ಕೆ ಸಂಪೂರ್ಣವಾಗಿ ಎಳ್ಳು-ನೀರು ಬಿಡುವ ಘಟ್ಟಕ್ಕೆ ಬಂದಿದ್ದನು.

ರಾಮುಸ್ವಾಮಿ ಬಯಸಿದಂತೆ, ನಿರೀಕ್ಷಿಸಿದಂತೆ, ರಾಮಯ್ಯಂಗಾರಿ ಹೊರಟುಹೋದನು. ದೊಂಬರ ಚೆನ್ನಿಯ ವಿಚಾರ ಪ್ರಸ್ತಾಪಿಸಲು ರಾಮುಸ್ವಾಮಿಗೆ ಅವಕಾಶ ದೊರತಂತಾಯಿತು.

"ಆ ಹುಡುಗಿಯ ಸ್ನೇಹ ಹೇಗೆ ಬೆಳೆಸಿದೆಯೋ, ಹುಸೇನಿ? ನಿಮ್ಮ ಜನದ ವರಿಸೆ ತೆಗೆದೆಯೋ ಹೇಗೆ?" ಎಂದು ರಾಮುಸ್ವಾಮಿ ಪ್ರಶ್ನಿಸಿದ.

"ನಮ್ಮ ಜೊತೆ ಸೇರಿದಮೇಲೆ ಹುಸೇನಿ ಮೆತ್ತಗಾಗಿಹೋಗಿಬಿಟ್ಟಿದ್ದಾನೆ ಕಣೋ. ಆ ಚೆನ್ನಿಯ ಸಹವಾಸವಾದಮೇಲಂತೂ ಪೂರಾ ಮೆತ್ತಗಾಗಿ ಹೋಗಿಬಿಟ್ಟಿದ್ದಾನೆ. ಒಳ್ಳೆ ಭರ್ಜರಿ ಹೆಣ್ಣು." ಎಂದು ಕರಿಯಣ್ಣ ಬಾಯಿ ಚಪ್ಪರಿಸಿದ.

"ಅವಳ ಸ್ನೇಹ ಹೇಗೆ ಬೆಳಸಿದ ಎನ್ನುವುದನ್ನು ಹುಸೇನಿ ಹೇಳಲೇ ಇಲ್ಲವಲ್ಲಾ?—" ರಾಮುಸ್ವಾಮಿ ಮತ್ತೆ ಪ್ರಶ್ನಿಸಿದ.

"ಹೇಳೋದೇನೈತೆ ಮಹಾ, ನನಗೂ ನಸೀಬಿತ್ತು, ಸಿಕ್ಕದ್ಲು. ಹಕ್ಕಿ

ಹಿಡಿಯೋಕೆ ಗಳಾಕ್ಕೆ ಅಂಟುಹಾಕೋದಿಲ್ವಾ, ಹಂಗೆ ಹೆಣ್ಣು ಬೇಕಾದ್ರೆ ಪಸಿ ಹಣ ಬಿಚ್ಚಬೇಕು" ಎಂದು ಹುಸೇನಿ ಸ್ವಲ್ಪ ಬಾಯಿಬಿಟ್ಟ.

"ನಿನ್ನ ಷರಾಯಿಗಿಂತ ನಿನ್ನ ಜೇಬು ದೊಗಲೆ! ನಮಗೆ ಜುಟ್ಟು ಜನಿವಾರವಾದ್ರೂ ಇದೆ. ನಿನಗೆ ಅದೂ ಇಲ್ಲ. ನಿನ್ನ ಹತ್ತಿರ ಹೇಗೆ ಬರಬೇಕೋ ಕಾಸು?"

"ಕರಿಯಣ್ಣೋರು ಇರೋವರೆಗೂ ನನಗೇನೂ ಭಯವಿಲ್ಲ ಬಿಡೂ, ರಾಮಸ್ವಾಮಿ. ಆ ದೊಂಬ ಈ ಊರಿನಲ್ಲಿದ್ದಾಗ, ನನ್ನ ಖರ್ಚೆಲ್ಲಾ ಏನು ಮಹಾ. ಅವನಿಗೆ ಒಂದು ಬೀಡಿಕಟ್ಟು, ಸಂಜೆಪೊತ್ತು ಅವನಿಗೂ ಅವನ ಎಂಡ್ತಿಗೂ ಎಂಡಕ್ಕೆ ನಾಕಾಣೆ. ಎಂಡಾನೂ ಒಂದೊಂದು ದಿನ ನಾನೇ ತಂದು ಕೊಟ್ಟುಬಿಡೋವೆ. ಅವ್ರು ಗಂಡ ಎಂಡ್ತಿ ಕುಡ್ದು ಮತ್ತಾಗಿ ಮಲಗಿಬಿಟ್ರೆ ಅಂದ್ರೆ ನಾನೇ ರಾಜಾ, ಚೆನ್ನೀನೇ ರಾಣಿ" ಎಂದು ರಾಮಸ್ವಾಮಿಯ ತೊಡೆಯನ್ನು ತಟ್ಟಿ, ಹುಸೇನಿ ತನ್ನ ಸವಿ ನೆನಪನ್ನೆಲ್ಲಾ ಅದರಲ್ಲಿ ತುಂಬಿ, ಅವನಿಗೂ ಅದು ಅರಿವಾಗುವಂತೆ ಮಾಡಿದ.

ಇದುವರೆಗೂ ಹೆಣ್ಣಿನ ಸಂಬಂಧದ ಮಧುರಾಲಾಪದಲ್ಲಿಯೇ ತೃಪ್ತಿ ಕಾಣುತ್ತಿದ್ದ ರಾಮಸ್ವಾಮಿಯ ಮನಸ್ಸು ಆ ಒಂದು ಅನುಭವವನ್ನು ತಾನೇ ವಾಸ್ತವವಾಗಿ ಸವಿಯಬಯಸಿತು. ಮಂದವಾಗಿ ಪ್ರಸುಪ್ತವಾಗಿದ್ದ ಅವನ ಒಡಲ ಹಸಿವು ಚುರುಕಾಗತೊಡಗಿತು. ತಾನು ಈ ಮೊದಲೇ ಈ ಹೊತ್ತಿಗೆ ಮದುವೆಯಾಗದೆ ಇದ್ದುದಕ್ಕೆ ತನ್ನ ಕೆಟ್ಟ ಚಾಳಿಯ ಪ್ರತೀತಿ ಒಂದು ಮುಖ್ಯ ಕಾರಣ ಎನ್ನುವುದು ಅವನ ಗಮನಕ್ಕೆ ಇನ್ನೂ ಬಂದಿರಲಿಲ್ಲ. ತನ್ನದೆನ್ನುವ ಒಂದು ಹೆಣ್ಣು ಇಲ್ಲದೆ ಇರುವಾಗ ಯಾವುದಾದರೂ ಸರಿಯೆ ಎನ್ನುವ ದುಷ್ಟ ಭಾವನೆಗೆ ಅವನ ಅಶಿಕ್ಷಿತ ಮನಸ್ಸು ಎಡೆಗೊಟ್ಟಿತು.

"ಲೋ ಹುಸೇನಿ, ಬೇಕಾದರೆ ನಾಳೆನೇ ಹಾಸನಕ್ಕೆ ಹೋಗೋಣ. ನನಗೂ ಪಸಿ ಆ ಚೆನ್ನಿಯ ಸ್ನೇಹ ಮಾಡಿಸಿಕೊಡಬೇಕಲ್ಲೋ?" ಎಂದು ರಾಮಸ್ವಾಮಿ ಗೋಗರೆದು ಕೇಳಿಕೊಂಡ.

"ನೋಡು ರಾಮಸ್ವಾಮೀ, ಚೆನ್ನಿ ನಿಂಗೆ ಲಾಯಕ್ಕಾದೋಳಲ್ಲ. ಕರಿಯಣ್ಣನಿಗೂ ಲಾಯಕ್ಕಲ್ಲ. ನಾನು ಹೇಳಿದರೆ ಕೇಳಲಿಲ್ಲ. ನಿಮ್ಮಂಥವರು ಮಜಾ ಮಾಡ್ಬೇಕಾದ್ರೆ ಈ ಹಳ್ಳೀಲಿ ಏನಿದೆ? ಮೈಸೂರು ಷಹರಿಗೆ ಹೋಗ್ಬೇಕು."

" ಹುಸೇನಿ ಹೇಳೋದೂ ಸರಿಯೆ. ಈ ಸಲ ನವರಾತ್ರಿಗೆ ನಾವು ಮೂರು ಜನ ಮೈಸೂರಿಗೆ ಯಾಕೆ ಹೋಗ್ಬಾರ್ದು. ನಾನೂ ನೀನೂ ಜೊತೆ; ಹುಸೇನಿ ಕುಮ್ಮಕ್ಕು."

" ರಾಮಯ್ಯಂಗಾರಿ ? "

" ಇದಕ್ಕೆಲ್ಲಾ ರಾಮಯ್ಯಂಗಾರಿ ನಾಲಾಯಕ್ಕು. ಅವನು ಬರೋದಾದ್ರೆ ನಾನು ಬರಾಕಿಲ್ಲ " ಎಂದು ಹುಸೇನಿ ನುಡಿದ.

" ಈ ವರ್ಷವೇ ಹೊರಡೋಣವೆನ್ನುತ್ತೀರಾ ? " ಎಂದು ರಾಮಸ್ವಾಮಿ ಪ್ರಶ್ನಿಸಿದ.

" ಮತ್ತೆ ? ಮುಂದಿನ ವರ್ಷ ನಾವು ಎಲ್ಲಿರುತ್ತೇವೋ ಏನಾಗುತ್ತೇವೋ ಕಂಡಿರೋರು ಯಾರು ? "

" ಅದು ಸರಿಯೆ...." ಎಂದು ರಾಮಸ್ವಾಮಿ ರಾಗ ಎಳೆದ.

" ನಿನಗೆ ಇಷ್ಟ ಇಲ್ಲದೆ ಇದ್ದರೆ ಬಿಡು. ನಾನೂ ಹುಸೇನಿ ಹೋಗುತ್ತೇವೆ."

" ಇಷ್ಟ ಇಲ್ಲಾ ಅಂತಲ್ಲ. ಕೈಲಿ ಒಂದು ನೂರು ರೂಪಾಯಿಯಾದರೂ ಬೇಡವೇ ? "

" ಹ್ಞೂ, ಅಷ್ಟಾದ್ರೂ ಬೇಕು " ಎಂದ ಹುಸೇನಿ.

" ಅದು ಯಾವ ಮೂಲೆಗೆ, ಹುಸೇನಿ ? ನವರಾತ್ರಿಯೆಂದ್ಮೇಲೆ ನೋಟ, ನುಡಿಗೆ ನೋಡಬೇಡವೇ ? ವರದಾಚಾರ್ರ ಕಂಪನಿ ನಾಟಕ ನೋಡಬೇಡವೇ ? ಇನ್ನು ಸರ್ಕಸ್ಸು, ಹೋಟಲು, ಗಾಡಿಬಾಡಿಗೆ ಇವಕ್ಕೆಲ್ಲ ಆಗಬೇಡವೆ ? ನಂಜನಗೂಡು, ಶ್ರೀರಂಗಪಟ್ಟಣ ಇವೆಲ್ಲಾ ನೋಡದೆ ಬರೋದೇ ? ಕಡೇ ಪಕ್ಷ ಕೈಲಿ ಇನ್ನೂರಾದರೂ ಇರಬೇಕು. ಇನ್ನೂರೈವತ್ತು ಇದ್ದರೆ ಮೇಲು " ಎಂದು ' ಸಾಹುಕಾರ ರಾಮಪ್ಪನವರ ಮಗ ' ಕರಿಯಣ್ಣ ಧಾರಾಳವಾದ ' ಬಡ್ಜೆಟ್ 'ನ್ನು ಮುಂದಿರಿಸಿದ.

" ಅರೆ ಅಲ್ಲಾ ! ನಾನು ಗುಲಾಂ ಆದರೂ ಇಷ್ಟು ಹಣ ಯಾರಪ್ಪ ನನಗೆ ಕೊಡೋರೂ ! " ಎಂದು ಹುಸೇನಿ ಬೆಚ್ಚಿ ಬಾಯಿಬಿಟ್ಟ.

" ನಾನು ಮೊದಲೇ ಹೇಳಿದೆನಲ್ಲಾ, ನೀನು ಕುಮ್ಮಕ್ಕು. ನಿನಗೆ ಆದಷ್ಟು ನೀನು ತೆಗೆದುಕೊಂಡು ಬಾ. ಉಳಿದದ್ದು ನಾನು ನೋಡಿಕೊಳ್ಳುತ್ತೀನಿ."

" ನನ್ನ ನೋಡಿಕೊಳ್ಳುವವರು ಯಾರು ? " ಎಂದು ರಾಮುಸ್ವಾಮಿ ನಗುತ್ತಾ ಕೇಳಿದನು.

" ರಾಮುಶೆಟ್ಟಿ ! " ಎಂದು ಕರಿಯಣ್ಣನೂ ನಗುತ್ತಲೇ ಉತ್ತರ ಕೊಟ್ಟ.

" ಇವೊತ್ತು ತಾನೇ ಅವನ ಸಾಲ ತೀರಿಸಿದ್ದೀನಿ. ಸಾಮಾನಿನ ಜೊತೆಗೆ ನಾಕಾಣೆ ಎಂಟಾಣೆ ಲೆಕ್ಕಕ್ಕೆ ಬರೆದು ಕೊಡುತ್ತಾನೆಯೇ ಹೊರತು ಒಟ್ಟಿಗೆ ಗಂಟಾಗಿ ನೂರಿನ್ನೂರು ರೂಪಾಯಿ ಕೊಡುತ್ತಾನೆಯೇ ಆ ಶೆಟ್ಟಿ ! ಬೇಕಾದರೆ ನನ್ನ ಖರ್ಚು ಕಡಿಮೆ ಮಾಡಿಕೊಳ್ಳುತ್ತೀನಿ, ಒಂದು ನೂರೋ, ನೂರೈವತ್ತೋ ಸಾಲ ಕೊಟ್ಟಿರು, ಕರಿಯಣ್ಣ. ಬೇಕಾದರೆ ಕಾಗದ ಬರೆದು ಕೊಡ್ತೀನಿ."

" ಅದೆಲ್ಲಾ ಸಾಧ್ಯವಿಲ್ಲವಪ್ಪ. ನೀನು ಕಡೇ ಪಕ್ಷ ಒಂದು ನೂರು ರೂಪಾಯಿಯಾದರೂ ಜೊತೆ ಮಾಡಬೇಕು. ಇನ್ನೂ ನಾಲ್ಕೈದು ತಿಂಗಳಿದೆ. ನಿನ್ನ ದೆಸೆ ಖುಲಾಯಿಸಿದರೆ, ನಮ್ಮಿಂದಲೇ ಹಿರಿಯಬಹುದು. ಉಳಿದದ್ದು ಹೇಗೋ ಆಗುತ್ತೆ. ನಾನು ನೋಡಿಕೊಳ್ಳುತ್ತೇನೆ. ಸರಿಯೇನಪ್ಪಾ ? "

" ಆಗಲಿ, ಇನ್ನೂ ನಾಕು ತಿಂಗಳಿದೆಯಲ್ಲ ನೋಡಿಕೊಳ್ಳೋಣ " ಎಂದು ರಾಮುಸ್ವಾಮಿ ಒಪ್ಪಿಕೊಂಡ.

ಈ ತ್ರಿಮೂರ್ತಿಗಳ ಗುಪ್ತ ಸಭೆ ಕೊನೆಗಂಡಿತು.

# ಪ್ರಕರಣ ಮೂರು

೧

ನೆನೆದ ಕೂಡಲೆ ನೂರು ರೂಪಾಯಿ ಸಿಕ್ಕುತ್ತದೆಯೆ? ಅಲ್ಲದೆ, ನವರಾತ್ರಿಗೆ ಇನ್ನೂ ನಾಲ್ಕೈದು ತಿಂಗಳಿದೆ. ಅಷ್ಟರೊಳಗೆ ಆ ಮೊತ್ತವನ್ನು ಹೇಗಾದರೂ ಸಂಪಾದನೆ ಮಾಡುವುದು ಎಂದು ರಾಮಸ್ವಾಮಿ ತನಗೆ ತಾನೇ ಸಮಾಧಾನ ಹೇಳಿಕೊಳ್ಳುತ್ತಿದ್ದ. ಕೊಳಲೂರಿನಂಥ ಗ್ರಾಮದಲ್ಲಿ ರಾಮಸ್ವಾಮಿ ಯಂಥ 'ಕೆಲಸಕಾರ್ಯ'ವಿಲ್ಲದ ಪುಂಡ ಹಾರುವ ತರುಣ 'ಸಂಪಾದನೆ' ಮಾಡುವ ಮಾರ್ಗ ಸುಸ್ಪಷ್ಟ. ಆ ಮಾರ್ಗದಲ್ಲಿ 'ಸಂಪಾದನೆ' ಮಾಡಲು ದೇಹಶ್ರಮ, ವಿದ್ಯಾಬುದ್ಧಿಗಳು ಅವಶ್ಯವಿಲ್ಲ. ರಾಮಸ್ವಾಮಿ ಅಶಕ್ತನಲ್ಲದಿದ್ದರೂ ಅವನ ತಂದೆಯಂತೆ, ಅವನ ಪೂರ್ವಿಕರಂತೆ, ಮೈ ಬಗ್ಗಿಸಿ ದುಡಿಯುವ 'ಅಗೌರವ'ದ ಉದ್ಯೋಗಕ್ಕೆ ಮನಸ್ಸುಕೊಟ್ಟವನಲ್ಲ. ಬ್ರಾಹ್ಮಣ ವಂಶದಲ್ಲಿ ಹುಟ್ಟಿ ನೇಗಿಲು ಗುದ್ದಲಿ ಹಿಡಿದು ಹೊಲ ತೋಟ ಮಾಡಿದವರುಂಟೆ? ರಾಮಸ್ವಾಮಿ ದಡ್ಡನೂ ಆಗಿರಲಿಲ್ಲ. ವಿಶೇಷ ವಿದ್ಯೆಯಿಂದ ಪ್ರಯೋಜನವಿಲ್ಲ ವೆಂಬ ಸಿದ್ಧಾಂತಕ್ಕೆ ಅವನು ಎಂದೋ ಬಂದಿದ್ದನು ಒಂದು ಸ್ಕೂಲು ಮೇಷ್ಟರ ಕೆಲಸಕ್ಕೆ ಸೇರಲು ತಾನು ಓದಿರುವಷ್ಟು ವಿದ್ಯೆ ಸಾಕೆಂದು ಅವನ ತಿಳಿವಳಿಕೆ. ಪಿತ್ರಾರ್ಜಿತವಾದ ಆಸ್ತಿಯಲ್ಲಿ ಕುಳಿತು ತಿನ್ನಲು ತನಗೂ ಹಕ್ಕಿದೆ. ಆದ್ದರಿಂದ ಅನಾವಶ್ಯಕವಾಗಿ ಸರ್ಕಾರದ ಚಾಕರಿಯ ನೊಗಕ್ಕೆ ಏಕೆ ಹೆಗಲು ಕೊಡ ಬೇಕೆಂದು ಅವನ ತರ್ಕ. ಇಷ್ಟೆಲ್ಲ ಯೋಚನೆ ಮಾಡಬಲ್ಲವನಿಗೆ ಬುದ್ಧಿ ಇಲ್ಲ ಎನ್ನಲಾಗುವುದೆ? ಅವನಿಗೆ ಬೇಕಾದಷ್ಟು ಬುದ್ಧಿಯಿದ್ದಿತು. ಈ ಬಗೆಯ ಬುದ್ಧಿ 'ಅಪರ ಬುದ್ಧಿವಂತಿಕೆ' ಎಂದು ಪ್ರಸಿದ್ಧ.

ರಾಮಸ್ವಾಮಿಯ ಬುದ್ಧಿವಂತಿಕೆ ನೂರು ರೂಪಾಯನ್ನು ಪಡೆಯುವ ಬಗೆಯಲ್ಲಿ ನಿತ್ಯವೂ ನಿರತವಾಗಿತ್ತು. ಮಾನಿಷ್ಠರಾದ ಸಂಸಾರವೊಂದಿಗರಿಗೆ ಈ ಬಗೆಯ ಆಲೋಚನೆ ಬಂದರೆ ಅವರು ಕೊರಗಿ ಕೃಶರಾಗುತ್ತಾರೆ. ರಾಮ ಸ್ವಾಮಿಗೆ ಅಂತಹ ಅಪಾಯಸಂಭವವೇನಿರಲಿಲ್ಲ. ಅವನ ಯೋಜನೆ ಅವನ ತಲೆಗೆ ಭಾರವೇನಾಗಿರಲಿಲ್ಲ; ಅವನ ನಿತ್ಯದ ಕಾರ್ಯಕ್ರಮಕ್ಕೆ ಯಾವ ಅಡ್ಡಿ

ಆತಂಕಗಳನ್ನೂ ತರುತ್ತಿರಲಿಲ್ಲ. ಬೆಳಗ್ಗೆ ಕಾಫಿ ತಿಂಡಿ, ಮಧ್ಯಾಹ್ನ ರಾತ್ರಿ ಎರಡು ಹೊತ್ತೂ ಶ್ರೀಮಂತ ಭೋಜನವಲ್ಲದಿದ್ದರೂ ಹಿಟ್ಟು ಹುಳಿ ಅನ್ನ ಸಾರು ಗಟ್ಟಿ ಮೊಸರಿನ ಪುಷ್ಕಳವಾದ ಊಟ—ಇವುಗಳನ್ನು ಹೊಟ್ಟೆತುಂಬ ತಿಂದು ಚೆನ್ನಾಗಿ ಜೀರ್ಣಿಸಿಕೊಳ್ಳುತ್ತಿದ್ದನು. ಈ ಪರಿಸ್ಥಿತಿಯಲ್ಲಿ, ಬಗೆಬಗೆಯ ಆಲೋಚನೆಗಳಿಂದ ಅವನ ಬುದ್ಧಿ ನಿಶಿತವಾಗುತ್ತಿತ್ತೆ ಹೊರತು ಕಂಗೆಡುತ್ತಿರಲಿಲ್ಲ.

ಕಾಸಿನ ಯೋಚನೆ ಬಂದಕೂಡಲೆ ರಾಮಸ್ವಾಮಿಯು ತಂದೆ ಸಾಹುಕಾರ ರಾಮಪ್ಪನವರನ್ನು ನೆನೆಯುತ್ತಿದ್ದಂತೆ, ಅವನು ರಾಮಶೆಟ್ಟಿಯನ್ನು ನೆನೆಯುತ್ತಿದ್ದುದು 'ಸಂಕಟ ಬಂದಾಗ ವೆಂಕಟರಮಣ' ಎನ್ನುವಷ್ಟು ಸಹಜವಾಗಿ ಬಿಟ್ಟಿದ್ದಿತು. ಒಂದು ದಿನ ಶುಭ ಮುಹೂರ್ತದಲ್ಲಿ ರಾಮಸ್ವಾಮಿ ತನ್ನ ಹಣದ ದರದಿನ ವಿಚಾರವನ್ನು ರಾಮಶೆಟ್ಟಿಯಲ್ಲಿ ಪ್ರಸ್ತಾಪಮಾಡಿದ. ಅವನು ಯೋಚನೆಮಾಡಿ ಉತ್ತರ ಹೇಳುವುದಾಗಿ ಭರವಸೆಕೊಟ್ಟ. ರಾಮಶೆಟ್ಟಿ ಯೋಚನೆಮಾಡುವುದು ಎಂದರೆ ತನ್ನ ತಂದೆಯ ಸಲಹೆಯನ್ನು ಕೇಳುವುದು. ಇದು ರಾಮಸ್ವಾಮಿಗೂ ಗೊತ್ತು. ಕೈಕಾಲು ಸ್ವಾಧೀನವಿಲ್ಲದೆ ಹಾಸಿಗೆಯ ಮೇಲೆ ಮಲಗಿರುವ ಸುಬ್ಬಯ್ಯಶೆಟ್ಟರಿಂದ ತನ್ನ ಹಣಕಾಸಿನ ವ್ಯವಹಾರದ ವಿಚಾರ ತನ್ನ ತಂದೆಗೆ ತಿಳಿಯುವುದೆಂಬ ಭೀತಿ ರಾಮಸ್ವಾಮಿಗೆ ಕಿಂಚಿತ್ತೂ ಇರಲಿಲ್ಲ. ಆದ್ದರಿಂದಲೇ ಚಿನ್ನ ಮಾರಿದ ವಾರ ಎರಡು ವಾರಗಳಲ್ಲಿ ಈ ಹಣದ ಮಾತನ್ನು ರಾಮಸ್ವಾಮಿ ಮತ್ತೆ ಧೈರ್ಯವಾಗಿ ಎತ್ತಿದ. ಹಣಕ್ಕೆ ಭೂಪಾಕಾಗದದ ಮೇಲೆ ಪತ್ರ ಬರೆದುಕೊಡುವುದಾಗಿಯೂ ಹೇಳಿದ. ಈ ಸಂಗತಿಯನ್ನು ರಾಮಶೆಟ್ಟಿ ತನ್ನ ತಂದೆಗೆ ತಿಳಿಸಿದಾಗ ಅವರ ಬಾಯಲ್ಲಿ ನೀರೂರಿತು. ವೆಂಕಟ ಸುಬ್ಬಯ್ಯನವರು ಸಾಹುಕಾರ ರಾಮಪ್ಪನವರಲ್ಲಿ ಸಾಲಗಾರರಾಗಿರುವ ವಿಷಯ ಅವರಿಗೆ ಗೊತ್ತಿದ್ದಿತು. ಇಂದಲ್ಲ ನಾಳೆ ವೆಂಕಟಸುಬ್ಬಯ್ಯನವರ ಕೆಳಗಿಳಿದ ಆಸ್ತಿಯ ಅರ್ಧ ಭಾಗವಾದರೂ ರಾಮಪ್ಪನ ಪಾಲಾಗುವುದೆಂದು ಶೆಟ್ಟರು ತಿಳಿದಿದ್ದರು. ಸಂದರ್ಭ ಒದಗಿದಾಗ, ರಾಮಸ್ವಾಮಿಯನ್ನು ಕೊಕ್ಕಿಗೆ ಸಿಕ್ಕಿಸಿಕೊಂಡು ರಾಮಸ್ವಾಮಿಯ ಪಾಲಿಗೆ ಬರುವಷ್ಟು ಆಸ್ತಿಯನ್ನಾದರೂ ತಾವು ದಕ್ಕಿಹಾಕಿಕೊಳ್ಳಬೇಕೆಂದು ಅವರು ಎಣಿಸಿದರು. ಆದರೆ ವೆಂಕಟಸುಬ್ಬಯ್ಯನವರದ್ದು ಇನ್ನೂ ಅವಿಭಕ್ತ ಕುಟುಂಬ; ತಂದೆಮಕ್ಕಳ ಪಾಲಾಗಿಲ್ಲ. ಆಧಾರವಿಲ್ಲದೆ ಬರಿಯ ರಾಮಸ್ವಾಮಿಯ ರುಜುವಿನ ಬಲದಮೇಲೆ ಭಾರಿ ಮೊತ್ತವನ್ನು

—ಸುಬ್ಬಯ್ಯಶೆಟ್ಟರ ದೃಷ್ಟಿಯಲ್ಲಿ ನೂರು ರೂಪಾಯಿ ಬಹು ಭಾರಿ ಮೊತ್ತ— ಸಾಲ ಕೊಡುವುದು ಹೇಗೆ? ಅವನಿಗೆ ಜಾಮೀನಾಗುವವರೂ ಯಾರೂ ಇಲ್ಲ. ದುಡುಕಬಾರದೆಂಬ ನಿಶ್ಚಯಕ್ಕೆ ಬಂದರು ಸುಬ್ಬಯ್ಯಶೆಟ್ಟರು. ಆದರೂ ರಾಮಸ್ವಾಮಿಯನ್ನು ಬಲೆಯಲ್ಲಿ ಇಟ್ಟುಕೊಂಡಿರುವ ಉಪಾಯವನ್ನು ತನ್ನ ಮಗನಿಗೆ ವಿಧಿವತ್ತಾಗಿ ಉಪದೇಶಿಸಿದರು. ರಾಮಶೆಟ್ಟಿ ರಾಮಸ್ವಾಮಿಗೆ, "ಎಂದಿನಂತೆ ನಡೆಯುತ್ತಾ ಇರಲಿ, ಒಟ್ಟಿಗೆ ನೂರು ರೂಪಾಯಿ ಸಾಧ್ಯವಿಲ್ಲ. ನಿಮ್ಮ ತಂದೆಗೆ ಗೊತ್ತಾದರೆ ನಮ್ಮ ಮಾನ ಉಳಿಯುವುದಿಲ್ಲ" ಎಂದು ಖಡಾಖಂಡಿತವಾಗಿ ಹೇಳಿಬಿಟ್ಟ.

'ರಾಮಶೆಟ್ಟಿಯ ನಿರಾಕರಣೆಯಿಂದ ರಾಮಸ್ವಾಮಿಗೆ ನಿರಾಶೆಯಾದರೂ, ತುಸು ಸಂತೋಷವೂ ಆಯಿತು. ಈಚೆಗೆ ನಾಲ್ಕಾಣೆ ಎಂಟಾಣೆ ನಗದು ಸಾಲಕ್ಕೂ ರಾಮಶೆಟ್ಟಿ ರಾಗ ಎಳೆಯುತ್ತಿದ್ದ. ಇನ್ನು ಮುಂದೆ ಅದಕ್ಕೆ ಆಪೋಹವಿಲ್ಲ ಎಂದು ರಾಮಸ್ವಾಮಿ ಸಂತೋಷಪಟ್ಟ.

ನ್ಯಾಯವಾದ ವೆಚ್ಚವಾಗಿದ್ದರೆ ತಂದೆಯನ್ನೇ ಧೈರ್ಯವಾಗಿ ಕೇಳಬಹುದಾಗಿದ್ದಿತು. ನ್ಯಾಯ ಎಂಬಂತೆ ನಟಿಸಲೂ ಯಾವುದೂ ನೆಪವಿರಲಿಲ್ಲ. ಅನ್ಯಾಯದ ವೆಚ್ಚಕ್ಕೆ ಅನ್ಯಾಯದ ಮಾರ್ಗವನ್ನೇ ಹುಡುಕತೊಡಗಿತು ರಾಮಸ್ವಾಮಿಯ ಬುದ್ಧಿ.

ರಾಮಸ್ವಾಮಿ ಮನೆಯನ್ನೆಲ್ಲಾ ಶೋಧಿಸಿ, ತನ್ನ ತಂದೆ ಬರೆದಿಟ್ಟದ್ದ ಹಳೆಯ ಕಾಗದಪತ್ರಗಳನ್ನೆಲ್ಲಾ ಸಂಗ್ರಹಿಸಿದನು. ಅವುಗಳಲ್ಲಿ ಅವರ ಬರವಣಿಗೆ ಇದ್ದದ್ದು ಬಹು ಸ್ವಲ್ಪ; ಅವರ ರುಜು ಇರುವ ಕಾಗದ ಒಂದೂ ಸಿಕ್ಕಲಿಲ್ಲ; ತಂದೆಯ ಹಸ್ತಾಕ್ಷರದ ಮಾದರಿ ರಾಮಸ್ವಾಮಿಯ ಬುದ್ಧಿಯ ಹೂಟಕ್ಕೆ ಈಗ ಅತ್ಯಗತ್ಯವಾಗಿತ್ತು, ಬಹಳ ಆಲೋಚನೆ ಮಾಡಿದ; ಬಡಪಟ್ಟಿಗೆ ಹೊಳೆಯಲಿಲ್ಲ. ಕಟ್ಟಕಡೆಗೆ, ಅವನ ದುಷ್ಟಬುದ್ಧಿಗೆ ದುರಾಲೋಚನೆ ಹೊಳೆಯಿತು.

ರಾಮಸ್ವಾಮಿ ತನ್ನ ಆಲೋಚನೆಯನ್ನು ಕರಿಯಣ್ಣನಿಗೆ ವಿವರಿಸಿದನು. ಕರಿಯಣ್ಣ ಒಪ್ಪಿಕೊಂಡು, ತನ್ನ ತಂದೆಯಿಂದ ವೆಂಕಟಸುಬ್ಬಯ್ಯನವರಿಗೆ ಒಂದು ಸಾಲದ ತಗಾದೆ ಚೀಟಿಯನ್ನು ಬರೆಯಿಸಿ ತಂದುಕೊಟ್ಟನು. ಅದರಲ್ಲಿ —'ಈಗ ಎರಡು ವರ್ಷಗಳಿಗೂ ಮೇಲ್ಪಟ್ಟು ಏನೂ ಬಡ್ಡಿ ಪಾವತಿಯಾಗಿಲ್ಲ. ಕೂಡಲೆ ಬಡ್ಡಿ ಹಣ ಎಲ್ಲವನ್ನೂ ತಂದು ಕೊಡತಕ್ಕದ್ದು. ಇಲ್ಲದಿದ್ದರೆ

ಮುಂದಿನ ಆಲೋಚನೆ ಮಾಡಬೇಕಾಗುತ್ತದೆ' ಎಂಬುದೇ ಮುಖ್ಯ ವಿಷಯ. ಕಾಗದವನ್ನು ಕರಿಯಣ್ಣ ತಂದುಕೊಟ್ಟನೆಂದು ಹೇಳಿ ರಾಮಸ್ವಾಮಿ ಅದನ್ನು ತಂದೆಯ ಕೈಗೆ ಕೊಟ್ಟನು. ವೆಂಕಟಸುಬ್ಬಯ್ಯನವರು ತಲೆಯಮೇಲೆ ಕೈಹೊತ್ತು ಕುಳಿತರು. "ಇದಕ್ಕೆ ಯಾಕೆ ಯೋಚನೆಮಾಡುತ್ತಿ, ಅಪ್ಪ. ಹಣ ಕೇಳಿದ ಕೂಡಲೆ ಕೊಡುವುದಕ್ಕೆ ನಾವೇನು ಹಿತ್ತಿಲಿನಲ್ಲಿ ರೂಪಾಯಿ ಗಿಡ ಹಾಕಿಕೊಂಡಿದ್ದೇವೆಯೆ ? ಸಮಜಾಯಿಸಿ ಹೇಳಿ ಒಂದು ಕಾಗದ ಬರೆದುಕೊಡು. ನಾನು ಕರಿಯಣ್ಣನಿಗೆ ಹೇಳಿ ಸ್ವಲ್ಪ ಕಾಲ ತಡೆಯುವಂತೆ ಮಾಡುತ್ತೇನೆ" ಎಂದು ರಾಮಸ್ವಾಮಿ ಸಲಹೆ ಕೊಟ್ಟ. ಇಂಥ ಸಲಹೆಗಳು ಎಷ್ಟು ಹಿತಕರ ಎಂಬುದು ಸಾಲದ ಹೊರೆ ಹೊತ್ತವರಿಗೆ ಮಾತ್ರ ತಿಳಿದೀತು. ವೆಂಕಟಸುಬ್ಬಯ್ಯನವರು ಹಿಂದು ಮುಂದು ನೋಡದೆ ತಟ್ಟನೆ ಮೇಲೆದ್ದರು; ಮಸಿಕುಡಿಕೆಯನ್ನೂ, ಅವರು ಸಾಮಾನ್ಯವಾಗಿ ಉಪಯೋಗಿಸುತ್ತಿದ್ದ ಲಾಳದ ಕಡ್ಡಿಯ ಲೆಕ್ಕಣಿಕೆಯನ್ನೂ ತೆಗೆದುಕೊಂಡು ಕೂಡಲೆ ಒಂದು ಸಮಜಾಯಿಸಿಯ ಕಾಗದವನ್ನು ಬರೆದು, "ಸದ್ಯ ಇದನ್ನ ನೀನು ಹೇಳಿದ ಹಾಗೆ ಕೊಟ್ಟು ಬಾ. ಒಂದು ವಾರ ಬಿಟ್ಟುಕೊಂಡು ನಾನೇ ರಾಮಪ್ಪನವರನ್ನು ಕಂಡುಬರುತ್ತೇನೆ" ಎಂದು ಸಮಾಧಾನದ ನಿಟ್ಟುಸಿರೊಂದನ್ನು ಬಿಟ್ಟು, ಕಾಗದವನ್ನು ರಾಮಸ್ವಾಮಿಯ ಕೈಗೆ ಕೊಟ್ಟರು. ಅದನ್ನು ತೆಗೆದುಕೊಂಡ ರಾಮಸ್ವಾಮಿ ತನ್ನ ಕೈಗೆ ನೂರು ರೂಪಾಯಿ ಬಂದಂತೆಯೇ ಭಾವಿಸಿದನು.

ರಾಮಸ್ವಾಮಿಯ ಮುಂದಿನ ಕಾರ್ಯಕ್ರಮ ಕಾರ್ಯರೂಪಕ್ಕೆ ಬರಲು ಅವನು ಎಂಟು ಹತ್ತು ದಿನ ಸಾಧನೆ ಮಾಡಿದರೂ, ಕೆಲವು ವಾಕ್ಯಗಳಲ್ಲಿ ಅದನ್ನು ವಿವರಿಸಿ ಮುಗಿಸಬಹುದು. ಎಂಟು ದಿನವೂ ಅವನು ಮಾಡಿದ ಸಾಧನೆಯೆಂದರೆ, ತನ್ನ ತಂದೆಯ ಬರವಣಿಗೆಯ ಮತ್ತು ರುಜುವಿನ ಯಥಾವತ್ತಾದ ಅನುಕರಣದ ಅಭ್ಯಾಸ. ಅವನು ತನ್ನ ಸಾಧನೆಯಲ್ಲಿ ಸಿದ್ಧಿಯನ್ನೂ ದೊರಕಿಸಿಕೊಂಡನು. ತನ್ನ ತಂದೆಯ ಅಕ್ಷರದಲ್ಲಿಯೇ ಕೆಲಸಕ್ಕೆ ಬಾರದ ಕೆಲವು ಅಸಂಬದ್ಧ ವಾಕ್ಯಗಳನ್ನು ಬರೆದು, ಶಾನುಭೋಗ ಕೃಷ್ಣಪ್ಪನವರ ಮಗ ಸುಂದರಮೂರ್ತಿಗೆ ತೋರಿದನು. ಸುಂದರಮೂರ್ತಿಯನ್ನೇ ಏಕೆ ಈ ಪರೀಕ್ಷೆಗೆ ಆರಿಸಿಕೊಂಡನೆಂದರೆ, ಊರಿನಲ್ಲೆಲ್ಲ ಅವನು ಬುದ್ಧಿವಂತ ಮಾತ್ರನಲ್ಲವೆ ಸಾಧುಮೂರ್ತಿಯೆಂದೂ ಪ್ರಸಿದ್ಧನಾಗಿದ್ದನು. ರಾಮಸ್ವಾಮಿ ತೋರಿದ ಬರವಣಿಗೆ

ಗಳಲ್ಲಿ ಯಾವ ವ್ಯತ್ಯಾಸವೂ ಇಲ್ಲ, ಎರಡು ರುಜುಗಳೂ ಒಬ್ಬರವೇ ಎಂದು ಸುಂದರಮೂರ್ತಿ ತನ್ನ ಅಭಿಪ್ರಾಯವನ್ನು ತಿಳಿಸಿದನು. ರಾಮುಸ್ವಾಮಿಯ ಯೋಜನೆ ಕೊನೆಯ ಘಟ್ಟವನ್ನು ಮುಟ್ಟಿತು.

ರಾಮುಸ್ವಾಮಿ ಬೆಂಗಳೂರಿನ ತನ್ನ ಅಣ್ಣನಿಗೆ ತನ್ನ ತಂದೆಯೇ ಬರೆದಂತೆ ಒಂದು ಪತ್ರ ಬರೆದನು. ರಾಮಪ್ಪನವರ ಕಡೆಯ ಸಾಲಪತ್ರ ಒಂದು ವಾಯಿದೆಗೆ ಬಂದಿದೆಯೆಂದೂ, ಸ್ವಲ್ಪವಾದರೂ ಹಣ ಪಾವತಿಮಾಡದಿದ್ದರೆ ಅವರು ಕೋರ್ಟಿಗೆ ಹತ್ತುವುದಾಗಿಯೂ, ಆದ್ದರಿಂದ ತಡಮಾಡದೆ ಹೇಗಾದರೂ ಮಾಡಿ ಇನ್ನೂರು ರೂಪಾಯಿಗಳನ್ನು ಕೂಡಲೆ ಮನಿಯಾರ್ಡರ್ ದ್ವಾರ ಕಳಿಸಿಕೊಡಬೇಕೆಂದೂ ಒಕ್ಕಣಿಕೆ ಬರೆದು, ತಂದೆಯ ರುಜುವನ್ನು ತಾನು ಹಾಕಿದನು.

ಪೋಸ್ಟ್‌ಮಾಸ್ಟರ್ ಪುಟ್ಟಣ್ಣಯ್ಯನವರಿಂದಲೇ ಇಂಗ್ಲಿಷಿನಲ್ಲಿ ವಿಳಾಸ ಬರಸಿಕೊಂಡು, ಸಿದ್ಧವಾದ ಲಕೋಟೆಯನ್ನು ಅಂಚೆಗೆ ಹಾಕಿದ್ದೂ ಆಯಿತು. ರಾಮುಸ್ವಾಮಿ ಹಣದ ನಿರೀಕ್ಷೆಯಲ್ಲಿ ಗಂಟೆಗಳನ್ನು ಎಣಿಸುತ್ತ ಕುಳಿತನು.

ಮೂರು ದಿನಗಳಾದ ಮೇಲೆ ರಾಮುಸ್ವಾಮಿ ಅಂಚೆಕಚೇರಿಗೆ ಭೇಟಿ ಕೊಟ್ಟು, ತನ್ನ ಹೆಸರಿಗಾಗಲಿ ತನ್ನ ತಂದೆಯ ಹೆಸರಿಗಾಗಲಿ ಮನಿಯಾರ್ಡರು ಬಂದಿದೆಯೇ ಎಂದು, ಯಾರೂ ಇಲ್ಲದ ವೇಳೆಯಲ್ಲಿ, ಪುಟ್ಟಣ್ಣಯ್ಯನವರನ್ನು ಕೇಳತೊಡಗಿದನು. ಪ್ರತಿನಿತ್ಯವೂ 'ಇಲ್ಲ' ಎಂದು ಒಂದೇ ಉತ್ತರ. ರಾಮುಸ್ವಾಮಿಗೆ ಬೇಸರವಾಯಿತು; ನಿರಾಶೆಯಾಯಿತು.

೨

ರಾಮುಸ್ವಾಮಿ ತನ್ನ ಅಣ್ಣನಿಗೆ ಮೇಲೆ ಹೇಳಿದ ರೀತಿ ಕಾಗದ ಬರೆದು, ತನ್ನ ತಲೆಯ ಮೇಲೆ ಒಂದು ಕರ್ತವ್ಯವನ್ನು ಕೆಡವಿಕೊಂಡಿದ್ದ. ಅದೇನೆಂದರೆ, ಅಂಚೆಯ ಕಚೇರಿಗೆ ನಿತ್ಯವೂ ಒಂದು ಸಲ ಭೇಟಿಕೊಡುವುದು. ಒಂದು ದಿನವಾದರೆ ಸರಿ, ಎರಡು ದಿನವಾದರೆ ಸರಿ; ಒಂದು ವಾರವಾದರೂ ಯಾರಾದರೂ ಸಹಿಸಿಕೊಳ್ಳಬಹುದು. ಎರಡು ವಾರ ಕಾಲ ಪ್ರತಿನಿತ್ಯವೂ ಬಂದು 'ನಮ್ಮ ತಂದೆಯ ಹೆಸರಿಗೆ ಮನಿಯಾರ್ಡರು ಬಂದಿದೆಯೇ?' ಎಂದು ಕೇಳುತ್ತಿದ್ದರೆ ಯಾರಿಗೆ ತಾನೆ ಬೇಸರವಾಗದು? ಹಣಕ್ಕಾಗಿ ಕಾದು ಕಾದು ಕೇಳಿ ಕೇಳಿ ರಾಮುಸ್ವಾಮಿಗೆ ಎಷ್ಟು ಬೇಸರಾಗಿದ್ದಿತೋ ಪೋಸ್‌ಮಾಸ್ಟರ್

ಪುಟ್ಟಣ್ಣಯ್ಯನಿಗೆ ಅದರ ಇಮ್ಮಡಿಯಷ್ಟು ಬೇಸರವಾಗಿದ್ದಿತು, ರಾಮಸ್ವಾಮಿಯ ನಿತ್ಯಪ್ರಶ್ನೆಯಿಂದ.

"ಇದ್ದರೆ ನಾನೇ ತಿಳಿಸುತ್ತೀನಯ್ಯಾ. ಇದೇನಯ್ಯ, ಒಳ್ಳೆ ನಕ್ಷತ್ರಿಕನ ಹಾಗೆ ನಿತ್ಯ ಬಂದು ಕೇಳುತ್ತಿದ್ದೀಯಲ್ಲ? ನಾನೇನು ನಿನಗೆ ಸಾಲ ಕೊಡ ಬೇಕಾಗಿದೆಯೆ?" ಎಂದು ಒಂದು ದಿನ ಪುಟ್ಟಣ್ಣಯ್ಯ ರೇಗಿ ನುಡಿದ.

"ನಾನು ಬಂದು ಕೇಳದೆ ಹೋದರೆ ಅದು ಹೇಗೆ ನೀವು ತಿಳಿಸುತ್ತೀರಿ?" ರಾಮಸ್ವಾಮಿಯೂ ಸ್ವಲ್ಪ ಕೋಪದ ಧ್ವನಿಯಲ್ಲೇ ಕೇಳಿದ.

"ಅಂಚೆಯ ಆಳಿಲ್ಲವೆ? ಅವನ ಕೈಲಿ ನಿಮ್ಮ ತಂದೆಗೆ ಹೇಳಿ ಕಳಿಸು ತ್ತೀನಿ."

ರಾಮಸ್ವಾಮಿಗೆ ಒಳ್ಳೆಯ 'ಪೀಕಲಾಟ'ಕ್ಕೆ ಬಂದಿತು. ಹಾಗೆ ಮಾಡಿದರೆ, ಹಣ ತನ್ನ ತಂದೆಯ ಕೈಗೆ ಹೋಗುವುದಲ್ಲದೆ ತಾನು ಮಾಡಿರುವ ಸಂಚಿನ ವಿಚಾರವೂ ಅವರಿಗೆ ಬೇಗನೆಯೇ ಗೊತ್ತಾಗದಿರುವುದಿಲ್ಲ. ಅದರ ಪರಿಣಾಮ ತುಂಬ ಅಹಿತಕರವಾದದ್ದು. ಪುಟ್ಟಣ್ಣಯ್ಯನವರನ್ನು ತನ್ನ ಅಂತರಂಗಕ್ಕೆ ತೆಗೆದುಕೊಳ್ಳಬೇಕಾದದ್ದು ಅನಿವಾರ್ಯವಾಗಿ ತೋರಿತು ರಾಮ ಸ್ವಾಮಿಗೆ. ಈವೊತ್ತಲ್ಲ ನಾಳೆ ಹಣ ಬಂದಾಗಲಾದರೂ ತಾನೇ ರುಜುಹಾಕಿ ತೆಗೆದುಕೊಳ್ಳಬೇಕು. 'ಫಾರಮ್ಮು ಕೊಡಿ, ನಮ್ಮ ತಂದೆಯ ಕೈಲಿ ರುಜು ಹಾಕಿಸಿಕೊಂಡು ಬರುತ್ತೇನೆ' ಎಂದರೆ ಆತ ನಂಬುವನೆ? ಫಾರಮ್ಮನ್ನು ಕೈಗೆ ಕೊಟ್ಟಾನೆ? ರಾಮಸ್ವಾಮಿ ಮುಂದಿನ ಕಾರ್ಯಕ್ರಮವನ್ನು ನಿರ್ಧರಮಾಡಿ ಬಿಟ್ಟ: ಪುಟ್ಟಣ್ಣಯ್ಯನ ಕೈ ಬೆಚ್ಚಗೆಮಾಡಿ, ತನ್ನ ಉದ್ದೇಶವನ್ನು ನೆರವೇರಿಸಿ ಕೊಳ್ಳುವುದು. ಈಗಲೆ ಆತನಿಗೆ ವಿಷಯವನ್ನು ತಿಳಿಸಿ, ಆತನನ್ನು ತನ್ನ ಕಡೆ ಮಾಡಿಕೊಳ್ಳುವುದು ಲೇಸೆಂದು ರಾಮಸ್ವಾಮಿ ಬಗೆದನು.

"ಈ ವಿಷಯ ನಮ್ಮ ತಂದೆಗೆ ತಿಳಿಯಕೂಡದು" ಎಂದು ರಾಮಸ್ವಾಮಿ ಸುತ್ತಮುತ್ತ ತಿರುಗಿ ನೋಡಿ, ಹತ್ತಿರ ಯಾರೂ ಇಲ್ಲವೆಂದು ಖಚಿತಪಡಿಸಿ ಕೊಂಡು, ಬಹು ಮೆಲು ದನಿಯಲ್ಲಿ ಪುಟ್ಟಣ್ಣಯ್ಯನಿಗೆ ತಿಳಿಸಿದನು.

"ನಿಮ್ಮ ತಂದೆಗೆ ತಿಳಿಯಕೂಡದು! ಇದೇನಯ್ಯ, ನೀನು ಹೇಳು ವುದು!"

"ಹೌದು. ಹಣ ಬೇಕಾದ್ದು ನನಗೆ. ನಮ್ಮ ತಂದೆಯ ಹೆಸರಿಗೆ ಬರುತ್ತೆ ಅಷ್ಟೆ."

" ನೀನೇ ತೆಗೆದುಕೊಳ್ಳಯ್ಯ, ಬೇಡ ಅಂದವರು ಯಾರು ? ' ಮನಿ ಯಾರ್ಡರು ಫಾರಮ್ಮಿಗೆ ' ನಿಮ್ಮ ತಂದೆ ರುಜು ಹಾಕಿಬಿಟ್ಟರೆ ಸರಿ."

" ಅವರು ಹಾಕುವ ಹಾಗಿಲ್ಲ."

" ಹಾಗೆಂದರೇನಯ್ಯ ? "

" ನಿಮಗೆ ಅರ್ಥವಾಗುವುದಿಲ್ಲ. ಸ್ವಲ್ಪ ಬಿಡಿಸಿ ಹೇಳಬೇಕು ; ರಹಸ್ಯ ; ಒಳಕ್ಕೆ ಬರಲೋ ? "

" ಅದಕ್ಕೇನು, ಧಾರಾಳವಾಗಿ ಬಾರಯ್ಯ."

ಪುಟ್ಟಣ್ಣಯ್ಯ ಎದ್ದು ಬಂದು ಕಿಟಕಿಯ ಪಕ್ಕದ ಬಾಗಿಲನ್ನು ತೆರೆದನು. ರಾಮಸ್ವಾಮಿ ಹಿಂದೆಮುಂದೆ ನೋಡುತ್ತ ಒಳಕ್ಕೆ ಹೊಕ್ಕನು. ಪುಟ್ಟಣ್ಣಯ್ಯ ತನ್ನ ಕುರ್ಚಿಯ ಮೇಲೆ ಕುಳಿತನು ; ಪಕ್ಕದಲ್ಲಿಯೇ ಇದ್ದ ಸ್ಟೂಲಿನ ಮೇಲೆ ರಾಮಸ್ವಾಮಿ ಕುಳಿತನು.

" ಏನಯ್ಯ, ಅಂಥ ರಹಸ್ಯ ವಿಚಾರ ? "

" ಯಾರೂ ಇಲ್ಲ ತಾನೆ ? " ಎಂದು ರಾಮಸ್ವಾಮಿ ಸುತ್ತಮುತ್ತ ನೋಡಿದ.

" ಯಾರಯ್ಯ ಇದಾರೆ ? ಕಾಣುವುದಿಲ್ಲವೆ ? "

" ಹಾಗಲ್ಲ....ಅಂಚೆಯ ಆಳು....ಒಳಗೆ....ನಿಮ್ಮ...."

" ಅಂಚೆಯ ಆಳು ಅಂಚೆ ಕಟ್ಟುವಾಗ ಎರಡು ಸಲ ಬರುತ್ತಾನೆ. ಇನ್ನು, ಒಳಗೂ ನಾನೇ ಹೊರಗೂ ನಾನೇ. ಅವಳು ತವರುಮನೆಗೆ ಹೋಗಿದ್ದಾಳೆ. ಪರವಾ ಇಲ್ಲ, ಹೇಳಯ್ಯ."

" ನನಗೆ ಹಣ ಕೊಡದಿದ್ದರೂ ಚಿಂತೆಯಿಲ್ಲ. ನಾನು ಹೇಳಿದ್ದನ್ನ ನಮ್ಮ ತಂದೆಗಾಗಲಿ ಇನ್ನು ಯಾರಿಗೇ ಆಗಲಿ ಹೇಳಕೂಡದು."

" ಇರಲಿ, ನೋಡೋಣ. ಹೇಳು."

" ಇಲ್ಲ. ಮೊದಲು ನೀವು ಮಾತು ಕೊಡಬೇಕು."

" ಆಗಲಯ್ಯ, ಹೇಳು."

ರಾಮಸ್ವಾಮಿ ತಾನು ಮಾಡಿರುವ ಕಾರ್ಯವನ್ನೆಲ್ಲ ಪೋಸ್ಟ್‌ಮಾಸ್ಟರಿಗೆ ತಿಳಿಸಿದ. ಆದರೆ ಹಣ ತನಗೆ ಏಕೆ ಬೇಕಾಗಿದೆಯೆಂಬ ಉದ್ದೇಶವನ್ನು ಮಾತ್ರ ಹೊರಪಡಿಸಲಿಲ್ಲ.

"ನೀನು ಹೇಳಿದ್ದೆಲ್ಲ ಅರ್ಥವಾಯಿತು. ಆದರೆ ಹೀಗೆ ಮಾಡಬಹುದೇನಯ್ಯ? ಇವೊತ್ತಲ್ಲ ನಾಳೆ ನಿನ್ನ ಮೋಸಕಾರ್ಯ ಬಹಿರಂಗವಾದರೆ, ಕ್ರಿಮಿನಲ್ ಕೇಸಾಗುತ್ತದೆಯಯ್ಯಾ, ಕ್ರಿಮಿನಲ್ ಕೇಸು! ನಿನ್ನ ಜೊತೆಗೆ ನಾನೂ ವರ್ಷವೋ ಎರಡು ವರ್ಷವೋ 'ಮಾವನ ಮನೆ'ಗೆ ಹೋಗಬೇಕಾಗುತ್ತದೆ. ಕೆಲಸವಂತೂ ಹೋಗೇಹೋಗುತ್ತೆ. ಇದೆಲ್ಲಾ ಸರಿಯಲ್ಲ. ನಾನು ಮಾತು ಕೊಟ್ಟಾಯಿತು. ಯಾರಿಗೂ ಹೇಳುವುದಿಲ್ಲ. ಇನ್ನು ಈ ವಿಚಾರ ಪ್ರಸ್ತಾಪಿಸಬೇಡ—" ಎಂದು ಪುಟ್ಟಣ್ಣಯ್ಯ ಒಳ್ಳೆಯ ಮನಸ್ಸಿನಿಂದಲೇ ಉಪದೇಶ ಮಾಡಿದನು.

ಆದರೆ ರಾಮುಸ್ವಾಮಿ ಉಪದೇಶಮಾಡಿಸಿಕೊಳ್ಳುವ ಮನಸ್ಸ್ಥಿತಿಯಲ್ಲೇರಲಿಲ್ಲ. ಅಲ್ಲದೆ, ಪರಿಸ್ಥಿತಿ ಅವನ ಕೈಮೀರಿತ್ತು—ನಾಳೆಯೋ ನಾಡಿದ್ದೋ ಹಣ ಬಂದರೆ, ತನ್ನ ತಂದೆ ತೆಗೆದುಕೊಂಡು, ಅನಿರೀಕ್ಷಿತ ಹಣದ ಬರವಿನಿಂದ ಆಶ್ಚರ್ಯಗೊಂಡು ತನ್ನ ಅಣ್ಣನಿಗೆ ಕಾಗದ ಬರೆದರೆ, ಆಗಲಾದರೂ ತನ್ನ ಮೋಸ ಕೃತ್ಯ ಹೊರಪಟ್ಟೇಪಡುವುದು. 'ಹಣ ಕಳಿಸಬೇಕಾಗಿಲ್ಲ. ಬೇರೆ ಏರ್ಪಾಡು ಮಾಡಿಕೊಂಡಿದೆ' ಎಂದು ತನ್ನ ತಂದೆ ಬರೆದಂತೆಯೇ ಸುಬ್ಬಸ್ವಾಮಿಗೆ ಕಾಗದವನ್ನು ಈಗಲೇ ಬರೆದು ಹಾಕಿದರೋ? ಇತ್ತ ಕಾಗದವೂ ಹೋಗೋಣ, ಅತ್ತ ಹಣವೂ ಬರೋಣ—ಹಾಗಾದರೆ? ಹಣವನ್ನು ಹಿಂದಿರುಗಿಸಿದರಾಯಿತು. ಏನು, ಇಷ್ಟೆಲ್ಲ ಶ್ರಮವಹಿಸಿ ಬರಮಾಡಿಕೊಂಡ ಹಣವನ್ನು ಹಿಂದಿರುಗಿಸುವುದೇ? ಅದು ಸಾಧ್ಯವಿಲ್ಲ.

ಅವನ ಮನಸ್ಸನ್ನು, ಆತ್ಮವನ್ನು ಮುಸುಕಿದ್ದ ದುಷ್ಪ್ರವೃತ್ತಿಯ ಕರ್ಮೋಡದ ಮೇಲೆ ಸದ್ಬುದ್ಧಿಯ ಮಿಂಚೊಂದು ಮಿಂಚಿ ಕ್ಷಣಮಾತ್ರದಲ್ಲಿ ಮಾಯವಾಯಿತು.

'ಅದು ಸಾಧ್ಯವಿಲ್ಲ'—ಈ ನಿರ್ಧಾರವೇ ಖಚಿತವಾಯಿತು. ಹೇಗಾದರೂ ಪುಟ್ಟಣ್ಣಯ್ಯನನ್ನೇ ಒಲಿಸಿಕೊಳ್ಳಬೇಕೆಂದು ನಿಶ್ಚಯಿಸಿದನು; ಮತ್ತೆ ಅವನನ್ನು ವಿಧವಿಧದಲ್ಲಿ ಬೇಡಿದನು, ಕಾಡಿದನು; ತನ್ನ ಇಕ್ಕಟ್ಟಿನ ಸ್ಥಿತಿಯನ್ನು ವಿವರಿಸಿದನು; 'ಎಂತಿದ್ದರೂ ಗೊತ್ತಾಗುತ್ತದೆ, ಹಣ ತೆಗೆದುಕೊಂಡೇ ಗೊತ್ತಾಗಲಿ' ಎಂದನು; ಹತ್ತು ರೂಪಾಯಿನ ಲಂಚದ ಆಸೆಯನ್ನು ಮುಂದೊಡ್ಡಿದನು; ತನ್ನ ತಂದೆಯಾಗಲಿ ತನ್ನ ಅಣ್ಣನಾಗಲಿ 'ಮೊಕದ್ದಮೆ'

ಹೊಡದಂತೆ ತಾನು ಮಾಡುವುದಾಗಿ ಭರವಸೆ ಕೊಟ್ಟನು. ಈ ಯಾವ ಪ್ರಲೋಭನಕ್ಕಾಗಲಿ, ಭರವಸೆಯ ಮಾತುಗಳಿಗಾಗಲಿ ಪುಟ್ಟಣ್ಣಯ್ಯ ಮನ ಸೋಲಲಿಲ್ಲ.

ಆಗ ರಾಮಸ್ವಾಮಿ ನಿರ್ವಾಹವಿಲ್ಲದೆ ಬಾಯಿಬಿಟ್ಟನು. ತನಗೆ ಹಣ ಬೇಕಾಗಿರುವ ವಿಷಯವನ್ನು ಸ್ಪಷ್ಟಪಡಿಸಿದನು.

"....ಒಟ್ಟಿನಲ್ಲಿ ಖರ್ಚು ಹೇಗೋ ಆಗುತ್ತೆ. ನೀವು ಒಂದು ಇಪ್ಪತ್ತು ಇಪ್ಪತ್ತೈದು ತನ್ನಿ ಸಾಕು. ಎಲ್ಲ ಮಜಾ ಮಾಡಿಕೊಂಡು ಬರೋಣ" ಎಂದು ರಾಮಸ್ವಾಮಿ 'ತುರುಫು' (Trump card) ಆಡುವ ರೀತಿಯಲ್ಲಿ ಈ ಮಾತನ್ನು ಎಸೆದನು. ಆ ಮಾತಿನ ಪರಿಣಾಮ ಯಾವ ರೀತಿ ತಿರುಗುವುದೆಂದು ಅವನರಿಯನು. ಮೀನಿನ ಗಾಳ ಮೊಸಳೆಯ ಬಾಯಿಗೆ ಸಿಕ್ಕಿಕೊಂಡಂತೆ ಆಯಿತು.

ಪುಟ್ಟಣ್ಣಯ್ಯ ಒಟ್ಟಿನಲ್ಲಿ ಒಳ್ಳೆಯ ಮನುಷ್ಯನೆ. ಆದರೆ ದಾಂಪತ್ಯ ಜೀವನದಲ್ಲಿ ಅವನು ಅತೃಪ್ತ. ಅವನ ಹೆಂಡತಿ ಶಾರದಮ್ಮ ಕುರೂಪಿ ವರ್ಗಕ್ಕೇ ಸೇರಿದವಳು. ಚೆಲುವೆಯರನ್ನು ಕಂಡಾಗಲೆಲ್ಲಾ 'ಇಂಥ ಹೆಣ್ಣು ನನಗೆ ಲಭಿಸಬಾರದಾಗಿತ್ತೇ?' ಎಂದು ಅವನು ಪರಿತಪಿಸುತ್ತಿದ್ದನು. ಕೊಳಲೂರಿಗೆ ಅವನು ಪೋಸ್ಟ್‌ಮಾಸ್ಟರಾಗಿ ಬಂದಮೇಲೆ ಮೊದಲನೆಯ ಸಲ ಸೀತೆಯನ್ನು —ಪುಟ್ಟ ಹುಡುಗಿಯಾಗಿದ್ದವಳನ್ನು—ಕಂಡಾಗಲೇ ಅವಳ ಚೆಲುವನ್ನು ಮೆಚ್ಚಿಕೊಂಡಿದ್ದನು. ಅಷ್ಟೇ ಹೊರತು, ಅದನ್ನು ವ್ಯಾಮೋಹ ಎನ್ನಲಾಗದು. ಎರಡು ಮೂರು ವರ್ಷಗಳ ಹಿಂದಿನ ಮಾತು. ಸೀತೆಗೆ ಆಗ ಹತ್ತು ಹನ್ನೊಂದು ವರ್ಷವಿರಬಹುದು. 'ಒಳ್ಳೆ ಮೈನೆರೆದ ಹುಡುಗಿಯ ಹಾಗೆ ಕಾಣುತ್ತಾಳೆ, ಅಲ್ಲವೆ' ಎಂದಿದ್ದನು ಒಮ್ಮೆ, ತನ್ನ ಹೆಂಡತಿಯೊಂದಿಗೆ; 'ಅವಳ ಕೈಹಿಡಿಯುವ ಗಂಡು ಪುಣ್ಯಶಾಲಿ' ಎಂದುಕೊಂಡಿದ್ದನು ಮತ್ತೊಮ್ಮೆ, ತನ್ನಲ್ಲಿಯೆ; 'ಅವಳನ್ನೂ ನೋಡು, ನಿನ್ನನ್ನೂ ನೋಡಿಕೊ. ಏನು ಪುಣ್ಯಮಾಡಿದ್ದೆನೋ ನಿನ್ನ ಕೈಹಿಡಿಯುವುದಕ್ಕೆ' ಎಂದು ತನ್ನ ಹೆಂಡತಿಯನ್ನು ಹಂಗಿಸಿ, ಕಣ್ಣೀರು ಸುರಿಸಿದ್ದನು; 'ನಾನು ಕೆರೆಗೋ ಬಾವಿಗೋ ಮುಗುಚಿಕೊಳ್ಳುತ್ತೇನೆ. ಆಮೇಲೆ ಅವಳನ್ನೇ ಮದುವೆ ಮಾಡಿಕೊಳ್ಳಿ' ಎಂದು ಶಾರದಮ್ಮನ ಪ್ರತಿಭಟನೆಯನ್ನೂ ಕೇಳಿದ್ದನು. ಸೀತೆಗೆ ಮದುವೆಯಾದಮೇಲೆ, ತಾನೇ ಮುಂದುವರಿದು ಶಾರದೆಗೆ

ಹೇಳಿ, ಸೀತೆಯನ್ನು ಒಳಕ್ಕೆ ಬರಮಾಡಿಕೊಂಡು ತಾಂಬೂಲ ಕೊಡಿಸಿದ್ದನು. ಸೀತೆ ಹೊರಟುಹೋದಮೇಲೆ—'ನೋಡಿದೆಯಾ, ಈಗ ಸೀತೆಗೆ ಮದುವೆಯಾಗಿದೆ. ನನಗೇನೂ ಅವಳ ಮೇಲೆ ಕಣ್ಣಿಲ್ಲ. ನೀನು ನಿಶ್ಚಿಂತೆಯಾಗಿರು. ಅವಳು ಚೆನ್ನಾಗಿದಾಳೆ ಎನ್ನುವುದೇ ತಪ್ಪೆ? ನಾನು ಕುರೂಪಿಯಾಗಿದ್ದಿದ್ದರೆ, 'ನನ್ನ ಗಂಡ ಚೆನ್ನಾಗಿದ್ದಿದ್ದರೆ' ಎಂದು ನಿನಗನಿಸುತ್ತಿರಲಿಲ್ಲವೆ? ಹೋಗಲಿ ಬಿಡು, ಇನ್ನು ಅವಳ ವಿಚಾರ ಎತ್ತುವುದಿಲ್ಲ, ಸರಿಯೆ' ಎಂದು ಮಾತು ಕೊಟ್ಟಿದ್ದನು. ಅದರಂತೆಯೇ ನಡೆದುಕೊಂಡಿದ್ದನು. ಆದರೂ, ಸೀತೆ ಬಂದಾಗಲೆಲ್ಲಾ ಅವನ ಕಣ್ಣು ಸೀತೆಯನ್ನು ಕಂಡು ನಲಿಯದೆ ಇರುತ್ತಿರಲಿಲ್ಲ. ಸೀತೆ ವಿಧವೆಯಾದಮೇಲೆ ಅವಳು ಇದ್ದಕ್ಕಿದ್ದ ಹಾಗೆಯೇ ಪೋಸ್ಟಾಫೀಸಿನ ಕಡೆ ಬರುವುದು ನಿಂತುಹೋಗಿದ್ದಿತು. ಈಗ ಕೆಲವು ದಿನಗಳ ಹಿಂದೆ ಸೀತೆಯನ್ನು ದಾರಿಯಲ್ಲಿ ಕಂಡದ್ದೆ ಬಹುಕಾಲದಮೇಲೆ ಮೊದಲನೆಯ ಸಲ. ಹಣೆಯಲ್ಲಿ ಕುಂಕುಮವಿಲ್ಲ ಎನ್ನುವುದೆ ಹೊರತು, ವಿಧವೆಯ ಕೊರಗಿನ ಮುಖವಾಗಿರಲಿಲ್ಲ ಅದು. ಆಗ್ಗೆ ಈಗ್ಗೆ ಸೀತೆಯ ಚೆಲುವು ಇಮ್ಮಡಿಯಾಗಿರುವಂತೆ ಕಂಡಿದ್ದಿತು ಪುಟ್ಟಣ್ಣಯ್ಯನಿಗೆ. ಅವಳು ದೊಡ್ಡವಳಾಗಿರುವ ಸಂಗತಿಯೂ ತನ್ನ ಹೆಂಡತಿಯಿಂದ ಅವನಿಗೆ ತಿಳಿದಿದ್ದಿತು. ತನ್ನ ಹೆಂಡತಿ ಊರಲ್ಲಿಲ್ಲದಿರುವ ಸಂದರ್ಭದಲ್ಲಿ ವಿಧವೆ ಸೀತೆಯನ್ನು ಮಾರ್ಗದಲ್ಲಿ ಅವನು ಕಂಡಾಗ, ಮೊತ್ತಮೊದಲು ಅವನಲ್ಲಿ ಕಾಮಭಾವ ಕಣ್ಣಿಕ್ಕಿತು. ರಾಮಸ್ವಾಮಿ ತನ್ನ ಮೈಸೂರು ಪ್ರವಾಸದ 'ಉದ್ದೇಶ'ವನ್ನು ಹೇಳಿಯೂ ಹೇಳದಹಾಗೆ ಸೂಚಿಸಿದಾಗ ಆ ಭಾವನೆ ಕೊನರೊಡೆಯಿತು. ಕಾಸು ಖರ್ಚು ಮಾಡದೆಯೇ ತಾನು ಸುಖಪಡಬಹುದಾಗಿರುವಾಗ, ಮೈಸೂರಿಗೆ ಏಕೆ ಹೋಗಬೇಕು? ರಾಮಸ್ವಾಮಿ ತನ್ನಿಂದ ಒಂದು ಉಪಕಾರವನ್ನು ಬಯಸುತ್ತಿದ್ದಾನೆ; ತಾನು ಅವನ ಬೆಂಬಲವನ್ನು ಪ್ರತ್ಯುಪಕಾರಕ್ಕಾಗಿ ಬಯಸಿ, ತನ್ನ ಬಹುದಿನದ ಅತೃಪ್ತ ಆಸೆಯನ್ನು ಇಂದು ನೆರವೇರಿಸಿಕೊಳ್ಳಬಹುದಲ್ಲವೆ? ಸ್ವಲ್ಪ ಧೈರ್ಯ ಮಾಡಬೇಕು, ಸಾಹಸಪಡಬೇಕು? ರಾಮಸ್ವಾಮಿ ಈಗ ಧೈರ್ಯ ಮಾಡಿಲ್ಲವೆ? ಅದರ ಮುಂದೆ ತನ್ನದು ಎಷ್ಟರ ಧೈರ್ಯ, ಎಂತಹ ಸಾಹಸ? ಅಲ್ಲದೆ, ಸೀತೆ ಬೇಲಿಯ ಹೂವು. ಎಂದಿದ್ದರೂ ಸೀತೆ ಕಂಡವರ ಪಾಲು. ಅನಾಘ್ರಾತ ಪುಷ್ಪವನ್ನು ಮೊದಲ ಸಲ ಆಘ್ರಾಣಿಸಿ ನೋಡುವ ಭಾಗ್ಯ ತನ್ನದೇ ಏಕಾಗಬಾರದು?

ರಾಮುಸ್ವಾಮಿ ಆಡಿದ ಮಾತಿನ ಪರಿಣಾಮವಾಗಿ ಪುಟ್ಟಣ್ಣಯ್ಯನ ಮನಸ್ಸಿನ ಮೂಲೆಯಲ್ಲಿ ಅವಿತಿದ್ದ ದುಷ್ಟ ಜೇಡ ನೆನಪಿನ ನೂಲನ್ನು ನೂತು, ದುರಾಲೋಚನೆಯ ಬಲೆಯನ್ನು ನೆಯ್ದಿತು.

ಈ ನಡುವೆ ಯಾರೋ ' ಕಾರ್ಡು ಕವರು 'ಗಳನ್ನು ಕೊಳ್ಳಲು ಬಂದರು. ರಾಮುಸ್ವಾಮಿ ಮರೆಯಲ್ಲಿ ಕುಳಿತಿದ್ದುದರಿಂದ ಹೊರಗಿನವರಿಗೆ ಕಾಣುವಂತಿರ ಲಿಲ್ಲ. ಪುಟ್ಟಣ್ಣಯ್ಯ ಕಾರ್ಡು ಕವರಿನ ' ಒಟವಾಡೆ ' ಮಾಡಿದನು. ಬಂದಾತ, ' ಯಾರು ಒಳಗೆ ? ' ಎಂದು ಎಲ್ಲಿ ಕೇಳಿಬಿಡುವನೋ ಎಂದು ರಾಮುಸ್ವಾಮಿಯ ಆತಂಕ. ಏಕೆಂದರೆ ರಾಮುಸ್ವಾಮಿಯ ಆ ಮಾತು ಮುಗಿಯುವ ಹೊತ್ತಿಗೆ ಸರಿಯಾಗಿ ಆತ ಬಂದಿದ್ದನು. ಆತ ಹೊರಟುಹೋದಕೂಡಲೆ—

" ನೀನು ಹೇಳುತ್ತಿದ್ದದ್ದು ಏನು, ರಾಮುಸ್ವಾಮಿ ? " ಎಂದು ಪುಟ್ಟಣ್ಣಯ್ಯ ಕೇಳಿದನು.

" ಅದೇ....ಮೈಸೂರಿಗೆ ನವರಾತ್ರಿ ಕಾಲದಲ್ಲಿ ಹೋಗಿ...."

" ಅದೆಲ್ಲಾ ಎಲ್ಲಪ್ಪ ಆಗುತ್ತೆ. ಅಷ್ಟು ಹೊತ್ತಿಗೆ ನನ್ನ ಹೆಂಡತಿ ಬಂದು ಬಿಟ್ಟಿರುತ್ತಾಳೆ. ಅಲ್ಲದೆ, ರಜಾ ಸಿಕ್ಕುವುದು ಕಷ್ಟ. ಅದೆಲ್ಲಾ ಸಾಧ್ಯವಿಲ್ಲ.... ಆದರೆ...."

ಪುಟ್ಟಣ್ಣಯ್ಯನ ಧ್ವನಿಯಿಂದಲೇ ಅವನು ಸ್ವಲ್ಪ ಸುಮುಖನಾಗಿರುವು ದಾಗಿ ರಾಮುಸ್ವಾಮಿಗೆ ಭಾಸವಾಯಿತು.

" ಹಾಗಾದರೆ, ನಾನು ಮೊದಲೇ ಹೇಳಿದೆನಲ್ಲಾ, ಒಂದು ಹತ್ತು ರೂಪಾಯಿ...."

" ನನಗೆ ಹಣ-ಗಿಣ ಬೇಡವಯ್ಯ. ನಿನ್ನಿಂದ ಒಂದು ಪ್ರತ್ಯುಪಕಾರ ವಾಗಬೇಕಲ್ಲ ?...."

" ಏನು ? " ಎಂದು ರಾಮುಸ್ವಾಮಿ ಕುತೂಹಲಗೊಂಡು ಪ್ರಶ್ನಿಸಿದ.

ತನ್ನ ಬಯಕೆ ಕೈಗೂಡಲಿರುವಾಗ, ಉಪಕಾರಕ್ಕೆ ಪ್ರತಿಯಾಗಿ ಪ್ರತ್ಯುಪ ಕಾರವಾಡಲು ಸಿದ್ಧನಾಗಿರಬೇಕು ತಾನೆ ?

ಸಭ್ಯರೊಂದಿಗೆ ಅಸಭ್ಯ ವಿಚಾರಗಳನ್ನು ಪ್ರಸ್ತಾವಿಸಲು ಹಿಂದೆ ಮುಂದೆ ನೋಡಬೇಕು. ತಿಪ್ಪೆಯ ಗುಂಡಿಗೆ ಬೂದಿ ಸುರಿಯಲು ಯಾರಾದರೂ ಹಿಂದೆ ಮುಂದೆ ನೋಡುವರೆ ? ನಿರ್ಭೀತನಾಗಿ, ನಿರ್ಲಜ್ಜೆಯಿಂದ, ನಿರ್ದಾಕ್ಷಿಣ್ಯವಾಗಿ

ಪುಟ್ಟಣ್ಣಯ್ಯ ತನ್ನ ಮನದ ಕೀಲು ಒಯಕೆಯನ್ನು ರಾಮಸ್ವಾಮಿಯ ಮುಂದೆ ತೆರೆದಿಟ್ಟನು :

" ಹೇಗೂ ನನ್ನ ಹೆಂಡತಿ ಊರಿನಲ್ಲಿ ಇಲ್ಲ...."

" ಈಗ ತಾನೆ ಹೇಳಿದಿರಲ್ಲ, ಸರಿಯೆ. ನನ್ನಿಂದ ಏನಾಗಬೇಕು ? "

" ಈಗ ನಾನು ಸ್ವತಂತ್ರ. ನನ್ನ ಇಷ್ಟಬಂದಂತೆ ಇರಬಹುದು. ನಾನು ಎಲ್ಲಿಗೆ ಬೇಕಾದರೂ ಹೋಗಬಹುದು ; ಅಂದರೆ ಊರು ಬಿಟ್ಟು ಹೋಗುವುದಕ್ಕಾಗುವುದಿಲ್ಲ ಅಂತ ಇಟ್ಟುಕೊ. ನನ್ನ ಮನೆಗೆ ಯಾರು ಬೇಕಾದರೂ ಬರಬಹುದು, ಎಷ್ಟು ಹೊತ್ತು ಬೇಕಾದರೂ ಇರಬಹುದು. ತಿಳಿಯಿತೆ ? "

ರಾಮಸ್ವಾಮಿಗೂ ಕೂಡ ಪುಟ್ಟಣ್ಣಯ್ಯನ ಗುಂಭವಾದ ಮಾತಿನ ಅರ್ಥ ಮೊದಲ ಸಲಕ್ಕೆ ಆಗಲಿಲ್ಲ.

" ಅದಕ್ಕೇನು ಬಿಡಿ, ಪುಟ್ಟಣ್ಣಯ್ಯನವರೆ, ನನ್ನ ಸ್ನೇಹಿತರಿಗೆ ಹೇಳುತ್ತೇನೆ. ನಮಗೂ ಇಂಥ ಮರೆಯಾದ ತಾವು ಬೇಕಾಗಿತ್ತು. ನಿಮ್ಮ ಮನೆ ಹೆಂಗಸರು ಬರುವವರೆಗೆ ನಮ್ಮ ಕಚೇರಿಯನ್ನು ಆ ಹೊಳೆಯ ಮಂಟಪ ಬಿಟ್ಟು ಇಲ್ಲಿಯೇ ನಡಸಿದರಾಯಿತು. ಇಷ್ಟೇ ತಾನೆ. ಇದೇನು ಮಹಾ...."

ರಾಮಸ್ವಾಮಿಯ ಮಾತು ಪೂರೈಸುವುದರೊಳಗಾಗಿ ಪುಟ್ಟಣ್ಣಯ್ಯ ಗಹಗಹಿಸಿ ನಗತೊಡಗಿದನು. ನಗೆ ತಹಬಂದಿಗೆ ಬಂದಮೇಲೆ—

" ನಿನ್ನನ್ನ ಪ್ರಚಂಡ ಅಂದುಕೊಂಡಿದ್ದೆ. ನನ್ನ ಮಾತು ನಿನಗೂ ಅರ್ಥವಾಗಲಿಲ್ಲ. ನನ್ನ ಹೆಂಡತಿ ಊರಿನಲ್ಲಿ ಇಲ್ಲ, ಮನೆಗೆ ಯಾರು ಬೇಕಾದರೂ ಬರಬಹುದು, ಅಂದರೆ...."

" ಓಹೋಹೋಹೋ ! ಈಗ ಗೊತ್ತಾಯಿತು ! ಎಂಥ ಕೆಲಸವಾಯಿತು ನೋಡಿ. ಸ್ವಲ್ಪ ದಿನದ ಕೆಳಗೆ ಆಗಿದ್ದರೆ, ನಮ್ಮ ಹುಸೇನಿಗೆ ಹೇಳಿಬಿಟ್ಟಿದ್ದರೆ ದೊಂಬರ ಚೆನ್ನಿಯನ್ನು ಕರೆದುಕೊಂಡು ಬರುತ್ತಿದ್ದ...."

" ದೊಂಬರ ಚೆನ್ನಿ ! " ಪುಟ್ಟಣ್ಣಯ್ಯ ಬಾಯಿಬಿಟ್ಟ.

" ನೀವು ಅವಳನ್ನ ನೋಡಿಲ್ಲ ಅಂತ ಕಾಣುತ್ತೆ...." ಎಂದು ರಾಮಸ್ವಾಮಿ ಚೆನ್ನಿಯ ಚೆಲುವನ್ನು ತನ್ನ ಮನಸ್ತೃಪ್ತಿ ಆಗುವವರೆಗೂ ಬಣ್ಣಿಸಿ, " ಈಗ ಅವಳ ಸಂಸಾರವೆಲ್ಲ ಹಾಸನದಲ್ಲಿ ಇದೆ. ನಾನು ಒಂದು ಸಲ ಹೋಗಿ ನೋಡೋಣ ಅಂತ ಮಾಡಿಕೊಂಡಿದೇನೆ. ನೀವೂ...." ಎನ್ನುವಷ್ಟರಲ್ಲಿಯೆ—

"ಮೊದಲೆ ಹೇಳಿದೆನಲ್ಲಾ, ಊರು ಬಿಟ್ಟುಬರಲಾರೆ. ನಾವು ಇನ್ನೊಬ್ಬರ ಬೆನ್ನುಹತ್ತುವುದಕ್ಕಿಂತ ಅವರೇ ನಮ್ಮ ಮನೆಗೆ ಬಂದರೆ ಗಂಭೀರ."

"ಅದು ಸರಿ ಅನ್ನಿ. ಪೇಟೆಬೀದಿಯಲ್ಲಿ ಕಮಲಮ್ಮ ಅಂತ ಇದಾಳೆ. ಬ್ರಾಹ್ಮಣರೆ ಅಂತೆ; ಜಾತಿ ಕೆಟ್ಟವಳು. ತುಂಬ ಚೆನ್ನಾಗಿದಾಳೆ. ಆದರೆ ಹೊರಕ್ಕೆ ತಲೆಹಾಕುವುದಿಲ್ಲ. ಅಲ್ಲದೆ ಕರಿಯಣ್ಣ ಹೇಳಿದ, ತುಂಬ ದುಬಾರಿ ಯಂತೆ. ರಾಮಪ್ಪನವರೆ ಇಟ್ಟುಕೊಂಡಿದಾರೆ ಅಂತ ಅವನೇ ಹೇಳಿದ...."

"ಅಷ್ಟೆಲ್ಲ ಕಷ್ಟಪಡಬೇಕಾಗಿಲ್ಲವಯ್ಯ...."

"ಅದು ಹೇಗೆ...."

"ಒಂದು ಸಂಜೆ, ಒಂದು ತುಸು ಹೊತ್ತು.... ನಿಮ್ಮ...."

ರಾಮುಸ್ವಾಮಿಗೆ ಅರ್ಥ ಹೊಳೆದಂತಾಯಿತು. ಆದರೂ,

"ಯಾರನ್ನ ?" ಎಂದು ಕೇಳಿದ.

"ನಿಮ್ಮ.... ನಿಮ್ಮ.... ಸೀತೆಯನ್ನ...."

"ಸೀತೆಯನ್ನೆ !"

ರಾಮುಸ್ವಾಮಿ ದಂಗುಬಡಿದು ಹೋದ. ಅವನ ಎದೆ ಡವಡವನೆ ಹೊಡೆದುಕೊಳ್ಳಲಾರಂಭಿಸಿತು. ಕೋಪದಿಂದ ಮುಖ ಕೆಂಪೇರಿತು. ಹಲ್ಲು ಕಚ್ಚಿದ; ಮುಷ್ಟಿ ಬಿಗಿಹಿಡಿದ. ಕೆಲವು ಕಾಲ ಅವನು ಸೀತೆಯ ಪ್ರೀತಿಯ ಅಣ್ಣನಾದ. ಆದರೆ ಬೆವರಿನೊಂದಿಗೆ ಕೋಪವೂ ಇಳಿದಂತೆ, ಅವನು ತಾನೇ ಆದ. ತಂಗಿಯ ಮೇಲಣ ಅಭಿಮಾನ ಸ್ವಾರ್ಥದ ಕೆಸರಿನಲ್ಲಿ ಹೂತು ಹೋಯಿತು. ಇಬ್ಬರಿಗೂ ಒಂದು ಒಪ್ಪಂದವಾಯಿತು.

೩

ಪುಟ್ಟಣ್ಣಯ್ಯ ಸೀತೆಯ ಸಂದರ್ಶನದ ಪ್ರತೀಕ್ಷೆಯಲ್ಲಿ ಗಂಟೆಗಳನ್ನು ಎಣಿಸತೊಡಗಿದ. ಸಜ್ಜನರಾಗಲಿ ದುರ್ಜನರಾಗಲಿ, ತಮ್ಮ ಕನಸು ನನಸಾಗಲು ಕಾಯಲೇ ಬೇಕು. ಪುಟ್ಟಣ್ಣಯ್ಯ ಬಹು ಕಷ್ಟದಿಂದ ಕಾಲಯಾಪನೆ ಮಾಡ ತೊಡಗಿದ. ರಾಮುಸ್ವಾಮಿ ಪೋಸ್ಟಾಫೀಸಿನ ಕಡೆ ಬಂದಾಗಲೆಲ್ಲ, "ಬರಲೇ ಇಲ್ಲವಲ್ಲಯ್ಯಾ ?" ಎಂದು ಕಾಡಲು ಮೊದಲುಮಾಡಿದ. ರಾಮುಸ್ವಾಮಿಯೂ, "ನನಗೂ ಬರಲೇ ಇಲ್ಲವಯ್ಯ" ಎಂದು ನಗುತ್ತಿದ್ದನು. "ಅದಕ್ಕೆ ನಾನು

ಹೊಣೆಯೆ ? ನಿಮ್ಮ ಅಣ್ಣನಿಗೆ ಇನ್ನೊಂದು ಕಾಗದ ಬರೆಯಯ್ಯಾ" ಎಂದು ಪುಟ್ಟಣ್ಣಯ್ಯ ಸಲಹೆ ಕೊಟ್ಟನು. "ನಮ್ಮ ಮಾತಿನ ಪ್ರಕಾರ, ಹಣ ಬಂದ ಮೇಲೆ ತಾನೆ, ಎಲ್ಲ"—ಎಂದು ರಾಮಸ್ವಾಮಿ ನೆನಪು ಕೊಟ್ಟನು. "ಅದು ಸರಿಯೆ. ಕಾಗದಗೀಗದ ಹಾಕಿಸುವ ನೆಪದಲ್ಲಿ ಸ್ವಲ್ಪ ಈ ಕಡೆ ಕಳಿಸುತ್ತ ಇರಯ್ಯ. ಬಂದುಹೋಗುವುದು ಸ್ವಲ್ಪ ಅಭ್ಯಾಸವಾಗಲಿ. ನಿನ್ನ ಹಣ ಬರುವ ವರೆಗೂ ನಿನ್ನ ತಂಗಿಯನ್ನ ಮಾತನಾಡಿಸುವುದಿಲ್ಲ, ಸರಿಯೇನಯ್ಯ" ಎಂದು ಪುಟ್ಟಣ್ಣಯ್ಯ ಭರವಸೆ ಕೊಟ್ಟ.

ರಾಮಸ್ವಾಮಿಯ ದುರಾಲೋಚನೆ ಬಹು ದೂರ ಹರಿಯಿತು.

"ಮಸಲ, ನಮ್ಮ ಅಣ್ಣ ಹಣವನ್ನು ಕಳಿಸದೇನೇ ಹೋದರೋ ?"

ಕೈಗೆ ಬಂದ ತುತ್ತು ಬಾಯಿಗೆ ಇಲ್ಲದೆ ಹೋಗುವುದಲ್ಲಾ ಎನ್ನಿಸಿತು ಪುಟ್ಟಣ್ಣಯ್ಯನಿಗೆ. ಅದೂ ನಿಜವೆ. ಹಣ ಬಾರದಿದ್ದರೆ ?

"ಹಣ ಬರದಿದ್ದರೆ ನಾನೇ ಸ್ವಲ್ಪ ಕೊಡುತ್ತೇನಯ್ಯಾ."

"ನನಗೆ ಈಗ ತುಂಬಾ ತುರುತಾಗಿತ್ತು. ಒಂದು ಐವತ್ತು ಇದ್ದರೆ ಕೊಟ್ಟಿರಿ. ಹಣ ಬಂದಮೇಲೆ ಬೇಕಾದರೆ ಹಿಂತಿರುಗಿಸುತ್ತೇನೆ."

"ಐವತ್ತು ಸಾಧ್ಯವಿಲ್ಲ. ಒಂದು ಹತ್ತು ಕೊಟ್ಟಿರುತ್ತೇನೆ."

"ಹತ್ತು ಯಾವ ಮೂಲೆಗೆ ! ಒಂದು ಮೂವತ್ತಾದರೂ ಕೊಡಿ."

ಪುಟ್ಟಣ್ಣಯ್ಯ ಪ್ರತಿಯಾಡದೆ ರಾಮಸ್ವಾಮಿಯ ಕೈಗೆ ಇಪ್ಪತ್ತೈದು ರೂಪಾಯಿಗಳನ್ನು ಹಾಕಿದ. ರಾಮಸ್ವಾಮಿ ತಂಗಿಯ ಮಾನದ ಮಾರಾಟದ ಮುಂಗಡವನ್ನು ಪಡೆದ.

ಇನ್ನು ತನ್ನ ಪಾಲಿನ ಕರ್ತವ್ಯವನ್ನು ನೆರವೇರಿಸುವ ಹೊಣೆ ರಾಮಸ್ವಾಮಿಗೆ ಉಳಿಯಿತು.

"ನಮ್ಮ ತಂದೆ ನಾಳೆ ನಾಡಿದ್ದರಲ್ಲಿ ಹಾಸನಕ್ಕೆ ಹೋಗುತ್ತಾರೆ. ಅವರು ಹೊರಟಮೇಲೆ ಮುಂದಿನ ಏರ್ಪಾಡು. ಪಂಜರದ ಬಾಗಿಲು ತೆಗೆದುಕೊಂಡಿರಿ ; ಹಕ್ಕಿ ಬಂದಾಗ ಹಿಡಿಯದೆಹೋದರೆ ನನ್ನ ಹೊಣೆಯಿಲ್ಲ" ಎಂದು ರಾಮಸ್ವಾಮಿ ನಗುತ್ತ ಹಿಂದಿರುಗಿದ.

೪

ರಾಮುಸ್ವಾಮಿಯ ತಂದೆ ವೆಂಕಟಸುಬ್ಬಯ್ಯನವರು ಸಾಲ-ಸೋಲಗಳಿಗಾಗಿ ಆಸ್ತಿಯನ್ನು ಕಳೆದುಕೊಂಡ ಮೇಲೆ, 'ಪ್ಲೂಟ್‌ಲಾಯರ್' ಆಗಿದ್ದರು. ಅವರು ಕಕ್ಷಿಗಾರರನ್ನು ಕರೆದುಕೊಂಡು ತಿಂಗಳಿಗೆ ಒಂದು ಸಲ ಎರಡು ಸಲ ಹಾಸನಕ್ಕೋ, ಹೊಳೇನರಸೀಪುರಕ್ಕೋ, ಮೈಸೂರಿಗೋ, ಬೆಂಗಳೂರಿಗೋ ಹೋಗಿ ಬರುತ್ತಿದ್ದರು. ವರ್ಷಗಾಲಕ್ಕೆ ಆಗುವಷ್ಟು ದವಸ ಹಾಗೂ ಹೀಗೂ ಸಾಕಾಗಿ ಸಾಲದಂತೆ ಬರುತ್ತಿತ್ತು. ಪ್ಲೂಟಲಾಯರಿಕೆಯಿಂದ ಬರುತ್ತಿದ್ದ ವರಮಾನವೇ ಅವರ ಸ್ವಂತ ಸಂಪಾದನೆ. ಅದೂ ನಿರಕಲ್ಲ. ಹೀಗಾಗಿ, ಮನೆಯಲ್ಲಿ ಬಹು ಸುಖದ ಜೀವನವೇನೂ ಇರಲಿಲ್ಲ. ಪಾರ್ವತಮ್ಮನವರು ಬಹು ಮಿತವ್ಯಯದಿಂದ ಹೇಗೋ ಸಂಸಾರವನ್ನು ತೂಗಿಸಿಕೊಂಡು ಹೋಗುತ್ತಿದ್ದರು. ವೆಂಕಟಸುಬ್ಬಯ್ಯನವರು ಆಗಿಂದಾಗ್ಗೆ ಊರು ಬಿಟ್ಟು ಹೋಗುತ್ತಿದ್ದುದರಿಂದಲೇ ಚಿಕ್ಕಂದಿನಲ್ಲಿ ಸುಬ್ಬುಸ್ವಾಮಿ ಮತ್ತು ರಾಮುಸ್ವಾಮಿಯ ಮೇಲೆ ಅವರ ಅಂಕೆ ಬಹುಮಟ್ಟಿಗೆ ಇಲ್ಲವಾಯಿತು. ಮಕ್ಕಳು ಬೇಲಿಯ ಬಳ್ಳಿಯಂತೆ ತಮ್ಮ ಇಷ್ಟ ಬಂದಂತೆ ಬೆಳೆದುಕೊಂಡು ಬಂದಿದ್ದರು. ಗಂಡು ಮಕ್ಕಳನ್ನು ತಿದ್ದುವ ಕಾರ್ಯದಲ್ಲಿ ತಾಯಿ ತೀರ ಅಸಮರ್ಥಳಾಗಿದ್ದಳು. ಇಂದಿನ ಮಾತಲ್ಲ; ಎಂದಿನಿಂದಲೂ ತಂದೆ ಊರಿನಲ್ಲಿ ಇಲ್ಲದಿದ್ದಾಗ ರಾಮುಸ್ವಾಮಿಯ ವಯೋನುಗುಣವಾದ ಹಾವಳಿ ಹೆಚ್ಚು. ಎಷ್ಟೋ ವಿಷಯಗಳು ಅವರ ಗಮನಕ್ಕೆ ಬರುತ್ತಿರಲಿಲ್ಲ; ಕೆಲವನ್ನು ಪಾರ್ವತಮ್ಮನವರೇ ಮುಚ್ಚಿಬಿಡುತ್ತಿದ್ದರು. ಚಿಕ್ಕ ಮಕ್ಕಳನ್ನು ತಂದೆಯ ಉಗ್ರ ಕೋಪಕ್ಕೆ ಒಳಪಡಿಸುವುದು ತಾಯಿಗೆ ಇಷ್ಟವಾಗ್ತಿರಲಿಲ್ಲ. ಹುಡುಗರು ಬೆಳೆದಮೇಲೆ, 'ಅವರ ಹಣೆಯಲ್ಲಿ ಬರೆದದ್ದು. ಯಾರು ತಪ್ಪಿಸುವುದಕ್ಕಾಗುತ್ತದೆ' ಎಂದು ಸಮಾಧಾನಗೊಳ್ಳುತ್ತಿದ್ದರು. ಒಂದೊಂದು ವೇಳೆ, ಮಕ್ಕಳ ತುಂಟತನ ತಂದೆಯ ಗಮನಕ್ಕೆ ಬಂದು ಅವರು ಶಿಕ್ಷಿಸಹೋದರೆ, ತಾಯಿ ಅಡ್ಡಗಟ್ಟಿಬಿಡುತ್ತಿದ್ದಳು. ಸ್ವಲ್ಪ ದೊಡ್ಡವರಾದಮೇಲೆ, ಅಡ್ಡದಾರಿ ಹಿಡಿಯುತ್ತಿದ್ದ ಮಕ್ಕಳನ್ನು ವೆಂಕಟಸುಬ್ಬಯ್ಯನವರು ಸರಿಯಾದ ಮಾರ್ಗಕ್ಕೆ ತಿರುಗಿಸಲು ಪ್ರಯತ್ನಪಡದೆಯೂ ಇರಲಿಲ್ಲ. ಸುಬ್ಬುಸ್ವಾಮಿಯ ವಿಷಯದಲ್ಲಿ ಅವರ ಪ್ರಯತ್ನಗಳು ಸ್ವಲ್ಪಮಟ್ಟಿಗೆ ಫಲಕಾರಿಯಾಗಿದ್ದುವು. ರಾಮುಸ್ವಾಮಿ ತಂದೆಯ ಕಣ್ಣುತಪ್ಪಿಸಿ ಬಲಿತುಬಿಟ್ಟಿದ್ದ. ಅವರು ಏನೂ ಮಾಡುವಂತಿರಲಿಲ್ಲ.

'ಅವನ ಹಣೆಯ ಬರಹ. ಎತ್ತಲಾಗಾದರೂ ಹಾಳಾಗಿಹೋಗಲಿ. ಹೆತ್ತ ತಪ್ಪಿಗೆ ಎರಡು ಹೊತ್ತು ಅನ್ನ ಹಾಕುವುದು ನನ್ನ ಹೊಣೆ. ಹಾಕಲಿಲ್ಲ, ವಯಸ್ಸಿಗೆ ಬಂದ ಮಗ ತಲೆ ಮರೆಸಿಕೊಂಡು ಹೋದರೂ ಆಯಿತು; ತತ್ತ, ನನ್ನ ಪಾಲು ಅಂದರೂ ಆಯಿತು' ಎಂದು, ಪಾರ್ವತಮ್ಮನವರ ಸಿದ್ಧಾಂತಕ್ಕೆ ಅವರೂ ಬಂದಿದ್ದರು. ಅಂತೂ, 'ಸತ್ಪುತ್ರರನ್ನು ಪಡೆದ ಭಾಗ್ಯ ನಮ್ಮದಾಗಲಿಲ್ಲ' ಎಂದು ಒಮ್ಮೊಮ್ಮೆ ವೆಂಕಟಸುಬ್ಬಯ್ಯನರು ಹೆಂಡತಿಯೆದುರು ಕೊರಗುವರು. ಆಗ ಪಾರ್ವತಮ್ಮನವರು, 'ಅದು ಯಾಕೆ ಹಾಗನ್ನುತ್ತೀರಿ. ಸುಬ್ಬಸ್ವಾಮಿ ಬೆಂಗಳೂರಿನಲ್ಲಿ ದಿವ್ಯನಾಗಿ ಸಂಸಾರ ಮಾಡಿಕೊಂಡಿಲ್ಲವೆ?' ಎಂದು ಹಿರಿಯ ಮಗನ ಪರವಾಗಿ ವಾದಿಸುವರು. 'ಅವನು ಹೇಗೆ ಸಂಸಾರ ಮಾಡಿದರೆ ನಮಗೆ ಬಂದ ಭಾಗ್ಯವೇನು? ಹೆಂಡತಿಯನ್ನು ಮೆರೆಸೋದಕ್ಕೆ ಸಾಲದು ಅವನಿಗೆ ಬರುವ ಸಂಬಳ. ಈಗಾಗಲೇ ವೈಯೆಲ್ಲಾ ಸಾಲವಂತೆ. ಸ್ವಲ್ಪ ಹಣ ಕಳಿಸು ಅಂತ ಹೋದ ವರ್ಷ ಬರೆದದ್ದಕ್ಕೆ ಆದ ಮಂಗಳಾರತಿ ಕಂಡೆಯೋ ಇಲ್ಲವೋ? ಅವಳು ತಾನೇ ಏನು, ಆ ಸರೋಜ, ಬೆಂಗಳೂರಿನಲ್ಲಿ ಹುಟ್ಟಿ ಬೆಳೆದವಳಾದ ಮಾತ್ರಕ್ಕೆ ಸೂಳೆಯ ಹಾಗೆ ಮೆರೆಯಬೇಕೆ? ಆಚೆ ವರ್ಷ ಹೈಕೋರ್ಟು ಕೇಸಿಗೆ ಹೋಗಿದ್ದಾಗ ಸೊಸೆಯ ಶುಶ್ರೂಷೆಯನ್ನು ಮೂರು ದಿನ ರುಚಿ ನೋಡಿದೆನಲ್ಲ! ಅನ್ನ ಸಾರಿಗೆ ಎಸರಿಟ್ಟು ವೇಳೆ ಸ್ನಾನಕ್ಕೆ ಹೋದಳು! ಮೈಗೆ ಸೋಪು ಬೇರೆ! ಬಚ್ಚಲಿನಿಂದ ನೊರೆ ನೊರೆ ಸೋಪು ಹರಿದುಹೋದನ್ನ ನಾನೇ ನೋಡಿದೆನಲ್ಲ! ಕೆಲಸ ಇದೆ, ಊಟಕ್ಕೆ ಕಾಯಬೇಡಿ ಅಂತ ಹೇಳಿ, ಲಾಯರ ಮನೆಯಲ್ಲೆ ಊಟ ಮಾಡಿಕೊಂಡು ಇರಲಿಲ್ಲವೆ' ಎಂದು ವೆಂಕಟಸುಬ್ಬಯ್ಯನವರು ಹೇಳಿದ ಕಥೆಯನ್ನೇ ಹೆಂಡತಿಗೆ ಮತ್ತೆ ಮತ್ತೆ ಹೇಳುವರು. 'ಹೇಳಿದ್ದನ್ನೇ ಹೇಳುತ್ತಾ ಇದ್ದೀರಿ. ಈಗ ರಾಮಸ್ವಾಮಿ ವಿಚಾರ ಏನು? ಪೋಲಿ ಬಿದ್ದು ಹೋಗಿದ್ದಾನೆ ಅಂತ ಊರೇ ಆಡಿಕೊಳ್ಳುತಾ ಇದೆ. ಬುದ್ಧಿ ಹೇಳಿದರೆ ಕೇಳೋ ವಯಸ್ಸು ಮೀರಿಹೋಯಿತು. ಏನಾದರೂ ಮಾಡಿ ಒಂದು ಮದುವೆ ಮಾಡಿಬಿಟ್ಟರೆ ತಾನೇ ದಾರಿಗೆ ಬರುತಾನೆ ಅಂತ ತೋರುತ್ತೆ' ಎಂದು ಪಾರ್ವತಮ್ಮನವರು ಸಲಹೆ ನೀಡುವರು. 'ನೋಡೋಣ, ಅವನ ಹಣೆಯ ಬರಹ' ಎಂದು ವೆಂಕಟಸುಬ್ಬಯ್ಯನವರು, ಒಂದು ಚೂರು ಹೊಗೆಯಸೊಪ್ಪನ್ನು ಬಾಯಿಗೆ ಹಾಕಿಕೊಂಡು, ಮೇಲೇಳುವರು.

ಈ ಬಗೆಯ ಮಾತುಕತೆ ಗಂಡಹೆಂಡಿರಲ್ಲಿ ಆಗಾಗ್ಗೆ ನಡೆಯುತ್ತಲೇ ಇದ್ದಿತು; ಕೇವಲ ಒಂದೆರಡು ತಿಂಗಳ ಹಿಂದೆಯೂ ನಡೆದಿತ್ತು.

೫

ವೆಂಕಟಸುಬ್ಬಯ್ಯನವರು ಹಾಸನಕ್ಕೆ ಹೋಗುವರೆಂದು ರಾಮುಸ್ವಾಮಿ ಕಾಣನು. ಪುಟ್ಟಣ್ಣಯ್ಯನಿಗೆ ಸುಮ್ಮನೆ ಹಾಗೆ ಹೇಳಿದ್ದ. ಇಂಥವರಿಗೆ ಸುಳ್ಳು ಕುಲದೈವ; ಮೋಸ ಮನೆದೇವರು.

ಆದರೆ ಅವನ ತಂದೆ ಇದ್ದಕ್ಕಿದ್ದಹಾಗೆ, "ನಾನು ನಾಳೆ ಹಾಸನಕ್ಕೆ ಹೋಗಬೇಕು. ಅಲ್ಲಿ ಒಂದು ಎರಡು–ಮೂರು ದಿನದ ಕೋರ್ಟು ಕೆಲಸ ಇದೆ. ಅಟ್ಟದ ಮೇಲೆ ಹಚ್ಚಿದ ಎಲೆಯ ಪಿಂಡಿ ಇದ್ದರೆ ಎರಡು ತೆಗೆದಿಡು. ಹಾಸನಕ್ಕೆ ಬೇಕು. ಹಾಗಿಂದ ಹಾಗೆ ಮೈಸೂರಿಗೆ ಹೋದರೂ ಹೋದೇನು. ಹಿಂದಿರುಗಿ ಬರುವುದಕ್ಕೆ ಒಂದು ವಾರ ಆದರೂ ಆಗಬಹುದು. ಸಾಮಾನುಗೀಮಾನು ಎಲ್ಲ ತಂದುಹಾಕಿದೇನೆ. ಮುಖ್ಯ ರಾತ್ರಿಯವೇಳೆ ಮನೆಯ ಕಡೆ ಜೋಪಾನ. ಗಂಡು ದಿಕ್ಕು ಇಲ್ಲ ಎನ್ನುವ ಹಾಗೆ ಮಾಡಬೇಡ" ಎಂದಾಗ ರಾಮುಸ್ವಾಮಿಗೆ ಒಂದು ಕಡೆ ತುಂಬ ನಿರಾಶೆಯಾದಂತಾಯಿತು. ಏಕೆಂದರೆ, ಪುಟ್ಟಣ್ಣಯ್ಯ ಕೊಟ್ಟ ಇಪ್ಪತ್ತೈದು ರೂಪಾಯನ್ನು ಹುಸೇನಿಯೊಂದಿಗೆ ಹಾಸನದಲ್ಲಿ ವಿನಿಯೋಗಮಾಡಬೇಕೆಂದು ಅವನು ಮನಸ್ಸಿನಲ್ಲೇ ಮಂಡಿಗೆ ಮುರಿಯುತ್ತಿದ್ದನು. ಈಗ ಪಿತೃವಾಕ್ಯಪರಿಪಾಲನೆ ಮಾಡುವ ಉದ್ದೇಶದಿಂದ, ಸಾಧ್ಯವಾದರೆ ಸ್ವಂತ ಊರಿನಲ್ಲಿಯೇ ಹಣವನ್ನು ಸದ್ವಿನಿಯೋಗ ಮಾಡುವ ನಿರ್ಧಾರ ಮಾಡಿದನು.

ವೆಂಕಟಸುಬ್ಬಯ್ಯನವರು ಊರು ಬಿಟ್ಟ ಮಧ್ಯಾಹ್ನವೇ ರಾಮುಸ್ವಾಮಿ ಮಾಡಿದ ಮೊದಲನೆಯ ಕೆಲಸವೆಂದರೆ, ತನ್ನ ತಂದೆ ಬರೆದಂತೆ ತನ್ನ ಅಣ್ಣನಿಗೆ ನೆನಪಿನ ಕಾಗದ ಬರೆದದ್ದು; ಈ ಸಲವೂ ಪುಟ್ಟಣ್ಣಯ್ಯನ ಕೈಲೇ ವಿಳಾಸ ಬರೆಸಿದ. ರಾಮುಸ್ವಾಮಿಗೆ ನಿಜವಾಗಿಯೂ ಆಗಿಂದಾಗ್ಗೆ ತಲೆನೋವು ಬರುತ್ತಿದ್ದಿತು; ಬೇಕೆಂದಾಗಲಂತೂ ಖಂಡಿತವಾಗಿ ಬರುತ್ತಿದ್ದಿತು. ಸಂಜೆಯ ಮುಂದೆ ಹೊರಗಿನಿಂದ ಬಂದವನು, ಸಿಡಿಯುವ ತಲೆನೋವೆಂದು ಚಾಪೆಯ ಮೇಲೆ ಉರುಳಿಕೊಂಡನು. ಸ್ವಲ್ಪ ಕಾಫಿ ಕಾಸಿಕೊಡಬೇಕೆಂದು ತಾಯಿ

ಯನ್ನು ಕೇಳಿಕೊಂಡನು. ತಾಯಿ ಕಾಫಿ ಕಾಸಲು ಒಳಕ್ಕೆ ಹೋದಕೂಡಲೆ, ಸೀತೆಯನ್ನು ತುಂಬು ಪ್ರೀತಿಯಿಂದೆಂಬಂತೆ ನರಳುವ ದನಿಯಲ್ಲಿ ಕೂಗಿದನು:

" ಸೀತಾ, ಸ್ವಲ್ಪ ಬಾಮ್ಮ ಇಲ್ಲಿ."

" ಏನು, ರಾಮಣ್ಣ ? "

" ಒಂದು ಉಪಕಾರ ಮಾಡಬೇಕಲ್ಲಮ್ಮ ? "

" ಇದೇನು ರಾಮಣ್ಣ, ಹೊರಗಿನವರಿಗೆ ಹೇಳುವ ಹಾಗೆ ಹೇಳುತ್ತೀಯಲ್ಲ ? ಏನು ಬೇಕು, ಹೇಳು."

" ಏನೂ ಇಲ್ಲ ಕಣಮ್ಮ. ಒಂದು ಅರ್ಜೆಂಟು ಕಾಗದ ಇತ್ತು. ಯಾವುದೋ ಕೆಲಸವಂತೆ, ಅದಕ್ಕೆ ಅರ್ಜಿ. ಅಂಚೆಗೆ ಹಾಕುವುದು ಮರೆತೇ ಹೋಯಿತು. ಇವೊತ್ತೇ ಹಾಕಬೇಕು. ಸ್ವಲ್ಪ ಹಾಕಿಬಿಟ್ಟು ಬರುತೀಯಾ, ಅಮ್ಮಾ ? "

ಅಣ್ಣನಿಗೆ ಕೆಲಸ ಸಿಕ್ಕಿದರೆ ಸಂತೋಷದ ವಿಷಯವಲ್ಲವೆ ? ಹೋಗಲು ಅವಳು ಸಿದ್ಧ. ಆದರೂ,

" ಅಮ್ಮನ್ನ ಕೇಳಿಬಿಟ್ಟು ಹೋಗುತೀನಿ, ರಾಮಣ್ಣ—" ಎಂದಳು.

" ಯಾಕೆ, ಅಮ್ಮ ಬೇಡ ಅಂತಾಳೇನು ? "

" ಬೇಡ ಅನ್ನಲಾರಳು. ಆದರೂ...."

" ಬೈತಾಳೇನು ? ನಾನು ಹೇಳಿದ ಕೆಲಸ ಮಾಡಕೂಡದು ಅಂತಲೆ ? "

" ಹಾಗಲ್ಲ ರಾಮಣ್ಣ. ಹೊರಕ್ಕೇ ಹೋಗಬೇಡ ಅಂತ ಹೇಳಿದಾಳೆ...."

" ಸರಿ ಸರಿ, ಅಮ್ಮನ್ನ ಬಿಡು. ಹೊಳೆ ಬಳಿ ದೆವ್ವ ಇದೆ, ಅರಳಿಕಟ್ಟೆ ಬಳಿ ಬ್ರಹ್ಮರಾಕ್ಷಸ ಇದೆ, ಹಿತ್ತಲ ಕಡೆ ಹಾವಿನ ಕಾಟ, ಮನೆತುಂಬ ಚೇಳು. ಅಮ್ಮನ ಹೆದರಿಕೆಗೆ ಕೊನೆಮೊದಲೇ ಇಲ್ಲ...."

" ಅದಲ್ಲ, ರಾಮಣ್ಣ. ಅವೊತ್ತು ನಿನಗೆ ಕಾಫಿಗೆ ಅಂತ ಹಾಲು ತರುವುದಕ್ಕೆ ಹೋಗಿದ್ದೆ ನೋಡು, ಶಾನುಭೋಗರ ಮನೆಗೆ, ನಾನು ಒಬ್ಬಳೇ ಹೋಗಿ ಬಂದದ್ದನ್ನ ಬೀದಿಯವರೆಲ್ಲ ನೋಡಿ ಆಡಿಕೊಂಡರಂತೆ. ಇನ್ನು ಮೇಲೆ ಹಾಗೆಲ್ಲ ಒಬ್ಬಳೇ ಹೋಗಬೇಡ ಹೊರಕ್ಕೆ ಅಂತ ಹೇಳಿದಾಳೆ. ಅದಕ್ಕೋಸ್ಕರ."

" ಓಹೋ, ಹಾಗೋ. ಅದು ಸರಿ ಅನ್ನು........ಆದರೆ ಅಂಚೆ ಕಚೇರಿ ದಾರಿಯಲ್ಲಿ ಯಾರ ಮನೆಯೂ ಇಲ್ಲ, ಯಾವ ನರಪಿಳ್ಳೆಯೂ ಸುಳಿಯುವುದಿಲ್ಲ.

ಹೋದರೇನು ಬಾಧಕ ಇಲ್ಲ ಅಂತ ಇಟ್ಟುಕೋ. ಹಾಗೆ ಹೋಗಿ ಹೀಗೆ ಬಂದುಬಿಡಬಹುದು. ಯಾರಾದರೂ ಕಂಡರೆ ತಾನೆ ಆಡಿಕೊಳ್ಳೋದು? ಅಲ್ಲದೆ, ಅಪ್ಪ ಅಮ್ಮನದು ಯಾವ ಶಾಶ್ವತ? ನೀನು ಧೈರ್ಯಕಲಿತುಕೊಳ್ಳುವುದು ಯಾವಾಗ? ಬೇಡ ಬಿಡು, ಕಾಫಿ ಕುಡಿದುಕೊಂಡು ನಾನೇ ಹೋಗುತೇನೆ...."

"ಪರವಾ ಇಲ್ಲ, ರಾಮಣ್ಣ. ಅಮ್ಮನ್ನ ಕೇಳಿ ನಾನೇ ಹೋಗುತೇನೆ."

ಅಷ್ಟುಹೊತ್ತಿಗೆ ಪಾರ್ವತಮ್ಮನವರೇ ಕಾಫಿಯ ಲೋಟವನ್ನು ಹಿಡಿದು ಕೊಂಡು ಒಳಗಿನಿಂದ ಬಂದರು. ಕಾಫಿಯ ಲೋಟವನ್ನು ರಾಮಸ್ವಾಮಿಯ ಮುಂದಿಟ್ಟು—

"ಅದೇನಮ್ಮಾ? ಎಲ್ಲಿಗೆ ಹೋಗಬೇಕು?" ಎಂದರು.

"ಅಂಚೇ ಕಚೇರಿಗಂತೆ."—ಸೀತೆ ಹೇಳಿದಳು.

"ನಾಳೆ ಬೆಳಗ್ಗೆ ಆದರೆ ಆಗುವುದಿಲ್ಲವೇನೋ?"

"ಇಲ್ಲ ಕಣಮ್ಮ, ಅರ್ಜೆಂಟು ಕಾಗದ. ಈಗಲೇ ಹೋದರೆ ಇನ್ನೂ ಅಂಚೆ ಕಟ್ಟಿರೋದಿಲ್ಲ. ಇನ್ನೂ ಬೆಳಕಾಗೇ ಇದೆ. ಅವಳಿಗೆ ಹೆದರಿಕೆಯಾದರೆ ಬೇಡ. ಹಾಗೇ ನಾನೇ ಹೋಗುತೀನಿ...."

"ಏನಮ್ಮ, ಬೇಗ ಹೋಗಿಬಿಟ್ಟು ಬಂದುಬಿಡಿತೀಯೇನೆ, ತಾಯಿ?"

"ನೀನು ಹೋಗು ಅಂದರೆ ಹೋಗುತೀನಮ್ಮ."

"ಏನೋಮ್ಮ, ನನಗೆ ಇಷ್ಟವಿಲ್ಲ. ಇನ್ನೇನು ಮಾಡೋದು. ಎಷ್ಟು ದಿನ ಕಟ್ಟಿಹಾಕಿಕೊಳ್ಳೋದಕ್ಕಾಗುತ್ತೆ? ರಾಮಣ್ಣನೂ ಎಲ್ಲಾದರೂ ಕೆಲಸ ಹಿಡಿದು ಬೇರೆ ಊರಿಗೆ ಹೋದರೆ ನೀನೇ ನಮಗೆ ಗತಿ. ನೀನೇ ಗಂಡು ದಿಕ್ಕೂ ಆಗಬೇಕಲ್ಲಮ್ಮಾ. ಏನು ಮಾಡೋದು, ನಿನ್ನ ಹಣೆಯಬರಹ. ನಾವು ಪಡೆದುಕೊಂಡು ಬಂದಷ್ಟು...."

"ಅಂದ ಹಾಗೆ, ಆ ಪುಟ್ಟಣ್ಣಯ್ಯ ಹೇಳಿದರಮ್ಮ. ಅವರು 'ವೃತ್ತಾಂತ ಪತ್ರಿಕೆ' ತರಿಸುತ್ತಾರೆ. ಅದರಲ್ಲಿ ಕೆಲಸ ಖಾಲಿ ಇರೋದೆಲ್ಲಾ ಹಾಕಿರುತ್ತಾ ರಂತೆ. ಹಾಕಿದಾಗ ತಿಳಿಸುತ್ತಾರಂತೆ. ಕೆಲಸಕ್ಕೂ ಅರ್ಜಿ ಹಾಕೋಣ ಅಂತ ಮಾಡಿದೀನಿ.... ಈಗೇನು, ಸೀತೆ ಹೋಗಲೋ ಬೇಡವೋ?...."

"ಇನ್ನೇನು ಮಾಡುವುದು. ಹೋಗಿಬಿಟ್ಟು ಬಾರಮ್ಮ. ಬೇಗ ಬಂದು ಬಿಡು."

೬

ಸೀತೆ ರಾಮುಸ್ವಾಮಿ ಕೊಟ್ಟ ಕಾಗದವನ್ನು ತೆಗೆದುಕೊಂಡು ಅಂಚೆ ಕಚೇರಿಯ ಕಡೆಗೆ ಹೊರಟಳು. ಇಂಗ್ಲಿಷಿನಲ್ಲಿದ್ದ ವಿಳಾಸ—ರಾಮುಸ್ವಾಮಿಯ ಮಾತು ನಿಜವೆನ್ನಿಸುತ್ತಿತ್ತು.

ಮುಚ್ಚಂಜೆಯಾದದ್ದರಿಂದ ಎಲ್ಲರ ಮನೆಯ ಹೆಂಗಸರೂ ಮನೆಯ ಬಾಗಿಲಿನಲ್ಲಿಯೋ ಕುಳಿತೋ ನಿಂತೋ ಇದ್ದರು; ಹೆಣ್ಣುಮಕ್ಕಳು ಜಗಲಿಯ ಮೇಲೆ 'ಅಚ್ಚೆಯ ಪಂಗ'ವನ್ನೊ, ಗಜ್ಜುಗಕವಡೆಯಾಟಗಳನ್ನೊ, 'ದಚ್ಚೆಯ ಪಾರ', 'ಹರಳಗುಳಿ ಮಣೆ' ಆಟವನ್ನೊ ಆಡುತ್ತಿದ್ದರು; ಗಂಡುಮಕ್ಕಳು ಚಿಣ್ಣಿದಾಂಡು, ಗೋಲಿಯಾಟಗಳನ್ನು ಆಡುತ್ತಿದ್ದರು. ಕೆಲವರು ಗಂಡಸರು ಹೊಳೆಯಿಂದ ಬಟ್ಟೆ ಒಗೆದುಕೊಂಡು, ಸಂಧ್ಯಾವಂದನೆ ಮಾಡಿಕೊಂಡು, ಹಿಂದಿರುಗುತ್ತಿದ್ದರು. ಸೂರ್ಯ ಕಣ್ಮರೆಯಾಗಿದ್ದರೂ ಪಡುವಲ ಕಡುಗೆಂಪು ಇನ್ನೂ ಮಾಸಲು ಕೂಡ ಆಗಿರಲಿಲ್ಲ; ಚುಕ್ಕಿಗಳು ಮಾತ್ರ ಇನ್ನೂ ಇಣಿಕಿ ನೋಡುತ್ತಿರಲಿಲ್ಲ; ಹಕ್ಕಿಗಳು ಇನ್ನೂ ಅದೇ ತಾನೇ ಮರಗಿಡಗಳ ವಿಶ್ರಾಂತಿ ಸ್ಥಳವನ್ನು ಹುಡುಕಿಕೊಂಡು, 'ಇನ್ನೂ ಕತ್ತಲೆಯಾಗಿಲ್ಲ, ಇನ್ನೂ ಕೊಂಚ ಹೊತ್ತು ತಂಗಾಳಿಯಲ್ಲಿ ವಿಹರಿಸುತ್ತಿರೋಣ' ಎಂದೋ ಏನೋ, ಧೈರ್ಯ ವಾಗಿಯೆ ಹಾರಾಡುತ್ತಿದ್ದುವು. ಮುಚ್ಚಂಜೆಯ ಮೋಹಕವಾದ ಬೆಳಕು ಸೀತೆಗೂ ತುಸು ಧೈರ್ಯವನ್ನೇ ಹುಟ್ಟಿಸುತ್ತಿತ್ತು. 'ಪರವಾ ಇಲ್ಲ, ಕತ್ತಲೆ ಯಾಗುವಷ್ಟರಲ್ಲಿ ಹಿಂದಿರುಗಿಬಿಡಬಹುದು' ಎಂದುಕೊಂಡಳು ಮನಸ್ಸಿನಲ್ಲಿ. ಬಲಪಕ್ಕದಲ್ಲಿ, ಸಾಲು ಮನೆಯ ಜಗಲಿಗಳ ಮೇಲೆ ನೆರೆಹೊರೆಯವರು ನೋಡುತ್ತಿದ್ದಾರೆಂದು ಅವಳು ಬಲ್ಲಳು. ಆದರೆ ತಾಯಿಯೇ ಅಪ್ಪಣೆ ಕೊಟ್ಟಿದ್ದಾಳೆಂದು ಅವಳಿಗೆ ಧೈರ್ಯ. ಆದರೂ ಅತ್ತ ಇತ್ತ ತಿರುಗಿ ನೋಡದೆ ತಲೆ ಬಗ್ಗಿಸಿಕೊಂಡು, ಕೋಟೆಯ ಮೂಲೆಯ ತಿರುವಿನ ದಾರಿ ಹಿಡಿದು ಬೇಗ ಬೇಗನೆ ಹೆಜ್ಜೆಹಾಕುತ್ತ ನಡೆದಳು. ಆಡುವ ಮಕ್ಕಳನ್ನು ನೋಡಿ ತನ್ನ ಬಾಲ್ಯದ ನೆನಪಾಯಿತು ಸೀತೆಗೆ. ಅವಳಿಗೆ ಗೊತ್ತಿಲ್ಲದಂತೆಯೆ ಅವಳ ವಿಚಿತ್ರ ಸ್ಥಿತಿಯ ಅರಿವು ಅವಳನ್ನು ಅಣಕಿಸತೊಡಗಿತು. ಹೆಣ್ಣುಮಕ್ಕಳ ಗೋಷ್ಠಿ ಯಲ್ಲಿ ಆ ಮನೆಯ ಈ ಮನೆಯ ಮದುವೆಯಾದ ಹೆಣ್ಣುಮಕ್ಕಳು ಕೂಡ ಸಂತೋಷವಾಗಿ ಆಡುತ್ತ ಕುಳಿತಿದ್ದಾರೆ; ಅವರಿಗೆಲ್ಲ ಹನ್ನೆರಡು ಹದಿಮೂರು

ವರ್ಷಗಳಿರಬಹುದು. ತನಗೆ ಹೆಚ್ಚೆಂದರೆ ಹದಿನಾಲ್ಕಿರಬಹುದು. ಆದರೆ ತಾನು ಅವರೊಂದಿಗೆ ಕುಳಿತು ಸರಸವಾಗಿ ಆಡಹೋಗುವ ಹಾಗಿಲ್ಲ? ಏಕೆ? ಅಮ್ಮ ಬೇಡ ಅಂದಿದ್ದಾಳೆ. ಕಾರಣ? ತನಗೆ ತಿಳಿಯದು. ಅದು ಹೋಗಲಿ. ಮೊದಲೆಲ್ಲಾ ಎಲ್ಲರೂ ತನ್ನನ್ನು ಹೆಸರು ಹಿಡಿದು ಕೂಗಿ ಕರೆದು, ಮಾತನಾಡಿಸಿ, ಕೀಟಲೆಮಾಡಿ, ಹಾಸ್ಯಮಾಡಿ, ಕಳಿಸುತ್ತಿದ್ದರು. ಮದುವೆಯಾದ ಹೊಸದರಲ್ಲಿ ಕುಂಕುಮ ಇಟ್ಟು, ಹಣ್ಣಿಟ್ಟು ತಾಂಬೂಲ ಕೊಟ್ಟು ಕಳಿಸುತ್ತಿದ್ದರು 'ಹೌದು, ಹೌದು. ಅಮ್ಮ ಒಂದು ದಿನ ಹೇಳಿದ್ದಳು : ಕುಂಕುಮ ಭಾಗ್ಯ ಕಳೆದುಕೊಂಡ ಹೆಣ್ಣನ್ನು ಯಾರು ತಾನೆ ಏನು ಕೊಡುವುದಕ್ಕಾಗಿ ಮನೆಗೆ ಕರೆಯಬೇಕು? ಅವರು ಕರೆಯದೆ ಇರುವಾಗ ನಾವಾಗಿ ಏಕೆ ಯಾರ ಮನೆಗೆ ತಾನೇ ಹೋಗಬೇಕು?' ಅಂತೂ ಬಹುದಿನದಿಂದ ಮನೆಯಾಯಿತು, ತಾನಾಯಿತು. ಆವೊತ್ತು ಹಾಲು ತರುವುದಕ್ಕೆ ಹೋದದ್ದೆ ಮೊದಲು........ ಸುಬ್ಬಾಭಟ್ಟ ಏಕೆ ಹಾಗೆ ನೋಡಿ ನಕ್ಕ?.... ಪುಟ್ಟಣ್ಣಯ್ಯನವರೋ?.... ಹೌದು ಹೌದು, ಅಮ್ಮ ಹೇಳಿದ್ದಳು : ಗಂಡಸರ ಕೆಟ್ಟ ದೃಷ್ಟಿಗೆ ಬೀಳಬಾರದು ಅಂತ. ಹಾಗೆ ನೋಡಿದ ಮಾತ್ರಕ್ಕೆ ತಿಂದುಬಿಡುತ್ತಾರೆಯೆ? ನೋಡಿದರೆ ನೋಡಿಕೊಂಡರು. ತನ್ನ ಪಾಡಿಗೆ ತಾನು ತಲೆ ಬಗ್ಗಿಸಿಕೊಂಡು ಹೋದರಾಯಿತು. 'ಯಾರೂ ನನ್ನನ್ನ ಕರೆಯಬೇಕಾಗಿಲ್ಲ. ನಾನೂ ಯಾರ ಮನೆಗೂ ಕರೆಯದೆ ಹೋಗುವುದಿಲ್ಲ.'

'ಶಾರದಮ್ಮ ಊರಿಗೆ ಬಂದಿದ್ದಾರೋ ಹೇಗೋ ತಿಳಿಯದು. ಬಂದಿದ್ದು ಕೂರಿಸಿಕೊಂಡರೆ ಏನು ಮಾಡುವುದು? ಬಹುಶಃ ಬಂದಿರಲಾರರು. ಮಗುವಿಗೆ ಇನ್ನೂ ಮೂರು ತಿಂಗಳಿರಬಹುದು. ಈಗೆಲ್ಲಿ ಬರುತ್ತಾರೆ? ಇಷ್ಟರ ಮೇಲೆ ಬಂದಿದ್ದು, ಒಳಕ್ಕೆ ಕರೆದು ಕೂರಿಸಿಕೊಂಡರೆ, ಅರೆಕ್ಷಣ ಕುಳಿತಿದ್ದು ಬರುವುದು ....ಪಾಪ, ಆಗ ತಾಂಬೂಲ ಕೊಟ್ಟಿದ್ದರು. ಈಗ ಕೊಡುವುದಕ್ಕಿಲ್ಲ. ಮನಸ್ಸಿಗೆ ನೊಂದುಕೊಳ್ಳುತ್ತಾರೆ. ಹೋಗುವುದೇ ಬೇಡ........ಕರೆದು ಹೋಗದಿದ್ದರೂ ನೊಂದುಕೊಳ್ಳುತ್ತಾರೆ.'

ಸೀತೆ ಕೋಟೆಯನ್ನು ಬಿಟ್ಟು, ತಿರುವನ್ನು ತಿರುಗಿ, ಅಂಚೆ ಕಚೇರಿಯ ದಾರಿಯನ್ನು ಹಿಡಿದಳು. ಇನ್ನೇನು ಬಲಕ್ಕೆ ತಿರುಗಬೇಕು ಎನ್ನುವಷ್ಟರಲ್ಲಿ, ತಲೆಯ ಮೇಲೆ ಒಗೆದ ಬಟ್ಟೆಗಳನ್ನು ಮಡಿಸಿ ಇಟ್ಟುಕೊಂಡು, ಬೇಗಬೇಗನೆ

ಬರುತ್ತಿದ್ದ ಸುಬ್ಬಾಭಟ್ಟನನ್ನು ಸಂಧಿಸಿದಳು.

'ಅಂಚೆ ಕಚೇರಿಗೆ ಹೋಗಬೇಕು. ಸ್ವಲ್ಪ ಜೊತೆಗೆ ಬರುತ್ತೀಯ' ಎಂದು ಕೇಳಬೇಕೆನ್ನಿಸಿತು. ಸುಬ್ಬಾಭಟ್ಟ ಮೊದಲು ಸಲಿಗೆಯಿಂದಿದ್ದ ಓರಗೆ ಯುವನು ತಾನೆ. ಹೊಸಬನಲ್ಲ; ತಿಳಿಯದವನಲ್ಲ; ಸ್ವಜನವೇ. ಬರಿಯ ಮಾತಷ್ಟೇ ಏಕೆ, ಅವನ ಸಂಗಡ ಜಗಳ ಕೂಡ ಕಾದಿಲ್ಲವೆ? 'ಜೊತೆಗೆ ಬಾ' ಎಂದು ಕೇಳಿದರೆ ತಪ್ಪೇನಿಲ್ಲ. ಬಂದೂ ಬರುತ್ತಾನೆ. 'ಯಾಕೆ ಕರೆಯ ಬಾರದು?' 'ಛೇ, ಕೂಡದು. ಸುಬ್ಬಾಭಟ್ಟನ ಸಂಗಡ ಹೋಗುವುದನ್ನು ಇನ್ನು ಯಾರಾದರೂ ಕಂಡರೆ? ಕಂಡು ಅಮ್ಮನಿಗೆ ಹೇಳಿದರೆ? ಕೂಡದು; ಖಂಡಿತ ಕೂಡದು. ಹೆದರಿಕೆಯೇನು? ಯಾರು ಏನು ಬೇಕಾದರೂ ಅಂದು ಕೊಳ್ಳಲಿ, ಧೈರ್ಯವಾಗಿ ತಿರುಗಾಡುವುದನ್ನು ಕಲಿಯಬೇಕು. ರಾಮಣ್ಣ ಕೆಲಸ ಹಿಡಿದು, ಮದುವೆ ಮಾಡಿಕೊಂಡು ಹೊರಟುಹೋದರೆ, ಅಂಗಡಿಮುಂಗ ಟ್ಟೆಗೆ ನಾನು ತಾನೆ ಹೋಗಬೇಕು....'

ಸೀತೆ ಅರ್ಧ ದಾರಿ ನಡೆದಿದ್ದಳು. ಮುಂಗಡೆ ಯಾರೂ ಇರಲಿಲ್ಲ. ಯಾರಾದರೂ ಬರುತ್ತಿದ್ದವರು ಇದ್ದರೆ ಹೊಲಗದ್ದೆಯ ಕಡೆಯಿಂದ ಬರುತ್ತಿದ್ದ ರೈತರಿರಬೇಕು. ಅವರೂ ಇಲ್ಲ. 'ಓಹೋ, ಅಶ್ವತ್ಥವೃಕ್ಷ ಸಿಕ್ಕಿತು. ನಿಜ ವಾಗಿಯೂ ಬ್ರಹ್ಮರಾಕ್ಷಸ ಇರುತ್ತಾನೆಯೆ? ಆ ಕಡೆ ತಿರುಗಿ ನೋಡದಿದ್ದರೆ ಆಯಿತು....'

ಮಾರ್ಗದಲ್ಲಿ ಇನ್ನೊಬ್ಬ ಮನುಷ್ಯಪ್ರಾಣಿ ಇದ್ದರೆ ಮನಸ್ಸಿಗೆ ಎಷ್ಟೋ ನೆಮ್ಮದಿ. ಭರವಸೆಗಾಗಿ ಹಿಂತಿರುಗಿ ನೋಡಿದಳು. 'ಇದೇನು, ಸುಬ್ಬಾಭಟ್ಟ ಹಿಂಬಾಲಿಸಿ ಬರುತ್ತಿದ್ದಾನೆ! ನಾನು ಕರೆಯಲಿಲ್ಲವಲ್ಲ? ತಾನಾಗಿಯೇ ಬರು ತ್ತಿದ್ದಾನೆಯೋ, ಜೊತೆ ಇರಲಿ ಅಂತ? ನನ್ನ ಕಂಡರೆ ವಿಶ್ವಾಸ ಅವನಿಗೆ. ಇರಬೇಕು, ಜೊತೆಗೇ ಇರಬೇಕು. ಆದರೆ ಅದೇಕೆ ಇಷ್ಟು ದೂರ ಇದಾನೆ? ಹತ್ತಿರಕ್ಕೆ ಕೂಗಿ ಕರೆದೇಬಿಡಲೆ?.... ಬೇಡ.... ಕಾಗದ ಹಾಕಿಬಿಟ್ಟು ಹಿಂದಿರುಗು ವಾಗ ಜೊತೆಗೆ ಕರೆದರಾಯಿತು....'

ಇನ್ನೊಂದು ನಾಲ್ಕು ಹೆಜ್ಜೆ ನಡೆದಮೇಲೆ ಮತ್ತೆ ಹಿಂದಿರುಗಿ ನೋಡಿ ದಳು, ಮನಸ್ಸಿನ ಭರವಸೆಗಾಗಿ. ಸುಬ್ಬಾಭಟ್ಟ ಕಾಣಿಸಲಿಲ್ಲ.

'ಹ್ಞೂ, ಹೋದರೆ ಹೋದ. ನಾಚಿಪಟ್ಟುಕೊಂಡರಾಗುತ್ತೆಯೆ....

ಜೊತೆಗೆ ಬನ್ನಿ ಅಂತ ಪುಟ್ಟಣ್ಣಯ್ಯನವರನ್ನೇ ಕೇಳಿಬಿಡುವುದು.'

ಅಂಚೆ ಕಚೇರಿಯೇ ಸಿಕ್ಕಿತು. ಆಗಲೇ ಮುಸುಕು ಮುಸುಕು. ನಿರೀಕ್ಷಿಸಿದ್ದಕ್ಕಿಂತ ಬೇಗ ಕೆಂಪು ತೆಗೆದಿತ್ತು; ಕತ್ತಲೆ ಮುಸುಕುತ್ತಿತ್ತು.

ಸೀತೆ ಕಚೇರಿಯ ಜಗಲಿಯ ಮೇಲಕ್ಕೆ ಹೋದಳು; ಕಂಬಕ್ಕೆ ಕಟ್ಟಿದ್ದ ಕೆಂಪು ಪೆಟ್ಟಿಗೆಯಲ್ಲಿ ಕಾಗದ ಹಾಕುವುದರಲ್ಲಿದ್ದಳು. ಆಗ,

"ಇವೊತ್ತಿನ ಅಂಚೆ ಆಗಲೆ ಎತ್ತಿಯಾಯಿತು. ಇಲ್ಲಿ ತನ್ನಿ. ಅಂಚೆಯ ಚೀಲಕ್ಕೆ ಹಾಕಿಸುತ್ತೇನೆ" ಎಂದು ಪುಟ್ಟಣ್ಣಯ್ಯನವರ ಧ್ವನಿ ಕೇಳಿಬಂದಿತು.

ಸೀತೆ ಕಾಗದವನ್ನು ತೆಗೆದುಕೊಂಡು ಕಿಟಕಿಯ ಬಳಿ ಹೋಗಿ, ತನ್ನ ಕೈನೀಡಿದಳು.

"ಓ! ಯಾರೋ ಅಂತಿದ್ದೆ. ನೀನೇನಮ್ಮಾ—ಸೀತೆ? ತಡಿ, ಬಂದೆ" ಎಂದು ಪುಟ್ಟಣ್ಣಯ್ಯ ಮೇಲಕ್ಕೆದ್ದನು.

"ಪರವಾಯಿಲ್ಲ, ಕಾಗದ ತೆಗೆದುಕೊಳ್ಳಿ" ಎನ್ನುವಷ್ಟರಲ್ಲಿ ಪುಟ್ಟಣ್ಣಯ್ಯ ಹೊರಕ್ಕೆ ಬಂದು, ಜಗಲಿಯ ತುದಿಯಲ್ಲಿ ನಿಂತು ಅತ್ತ ಇತ್ತ ಕಣ್ಣು ಹಾಕಿ, 'ಒಳಕ್ಕೆ ಬಾ ಸೀತಾ, ಪರವಾ ಇಲ್ಲ. ನಿಮ್ಮ ರಾಮಣ್ಣ ಪೇಪರು ಕೇಳಿದ್ದ. ಕೊಡುತೀನಿ, ತೆಗೆದುಕೊಂಡು ಹೋಗುವಿಯಂತೆ" ಎಂದು ಕರೆದನು.

"ಶಾರದಮ್ಮ ಊರಲ್ಲಿ ಇಲ್ಲ ಅಂತ ಕಾಣುತ್ತೆ........" ಎಂದು ಸೀತೆ ತಡವರಿಸಿದಳು.

"ಇದಾಳೆಯೋ ಇಲ್ಲವೋ ಅನ್ನುವುದು ಒಳಕ್ಕೆ ಬಂದರೆ ಗೊತ್ತಾಗುತ್ತೆ. ಕತ್ತಲೆಯಾಯಿತು ಆಗಲೆ. ಈ ರಸ್ತೆಯಲ್ಲಿ ಹೆಂಡಕುಡುಕರ ಕಾಟ. ಲ್ಯಾಂಪಿಗೆ ದೀಪ ಹೊತ್ತಿಸಿಬಿಟ್ಟು, ಬೇಕಾದರೆ ನಾನೇ ಜೊತೆಗೆ ಬರುತ್ತೇನೆ. ಒಬ್ಬಳೇ ಯಾಕೆ ಹೋಗುತ್ತಿ?"

ಸೀತೆಗೆ ಮನಸ್ಸಿನಲ್ಲಿ ಏನೋ ಅಳುಕಾಯಿತು.

"ಇಲ್ಲ, ಕಾಗದ ತೆಗೆದುಕೊಳ್ಳಿ. ನಾನು ಬರುತ್ತೇನೆ. ಜೊತೆಗೆ ಏನೂ ಬೇಡ, ಪರವಾ ಇಲ್ಲ" ಎಂದು ಕಾಗದವನ್ನು ಕೊಡಹೋದಳು.

ಪುಟ್ಟಣ್ಣಯ್ಯ ಬಳಸಿದ ಬಲಗೈಯಿಂದ ಬಲವಾಗಿ ಬಾಯಿ ಮುಚ್ಚಿ, ಅವಳನ್ನು ಬಲಾತ್ಕಾರವಾಗಿ ಒಳಕ್ಕೆ ಕರೆದುಕೊಂಡು—ಎಳೆದುಕೊಂಡು—ಹೋದ.

ಒಳಗೆ ಕತ್ತಲೆ; ಹೊರಗೂ ಕತ್ತಲೆ.

ಕತ್ತಲೆ ಬಂದು ಬೆಳಕನ್ನು ನುಂಗಿತ್ತು.

ಎರಡು ನಿಮಿಷದಲ್ಲಿ ಮುಂಬಾಗಿಲು ಭದ್ರವಾಯಿತು; ಅಂಚೆ ಕಚೇರಿಯ ಕಿಟಕಿಯ ಬಾಗಿಲೂ ಹಾಕಿತು. ಕಚೇರಿಯ ಕೆಲಸ ಅಂದಿಗೆ ಮುಗಿದು, ಕಚೇರಿ ಮುಚ್ಚಿತು.

೭

ಸೀತೆ ಸಾಮಾನ್ಯವಾಗಿ ಮನೆ ಬಿಟ್ಟು ಹೊರಕ್ಕೆ ಬರುವುದೇ ಇಲ್ಲವೆಂದು ಸುಬ್ಬಾಭಟ್ಟ ಕೇಳಿ ಬಲ್ಲನು. ಕೆಲವು ಕಾಲದ ಹಿಂದೆ ಅವನು ಸೀತೆಯನ್ನು ಅನಿರೀಕ್ಷಿತವಾಗಿ ಬೆಳಗ್ಗಿನ ಹೊತ್ತು ಒಂಟಿಯಾಗಿ ಹೋಗುತ್ತಿದ್ದುದನ್ನು ಕಂಡೇ ಅವನಿಗೆ ಆಶ್ಚರ್ಯವಾಗಿದ್ದಿತು; ಮನದಲ್ಲಿ ಆಸೆ ಅಂಕುರಿಸಿದ್ದಿತು. ಅಂದು, ಆ ಕಡೆ, ಶಾನುಭೋಗರ ಮನೆಯ ಕಡೆ—ಹೆಚ್ಚಾಗಿ ಜನ ಓಡಾಡುವ ದಾರಿಯಲ್ಲಿ ಹೊರಟಿದ್ದಳು; ಇಂದು, ಈ ಕಡೆ, ಅಂಚೆಯ ಕಚೇರಿಯ ಕಡೆ, ಬಹುಮಟ್ಟಿಗೆ ಹೆಚ್ಚಿನ ಜನಸಂಚಾರವಿಲ್ಲದ ದಾರಿಯಲ್ಲಿ ಹೊರಟಿದ್ದಾಳೆ. ಉದ್ದೇಶವೇನೋ ಸ್ಪಷ್ಟ: ಕಾಗದ ಹಾಕಿ ಬರಲು ಹೋಗುತ್ತಿದ್ದಾಳೆ.

ಆದರೆ ಒಬ್ಬಳೇ ಹೊರಟಿದ್ದಾಳಲ್ಲ, ಅವಳ ಧೈರ್ಯವೆಷ್ಟು! ಎಷ್ಟೇ ಧೈರ್ಯವಂತೆಯಾದರೂ ಆಗಲೇ ಕತ್ತಲೆಯಾಗುತ್ತಿದೆ. ಜೊತೆಗೆ ಬರುತ್ತೇನೆ ಎಂದರೆ ಬೇಡವೆನ್ನಲಾರಳು. ಇನ್ನೇನಿಲ್ಲದಿದ್ದರೂ ಅವಳೊಂದಿಗೆ ಏಕಾಂತದಲ್ಲಿ ಎರಡು ಸವಿ ಮಾತಾಡಿ ಮನವೊಲಿಸಿಕೊಳ್ಳಬಹುದಲ್ಲ? ತಾನು ಕಾಣದ ಹೆಣ್ಣೇನಲ್ಲ. ಮಾತನಾಡಿಸಿದರೆ ಹಿಂದಿನ ಸಲಿಗೆಯಿಂದ ಮಾತನಾಡುವುದರಲ್ಲಿ ಸಂದೇಹವಿಲ್ಲ 'ಹಸೆಯ ಮೇಲೆ ಅವಳ ಕೈಹಿಡಿಯುವ ಪುಣ್ಯ ನನಗೆ ಆಗಲಿಲ್ಲ. ಯಾರೂ ಕಾಣದಿರುವಾಗ, ಅವಳ ಕೈ ಹಿಡಿದುಕೊಂಡರೆ ಬೇಡವೆನ್ನುವಳೆ? ಅಷ್ಟೇ ಸಾಕು.'

ಸುಬ್ಬಾಭಟ್ಟ ಮನೆಯ ದಾರಿಯನ್ನು ಬಿಟ್ಟು ಸೀತೆಯನ್ನು ಹಿಂಬಾಲಿಸಿದ್ದನು. ಅರಳಿಯಕಟ್ಟೆ ಸಿಕ್ಕಿದಾಗ ಅವಳಿಗಾಗಿ ಕಾದು ಅಲ್ಲಿ ಕುಳಿತನು. ಸೀತೆ ಹಿಂತಿರುಗಿ ನೋಡಿದಾಗ, ಮರದ ಬುಡದ ಮರೆಗೆ ಸರಿದು ಕುಳಿತನು.

ಆದರೆ ಸೀತೆ ಹಿಂದಿರುಗಲೇ ಇಲ್ಲ. 'ಕಾಗದ ಹಾಕುವುದಕ್ಕೆ ಇಷ್ಟು ಹೊತ್ತೆ?' ಎಂದುಕೊಂಡನು. ಪುಟ್ಟಣ್ಣಯ್ಯನವರ ಹೆಂಡತಿ ಶಾರದಮ್ಮ

ಮನೆಯಲ್ಲಿ ಇಲ್ಲ, ತಾವೇ ಬೇಯಿಸಿಕೊಂಡು ತಿನ್ನುತ್ತಿದ್ದಾರೆ ಎಂಬುದನ್ನು ಅವನು ಚೆನ್ನಾಗಿ ಬಲ್ಲನು. ಅವನ ಮನಸ್ಸಿನಲ್ಲಿ ಏನೋ ಶಂಕೆ ಮಿಂಚಿತು. ಹೋಗಿ ನೋಡಿಯೇಬಿಡೋಣವೆಂದು, ಅಂಚೆಕಚೇರಿಯ ಬಳಿಗೆ ಧಾವಿಸಿದ. ಅಲ್ಲಿ ಸೀತೆ ಇರಲಿಲ್ಲ!

ಸುಬ್ಬಾಭಟ್ಟನಿಗೆ ಸೀತೆಯ ಬಗ್ಗೆ ನಿಜವಾದ ಆತಂಕಕ್ಕೆ ಮೊದಲಾಯಿತು. ನೋಡಿದರೆ, ಕಚೇರಿಯ ಬಾಗಿಲು ಹಾಕಿದೆ; ಕಿಟಕಿಯ ಬಾಗಿಲೂ ಹಾಕಿದೆ; ಆದರೆ ಬೀಗ ಹಾಕಿಲ್ಲ. ಪುಟ್ಟಣ್ಣಯ್ಯ ಒಳಗೆ ಇದ್ದರೂ ಇರಬಹುದು. ಸೀತೆಯೂ ಒಳಗೇ ಇದ್ದಾಳೆಯೋ? 'ತನ್ನ' ಸೀತೆ ಪುಟ್ಟಣ್ಣಯ್ಯನವರ ವಶಳಾದಳೆ? ಅಥವಾ ಯಾವನಾದರೂ ದುಷ್ಟ, ಹಿಂದಿರುಗುತ್ತಿದ್ದ ಸೀತೆಯನ್ನು ಹೊಡೆದುಕೊಂಡು ಹೋಗಿರುವನೋ?

ಇಲಿ ಬೆಕ್ಕಿನ ಬಾಯಿಂದ ತಪ್ಪಿಸಿಕೊಂಡು ಹದ್ದಿನ ಪಾಲಾದರೆ ಬೆಕ್ಕಿನ ದೃಷ್ಟಿಯಲ್ಲಿ ಹದ್ದು ಕೆಟ್ಟದ್ದಾಗುವುದೇನೊ! ಸುಬ್ಬಾಭಟ್ಟನಿಗೆ ಪುಟ್ಟಣ್ಣಯ್ಯ ನೀಚನಾಗಿ ಕಂಡನು. ಸೀತೆಯನ್ನು ಸಂರಕ್ಷಿಸುವುದು ಅವನ ಕೈಮೀರಿ ಹೋಗಿತ್ತು. ಬಾಗಿಲನ್ನು ದಬದಬನೆ ಕುಟ್ಟಿ ಕುಟ್ಟಿ ಕೈ ನೋಯಿಸಿಕೊಂಡನು. ಏನು ಮಾಡುವುದಕ್ಕೂ ತೋರದೆ, ಜಗಲಿಯ ಮೇಲೆ ಕುಳಿತನು.

'ಇದೂ ಒಳ್ಳೆಯದೇ ಆಯಿತು!' ಎಂದು ಸುಬ್ಬಾಭಟ್ಟ ಮನಸ್ಸಿನಲ್ಲಿಯೇ ಹಿಗ್ಗಿದನು. ಅವನ ಕೈಗೆ ಒಂದು ಹೊಸ ಆಯುಧ ಸಿಕ್ಕಿದಂತಾಯಿತು. ಅದನ್ನು ಉಪಯೋಗಿಸಿ, ಸೀತೆಯನ್ನು ಎಂದಾದರೂ ಬೆದರಿಸಿ, ಅವಳನ್ನು ತನ್ನವಳನ್ನಾಗಿ ಮಾಡಿಕೊಳ್ಳಬಹುದೆಂದು ಭಾವಿಸಿದ.

ಒಳ್ಳೆಯ ಮನಸ್ಸಿನ ದಾರಿ ಯಾವಾಗಲೂ ಒಂದೇ; ಕೆಟ್ಟ ಮನಸ್ಸಿನ ದಾರಿ ಕವಲು ಕವಲು.

ಕವಲೊಡೆದ ಭಟ್ಟನ ಬಗೆ ಇಂತು ಬಳ್ಳಿವರಿಯುತ್ತಿದ್ದಾಗ, ಇದ್ದಕ್ಕಿದ್ದಂತೆ ಕಡಿದುಹೋಯಿತು; ಕಣಕಣನೆ ಚಿಲಕ ತೆಗೆದು, ಕಿರಕಿರನೆ ಬಾಗಿಲು ತೆಗೆದಂತಾಯಿತು. ಮೊದಲು ಸೀತೆ ಹೊರಕ್ಕೆ ಬಂದಳು; ಹಿಂದಿನಿಂದ, ಲಾಂದ್ರ ಹಿಡಿದುಕೊಂಡು, ಪುಟ್ಟಣ್ಣಯ್ಯ ಬಂದರು. ಲಾಂದ್ರದ ಬೆಳಕಿನಲ್ಲಿ ಸೀತೆಯ ಬಾಚಿದ್ದ ಕೂದಲು ಕೆದರಿದ್ದಂತೆ ಕಂಡಿತು; ಮುಖದಲ್ಲಿ ದುಃಖ ಕೋಪ ಎರಡೂ ಬೆರತಂತೆ ಸೂಚಿತವಾಗುತ್ತಿತ್ತು; ಸೀರೆಯ ನೆರಿ ಅಸ್ತವ್ಯಸ್ತ

ವಾಗಿ, ಅಂಚು ಏರುಪೇರಾಗಿತ್ತು. ತಾನು ಕಂಡ ಸೀತೆಯ ಸ್ಥಿತಿ ಖಂಡಿತ ಹೀಗಿರಲಿಲ್ಲ. ಭಟ್ಟನ ಕೋಪ ನೆತ್ತಿಗೇರಿತು. ಬಹುಮಟ್ಟಿಗೆ ಈರ್ಷ್ಯೆಯ ಕೋಪವೇ ಆದರೂ, ಆ ಕ್ಷಣದಲ್ಲಿ ಅದು ಸಾತ್ವಿಕತೆಯ ಬಣ್ಣವನ್ನು ತಳೆದಿದ್ದಿತು.

" ಏನು, ಪುಟ್ಟಣ್ಣಯ್ಯನವರೇ ? " ಎಂದು ಸುಬ್ಬಾಭಟ್ಟ ಗುಡುಗಿದನು.

" ನಾನು ಕೇಳುವುದೂ ಅದೇ: ಇದೇನು ಸುಬ್ಬಾಭಟ್ಟರೆ ಇದು, ಇಲ್ಲಿಯವರೆಗೆ ತಮ್ಮ ಸವಾರಿ ? "

" ಸೀತಮ್ಮ ಇಲ್ಲಿರುವಾಗಲೇ ನಾನು ತಮ್ಮನ್ನ ಭೇಟಿಮಾಡಿಕೊಂಡು ಹೋಗೋಣ ಅಂತ ಬಂದೆ."

" ಸೀತಮ್ಮ ಇಲ್ಲಿ ಬಂದಿದಾಳೆ ಅಂತ ತಮಗೆ ಹೇಗೆ ಗೊತ್ತಾಯಿತೋ ? "

" ಅವಳು ಎಲ್ಲಿಗೆ ಹೋಗುತ್ತಾಳೆ ಅಂತ ಅವಳ ಹಿಂದೆಯೇ ಬಂದೆನಲ್ಲ."

" ಸೀತಮ್ಮ ಹೇಳಿದ್ದೂ ಅದೇ : 'ಸುಬ್ಬಾಭಟ್ಟ ಹಿಂಬಾಲಿಸಿ ಬರುತ್ತಾ ಇದಾನೆ. ನನಗೆ ಭಯವಾಗುತ್ತೆ, ಸ್ವಲ್ಪ ಜೊತೆಗೆ ಬನ್ನಿ' ಅಂತ ಕರೆದಳು. ಇವೊತ್ತಿನ ಲೆಕ್ಕ ಖೈದುಮಾಡಿ ಬರುತ್ತೇನಮ್ಮ, ಭಯಪಡಬೇಡ ಅಂತ ಹೇಳಿ ಕೂರಿಸಿಕೊಂಡೆ, ಅಲ್ಲವೇನಮ್ಮಾ ? "

ಏನೆನ್ನಬೇಕೋ ಸೀತೆಗೆ ತೋರಲಿಲ್ಲ. ಇಷ್ಟವಿಲ್ಲದೆ, ಹೌದು ಎನ್ನುವಂತೆ ತಲೆ ತೂಗಿದಳು.

" ನೋಡಿದಿರಾ ಭಟ್ಟರೆ, ಅವಳೂ ಹೇಳುತ್ತಾಳೆ, ನೀವೂ ಒಪ್ಪಿಕೊಳ್ಳುತ್ತೀರಿ. ಸುಮ್ಮನೆ ಬಾಯಿ ಮುಚ್ಚಿಕೊಂಡು ಹೋಗಿ. ಅವಳ ಅಣ್ಣನಿಗೆ ಈ ಸುದ್ದಿ ತಿಳಿದರೆ, ನಿಮ್ಮ ತಲೆ ಒಡೆದುಬಿಡುತ್ತಾನೆ. ನೀವು ಹೆಚ್ಚು ಜೋರು ಮಾಡಿದರೆ, ನಿಮ್ಮ ತಂದೆಗೂ ಪುಕಾರು ಹೋಗುತ್ತೆ. ಸೀತಮ್ಮನೇ ಸಾಕ್ಷಿ—" ಎಂದು ಪುಟ್ಟಣ್ಣಯ್ಯ ಗೆಲವಿನ ದನಿಯಲ್ಲಿ ದರ್ಪದಿಂದ ಹೇಳಿದನು.

ಸುಬ್ಬಾಭಟ್ಟ ಸೋಲನ್ನೊಪ್ಪಿಕೊಳ್ಳದೆ ವಿಧಿಯಿರಲಿಲ್ಲ. ಆದರೆ ಪ್ರಕಟವಾಗಿ ಒಪ್ಪಿಕೊಳ್ಳಲಿಲ್ಲ. " ಇರಲಿ ಪುಟ್ಟಣ್ಣಯ್ಯನವರೇ, ನನಗೂ ಸಮಯ ಸಿಕ್ಕದೆ ಇರುವುದಿಲ್ಲ, ಆಗ ನೋಡಿಕೊಳ್ಳುತ್ತೇನೆ " ಎಂದು ಕೋಪವನ್ನು ನುಂಗಿಕೊಂಡು, ಹಲ್ಲು ಮಸೆಯುತ್ತ ಮನೆಯ ದಾರಿ ಹಿಡಿದನು.

ಅಷ್ಟುಹೊತ್ತಿಗೆ ಪುಟ್ಟಣ್ಣಯ್ಯ ಬಾಗಿಲಿಗೆ ಬೀಗಹಾಕಿಕೊಂಡು, ಕೈಲಿ ಲಾಂದ್ರ ಹಿಡಿದುಕೊಂಡು, ಸೀತೆಯನ್ನೂ ಕರೆದುಕೊಂಡು ಅವಳನ್ನು ಮನೆಗೆ

ಬಿಡಲು ಹೊರಟನು. ಪುಟ್ಟಣ್ಣಯ್ಯ ಸೀತೆಯನ್ನು ಮುಂದುಮಾಡಿಕೊಂಡು ನಡೆಯುತ್ತಿದ್ದನು. ಇಬ್ಬರೂ ಮೌನವಾಗಿದ್ದರು.

ಕೋಟೆಯ ಮೂಲೆ ದಾರಿಯನ್ನು ಪ್ರವೇಶಿಸಿದಾಗ, ರಾಮುಸ್ವಾಮಿ ಎದುರುಗೊಂಡನು.

ಮನೆಯ ಸಾಲಿನ ಮುಂದೆ ಪುಟ್ಟಣ್ಣಯ್ಯ ಬೇಕೆಂದೇ ಗಟ್ಟಿಯಾಗಿ— "ಸಂಜೆಯ ಹೊತ್ತಿನಲ್ಲಿ ಹೆಣ್ಣುಮಕ್ಕಳನ್ನ ದೂರದ ಪೋಸ್ಟಾಫೀಸಿಗೆ ಕಳಿಸುವುದೇನಪ್ಪಾ, ರಾಮುಸ್ವಾಮಿ? ಸೀತಮ್ಮ ಭಯ ಅಂತ ಕುಳಿತುಬಿಟ್ಟಳು. ನೀವೂ ಯಾರಾದರೂ ಬರುತ್ತೀರಿ ಅಂತ ನನಗೂ ಕಾದು ಕಾದು ಸಾಕಾಯಿತು. ಕೊನೆಗೆ ನಾನೇ ಕರೆದುಕೊಂಡು ಹೊರಟುಬಂದೆ. ಈಗ ಹೊರಟಿದ್ದೀ, ಮಹಾರಾಯ" ಎಂದು ರಾಮುಸ್ವಾಮಿಯನ್ನು ಆಕ್ಷೇಪಿಸಿದನು.

ಮನೆಯನ್ನು ತಲಪಿದ ಕೂಡಲೆ, ಸೀತೆ ತಾಯಿಯನ್ನು ತಬ್ಬಿಕೊಂಡು ಬಿಕ್ಕಿಬಿಕ್ಕಿ ಅಳತೊಡಗಿದಳು. ಪುಟ್ಟಣ್ಣಯ್ಯ ತಾನು ಮಾಡಿದ 'ಉಪಕಾರ'ವನ್ನು ವಿವರಿಸಿದನು. "ನಾನು ರಾಮುಸ್ವಾಮಿಗೆ ಆಗಲೇ ಬಡಕೊಂಡೆನಪ್ಪ. ಯಾಕೋ ಇಷ್ಟು ಹೊತ್ತಾದರೂ ಬರಲಿಲ್ಲ, ನೋಡಿಕೊಂಡು ಬಾರೋ ಅಂತ. ತಲೆನೋವು ಅಂತ ಗೊಣಗಿದ. ಅವನಿಗೆ ನಿತ್ಯ ತಲೆನೋವು. ಕರ್ಮ, ಪಾಪ ನೀವು ಕರಕೊಂಡು ಬರಬೇಕಾಯಿತು ತುಂಬ ಉಪಕಾರವಾಯಿತಪ್ಪ, ಏನೂ ತಿಳಿದುಕೊಳ್ಳಬೇಡಿ" ಎಂದು ಅಂಗಲಾಚಿಕೊಂಡರು ಪಾರ್ವತಮ್ಮ.

ಪುಟ್ಟಣ್ಣಯ್ಯ ಪಾರ್ವತಮ್ಮನವರಿಗೆ ಕೆಲವು ಉಪಚಾರದ ಮಾತುಗಳನ್ನಾಡಿದನು. ಆತ ಹೊರಟಾಗ—"ಇನ್ನೂ ಎಷ್ಟು ದಿನವಾಗುತ್ತೋ, ಶಾರದಮ್ಮ ಬರುವುದು?" ಎಂದು ಕೇಳಿದರು ಪಾರ್ವತಮ್ಮ. "ಇನ್ನೂ ಮೂರನೆಯ ತಿಂಗಳು. ಐದನೆಯ ತಿಂಗಳಲ್ಲಿ ಬರುತ್ತಾಳೆ ಅಂತ ಕಾಣುತ್ತೆ" ಎಂದು ಪುಟ್ಟಣ್ಣಯ್ಯ ಉತ್ತರಿಸಲು, "ಇದೇ ಚೊಚ್ಚಲು. ಸಿಧಾನವಾಗಿ ಬರಲೇಳಿ" ಎಂದರು ಪಾರ್ವತಮ್ಮ. ಪುಟ್ಟಣ್ಣಯ್ಯ ಮನೆ ಬಿಟ್ಟು ಹೊರಟನು.

೮

ಸೀತೆ ತನ್ನ ತಾಯಿಯನ್ನು ತಬ್ಬಿಕೊಂಡು ಬಿಕ್ಕಿಬಿಕ್ಕಿ ಅಳುತ್ತಲೇ ಇದ್ದಳು. "ಏನಾಯಿತೆ, ತಾಯಿ?" ಎಂದು ಪಾರ್ವತಮ್ಮನವರು ಎಷ್ಟು

ಬಗೆಯಲ್ಲಿ, ಬಿಡಿಸಿ ಬಿಡಿಸಿ, ಮುದ್ದಿಸಿ ಮುದ್ದಿಸಿ ಕೇಳಿದರೂ ಅವಳು ಬಾಯಿ ಬಿಡಲೊಲ್ಲಳು. ಎಲ್ಲ ಪ್ರಶ್ನೆಗೂ ಅಳುವೇ ಉತ್ತರ; ಕಂಬನಿಯೇ ವಿವರಣೆ.

ಸೀತೆ ಸರಿಯಾಗಿ ಊಟವನ್ನೇ ಮಾಡಲಿಲ್ಲ. ತಾಯಿಯ ಬಲವಂತಕ್ಕೆ ಎರಡು ತುತ್ತು ಮಜ್ಜಿಗೆ ಅನ್ನ ತಿಂದು ಮೇಲಕ್ಕೆದ್ದಳು. ರಾಮಸ್ವಾಮಿ ತಲೆ ನೋವು ನಿಂತಿದೆಯೆಂದು ಹೇಳಿ, ಚೆನ್ನಾಗಿಯೇ ಊಟ ಮಾಡಿದ.

ಊಟ ಮಾಡುವಾಗ ಸಹಜವಾಗಿ ಅಂದಿನ ಸಂಜೆಯ ಪ್ರಕರಣದ ಬಗ್ಗೆ ಮಾತು ಎದ್ದಿತು. ಅವರು ಊರಲ್ಲಿ ಇಲ್ಲದಿರುವಾಗ ಹೀಗಾಯಿತಲ್ಲಾ ಎಂದು ಪಾರ್ವತಮ್ಮನವರು ಪೇಚಾಡಿದರು. ರಾಮಸ್ವಾಮಿ, ಪುಟ್ಟಣ್ಣಯ್ಯನಿಂದ ತುಂಬ ಉಪಕಾರವಾಗಿದೆ ಎನ್ನುವ ರೀತಿಯಲ್ಲಿಯೇ ವಿಷಯವನ್ನು ಪುನರಾವರ್ತನೆಮಾಡಿ ವಿವರಿಸಿದ; ಹೀಗೆ ಆಗುತ್ತದೆ ಎಂದು ತನಗೆ ಕಂಡಿದ್ದರೆ ಸೀತೆಯನ್ನು ತಾನು ಕಳಿಸುತ್ತಲೇ ಇರಲಿಲ್ಲವೆಂದು ಹೇಳಿ, ತನ್ನದೇನೂ ತಪ್ಪಿಲ್ಲ ಎನ್ನುವ ರೀತಿಯಲ್ಲಿ ಮಾತನಾಡಿದ.

ಪಾರ್ವತಮ್ಮನವರ ಊಟದ ಶಾಸ್ತ್ರವೂ ಆದಮೇಲೆ, ದೀಪವನ್ನು ಆರಿಸಿ ಎಲ್ಲರೂ ಮಲಗಿದರು.

ಸೀತೆಗೆ ಬಡಪಟ್ಟಿಗೆ ನಿದ್ದೆಯೇ ಹತ್ತಲಿಲ್ಲ. ಅವಳಿಗೆ ನಿದ್ದೆ ಹತ್ತದೆ, ಪಾರ್ವತಮ್ಮನವರಿಗೂ ಅರೆ ಎಚ್ಚರ. ಅವರಿಗೆ ಹೇಗೋ ನಿದ್ದೆ ಹತ್ತಿತು. ಸೀತೆಯ ತಲೆಯಲ್ಲಿ ನಾನಾ ಬಗೆಯ ಆಲೋಚನೆಗಳು, ನಾನಾ ಬಗೆಯ ಅಹಿತಕರ ಸ್ಮೃತಿ ಚಿತ್ರಗಳು, ಒಂದಕ್ಕೊಂದು ತೆಕ್ಕೆಹಾಕಿಕೊಂಡು ದೆವ್ವಗುಣಿತ ಕುಣಿಯತೊಡಗಿದವು. ಅತ್ತರೆ ಅವಳಿಗೆ ಎಷ್ಟೋ ಸಮಾಧಾನ; ತಲೆಯ ಭಾರ ಕಡಮೆಯಾದಂತಾಗುತ್ತಿತ್ತು. ದುಗುಡ, ಕಟ್ಟೆಗೆ ನೀರು ತುಂಬುವಂತೆ ತುಂಬಿಕೊಂಡಾಗ ಅಳುವಿನಲ್ಲೋ ಮಾತಿನಲ್ಲೋ ಅದು ಕೋಡಿ ಹರಿಯಲೇಬೇಕಷ್ಟೆ. ಬಾಯಿಬಿಡಲಾರದವಳಾಗಿ, ಅಳುವುದೇ ಅವಳಿಗೆ ಅನಿವಾರ್ಯವಾಯಿತು. ತಾಯಿಗೆ ನಿದ್ದೆ ಬಂದಮೇಲೂ ಅಳುತ್ತಲೇ ಇದ್ದಳು. ರಾಮಸ್ವಾಮಿ ಮುಸುಕು ಹಾಕಿಕೊಂಡು ಮಲಗಿದ್ದ.

ಅತ್ತು ಅತ್ತೇ ಬಳಲಿಕೆಯಾಗಿ ಸೀತೆಗೆ ಯಾವಾಗಲೋ ನಿದ್ದೆಹತ್ತಿತು.

ನಟ್ಟಿರುಳೂ ಕಳೆದು, ಸುಮಾರು ಎರಡು ಗಂಟೆಯ ವೇಳೆ. ಸೀತೆ ಇದ್ದಕ್ಕಿದ್ದಂತೆ ಕಿಟಾರನೆ ಕಿರಿಚಿಕೊಂಡಳು. ಪಾರ್ವತಮ್ಮನವರಿಗೆ ಎಚ್ಚರ

ವಾಯಿತು. "ಏನಮ್ಮಾ, ಏನಾಯಿತೆ ಸೀತಾ?" ಎಂದು ಕೇಳಿದರು; ಉತ್ತರವಿಲ್ಲ. ದೀಪದ ಕಡ್ಡಿ ಪೊಟ್ಟಣ ಹುಡುಕಿದರು, ಕೂಡಲೆ ಸಿಕ್ಕಲಿಲ್ಲ. ಸೀತೆ ಹುಚ್ಚುಹುಚ್ಚಾಗಿ ಮಾತನಾಡತೊಡಗಿದಳು :

"ಅಮ್ಮಾ ಅಮ್ಮಾ—ಅಪ್ಪಾ ಅಪ್ಪಾ!....ಬಿಡಿ ಪುಟ್ಟಣ್ಣಯ್ಯನವರೆ, ಬಿಡಿ ಪುಟ್ಟಣ್ಣಯ್ಯನವರೇ....ಅಯ್ಯೋ ಅಯ್ಯೋ....ರಾಮಣ್ಣಾ, ಸುಬ್ಬೂ.... ಸುಬ್ಬೂ....ಬನ್ನಿ....ಬನ್ನಿ....ಬಿಡಿಸಿ, ಬಿಡಿಸಿ....ಕೆಟ್ಟೆ ಕೆಟ್ಟೆ....ಥೂ ಥೂ ಥೂ ಥೂ ಥೂ....ಶಾರದಮ್ಮಾ, ಶಾರದಮ್ಮಾ....ಸಾಕು ಸಾಕು....ದಮ್ಮಯ್ಯಾ, ಬಿಡಿ ಬಿಡಿ...."

ಪಾರ್ವತಮ್ಮನವರಿಗೆ ಒಂದೂ ಅರ್ಥವಾಗಲಿಲ್ಲ; ಮತ್ತೆ ಹುಡುಕಿ ನೋಡಿದರು, ದೀಪದ ಕಡ್ಡಿಪೊಟ್ಟಣ ಸಿಕ್ಕಿತು; ದೀಪ ಹೊತ್ತಿಸಿದರು. ಸೀತೆಯ ಪಕ್ಕದಲ್ಲಿ ಬಂದು ಕುಳಿತರು.

"ರಾಮುಸ್ವಾಮಿ, ಲೋ ರಾಮುಸ್ವಾಮಿ" ಎಂದು ಕೂಗಿ, ಅವನ ಹಾಸಿಗೆಯ ಕಡೆ ತಿರುಗಿದರು. ರಾಮುಸ್ವಾಮಿ ಎಲ್ಲಿದ್ದಾನೆ? ಅವನ ಹಾಸಿಗೆ ಖಾಲಿಯಾಗಿತ್ತು.

"ಏನಾಗುತ್ತೆಯೇ, ತಾಯಿ? ಯಾಕಮ್ಮ ಕಿರಿಚಿಕೊಂಡೆ" ಎಂದು ಪಾರ್ವತಮ್ಮನವರು ಸೀತೆಯನ್ನು ಉರುಳಿಸಿ ಕೇಳಿದರು. ಆಗ ಸೀತೆ ಬಿರ ಬಿರನೆ ಕಣ್ಣುಬಿಟ್ಟಳು; ಅವಳ ಮೈಯೆಲ್ಲ ಬೆವತುಹೋಗಿತ್ತು.

"ಅಮ್ಮಾ, ಬಾಯಾರಿಕೆ" ಎಂದಳು ಸೀತೆ.

ಪಾರ್ವತಮ್ಮನವರು ನೀರು ತಂದುಕೊಟ್ಟರು. ಅವಳದನ್ನು ಗಟಗಟನೆ ಕುಡಿದಳು.

"ಯಾಕಮ್ಮ ಎಬ್ಬಿಸಿದೆ? ಚೆನ್ನಾಗಿ ನಿದ್ದೆ ಬಂದಿತ್ತು."

"ಯಾಕೂ ಇಲ್ಲ, ಮಲಗಿಕೊಳ್ಳಮ್ಮ."

ರಾಮುಸ್ವಾಮಿಗಾಗಿ ಕಾದು ಕುಳಿತರು; ಅವನು ಬರಲೇ ಇಲ್ಲ.

"ಅವನು ಎಲ್ಲಿ ಹೋದನೋ, ಯಾವ ದೆವ್ವ ಬಲ್ಲದು? ಹಿತ್ತಿಲ ಕಡೆಗೆ ಹೋಗಿದಾನೋ ಏನೋ" ಎಂದು ಗೊಣಗುತ್ತ, ದೀಪ ಆರಿಸಿ ಮಲಗಿ ಕೊಂಡರು. ಬೀದಿಯ ಬಾಗಿಲ ಚಿಲಕ ಹಾಕಿದೆಯೆ ಇಲ್ಲವೆ ಪರೀಕ್ಷಿಸಬೇಕೆಂಬ ಆಲೋಚನೆ ಅವರ ಸರಳ ಬುದ್ಧಿಗೆ ಹೊಳೆಯಲಿಲ್ಲ.

ಬೆಳಗಾಗ್ಗೆ ಪಾರ್ವತಮ್ಮನವರು ಎದ್ದಾಗ ರಾಮುಸ್ವಾಮಿ ಮುಸುಕು ಹಾಕಿಕೊಂಡು ಗೊರಕೆ ಹೊಡೆಯುತ್ತಿದ್ದನು. ಸೀತೆಯೂ ಮಲಗಿ ನಿದ್ರಿಸುತ್ತಿದ್ದಳು. ಹೊದ್ದಿಕೆ ಮಾತ್ರ ಜಾರಿಹೋಗಿ ಅಸ್ತವ್ಯಸ್ತವಾಗಿ ಅವಳ ಕಾಲ ಬಳಿ ಬಿದ್ದಿತ್ತು. ಹೊದಿಕೆಯನ್ನು ಮಗಳಿಗೆ ಸರಿಯಾಗಿ ಹೊದಿಸಿ, "ಮಲಗಿರಲಿ ಪಾಪ. ಮೈಗೆ ಸರಿಯಿಲ್ಲ ಅಂತ ಕಾಣುತ್ತೆ" ಎಂದುಕೊಂಡರು. ನೀರೊಲೆ ಹೊತ್ತಿಸಲು ಎದ್ದು ಹೋದರು.

ರಾಮುಸ್ವಾಮಿ ಕಾಫಿ ಕುಡಿದು, ಎಂದಿನಂತೆ ಹೊರಕ್ಕೆ ಹೊರಟ. "ಅವರೂ ಊರಿನಲ್ಲಿ ಇಲ್ಲ, ಸ್ವಲ್ಪ ಹೊತ್ತಿಗೊತ್ತಿಗೆ ಊಟಕ್ಕೆ ಬಾಪ್ಪ" ಎಂದು ತಾಯಿ ಮಗನನ್ನು ಎಚ್ಚರಿಸಿದರು. ರಾಮುಸ್ವಾಮಿ—"ಆಗಲಮ್ಮ. ಆದರೂ ನನಗೋಸ್ಕರ ನೀನೇನು ಕಾಯಬೇಡ" ಎಂದು ಮನೆ ಬಿಟ್ಟನು.

ಸೀತೆ ಆಗತಾನೇ ಎದ್ದು ಕಾಫಿ ಕುಡಿಯುತ್ತಿದ್ದಳು; ಅರ್ಧ ಕುಡಿದು, "ಯಾಕೋ ಸೇರೊಲ್ಲ ಅಮ್ಮ" ಎಂದು ಹಾಗೆಯೇ ಇಟ್ಟುಬಿಟ್ಟಳು. ಪಾರ್ವತಮ್ಮನವರು ಮಗಳ ಹಣೆ ಮುಟ್ಟಿ ನೋಡಿದರು; ಬೆಚ್ಚಗಿತ್ತು. "ಜ್ವರ ಬಂದಿರುವ ಹಾಗಿದೆ, ತಾಯಿ" ಎಂದರು. "ತುಂಬ ತಲೆನೋವು ಕಣಮ್ಮ" ಎಂದಳು ಸೀತೆ. "ಹಾಗಾದರೆ, ಸ್ವಲ್ಪ ಸೇರಿಸಿಕೊಂಡು ಕಾಫಿ ಕುಡಿಯಬಾರದೆ? ತಲೆನೋವಿಗೆ ಒಳ್ಳೆಯದು—" ಎಂದು ಪಾರ್ವತಮ್ಮನವರು ಅಂತಃಕರಣಪೂರ್ವಕವಾಗಿ ನುಡಿದರು. ತಮ್ಮ ಪಾಲಿನ ಕಾಫಿಗೆಂದು ಉಳಿಸಿ ಇರಿಸಿಕೊಂಡಿದ್ದ ಕಾಫಿಯ ಕಷಾಯದಲ್ಲಿ ಸ್ವಲ್ಪವನ್ನು ಸೀತೆಯ ಕಾಫಿಗೆ ಸೇರಿಸಿ, ಅದನ್ನು ಮತ್ತೆ ಬಿಸಿಮಾಡಿ, "ಸ್ವಲ್ಪ ಸೇರಿಸಿಕೊಂಡು ಕುಡಿಯಮ್ಮ" ಎಂದು ಅವಳ ಮುಂದಿಟ್ಟರು. ತಾಯಿಯ ಬಲವಂತಕ್ಕೆ ಕಾಫಿಯನ್ನು ಕುಡಿಯತೊಡಗಿದಳು. ಆಗ ಪಾರ್ವತಮ್ಮನವರು ಮೃದುವಾಗಿ ಕೇಳಿದರು:

"ಅಮ್ಮಾ, ಸೀತು, ಅದು ಯಾಕೆ ತಾಯಿ ರಾತ್ರಿ ಹಾಗೆ ಕಿರಿಚಿಕೊಂಡು ಏನೇನೋ ಮಾತನಾಡಿದೆಯಲ್ಲೆ?"

"ಕಿರಿಚಿಕೊಂಡೆನೆ?"

"ಹೌದು ತಾಯಿ, ಕಿರಿಚಿಕೊಂಡೆ. ಪುಟ್ಟಣ್ಣಯ್ಯ, ಅವರ ಹೆಂಡತಿ, ರಾಮುಸ್ವಾಮಿ, ಸುಬ್ಬುಸ್ವಾಮಿ ಎಲ್ಲರನ್ನೂ ಕೂಗಿಕೊಂಡೆಯಲ್ಲಮ್ಮ, ಯಾಕೆ? ಏನು ದಿಗಿಲಾಯಿತೆ ತಾಯಿ, ಹೇಳು."

"ಹಾಗೆ ಕೂಗಿಕೊಂಡೆನೆ, ನನಗೆ ಗೊತ್ತೇ ಇಲ್ಲವಲ್ಲ?"

ಸೀತೆ ಕಿರಿಚಿಕೊಂಡದ್ದಾಗಲಿ ಬಡಬಡಿಸಿದ್ದಾಗಲಿ ಒಂದೂ ಅವಳಿಗೆ ಗೊತ್ತಿಲ್ಲ. ಹಿಂದಿನ ಸಂಜೆಯ ಭೀಕರ ಘಟನೆ ಅವಳ ನಿದ್ರೆಯಲ್ಲಿ ಸ್ವಪ್ನರೂಪದಲ್ಲಿ ಪುನರಾವೃತ್ತಿಯಾಗಿತ್ತು. ಅವಳ ಮನಸ್ಸಿನಲ್ಲಿ ದಿಗಿಲು, ನಿಸ್ಸಹಾಯತೆ, ಅಪಮಾನದ ಭಾವ, ತನಗಾದ ಅನಿಷ್ಟ ಅನುಭವವನ್ನು ತಾಯಿಗೇ ಆದರೂ ಹೇಳಿಕೊಳ್ಳಬೇಕೆ ಬಿಡಬೇಕೆ ಎಂಬ ಮನಸ್ಸಿನ ಇಬ್ಬಗೆ—ಈ ಎಲ್ಲವೂ ಅವಳ ಮನಸ್ಸಿನಲ್ಲಿ ಬಲವಾಗಿ ಒಳನಟ್ಟು, ಇಮ್ಮಡಿ ಮುಮ್ಮಡಿ ಘೋರತೆಯಿಂದ ಸ್ವಪ್ನಸರ್ಪವಾಗಿ ಅವಳ ಅಂತರಂಗವನ್ನು ಭೇದಿಸಿಕೊಂಡು ಹೊರಬಂದಿತ್ತು. ಆದರೂ ಅದರ ಅರಿವು, ನೆನಪು ಅವಳಿಗೆ ಇರಲಿಲ್ಲ. ತಾಯಿ ಹೇಳಿದಾಗಲೇ ಗೊತ್ತು.

ಆದರೆ ತಾಯ ಮಾತಿನಿಂದ ಹಿಂದಿನ ಸಂಜೆಯ ಪ್ರಕರಣದ ಅನಿಷ್ಟ ಸ್ಮರಣೆಯುಂಟಾಯಿತು. ಬಗೆಯ ಬಿರುಕು ಹೆಚ್ಚು ಅಗಲವಾಯಿತು, ಹೆಚ್ಚು ಆಳವಾಯಿತು. ಮತ್ತೆ ಬಿಕ್ಕಿಬಿಕ್ಕಿ ಅಳತೊಡಗಿದಳು.

"ಯಾಕಮ್ಮ ಸುಮ್ಮನೆ ಹಾಗೆ ಅಳುತ್ತಿ? ಏನಾಗುತ್ತೆ ಅಂತ ಹೇಳಬಾರದೆ?"

'ಹೇಳಿಬಿಡಲೆ? ಈಗ ನನಗೆ ಮಾತ್ರ ದುಃಖ. ಹೇಳಿದರೆ ಅಮ್ಮನಿಗೂ ದುಃಖ. ಅವಳ ಹೊಟ್ಟೆ ಉರಿದುಹೋಗುತ್ತೆ. ಇಂದಲ್ಲ ನಾಳೆ ತಾನಾಗಿ ಗೊತ್ತಾದರೋ? ಹೇಳುವವರು ಯಾರು? ನಾನು ಹೇಳಿಕೊಳ್ಳದೆಹೋದರೆ ಹೇಗೆ ಗೊತ್ತಾಗುತ್ತೆ? ಥೂ, ಅಸಹ್ಯ. ಏನೂ ಅಂತ ಹೇಳಿಕೊಳ್ಳಲಿ? ಇಲ್ಲ ಇಲ್ಲ, ಬಂದದ್ದೆಲ್ಲ ಅನುಭವಿಸಿಬಿಡುತ್ತೇನೆ. ಹೇಳಿಕೊಳ್ಳುವುದಿಲ್ಲ, ಖಂಡಿತ ಇಲ್ಲ.'

"ಬಾಯಿಬಿಡದೆ ಇದ್ದರೆ ನನಗೆ ಹೇಗೆ ಗೊತ್ತಾಗುತ್ತೆಯೆ ತಾಯಿ? ನಿನ್ನೆ ಸಂಜೆ ಅಂಚೇಕಚೇರಿಗೆ ಹೋಗುತ್ತ ದಾರಿಯಲ್ಲಿ ಅರಳಿಮರದ ಕೆಳಗೆ ಹೋದಾಗ ಏನಾದರೂ ಕಂಡಿತೆ, ಅಮ್ಮ?"

"ಏನೂ ಇಲ್ಲ, ಅಮ್ಮ. ಅಂಥಾದ್ದೇನೂ ಇಲ್ಲ. ಒಬ್ಬಳೇ ಅಂತ ದಿಗಿಲೇನೋ ಆಯಿತು. ಆದರೆ ಏನೂ ಕಾಣಲಿಲ್ಲ. ಆಗ ಇನ್ನೂ ಅಷ್ಟು ಕತ್ತಲೆ ಆಗಿರಲಿಲ್ಲ...."

"ಹಾಗಾದರೆ ಸುಮ್ಮನೆ ಯಾಕೆ ಅಳುತ್ತೀ? ರಾತ್ರಿ ಬೇರೆ ಹಾಗೆ ಕಿರಿಚಿಕೊಂಡೆ?...."

"ನಿನ್ನೆ ರಾತ್ರಿಯಿಂದಲೂ ಹೊಟ್ಟೇಲಿ ಏನೋ ಸಂಕಟವಾಗುತ್ತ ಇದೆ, ಅಮ್ಮ. ಏನೂ ಅಂತ ಹೇಳೋಕೇ ತಿಳಿಯೋದಿಲ್ಲ. ಅಳು ಬಂದುಬಿಡುತ್ತೆ, ನಾನೇನು ಮಾಡಲಿ? ಇನ್ನು ಮೇಲೆ ಅಳೋದಿಲ್ಲ...."

"ಹೋಗಲಿ, ಸುಮ್ಮನೆ ಮಲಗಿಕೋ ಇವೊತ್ತು ಒಂದು ದಿನ. ಎದ್ದು ಓಡಾಡಬೇಡ. ಎಲ್ಲೋ ಪಿತ್ತಸಂಕಟ ಅಂತ ಕಾಣುತ್ತೆ. ರಾಮುಸ್ವಾಮಿ ಬರುತ್ತಲೂ, ಸುಬ್ರಮಣ್ಯಪಂಡಿತರ ಮನೆಗೆ ಹೇಳಿಕಳಿಸಿ ಏನಾದರೂ ಔಷಧಿ ತರಿಸಿ ಕೊಡೋಣ."

"ಪಂಡಿತರ ಔಷಧಿ ಬೇಡ ಕಣಮ್ಮ. ತುಂಬ ಪಥ್ಯ ಹೇಳಿಬಿಡುತ್ತಾರೆ. ಆಸ್ಪತ್ರೆ ಔಷಧೀನೇ ತರಿಸಿಕೊಡು."

"ಹಾಗೇ ಆಗಲಮ್ಮ. ಅವನು ಬಂದ ಕಾಲಕ್ಕೆ ತಾನೆ? ಅವನನ್ನ ನೆಚ್ಚಿಕೊಂಡರೆ ಯಾವ ಕೆಲಸವೂ ಆಗುವುದಿಲ್ಲ. ಅವರೂ ಊರಿನಲ್ಲಿ ಇಲ್ಲ. ಹೋಗಲಿ ಬಿಡು, ಇವೊತ್ತು ನೋಡಿಕೊಂಡು ನಾಳೆ ಔಷಧಿ ತರಿಸಿದರಾಯಿತು. ಸ್ವಲ್ಪ ದೊಡ್ಡಿಪತ್ರೆ ತಂಬುಳಿ ಮಾಡಿಬಿಡುತ್ತೇನೆ. ಪಿತ್ತಕ್ಕೆ ಒಳ್ಳೇದು. ಹ್ಞೂ, ಇನ್ನು ಹೋಗಿ ಮಲಗಿಕೋ" ಎಂದು ಪಾರ್ವತಮ್ಮನವರು ಮಡಿಗಾಗಿ ನೀರು ಮನೆಗೆ ಹೋದರು.

ಸೀತೆ ಬಂದು ಹಾಸಿಗೆಯ ಮೇಲೆ ಮಲಗಿದಳು. ಮಾನಸಿಕ ಆಘಾತದಿಂದ, ಜ್ವರ ತಲೆನೋವು ಎರಡೂ ಪ್ರಾಪ್ತವಾಗಿದ್ದುವು; ತುಂಬ ಬಳಲಿ ಹೋಗಿದ್ದಳು.

# ಪ್ರಕರಣ ನಾಲ್ಕು

## ೧

ಹಾಸನದಲ್ಲಿ ಡಿಸ್ಟ್ರಿಕ್ಟ್ ಕಚೇರಿಯಲ್ಲಿ ಗುಮಾಸ್ತರಾಗಿದ್ದ ಶಾಮಣ್ಣನವರಿಗೂ ವೆಂಕಟಸುಬ್ಬಯ್ಯನವರಿಗೂ ಹತ್ತಿರದ ಬಾಂಧವ್ಯವೇನಿರಲಿಲ್ಲ. ಇಬ್ಬರೂ ಒಂದೇ ಮನೆಗೆ ಹೆಣ್ಣು ಕೊಟ್ಟದ್ದುದೆಷ್ಟೋ ಅಷ್ಟೆ. ಇಬ್ಬರೂ ಅಳಿಯಂದಿರನ್ನು ಕಳೆದು ಕೊಂಡು ದುರದೃಷ್ಟಶಾಲಿಗಳೆನಿಸಿ, ಅವರಿಬ್ಬರಲ್ಲಿಯೂ ಲೋಕರೂಢಿಯ ನಂಟ ತನಕ್ಕಿಂತ ಹೆಚ್ಚಿನ ಒಂದು ಬಗೆಯ ಅಂತಃಕರಣದ ಬಾಂಧವ್ಯ ಬೆಳೆದು ಬಂದಿದ್ದಿತು. ಶಾಮಣ್ಣನವರು ಕೊಳಲೂರಿಗೆ ಯಾವಾಗಲೂ ಬಂದಿರಲಿಲ್ಲ; ಬರಬೇಕಾದ ಪ್ರಕೃತವೂ ಇರಲಿಲ್ಲ. ಆಗಿಂದಾಗ್ಗೆ ವೆಂಕಟಸುಬ್ಬಯ್ಯನವರು ಮಾತ್ರ ಹಾಸನಕ್ಕೆ ಹೋಗಬೇಕಾಗಿ ಬರುತ್ತಿದ್ದಿತು. ಹೋದಾಗಲೆಲ್ಲ ಶಾಮಣ್ಣ ನವರ ಮನೆಯಲ್ಲಿಯೇ ಇಳಿದುಕೊಳ್ಳುತ್ತಿದ್ದರು. ಶಾಮಣ್ಣನವರು ಬಡವರು, ಅವರದ್ದು ತುಂಬಿದ ಸಂಸಾರ, ಅವರಿಗೆ ಭಾರವಾಗಬಾರದು ಎಂದು ವೆಂಕಟ ಸುಬ್ಬಯ್ಯನವರ ಮನಸ್ಸು. ಹೋದಾಗಲೆಲ್ಲ ನಮ್ಮ ತೋಟದ್ದು, ನಮ್ಮೂರಿನ ಸಂತೆಯದು, ನಮ್ಮ ಕಕ್ಷಿಗಾರರು ತಂದುಕೊಟ್ಟದ್ದು ಎಂದು ಹೇಳಿ ಬೂದು ಗುಂಬಳಕಾಯಿ, ಸಕ್ಕರೆಗುಂಬಳಕಾಯಿ, ಬಾಳೆಯಕಾಯಿಯ ಗೊನೆ, ಹಲಸಿನ ಹಣ್ಣು, ಮಾವಿನ ಹಣ್ಣು, ಹುಣಿಸೆಹಣ್ಣು, ಬೆಲ್ಲ, ಕೊಬ್ಬರಿ ಗಿಟಕು, ಅಡಿಕೆ, ಯಾಲಕ್ಕಿ, ಮೆಣಸು—ಹೀಗೆ ಯಾವ ಯಾವ ಕಾಲಗಳಲ್ಲಿ ಯಾವ ಯಾವದು ತಮಗೆ ಸುಲಭವಾಗಿ ದೊರೆಯುವುದೋ ಅದನ್ನು ತೆಗೆದುಕೊಂಡು ಶಾಮಣ್ಣ ನವರ ಮನೆಗೆ ಹಾಕಿಬಿಡುತ್ತಿದ್ದರು. ಏನು ಕೊಡಲಿ ಏನು ಬಿಡಲಿ, ಸಾಧ್ಯ ವಾದಷ್ಟು—ನಾಲ್ಕೊ ಆರೊ ಎಂಟೊ—ಒಣಗಿಸಿದ ಮುತ್ತಗದ ಎಲೆಯ ಪಿಂಡಿ ಗಳನ್ನು ಸರಬರಾಯಿ ಮಾಡಿಬಿಡುತ್ತಿದ್ದರು. ಎರಡು ಮೂರು ಪಿಂಡಿಗಳಷ್ಟು ಹಚ್ಚಿದ ಎಲೆಯೇ ಇರುತ್ತಿದ್ದಿತು. ಪಾರ್ವತಮ್ಮನವರು ಬೇಸರವಿಲ್ಲದೆ ಎಲೆ ಹಚ್ಚುತ್ತಿದ್ದರು; ಈಚೆಗೆ ಸೀತೆಯೂ ಈ ಕೆಲಸದಲ್ಲಿ ನೆರವಾಗುತ್ತಿದ್ದಳು. ಹೀಗೆ ಆಗಾಗ್ಗೆ ತಮ್ಮ ಮನೆಗೆ ಸಾಮಗ್ರಿ ಬಂದು ಬೀಳುವುದನ್ನು ಕಂಡು ನರಸಮ್ಮನವರ ಹಿಗ್ಗು ಹೇಳಿತೀರದು; ವೆಂಕಟಸುಬ್ಬಯ್ಯನವರು ತಮ್ಮಮೇಲೆ

ಏನೋ ಉಪಕಾರದ ಭಾರವನ್ನು ಹೊರಿಸುತ್ತಿರುವರೆಂದು ಶಾಮಣ್ಣನವರ ಭಾವನೆ.

ಈ ಸಲ ವೆಂಕಟಸುಬ್ಬಯ್ಯನವರು ಒಂದು ಬುಟ್ಟಿಯ ತುಂಬ ಐವತ್ತು ಮಾವಿನ ಹಣ್ಣು, ಎರಡು ಪಿಂಡಿ ಹಚ್ಚಿದ ಮುತ್ತುಗದ ಎಲೆ ತೆಗೆದುಕೊಂಡು ಹೋಗಿದ್ದರು. ಮಾವಿನ ಹಣ್ಣು ಕಂಡ ಕೂಡಲೆ ಒಂಬತ್ತು ವರ್ಷದ ವೆಂಕಟ ರಾಮುವಿಗೆ ಹಿಡಿಸಲಾರದ ಹಿಗ್ಗು : " ಮಾವಯ್ಯ ಬಂದ್ರು, ಮಾವಿನ ಹಣ್ಣು ತಂದ್ರು " ಎಂದು ಕುಣಿದಾಡತೊಡಗಿದನು. ನರಸಮ್ಮನವರು ಬಾಣಂತಿಯ ಚಿಕ್ಕ ಮನೆಯಿಂದಲೇ, " ಏನು ಮಾಡೋದಪ್ಪ. ನಮಗೆ ಲಭ್ಯವಿಲ್ಲ. ಅವರ ಮನೆಯಲ್ಲಿ ಒಂದು ಹೆಣ್ಣು ಇದ್ದಿದ್ದರೆ, ಮಾವನ ಹೆಣ್ಣೇ ತಂದುಕೊಡುತ್ತಿದ್ದರು " ಎಂದು ನಕ್ಕು ನುಡಿದರು.

" ನಮ್ಮ ಮನೆಯಲ್ಲೇ ಇದೆಯಲ್ಲಮ್ಮ, ಹೆಣ್ಣುಮಗು " ಎಂದ ವೆಂಕಟ ರಾಮು.

" ಸುಮ್ಮನೆ ಬಾಯಿ ಮುಚ್ಕೋ, ಹರಟೆಮಲ್ಲ " ಎಂದು ನರಸಮ್ಮನವರು ಹುಸಿಕೋಪ ತೋರಿ, ಗದರಿಸಿಕೊಂಡರು.

ವೆಂಕಟಸುಬ್ಬಯ್ಯನವರು ಶಾಮಣ್ಣನವರ ಮನೆಯಲ್ಲಿ ಎಲ್ಲರೊಂದಿಗೂ ಬಹು ಸಲಿಗೆಯಿಂದ ವರ್ತಿಸುತ್ತಿದ್ದರು. ನರಸಮ್ಮನವರೂ ಅವರೊಂದಿಗೆ ಸಂಕೋಚವಿಲ್ಲದೆ ಮಾತಾಡುತ್ತಿದ್ದರು. ಶಾಮಣ್ಣನವರು ಅದೇ ತಾನೆ ಊಟ ಮಾಡಿಕೊಂಡು ಕಚೇರಿಗೆ ಹೋಗಿದ್ದರು.

" ನಿಮ್ಮ ಮನೆಯಲ್ಲಿ ಇದ್ದರೆ ನಿನಗೆ ಏನು ಬಂದಹಾಗಾಯಿತೋ ? ನಿನಗೆ ಕಣೋ, ನಿನಗೆ " ಎಂದು ವೆಂಕಟಸುಬ್ಬಯ್ಯನವರು ವೆಂಕಟರಾಮುವಿನ ಕೆನ್ನೆಯನ್ನು ಮೃದುವಾಗಿ ಹಿಂಡಿದರು. " ನಮ್ಮ ಸುಬ್ಬಸ್ವಾಮಿಗೆ ಒಂದು ಹೆಣ್ಣಾದರೆ ಕೊಡಿಸುತ್ತೇನೆ ಕಣೋ, ಹೆದರಬೇಡ " ಎಂದು ಬುಟ್ಟಿ ಬಿಚ್ಚಿ, ಒಂದು ಮಾವಿನ ಹಣ್ಣನ್ನು ತೆಗೆದು ವೆಂಕಟರಾಮುವಿನ ಕೈಗೆ ಕೊಟ್ಟು, ಅವನನ್ನು ಅನಾಮತ್ತು ಎತ್ತಿಕೊಂಡರು.

" ಅವನನ್ನೇನು ಎತ್ತಿಕೊಳ್ಳುತ್ತೀರಿ, ಎಂಟು ವರ್ಷದ ಕೊಂಟೀಕೋಣ ನನ್ನ. ಕೆಳಕ್ಕಿಳಿಸಿ " ಎಂದರು ನರಸಮ್ಮ ನಗುತ್ತ.

" ಇಳಿಸಿ, ಮಾವಯ್ಯ. ಹಣ್ಣು ತಿನ್ನಬೇಕು " ಎಂದು ವೆಂಕಟರಾಮು

ಕೊಡವಿಕೊಂಡು ಇಳಿದು, ಓಡಿಹೋದ.

"ಗೌರೀ, ಬಾರಮ್ಮ. ವೆಂಕಟಸುಬ್ಬಯ್ಯನವರು ಬಂದವರು ನಿಂತೇ ಇದ್ದಾರೆ. ಚಾಪೆ ಹಾಸಮ್ಮ" ಎಂದು ನರಸಮ್ಮನವರು ಮಗಳನ್ನು ಕೂಗಿ ಕರೆದರು.

ಗೌರಿ ತೇವದ ಕೈಯನ್ನು ಸೀರೆಯ ನೆರಿಗೆಗೆ ಒರಸಿಕೊಳ್ಳುತ್ತ, "ಮಾವಯ್ಯ ಬಂದದ್ದು ನನಗೆ ಆಗಲೇ ಗೊತ್ತಾಯಿತು. ಒಲೆ ಹೊತ್ತಿಸುತ್ತ ಇದ್ದೆ—" ಎಂದು ಮುಗುಳು ನಗೆಯನ್ನು ತುಳುಕುತ್ತ ಚಾಪೆ ಹಾಸಿದಳು; "ಕುಳಿತುಕೊಳ್ಳಿ, ಮಾವಯ್ಯ" ಎಂದು ಉಪಚಾರ ಹೇಳಿದಳು. ತಾನು ಹೋಗಿ ತಾಯಿಯ ಕೋಣೆಯ ಬಾಗಿಲಲ್ಲಿ ನಿಂತಳು.

"ಗೌರಮ್ಮ, ಅನ್ನಗಿನ್ನ ಮತ್ತೆ ಮಾಡುವ ಗೋಜಿಗೆ ಹೋಗಬೇಡ. ನಾನು ಬೆಳಗ್ಗೆ ಸ್ನಾನಮಾಡಿ ಪಟ್ಟಾಗಿ ರಾಗಿಯ ರೊಟ್ಟಿ ಹೊಡೆದುಬಂದಿದ್ದೇನೆ. ದಾರಿಯಲ್ಲಿ ಸೌತೆಯಕಾಯಿ ತಿಂದಿದ್ದೇನೆ. ಏನೂ ತೊಂದರೆ ತೆಗೆದುಕೊಳ್ಳ ಬೇಡಮ್ಮ" ಎಂದು ಅಂತಃಕರಣದಿಂದ ನುಡಿದರು ವೆಂಕಟಸುಬ್ಬಯ್ಯ.

"ನೀವು ಕೈಕಾಲು ತೊಳೆದುಕೊಂಡು ಊಟಕ್ಕೇಳಿ. ನಿಮ್ಮ ಊಟ ಆಗುವ ಹೊತ್ತಿಗೆ ಅವಳಿಗೆ ಅರೆಪಾವಕ್ಕಿ ಅನ್ನ ಆಗಿಹೋಗುತ್ತೆ, ಅದೆಷ್ಟು ಹೊತ್ತು. ಮಾಧ್ಯಾಹ್ನೀಕಕ್ಕೆ ನೀರಿಡಮ್ಮಾ" ಎಂದರು ನರಸಮ್ಮ.

"ನಡುವೆಯಲ್ಲಿ ಇಟ್ಟಿದ್ದೇನೆ" ಎಂದು ಉತ್ತರವಿತ್ತಳು ಗೌರಿ.

"ನಾವು ಹಿರಿಯರು ಅಂತ ಗೌರಿಗೆ ಹೇಳುತೇವೆ, ಅಷ್ಟೆ. ಅವಳು ಎಲ್ಲಾ ಮಾಡಿಬಿಟ್ಟಿರುತಾಳೆ" ಎಂದು ನರಸಮ್ಮ ಮೆಚ್ಚುಗೆಯ ಮಾತಾಡಿ ದರು. ತನ್ನ ವಿಚಾರದ ಮಾತೆಂದು ಗೌರಿ ತಟಕ್ಕನೆ ಅಡಿಗೆಯ ಮನೆಯೊಳಕ್ಕೆ ಹೊರಟುಹೋದಳು.

ವೆಂಕಟಸುಬ್ಬಯ್ಯನವರು ತಮ್ಮ ರುಮಾಲು, ಅಂಗಿ, ಸಾದಾ ಜುಬ್ಬ ಇವನ್ನು ಕಳಚಿ ಗೂಟಕ್ಕೆ ಹಾಕಿದರು; ಗಂಟನ್ನು ಬಿಚ್ಚಿ, ಕಿತ್ತಾನಾರಿನ ಮಡಿಯನ್ನು ಹೊರಕ್ಕೆ ತೆಗೆದರು. ಕೈಕಾಲು ತೊಳೆದುಕೊಂಡು, ಮಡಿಯುಟ್ಟು, ಮಾಧ್ಯಾಹ್ನೀಕ ಮುಗಿಸಿ, ಊಟಕ್ಕೆ ಕುಳಿತರು.

ಊಟವಾದಮೇಲೆ ವೆಂಕಟಸುಬ್ಬಯ್ಯನವರು ಚಾಪೆಯ ಮೇಲೆ ಗೋಡೆ ಒರಗಿಕೊಂಡು, ಬಾಣಂತಿಯ ಕೋಣೆಗೆ ಅಭಿಮುಖವಾಗಿ ಕುಳಿತರು. ಕುಳಿತು

ಕೊಳ್ಳುವುದಕ್ಕಿಲ್ಲ, ಆಗಲೇ ಗೌರಿ ಬೆಳ್ಳಿಯ ತಟ್ಟೆಯಲ್ಲಿ ಎಲೆ ಅಡಕೆ ಕೊಬ್ಬರಿ ಚೂರು, ಇನ್ನೊಂದು ಬೆಳ್ಳಿಯ ತಟ್ಟೆಯಲ್ಲಿ ತೆಳ್ಳಗೆ ಸಿಪ್ಪೆ ತೆಗೆದು ಹೆಚ್ಚಿದ ಮಾವಿನ ಹಣ್ಣಿನ ಹೋಳು ತಂದಿಟ್ಟಳು; "ಸ್ವಲ್ಪ ಸುಣ್ಣ ಕೊಡಮ್ಮ" ಎಂದು ತಾಯಿಯನ್ನು ಕೇಳಿ ವೀಳೆಯದೆಲೆಯ ಮೇಲೆ ಕೆನೆಸುಣ್ಣವನ್ನು ಹಾಕಿಸಿ ಕೊಂಡುಬಂದು, ತಾಂಬೂಲದ ತಟ್ಟೆಯಲ್ಲಿಟ್ಟಳು. "ಇದೇನು ಗೌರಮ್ಮ, ನನಗೆ ತಾಂಬೂಲಕ್ಕೆ ಏನು ಆತುರವಾಗಿತ್ತಮ್ಮ? ಹನ್ನೆರಡು ಆಗಿರಬೇಕು, ಹೋಗಿ ಊಟ ಮಾಡಮ್ಮ. ನನಗೆ ಉಪಚಾರಮಾಡಿದರೆ ನಿನ್ನ ಹೊಟ್ಟೆ ತುಂಬಿದಹಾಗಾಯಿತೆ?" ಎಂದು ಮಗಳಿಗೆ ಹೇಳುವಂತೆ ಹೇಳಿದರು ವೆಂಕಟ ಸುಬ್ಬಯ್ಯನವರು. "ಅನ್ನ ಕುದಿ ಹತ್ತಿದೆ. ಇನ್ನೇನು ಆಯಿತು, ಹೋಗಿ ಮಾಡುತ್ತೇನೆ" ಎಂದು ಗೌರಿ ಒಳಕ್ಕೆ ಹೋದಳು.

ವೆಂಕಟಸುಬ್ಬಯ್ಯನವರು ನಿಧಾನವಾಗಿ ಮಾವಿನ ಹೋಳನ್ನು ತಿನ್ನುತ್ತಾ ಕುಳಿತರು; ಮಧ್ಯೆ ಮಧ್ಯೆ ಒಂದೊಂದು ಮಾತನಾಡುತ್ತಿದ್ದರು.

"ಎಲ್ಲಿ, ಸುಬ್ಬರಾಮು ಸೀತಾರಾಮು ಕಾಣುವುದಿಲ್ಲ?"

"ಎಲ್ಲೋ ಸ್ನೇಹಿತರ ಮನೆಗೆ ಹೋಗಿದ್ದಾರೆ ಅಂತ ಕಾಣುತ್ತೆ."

"ಹ್ಞೂ, ಇನ್ನೊಂದು ಹತ್ತು ಹದಿನೈದು ದಿನ. ಆಮೇಲೆ ಸ್ಕೂಲು ಬಾಗಿಲು ತೆಗೆಯುತ್ತೆ. ಈಗ ಹೇಗಿದ್ದರೂ ರಜ ತಾನೆ. ಆಟಪಾಟ ಆಡಿಕೊಂಡು ಕಾಲ ಕಳೆಯುತ್ತಾರೆ....ಸುಬ್ಬರಾಮು ಈ ಸಲ ಹನ್ನೆರಡು ರೂಪಾಯಿ ಪರೀಕ್ಷೆಗೆ ಕಟ್ಟಿದಾನಲ್ಲವೆ?"

"ಕಟ್ಟಿದಾನೆ. ಏನಾಗುತ್ತೋ ಏನೋ. ಇನ್ನೇನು ರಿಸಲ್ಟು ಬರು ತ್ತಂತಲ್ಲ, ಆಗ ಗೊತ್ತಾಗುತ್ತೆ."

"ಅವನು ಪ್ಯಾಸುಮಾಡುತ್ತಾನೆ, ಬುದ್ಧಿವಂತ, ಬಿಡಿ. ಮುಂದೆ ಮೈಸೂರಿಗೋ ಬೆಂಗಳೂರಿಗೋ ಕಳಿಸಬೇಕು."

"ಏನು ಕಳಿಸುವುದೋ ಏನೋ. ಹೋಟಲಿನಲ್ಲಿ ಇಟ್ಟು ಓದಿಸುವಷ್ಟು ಚೈತನ್ಯ ನಮಗಿದೆಯೆ? ಮೈಸೂರಿಗೇ ವರ್ಗಮಾಡಿಸಿಕೊಳ್ಳಬೇಕು ಅಂತ ಪ್ರಯತ್ನಪಡುತ್ತಿದಾರೆ. ಏನಾದರೂ ವರ್ಗವಾದರೆ ಓದಿಸುವುದು ಅಂತ ಮಾಡಿಕೊಂಡಿದೆ. ಇಲ್ಲದೆ ಹೋದರೆ ಇಲ್ಲ."

"ಹಾಗೆ ಮಾಡಿದವರುಂಟೆ ಅಮ್ಮ, ಹೇಗಾದರೂ ಮಾಡಿ ಓದಿಸಲೇ

ಬೇಕು. ಒಂದು ಮೆಟ್ರಿಕ್ಯುಲೇಷನ್ನಾದರೂ ಇಲ್ಲದೆ ಯಾರು ಕೆಲಸ ಕೊಡುತ್ತಾರೆ? ನಿಮ್ಮ ಯಜಮಾನರು ಒಳ್ಳೇ ಕಾಲದಲ್ಲಿ ಕೆಲಸಕ್ಕೆ ಸೇರಿದರು. ಹೈಸ್ಕೂಲಿನಲ್ಲಿ ಓದುತ್ತಾ ಇದ್ದರು, ಅಷ್ಟೆ; ಸರ್ಕಾರಿ ಚಾಕರಿ ಸಿಕ್ಕಿತು. ಈಗ ನೋಡಿ, ನಮ್ಮ ಸುಬ್ಬಸ್ವಾಮಿ ಮೆಟ್ರಿಕ್ಯುಲೇಷನ್ ಪ್ಯಾಸ್ ಮಾಡಿದ. ಬೆಂಗಳೂರಿನಲ್ಲಿ ಅಠಾರಾ ಕಚೇರಿಯಲ್ಲಿ ಕೆಲಸ ಸಿಕ್ಕಿತು. ನಮ್ಮ ರಾಮಸ್ವಾಮಿ ಇದಾನೆ ನೋಡಿ, ಫೋಲಿಬಿದ್ದುಹೋದ. ಅವನಿಗೆ ಈಗ ಯಾರು ಕರೆದು ಕೆಲಸ ಕೊಡೋರು? ಕೆಲಸ ಇರಲಿ, ಈಗ ಹೆಣ್ಣು ಕೊಡಬೇಕಾದರೂ ಗಂಡಿಗೆ ಏನಾದರೂ ವಿದ್ಯೆ ಇದೆಯೆ ಅಂತ ನೋಡುತಾರೆ. ನಮ್ಮ ರಾಮಸ್ವಾಮಿಗೆ ಹೆಣ್ಣು ಕೊಡುವವರೂ ಇಲ್ಲ. ಯಾತಕ್ಕೆ ಹೇಳೋದಕ್ಕೆ ಬಂದೆ ಅಂದರೆ, ನಿಮ್ಮ ಸುಬ್ಬರಾಮುವನ್ನು ಮುಂದಕ್ಕೆ ಓದಿಸಲೇಬೇಕು ಅಂತ."

"ಏನೋ ದೇವರಿದ್ದಾನೆ, ನೋಡೋಣ."

"ಅಲ್ಲ, ನಾನೂ ಸರಿಯೆ. ಮಗು ಬಾಣಂತಿಯ ಯೋಗಕ್ಷೇಮ ವಿಚಾರಿಸಬೇಡವೆ? ಏನೋ ಮಾತು ತೆಗೆದೆ....ಕ್ಷೇಮವಾಗಿದ್ದೀಯೇನಮ್ಮ?"

"ಏನು ಕ್ಷೇಮ ಹೇಳಿ. ಮಂಡಿ ಸೊಂಟ ಎಲ್ಲ ಹಿಡಿದುಕೊಂಡು ಬಿಟ್ಟಿದೆ. ಮಂಚದಿಂದ ಇಳಿದು ಊಟ ಮಾಡುವುದೇ ಕಷ್ಟ."

"ಸೀತೆಯ ಬಾಣಂತಿತನದಲ್ಲಿ ಅವಳಿಗೂ ಹೀಗೇ ಆಗಿತ್ತಮ್ಮ. ಹಾಳಾದ್ದು ಶೀತವಾಯಿತು. ದಿನಕ್ರಮೇಣ ಕಡಮೆಯಾಗುತ್ತೆ ಕಣಮ್ಮ, ಏನು ಹೆದರಿಕೆ ಇಲ್ಲ ಮಗುವಿಗೆ ಏನು ಹೆಸರಿಟ್ಟಿದ್ದೀಯಮ್ಮ."

"ಗೊತ್ತೇ ಇದೆಯಲ್ಲ, ಸಾಕು ಸಾವಿತ್ರಿ ಅಂತ" ಎಂದು ಬೇಸರದಿಂದ ನುಡಿದರು ನರಸಮ್ಮ.

"ಯಾಕಮ್ಮ ಅಷ್ಟು ಬೇಸರಪಡುತ್ತಿ? ಹೆಣ್ಣು ಅಂದರೆ ಅಷ್ಟು ತಾತ್ಸಾರವೇ?"

"ಗಂಡಾದರೆ ತಿರಿದುಕೊಂಡಾದರೂ ತಿನ್ನಲಿ ಅನ್ನಬಹುದು. ನಮ್ಮ ಗೌರಿಯ ಬಾಳು ಹೀಗಾಯಿತೇ ಅಂತ ನೆನಸಿಕೊಂಡರೆ, ಹೊಟ್ಟೆ ಉರಿದು ಹೋಗುತ್ತೆ. ಅವಳ ಬಾಣಂತನ ನಾನು ಮಾಡಬೇಕಾಗಿತ್ತು, ಎಲ್ಲ ನೆಟ್ಟಗಿದ್ದರೆ. ಅದು ಬಿಟ್ಟು, ನನ್ನ ಬಾಣಂತನ ಅವಳು ಮಾಡಬೇಕಾಗಿ ಬಂದಿದೆ. ನಮ್ಮ ಹೊಟ್ಟೆಯ ಪುಣ್ಯ ಏನು ಅಂತ ಹೇಳೋಣ" ಎಂದು ನರಸಮ್ಮ ಕಂಬನಿ ದುಂಬಿದರು.

ವೆಂಕಟಸುಬ್ಬಯ್ಯನವರ ಹೊಟ್ಟೆಯಲ್ಲಿಯೂ ತಳಮಳವಾಯಿತು. ಗೌರಿ ಯನ್ನು ಕಂಡಾಗಲೆಲ್ಲ ತಮ್ಮ ಮಗಳು ಸೀತೆಯ ದುರ್ಗತಿ ಕೂರಲಗಿನಂತೆ ಕರು ಳನ್ನು ಕೊಯ್ಯುತ್ತಿತ್ತು. ತಮ್ಮ ದುಃಖವನ್ನು ತೋಡಿಕೊಳ್ಳುವುದಕ್ಕೆ ಮೊದಲು ಮಾಡಿದರೆ, ನರಸಮ್ಮನವರ ದುಃಖವನ್ನು ಹೆಚ್ಚಿಸಿದಹಾಗಾಗುತ್ತದೆಯೆಂದು, ಒಳಗಿನ ದುಃಖವನ್ನು ಹೊರಹರಿಯಗೊಡಗದೆ ತಡೆಹಿಡಿದುಕೊಂಡು, ದುಃಖ ಶಮನದ ಮಾತುಗಳನ್ನಾಡತೊಡಗಿದರು :

“ಬಾಣಂತಿ ಕಣಮ್ಮ, ಹಾಗೆ ಕಣ್ಣೀರು ಸುರಿಸಬಾರದು, ನಂಜು ಗಿಂಜಾದೀತು. ಈಗ ನಮ್ಮ ಸೀತೆ ಇಲ್ಲವೆ ? ನನಗೆ ರಾಮುಸ್ವಾಮಿಗಿಂತ ಅವಳ ಆಲೋಚನೆ ಹೆಚ್ಚಾಗಿದೆ. ನಮ್ಮ ಕಾವೇರಿಯೇನೋ ಸದ್ಯದ ಮಟ್ಟಿಗೆ ನೆಮ್ಮದಿ ಯಾಗಿದಾಳೆ. ಸುಬ್ಬಸ್ವಾಮಿಯೂ ನೆಮ್ಮದಿಯಾಗಿದಾನೆ. ದೇವರು ಚೆನ್ನಾ ಗಿಟ್ಟಿರಲಿ. ಆದರೆ ಅವನಿಗೆ ಈ ಕಡೆ ಯೋಚನೆಯೇ ಇಲ್ಲ. ರಾಮುಸ್ವಾಮಿ, ನೋಡಮ್ಮ, ಯಾರಿಗೂ ಹಿಟ್ಟು ಹಾಕಬೇಕಾಗಿಲ್ಲ; ತನ್ನ ಹೊಟ್ಟೆಯ ಪಾಡು ತಾನು ನೋಡಿಕೊಂಡರೆ ಸಾಕು ಎನ್ನಿಸಿಬಿಟ್ಟಿದಾನೆ. ನಮ್ಮದು ಎಷ್ಟು ದಿನ ಶಾಶ್ವತ ? ನಾವು ಕಂತೆ ಒಗೆದಮೇಲೆ, ಅಣ್ಣಂದಿರು ಅವಳ ಯೋಗಕ್ಷೇಮ ನೋಡಿಕೊಳ್ಳುತಾರೆ ಅಂತ ಖಾತರಿ ಏನು ? ಹಾಗೇ ಯೋಚನೆ ಮಾಡುತ್ತ ಹೋದರೆ, ಎಲ್ಲೆಲ್ಲಿಗೋ ಹೋಗುತ್ತೆ ಯೋಚನೆ, ಹಾಳಾದ್ದು. ಹಣೆಯಲ್ಲಿ ಬರೆದಹಾಗೆ ಆಗಲಿ ಅಂತ ಯೋಚನೆ ಮಾಡುವುದನ್ನೇ ಬಿಟ್ಟುಬಿಟ್ಟಿದೀನಿ.”

“ಅದು ದಿಟ ಅನ್ನಿ. ಯಾರ ಯಾರ ಹಣೆಯಲ್ಲಿ ಹೇಗೆ ಹೇಗೆ ಬರೆದಿ ದೆಯೋ ಹಾಗೆ ಹಾಗೆ ಆಗುತ್ತೆ. ಅದನ್ನ ತಪ್ಪಿಸುವುದಕ್ಕೆ ನಮ್ಮ ಕೈಲಿ ಆಗು ತ್ತದೆಯೆ ?” ಎಂದು ನರಸಮ್ಮನವರು ಸ್ವಲ್ಪ ಸಮಾಧಾನಗೊಂಡು ನುಡಿದರು : “ಹಣೇಬರಹವೇ ಸರಿ. ಆದರೆ ಒಂದು ಮನೆ ಸೇರಿದ ಎರಡು ಹೆಣ್ಣುಗಳ ಅದೃಷ್ಟವೂ ಹೀಗಾಗಬೇಕೆ ಅಂತ? ಆ ಮನೆತನದ ದುರದೃಷ್ಟ ನಮಗೂ ಬಡಿಯಬೇಕೆ ?”

“ನನಗೊಂದೂ ಅರ್ಥವಾಗುವುದಿಲ್ಲ. ಅದಕ್ಕೇ, ನಾನು ಮೊದಲೇ ಹೇಳಿದೆನಲ್ಲ, ಈ ವಿಚಾರ ನಾನು ಆಲೋಚನೆ ಮಾಡುವುದನ್ನೇ ಬಿಟ್ಟು ಬಿಟ್ಟಿದೀನಿ.”

ಅಷ್ಟುಹೊತ್ತಿಗೆ ಗೌರಿಯ ಊಟ ಮುಗಿದಿತ್ತು. ತನ್ನ ತಂದೆ ಮಲಗುವ

ಕೋಣೆಗೆ ಹೋಗಿ, ಒಂದು ದಿಂಬನ್ನು ತಂದು ವೆಂಕಟಸುಬ್ಬಯ್ಯನವರು ಕುಳಿತ ಚಾಪೆಯ ಕೊನೆಯಲ್ಲಿ ಹಾಕಿ,

"ಇನ್ನೂ ತಾಂಬೂಲಾನೇ ಹಾಕಿಕೊಂಡಿಲ್ಲ. ಹಾಕಿಕೊಂಡು ಹಾಗೇ ಸ್ವಲ್ಪ ಮಲಗಿಕೊಳ್ಳಿ, ಮಾವಯ್ಯ" ಎಂದು ಉಪಚಾರ ಹೇಳಿದಳು.

"ನಿನಗೆ ಗೊತ್ತೇ ಇದೆಯಲ್ಲಮ್ಮ, ನಾನು ತಾಂಬೂಲ ಹಾಕಿಕೊಂಡರೆ ಹೊಗೆಸೊಪ್ಪು ಹಾಕಬೇಕು. ಆಗ ಸರಿಯಾಗಿ ಮಾತನಾಡುವುದಕ್ಕೇ ಆಗುವುದಿಲ್ಲ. ನಿಮ್ಮ ಕೈಲಿ ಮಾತನಾಡುವುದೇ ನನಗೊಂದು ಸಂತೋಷ ಕಣಮ್ಮ. ನಮ್ಮ ಮನೆಯಲ್ಲಿ ನಾನು ಯಾರ ಕೈಲಿ ಮಾತನಾಡಬೇಕು ಹೀಗೆ? ತಾಂಬೂಲ ಎಲ್ಲಿ ಓಡಿಹೋಗುತ್ತೆ, ಹಾಕಿಕೊಂಡರಾಯಿತು—" ಎಂದು ಕೈಗೆ ಎಲೆ ತೆಗೆದುಕೊಂಡು, ಸುಣ್ಣ ಹಚ್ಚತೊಡಗಿದರು.

ವೆಂಕಟಸುಬ್ಬಯ್ಯನವರು ತಾಂಬೂಲ ಹಾಕಿಕೊಳ್ಳುವುದೆಂದರೆ ಸುಮಾರು ಅರ್ಧ ಗಂಟೆಯ ಕಾರ್ಯಕ್ರಮ. ತಾಂಬೂಲದ ಜೊತೆಗೆ ಹೊಗೆಸೊಪ್ಪನ್ನು ಹಾಕಿ ಜಗಿಯುತ್ತಲೇ ಇರಬೇಕು; ನಿಮಿಷಕ್ಕೊಂದು ಸಾರಿ ಹೊರಕ್ಕೆ ಹೋಗಿ ತಂಬುಲದ ರಸವನ್ನು ಜಿಲ್ಲನೆ ಉಗಿಯುತ್ತಲೇ ಇರಬೇಕು. ಇನ್ನು ರಸ ಬರುವುದಿಲ್ಲ ಎನ್ನಿಸಿದಾಗ ತಂಬುಲದ ಚರಟವನ್ನು ಕಡೆಯ ಸಲ ಹೊರಕ್ಕೆ ಉಗಿದು ಬಿಡಬೇಕು. ಪೂರ್ವದಲ್ಲಿ, ವೆಂಕಟಸುಬ್ಬಯ್ಯನವರ ಬಾಯಿಗೆ ಬಿಡುವೆಂದರೆ, ರಾತ್ರಿ ಮಲಗಿದಾಗಲೇ. "ಇದೇನು ಆಡು ಸೊಪ್ಪು ಮೆದ್ದ ಹಾಗೆ ಸದಾ ಎಲೆ ಅಡಕೆ ಮೆಲ್ಲುತ್ತೀರಿ" ಎಂದು ಪಾರ್ವತಮ್ಮನವರು ಗಂಡನನ್ನು ಟೀಕಿಸುತ್ತಲೇ ಇದ್ದರು. ಹೆಂಡತಿಯ ಮಾತಿಗೆ ಬೆಲೆ ಕೊಟ್ಟೋ, ತಮಗೇ ಬೇಸರವಾಗಿಯೋ, ಅಂತೂ ಈಚೆಗೆ ದಿನಕ್ಕೆ ನಾಲ್ಕೈದು ಸಲದ ಮೇಲೆ ತಾಂಬೂಲ ಹಾಕುತ್ತಿರಲಿಲ್ಲ. ಅನಿವಾರ್ಯವಾದಾಗ ಹೊರತು, ತಾಂಬೂಲ ಹಾಕಿದ ಮೇಲೆ ತಂಬುಲವನ್ನು ಆಚೆಗೆ ಉಗಿಯುವ ವರೆಗೂ ಅವರು ಯಾರೊಡನೆಯೂ ಹೆಚ್ಚಾಗಿ ಮಾತನಾಡುತ್ತಿರಲಿಲ್ಲ. ವರ್ಣ ಪಲ್ಲಟವಾಗಿ ಇತರರಿಗೆ ತಮ್ಮ ಮಾತು ಅರ್ಥವಾಗುವುದಿಲ್ಲವೆಂಬುದನ್ನು ಅವರೂ ಬಲ್ಲರು.

ತಾಂಬೂಲ ಹಾಕಿಕೊಂಡಮೇಲೆ, ಮಲಗಿ ಚೆನ್ನಾಗಿ ನಿದ್ರೆಹೋದರು. ಎಚ್ಚರವಾದಮೇಲೆ, ಗೌರಿ ಒಂದು ಲೋಟ ಕಾಫಿಯನ್ನೂ ಒಂದು ತಟ್ಟೆಯಲ್ಲಿ ಸ್ವಲ್ಪ ಖಾರದವಲಕ್ಕಿಯನ್ನೂ ತಂದಿಟ್ಟಳು. ಅವನ್ನೆಲ್ಲ ಸೇವಿಸುವ ಹೊತ್ತಿಗೆ,

ಅವರು ಕರೆದುಕೊಂಡು ಬಂದಿದ್ದ ಕಕ್ಷಿಗಾರ ರೈತ ಹೊನ್ನಯ್ಯ ಬಂದು ಕೂಗಿ ಕರೆದನು. "ಸ್ವಲ್ಪ ಲಾಯರ ಮನೆಗೆ ಹೋಗಿ ಬರುತ್ತೇನಮ್ಮ" ಎಂದು ವೆಂಕಟಸುಬ್ಬಯ್ಯನವರು ಎದ್ದು, ಕೈಕಾಲು ತೊಳೆದುಕೊಂಡು, ಉಡುಪು ಧರಿಸಿ, ಹೊರಕ್ಕೆ ಹೊರಡಲು ಸಿದ್ಧರಾದರು. ಹೊರಡುವ ಮುನ್ನ, "ಇವೊತ್ತು ಶನಿವಾರ ಅಲ್ಲವೇನಮ್ಮ? ನಾನು ರಾತ್ರಿ ಊಟಮಾಡುವುದಿಲ್ಲ" ಎಂದು ನರಸಮ್ಮನವರಿಗೆ ತಿಳಿಸಿದರು. "ನೀವೇನೂ ಸಂಕೋಚ ಪಟ್ಟುಕೊಳ್ಳಬೇಡಿ. ಗೌರಿ ಹೇಗಿದ್ದರೂ ಫಲಾಹಾರಕ್ಕೇನಾದರೂ ಮಾಡಿಕೊಳ್ಳಲೇಬೇಕು. ನಿಮಗೋಸ್ಕರ ಏನೂ ಮಾಡುವುದಿಲ್ಲ" ಎಂದರು ನರಸಮ್ಮನವರು. "ಹಾಗೇ ಆಗಲಮ್ಮ. ನಿಮ್ಮ ಮನಸ್ಸು ಯಾಕೆ ನೋಯಿಸಲಿ" ಎಂದು ಹೇಳಿ ಹೊರಕ್ಕೆ ಹೊರಟರು.

'ಈ ಚಿಕ್ಕ ವಯಸ್ಸಿನಲ್ಲಿಯೇ ಗೌರಮ್ಮ ಎಂಥ ಪಾಡು ಪಡಬೇಕಾಗಿದೆ. ಸೀತೆಗೆ ನಾವು ಮಡಿ ಹಿಡಿಸದೆಹೋದುದೇ ಒಳ್ಳೆಯದಾಯಿತೆಂದು ಕಾಣುತ್ತದೆ. ಮುಂದೆ ಇದ್ದೇ ಇದೆ, ಪರರ ಹಂಗಿನಲ್ಲಿ ಗಾಣದೆತ್ತಿನಂತೆ ದುಡಿಯುವುದು. ಚಿಕ್ಕ ವಯಸ್ಸಿನಲ್ಲಿಯೇ ಯಾಕೆ ಕಷ್ಟಕ್ಕೆ ಗುರಿಪಡಿಸಬೇಕು' ಎಂದುಕೊಂಡರು ವೆಂಕಟಸುಬ್ಬಯ್ಯನವರು.

೨

ರಾತ್ರಿ ಊಟವಾದಮೇಲೆ ವೆಂಕಟಸುಬ್ಬಯ್ಯನವರೂ ಶಾಮಣ್ಣನವರೂ ಜಗಲಿಯ ಮೇಲೆ ಲೋಕಾಭಿರಾಮವಾಗಿ ಮಾತನಾಡುತ್ತಾ ಕುಳಿತರು. ಮಕ್ಕಳೂ ಕೆಲಹೊತ್ತು ಮಾತಿನಲ್ಲಿ ಬೆರೆತಿದ್ದರು. ವೆಂಕಟರಾಮುವಂತೂ ತನ್ನ 'ಮಾವಯ್ಯ'ನೊಂದಿಗೆ ಮುದ್ದುಮುದ್ದಾಗಿ ಹರಟೆ ಕೊಚ್ಚುತ್ತಿದ್ದ. ಅವನ ಮುಗ್ಧಮನಸ್ಸಿನ ಸವಿಮಾತುಗಳಿಗೆ ಮರುಳಾಗಿ ಆಲಿಸುತ್ತ ನಿಂತನೋ ಎಂಬಂತೆ ಹುಣ್ಣಿಮೆಯ ಚಂದ್ರನು ಬೆಳಗುತ್ತಿದ್ದನು. ಸತ್ಕಾರ್ಯಗಳಿಗೆ ಒದಗುವ ಅಡ್ಡಿಗಳಂತೆ ಆಗೊಮ್ಮೆ ಈಗೊಮ್ಮೆ ಮೋಡಗಳು ಹಾದು ಚಂದ್ರನನ್ನು ಮರೆಮಾಡುತ್ತಿದ್ದುವು. ವೆಂಕಟರಾಮುವಿಗೆ ನಿದ್ದೆಯ ಜೋಂಪು ಹತ್ತಿ ತೂಕಡಿಸತೊಡಗಿದ. "ವೆಂಕಟರಾಮುವನ್ನ ಮೆಲ್ಲಗೆ ಕರೆದುಕೊಂಡು ಹೋಗಿ ಮಲಗಿಸಪ್ಪ" ಎಂದು ಶಾಮಣ್ಣನವರು ಸುಬ್ಬರಾಮುವಿಗೆ ಮೃದುವಾಗಿ ಅಪ್ಪಣೆ ಮಾಡಿದರು. ಸುಬ್ಬರಾಮು ವೆಂಕಟರಾಮುವನ್ನು ತೋಳು ಹಿಡಿದು ಕರೆದುಕೊಂಡು ಹೋದ.

ಅವನು ಹೋದ ಒಂದೆರಡು ನಿಮಿಷಗಳಮೇಲೆ, "ರಜಾದಿನಗಳಲ್ಲಿ ಹೊತ್ತಿಗೆ ಮುಂಚೆ ಮಲಗಬೇಕು, ಹೆಚ್ಚು ವಿಶ್ರಾಂತಿ ತೆಗೆದುಕೊಳ್ಳಬೇಕು. ಸ್ಕೂಲು ಬಾಗಿಲು ತೆಗೆದಮೇಲೆ ಹತ್ತು ಗಂಟೆಯುವರೆಗೂ ಎಚ್ಚರವಾಗಿರಬೇಕು. ನೀವು ತಲೆಕೆಳಗು ಮಾಡಿಬಿಡುತ್ತೀರಿ. ಹೋಗಿ ಮಲಗಿಕೋಪ್ಪ, ಹೊತ್ತಾಯಿತು" ಎಂದು ಶಾಮಣ್ಣನವರು ಸೀತಾರಾಮುವಿಗೆ ಮೃದುವಾಗಿ ಎಚ್ಚರಿಕೆಯಿತ್ತರು. ಸೀತಾರಾಮುವೂ ಎದ್ದುಹೋದ. ಮಕ್ಕಳೆಲ್ಲಾ ಒಳಕ್ಕೆ ಹೋಗುವ ಹೊತ್ತಿಗೆ ಗೌರಿ ಎಲ್ಲರ ಹಾಸಿಗೆಗಳನ್ನೂ ಹಾಸಿ ಸಿದ್ಧಪಡಿಸಿದ್ದಳು.

"ಇವತ್ತು ಪೋರ್ಣಿಮಿಯಲ್ಲವೆ?" ಎಂದು ಪ್ರಶ್ನಿಸಿದರು ವೆಂಕಟ ಸುಬ್ಬಯ್ಯನವರು.

"ಇವತ್ತು ಫಲಪೋರ್ಣಿಮಿ ತಾನೆ. 'ಒಳ್ಳೆಯ ದಿನವೇ ಮಾವಿನ ಹಣ್ಣು ತಂದು ಕೊಟ್ಟಿದೀರಿ' ಎಂದಳು ಅವಳು. ಅವಳು ಇನ್ನೂ ಬಾಣಂತಿ ಮೈಲಿಗೆ; ಗಂಗೆಪೂಜೆ ಮಾಡಿಲ್ಲ. ಫಲತಾಂಬೂಲ ಕೊಡುವ ಹಾಗಿಲ್ಲ. 'ಇಬ್ಬರು ಮುತ್ತೈದೆಯರಿಗೆ ಹಣ್ಣು ಕೊಡುವ ಹಾಗಿಲ್ಲ ನಮ್ಮ ಗೌರಿ' ಎಂದು ಪೇಚಾಡಿ ಕೊಂಡಳು. 'ವೆಂಕಟಸುಬ್ಬಯ್ಯನವರು ಒಳ್ಳೆಯ ಮನಸ್ಸಿನಿಂದ ಹಣ್ಣು ತಂದು ಕೊಟ್ಟಿದ್ದಾರೆ. ಗೌರಿ ಒಂದಿಬ್ಬರು ಮುತ್ತೈದೆಯರಿಗೆ ಕೊಟ್ಟು ಬರಲಿ. ಮುಂದಿನ ಜನ್ಮದಲ್ಲಾದರೂ ಮಾಂಗಲ್ಯಭಾಗ್ಯ ದೊರಕಲಿ' ಎಂದೆ ನಾನು. ನೋಡಿ, ಇಂಥ ವಿಚಾರಗಳಲ್ಲಿ ಹೆಂಗಸರಿಗೆ ಇರುವ ವಿವೇಕ ನಮಗೆ ಇರುವು ದಿಲ್ಲ. ಆದಕ್ಕೆ ಅವಳು, 'ನಾವೇನೋ ಒಳ್ಳೆಯ ಮನಸ್ಸಿನಿಂದ ಕೊಡುತ್ತೇವೆ. ಆದರೆ ಮುತ್ತೈದೆಯರು ಅಪಶಕುನ ಅಶುಭ ಎಂದು ತಿಳಿಯುತ್ತಾರೆ. ಬೇಡ' ಎಂದಳು. ವೆಂಕಟರಾಮು ಕೈಲಿ ಅಕ್ಕಪಕ್ಕದ ಮನೆಯವರನ್ನು ತಾನೇ ಬರಮಾಡಿಕೊಂಡು, ಫಲತಾಂಬೂಲ ಸಿದ್ಧಗೊಳಿಸಿ, ತನ್ನ ಬಾಯಿಂದಲೇ 'ತೆಗೆದುಕೊಳ್ಳಿ' ಎಂದಳು. ಅವರೆಲ್ಲಾ ಅವಳನ್ನು ಕೊಂಡಾಡಿದ್ದೂ ಕೊಂಡಾ ಡಿದ್ದೆ. ಹೀಗೆ ಮಾಡುವ ಬದಲು ಹಾಗೆ ಮಾಡಿದ್ದರೆ, ಹಿಡಿಶಾಪ ಹಾಕುತ್ತಿ ದ್ದರು. ಕುಂಕುಮ ಭಾಗ್ಯದ ಬೆಲೆ ನೋಡಿ, ವೆಂಕಟಸುಬ್ಬಯ್ಯನವರೇ, ಅದು ಇಲ್ಲದ್ದು ಎಷ್ಟು ವ್ಯತ್ಯಾಸ ಮಾಡಿಬಿಡುತ್ತೆ?"

ತುಸು ಹೊತ್ತು ಇಬ್ಬರೂ ಮೌನವಾಗಿದ್ದರು; ಇಬ್ಬರ ಗಂಟಲೂ ಕಟ್ಟಿ ಕೊಂಡುಬಂದಿತ್ತು; ಮಾತು ಹೊರಡದಂತಿತ್ತು.

ವೆಂಕಟಸುಬ್ಬಯ್ಯನವರೇ ಮೊದಲು ಮೌನವನ್ನು ಮುರಿದರು :

" ಹಣೆಯಲ್ಲಿ ಬರೆದ ವೈಧವ್ಯವನ್ನು ತಪ್ಪಿಸಲು ಯಾರಿಂದಲೂ ಸಾಧ್ಯ ವಿಲ್ಲ, ಶಾಮಣ್ಣನವರೇ. ಈ ಕಲಿಯುಗದಲ್ಲಿ ಗಂಡನನ್ನು ಬದುಕಿಸಿಕೊಳ್ಳ ಬಲ್ಲ ಸಾವಿತ್ರಿ ಯಾರು ? ಇದೆಲ್ಲಾ ನಮ್ಮ ಶಕ್ತಿಗೆ ಮೀರಿದ್ದು. ನಿಮ್ಮ ಮಗಳ ವಿಚಾರದಲ್ಲಿ ಒಂದು ಹೇಳಿ, ನನ್ನ ಮಗಳ ವಿಚಾರದಲ್ಲಿ ಇನ್ನೊಂದು ಮಾಡಿ ಬಿಟ್ಟೆ. ಯಾವುದು ಸರಿಯೋ ಯಾವುದು ತಪ್ಪೋ ದೇವರೇ ಬಲ್ಲ. ನಾನು ಮಾಡಿದ್ದು ಸರಿ ಎಂತ ನಾನು ತಿಳಿದೂ ಇಲ್ಲ, ಹಾಗೆ ಹೇಳಿಕೊಳ್ಳುವುದೂ ಇಲ್ಲ. ಏನೋ ವಯಸ್ಸಾಗಿ ಮಕ್ಕಳುಮರಿ ಆಗಿರುವವರ ಮಾತು ಬೇರೆ. ನಮ್ಮ ಸೀತೆ, ನಿಮ್ಮ ಗೌರಿ—ಇಂಥವರಿಗೆ ಕೂದಲು ತೆಗೆಸಿ ವಿಕಾರ ಮಾಡು ವುದರ ಅರ್ಥವೇನು ? ನಿಮ್ಮ ಗೌರಿಯನ್ನು ಕಂಡಾಗಲೆಲ್ಲ ನನ್ನ ಮನಸ್ಸು ಅಳುಕುತ್ತೆ."

" ವೆಂಕಟಸುಬ್ಬಯ್ಯನವರೆ, ಯಾಕೆ ಸುಮ್ಮನೆ ಹೀಗೆ ಪೇಚಾಡುತ್ತೀರಿ ? ಆಗ ನೀವು ಹಾಗೆ ಹೇಳಿದ್ದು ಒಳ್ಳೆಯದೇ ಆಯಿತು. ಈಗ ನೀವು ಹೀಗೆ ಮಾಡಿದ್ದು ತಪ್ಪು ಎಂತಲೂ ನಾನು ತಿಳಿದಿಲ್ಲ. ಇಷ್ಟಕ್ಕೂ ನೀವು ಒಬ್ಬರೇ ? ಎಷ್ಟೋ ಮನೆಗಳಲ್ಲಿ ಸಕೇಶಿಯರಿದ್ದಾರೆ. ಆ ಸಂದರ್ಭದಲ್ಲಿ ನೀವು ಹೇಳಿ ದಂತೆ ನಾನು ಪೂರ್ವಾಚಾರಕ್ಕೆ ಗೌರವ ಕೊಟ್ಟುಬಿಟ್ಟೆ. ಆಮೇಲೆ ಯೋಚಿ ಸಿದ್ದರಲ್ಲಿ ಪೂರ್ವಾಚಾರಕ್ಕೆ ಸ್ವಲ್ಪ ಅರ್ಥವಿರುವಂತೆಯೂ ಕಂಡುಬರುತ್ತದೆ."

" ಏನು, ಅದರ ಅರ್ಥ ? "

" ಗಂಡಸಿಗಿಂತ ಹೆಂಗಸು ಹೆಚ್ಚು ಸಂಯಮವುಳ್ಳವಳೆಂದು ತೋರುತ್ತೆ. ಗಂಡಸು ಬಹುಬೇಗ ಕೆಟ್ಟ ಚಾಳಿಗೆ ಇಳಿದುಬಿಡುತ್ತಾನೆ. ಹೆಂಗಸನ್ನು ಕೆಡಿಸು ವುದರಲ್ಲಿ ಅವನು ಯಾವಾಗಲೂ ಮುಂದು ; ಅನುಕೂಲಸಂದರ್ಭ ಸಿಕ್ಕೀತೇ ಎಂದು ಕಾದಿರುತ್ತಾನೆ. ಪರಸ್ತ್ರೀಗೆ ಕಣ್ಣು ಹಾಕದ ಗಂಡಸು ಯಾರು ಸ್ವಾಮಿ ? "

" ಇದೇನು ಶಾಮಣ್ಣನವರೇ, ನೀವು ಹೇಳುವುದು ! ಹಾಗಾದರೆ ನಾವೂ ನೀವೂ ಅಂಥವರೆ ? "

" ನಾವು ನೀವು ಕೆಟ್ಟವರಲ್ಲದಿರಬಹುದು. ಆದರೆ ಚೆನ್ನಾಗಿರುವ ಹೆಂಗ ಸನ್ನು ಕಂಡು, ' ಎಷ್ಟು ಚೆನ್ನಾಗಿದಾಳೆ ! ನನ್ನ ಹೆಂಡತಿ ಹೀಗಿರಬಾರದಾಗಿತ್ತೆ!' ಎಂದು ಇಷ್ಟಾದರೂ ಹೇಳಿಕೊಳ್ಳುವುದಿಲ್ಲವೆ ? ಕೆಟ್ಟವರೂ ಆದರೆ ಕಾಮಿಸು

ತ್ತೀವೆ ; ಅವಳು ನನಗಿರಲಿ ಎಂದುಕೊಳ್ಳುತ್ತೀವೆ. ಆದರೆ, ಗಂಡನುಳ್ಳ ಗರತಿಯ ವಿಚಾರದಲ್ಲಿ, ಇವಳು ಹೆರರ ಸೊತ್ತು ಎಂಬ ಭೀತಿ ಒಂದಿರುತ್ತದೆ. ಎಂಥ ಧೈರ್ಯಶಾಲಿಯಾದರೂ ಪರಸ್ತ್ರೀಯನ್ನು ಕೆಣಕಲು ಹಿಂದೆಗೆಯುತ್ತಾನೆ."

"ಅದು ದಿಟ ಅನ್ನಿ."

"ಗಂಡನಿಲ್ಲದವಳ ವಿಚಾರದಲ್ಲಿ ಪರಸ್ತ್ರೀ ಎಂಬ ಭಾವನೆ ಇರುವುದಿಲ್ಲ ನೋಡಿ. ಬೀದಿಯಲ್ಲಿ ತುಪ್ಪ ತೆಗೆದುಕೊಂಡು ಹೋಗುತ್ತ, ಅದಕ್ಕೆ ಸರಿಯಾಗಿ ಮುಚ್ಚದಿದ್ದರೆ, ಅದು ಹದ್ದಿನ ಪಾಲು. ವಿಧವೆಗೆ ತಕ್ಕ ರಕ್ಷೆ ಒದಗಿಸದಿದ್ದರೆ ಕಂಡವರ ಪಾಲಾಗುತ್ತಾಳೆ. ಈ ವಿಕಾರವಾಡುವುದು ಎನ್ನುವುದಿದೆಯಲ್ಲ, ಅದು ಒಂದು ರಕ್ಷೆ. ಹೆಂಗಸಿಗೆ ಯಾವ ಅಲಂಕಾರವೂ ಬೇಕಾಗಿಲ್ಲ. ಅವಳ ಕೇಶರಾಶಿಯೇ ಒಂದು ದಿವ್ಯವಾದ ಅಲಂಕಾರ. ಅದನ್ನು ತೆಗೆಸಿ, ಕಣ್ಣಿಗೆ ರಾವು ಬಡಿಯುವ ಕೆಂಪು ಸೀರೆ ಉಡಿಸಿಬಿಟ್ಟರೆ, ಗಂಡಸು ಗಾವುದ ದೂರ ಇರುತ್ತಾನೆ. ಹೌದೋ ಅಲ್ಲವೋ ? "

"ಅದು ಸರಿ. ಹೆಂಗಸನ್ನು ಎಷ್ಟೇ ಹತೋಟಿ ಇಟ್ಟುಕೊಂಡರೂ ಗಂಡಸಿಗೆ ಇರುವ ಹಾಗೆಯೇ ತಾನೂ ಸುಖಪಡಬೇಕು ಅನ್ನುವ ಆಸೆ ಅವಳನ್ನು ಕಾಡು ವುದೇ ಇಲ್ಲವೆ ? "

"ಕಾಡದೆ ಇರುತ್ತೆಯೆ ? ಅದಕ್ಕೇ ಪೂರ್ವಿಕರು ಗಂಡಸಿಲ್ಲದ ಮಡಿ ಯಾದ ಹೆಂಗಸರಿಗೆ ಒಪ್ಪೊತ್ತೂಟ, ಏಕಾದಶೀವ್ರತ, ಅಭ್ಯಂಗನ ಕೂಡದು ಎಂಬೋಣ—ಇಂಥ ಕಟ್ಟುಸಿಟ್ಟಾದ ನಿಯಮಗಳನ್ನು ಏರ್ಪಡಿಸಿಬಿಟ್ಟಿದ್ದಾರೆ. ಜೊತೆಗೆ ಹೆಚ್ಚು ದುಡಿತ ಬೇರೆ. ಯಾವಾಗ ಗಂಡಸಿಲ್ಲವೋ ಇನ್ನೊಬ್ಬರ ಕೂಳಿಗೆ ಕೈಯೊಡ್ಡಿ ನಿಲ್ಲಲೇಬೇಕಲ್ಲ? ಚೆನ್ನಾಗಿ ದುಡಿದರೆ, ಪೀಟೆಗೆ ಪೀಟೆ. ನಾನು ಯಾರ ಹಂಗಿಗೂ ಒಳಗಾಗಿಲ್ಲ ಎಂಬ ನೆಮ್ಮದಿಯೂ ಅವರಿಗೆ ಇರುತ್ತೆ. ಕ್ರಮಕ್ರಮವಾಗಿ ಮನುಷ್ಯಸಹಜವಾದ ಕೀಳು ಕಾಮನೆಗಳೆಲ್ಲ ಒತ್ತುತ್ತ ಬರು ತ್ತವೆ. ತಾವು ನೆಲಸಿದ ಮನೆಗೆ ಮಂಗಳ ಕೋರುತ್ತಾರೆ."

"ಆದರೆ ಅವರು ಮಾತ್ರ ಅಮಂಗಳ."

"ಕೆಲವಕ್ಕೆ ಮಾತ್ರ. ನೇಮ ಹಿಡಿದ ವಿಧವೆಯರಿಗೆ ಒಂದು ಗೌರವದ ಸ್ಥಾನವೂ ಇದೆ. ಅವರು ಮಾಡಿದ ಅಡಿಗೆ ದೇವರಿಗೆ ಆಗುತ್ತೆ, ಹಬ್ಬಹರಿದಿನ ಗಳಿಗಾಗುತ್ತೆ, ಶ್ರಾದ್ಧಾದಿಗಳಿಗೆ ಆಗುತ್ತೆ. ಅದೇ, ಸಕೇಶಿಯರನ್ನು ತೀರ

ನಿಕೃಷ್ಟವಾಗಿ ಕಾಣುತ್ತೇವೆ."

"ನಿಕೃಷ್ಟವಾಗಿ ಕಾಣಬಾರದು ಅಂತ ನಾನು ಹೇಳುವುದು. ನಮ್ಮ ಮನೆಯಲ್ಲಿ ಸೀತೆಯನ್ನ ನಿಕೃಷ್ಟವಾಗಿ ಕಾಣುವುದಿಲ್ಲವಲ್ಲ? ನಿಮ್ಮಲ್ಲಿ ಮುಚ್ಚು ಮರೆಯೇಕೆ? ಇನ್ನೂ ಅಡಿಗೆ ಪಡಿಗೆ ಅಂತ ಮುಟ್ಟಿಸಿಲ್ಲವೇ ಹೊರತು, ಅವಳು ಕಾಸಿದ ಕಾಫಿ ಕುಡಿಯುತ್ತೇನೆ, ಕೊಟ್ಟ ನೀರು ಕುಡಿಯುತ್ತೇನೆ."

"ನಿಮ್ಮ ಸೀತೆಯ ವಿಚಾರ ಬಿಡಿ. ಏನೂ ಅರಿಯದ ಮಗು. ವಯಸ್ಸು ಆದ ಸಕೇಶಿಯರ ವಿಚಾರ ಏನು ಹೇಳುತ್ತೀರಿ, ಸ್ವಾಮಿ? ಅವರು ಒಂದನ್ನೂ ಮುಟ್ಟುವಹಾಗಿಲ್ಲ. ಸುಮ್ಮನೆ ತಿಂದುಕೊಂಡು ಕೆಲಸವಿಲ್ಲದೆ ಮನೆಯಲ್ಲಿ ಕೂತಿದ್ದರೆ ಸೊಕ್ಕೇರುತ್ತಾರೆ. ಅಡ್ಡದಾರಿ ಹಿಡಿಯುವುದಿಲ್ಲ ಅಂತ ಖಾತರಿ ಏನು? ಹಿಡಿಯದೆ ಇದ್ದರೆ, ಹಿಡಿಯುವ ಹಾಗೆ ಮಾಡುತ್ತಾರೆ, ನೀಚ ಗಂಡಸರು. ಅವರನ್ನು ನಿಕೃಷ್ಟವಾಗಿ ಕಾಣುತ್ತ ಇದ್ದರೆ, ಒಂದಲ್ಲ ಒಂದು ದಿನ 'ಮಡಿ ಹಿಡಿಯುವುದೇ ಮೇಲು' ಎಂದು ಅವರ ಮನಸ್ಸಿಗೇ ತಾನಾಗಿ ತೋರಬೇಕು— ಹಾಗಿದೆ ಈ ಏರ್ಪಾಟು."

"ನೀವು ಹೇಳುವುದು ಸರಿ ಅಂತ ಕಾಣುತ್ತೆ. ಆದರೆ ನಾವು ಮಡಿ ಹೆಂಗಸರನ್ನೂ ತುಂಬ ನಿಕೃಷ್ಟವಾಗಿ ಕಾಣುತ್ತೇವೆ, ಅದು ತಪ್ಪಲ್ಲವೆ?"

"ಖಂಡಿತ ತಪ್ಪು. ಹಾಗೆ ಕಾಣಕೂಡದು. ನಮ್ಮ ಗೌರಿಯನ್ನ ನಾವು ಹಾಗೆ ಕಾಣುವುದಿಲ್ಲವಲ್ಲ?"

"ನಿಮ್ಮ ಗೌರಿಯ್ನ ವಿಚಾರ ಬಿಡಿ. ಅವಳು ನಿಮ್ಮ ಮನಸ್ಸನ್ನೆಲ್ಲಾ ಒಲಿಸಿಕೊಂಡುಬಿಟ್ಟಿದ್ದಾಳೆ. ದೇವರು ಗೌರಮ್ಮನ ಮಾಂಗಲ್ಯ ಉಳಿಸಲಿಲ್ಲ. ಅದೇನೋ ದುಃಖಪಡಬೇಕಾದ್ದೆ. ನಿಮ್ಮ ಗೌರಮ್ಮ ಕೆಲಸಬೊಗಸೆ ಅದೇನು ಚಾಕಚಕ್ಯ, ಅದೇನು ಒಪ್ಪ ವಾರಣ! ಇಷ್ಟೆಲ್ಲಾ ಚಕಚಕ ಅಂತ ಕೆಲಸ ಮಾಡಿದರೂ ಸ್ವಲ್ಪವಾದರೂ ಬೇಸರವೇ! ಸದಾ ನಗುಮುಖ! ನನಗೆ ತುಂಬ ಸಂತೋಷವಾಯಿತು, ಇದ್ದರೆ ಹೀಗಿರಬೇಕು."

"ಗಂಡನ ಮನೆಯಲ್ಲೇ ಹೀಗಿದ್ದರೆ ಇನ್ನೆಷ್ಟು ಸಂತೋಷವಾಗುತ್ತಿತ್ತು, ಸ್ವಾಮಿ. ಹೆತ್ತ ಮನೆಯ ಗಾಣದ ಎತ್ತಾಗಿರುವುದಕ್ಕಿಂತ ಗಂಡನ ಮನೆಯ ತೊತ್ತಾಗಿರುವುದು ಮೇಲಲ್ಲವೆ?...."

ಶಾಮಣ್ಣನವರ ಕಂಠ ಮತ್ತೆ ಬಿಗಿಯಿತು. ತಾವು ಸ್ವಲ್ಪ ತಪ್ಪು

ಮಾತಾಡಿದುದಾಗಿ ವೆಂಕಟಸುಬ್ಬಯ್ಯನವರಿಗೆ ತೋರಿ, ಮೌನವಾಗಿದ್ದರು. ಮಾತು ತಿರುಗಿಸಲು ಹಾದಿ ನೋಡುತ್ತಿದ್ದರು.

ಸ್ವಲ್ಪ ಹೊತ್ತಿನಿಂದ ಮೋಡ ಕವಿದು, ತಿಂಗಳ ಬೆಳಕು ಮಬ್ಬಾಗಿತ್ತು—ಉಲ್ಲಾಸದಿಂದಲೇ ಪ್ರಾರಂಭವಾದ ಇವರ ಮಾತುಕತೆಯಂತೆ. ಅವರ ಒಳಗಿನ ಅಳಲ ಬೇಗೆಯಂತೆ ಹೊರಗೆ ಕೂಡ ಮಳೆಯ ಮುಂದಿನ ಧಗೆ ಆವರಿಸಿತ್ತು. ಆಕಾಶದಲ್ಲಿ ಮಿಂಚತೊಡಗಿತು; ದೂರದಲ್ಲಿ ಗುಡುಗೂ ಕೇಳಿಬಂದಿತು.

"ಒಂದೆರಡು ಹದ ಮಳೆಯೇನೋ ಚೆನ್ನಾಗಿ ಆಯಿತು. ಆದರೂ ಇನ್ನೂ ಧಗೆ ಅಡಗಿಲ್ಲ. ನಿಮ್ಮ ಕಡೆ ಮಳೆ ಆಯಿತು ತಾನೆ?" ಎಂದು ಶಾಮಣ್ಣನವರೇ ಮಾತು ಬದಲಿಸಿದರು.

"ಭರಣಿ ಮಳೆ ಸುಮಾರು. ಎಷ್ಟೋ ಕಡೆ ಇನ್ನೂ ಉತ್ತನೆಗೇ ಕೈ ಹಾಕಿಲ್ಲ. ಕೃತ್ತಿಕೇನೂ ಎರಡು ಪಾದ ಆಗಿಹೋಯಿತು. ಕೃತ್ತಿಕೆಯಾದರೂ ಚೆನ್ನಾಗಿ ಹುಯ್ದರೆ ಉತ್ತನೆ ಬಿತ್ತನೆಗೆ ಅನುಕೂಲ" ಎಂದರು ವೆಂಕಟ ಸುಬ್ಬಯ್ಯನವರು.

"ಇನ್ನೊಂದು ವಿಚಾರ ನಿಮ್ಮನ್ನ ಕೇಳಬೇಕೂ ಅಂತ. ಕಾಗದಾನೇ ಬರೆಯೋಣ ಅಂತ ಮಾಡಿದ್ದೆ. ನೀವು ಬಂದದ್ದು ಒಳ್ಳೆಯದೇ ಆಯಿತು."

"ಏನು ವಿಚಾರ?"

"ಇನ್ನೇನು? ಅದೇ ವಿಚಾರ. ನಿಂತರೆ ಕೂತರೆ ಉಟ್ಟರೆ ತೊಟ್ಟರೆ ಅವರದ್ದೇ ಆಲೋಚನೆ. ಈಗ ಸುಮ್ಮನೆ ಅವರನ್ನು ನೋಡಿಕೊಂಡು ಕೊರಗುತ್ತಾ ಇರುವುದಾಗಿದೆ. ನಿಮ್ಮ ಸೀತೆ, ನಮ್ಮ ಗೌರಿ—ಇವರಿಗೆ ನಾವು ಇರುವವರೆಗೂ ಪರವಾ ಇಲ್ಲ ಅನ್ನಿ. ಅವರನ್ನ ಪ್ರೀತಿಯಿಂದಲೇ ನೋಡಿ ಕೊಳ್ಳುತ್ತೇವೆ. ನಾವು ಕಣ್ಣುಮುಚ್ಚಿಕೊಂಡಮೇಲೆ ಅವರ ಗತಿ? ಹೆಣ್ಣಿಗೆ ಸರಿಯಾದ ಒಂದು ಗಂಡು ದಿಕ್ಕಿರಬೇಕು, ಸ್ವಾಮಿ. ಮದುವೆಯಾಗುವುದಕ್ಕೆ ಮುಂಚೆ ತಂದೆ, ಮದವೆಯಾದಮೇಲೆ ಗಂಡ, ಆಮೇಲೆ ಮುಪ್ಪಿನಲ್ಲಿ ಗಂಡ ಇದ್ದರೂ ಸರಿ ಇಲ್ಲದಿದ್ದರೂ ಸರಿ—ಮಕ್ಕಳು. ಇವರು ಹೆಣ್ಣನ್ನ ಪ್ರೀತಿಯಿಂದ ಗೌರವದಿಂದ ಕಾಣುವ ಹಾಗೆ ಯಾರು ಕಾಣುತ್ತಾರೆ, ವೆಂಕಟಸುಬ್ಬಯ್ಯ ನವರೆ? ಅಣ್ಣತಮ್ಮಂದಿರಿಗೆ ಅಕ್ಕತಂಗಿ ಅನ್ನುವ ವಾಂಛಲ್ಯ ಇರಬಹುದು. ಅದು ಎಷ್ಟು ದಿನ ನಡೆಯುತ್ತೆ? ಅವರ ಹೆಂಡಿರು ಬಂದು ಗಂಡಂದಿರ ಕಿವಿ

ನುಲಿಯುತ್ತಾರೆ. ಆಗ ಇವರ ಪಾಡು ಯಾರು ನೋಡಾರು? ಮನೆಯಲ್ಲಿ ಗುಲಾಮ ಚಾಕರಿಗೆ ಸಿದ್ಧವಾಗಿರಬೇಕು, ಇಲ್ಲದೆ ಹೋದರೆ, ಮನೆ ಬಿಟ್ಟು ಹೊರಡಬೇಕು. ಹೊರಟು ಏನು ಮಾಡಬೇಕು?"

"ಈಗೇನೋ ಮೈಸೂರು ಬೆಂಗಳೂರಲ್ಲಿ ಮನೆತಪ್ಪಿದವರು ಸ್ಕೂಲಿಗೆ ಸೇರಿ ಓದುತ್ತಿದ್ದಾರಂತೆ. ಓದಿದಮೇಲೆ ಅವರಿಗೆ ಮೇಡಮ್ ಕೆಲಸ ಕೊಡುತ್ತಾರಂತಲ್ಲ?"

"ಗಂಡುಮಕ್ಕಳನ್ನ ಮೈಸೂರು ಬೆಂಗಳೂರಲ್ಲಿ ಇಟ್ಟು ಓದಿಸುವುದೇ ಕಷ್ಟ. ಇನ್ನು ಹೆಣ್ಣುಮಕ್ಕಳನ್ನ ಓದಿಸುವುದು ಅಂದರೆ ಸುಮ್ಮನಾಗಿಹೋಯಿತೆ? ಮೈಸೂರಿನಲ್ಲಿ ಹೊಸದಾಗಿ ಅದೇನೋ ವಿಡೋಸ್ ಹೋಮ್ (Widows home) ಅಂತ ತೆಗೆದಿದ್ದಾರಂತೆ. ದಿಕ್ಕಿಲ್ಲದ ಮನೆತಪ್ಪಿದ ಹೆಣ್ಣುಮಕ್ಕಳನ್ನ ಇಟ್ಟುಕೊಂಡು ಅವರಿಗೆ ವಿದ್ಯಾಭ್ಯಾಸ ಮಾಡಿಸುತ್ತಾರಂತೆ. ಹೊಲಿಗೆ, ಬೆತ್ತದ ಕೆಲಸ, ಹೆಣಿಗೆ ಕೆಲಸ ಇನ್ನೂ ಏನೇನೋ ಕೈಗೆಲಸ ಹೇಳಿಕೊಟ್ಟು ಮುಂದೆ ತಮ್ಮ ಜೀವನ ತಾವೇ ನೋಡಿಕೊಳ್ಳುವ ಹಾಗೆ ಮಾಡುತ್ತಾರಂತೆ. ಅದೇನೋ ಒಳ್ಳೆಯ ಏರ್ಪಾಡೇ ಅನ್ನಿ. ನಮ್ಮ ಮಕ್ಕಳನ್ನೂ ಅಲ್ಲಿ ಸೇರಿಸುವುದಕ್ಕಾಗುತ್ತೆಯೆ? ನಾವು ಬದುಕಿರುವ ಹಾಗೆಯೇ ಅವರನ್ನ ಹಾಗೆ ಸೇರಿಸುವುದಕ್ಕೆ ಮನಸ್ಸಾದರೂ ಬರುತ್ತೆಯೇ?"

"ಉಂಟೇ ಶಾಮಣ್ಣನವರೆ, ಎಲ್ಲಾದರೂ ಉಂಟೆ?"

"ಇತರರ ವಿಚಾರ ನಾವು ಹೇಳತಕ್ಕದ್ದೂ ಅಲ್ಲ, ಅದಕ್ಕೆ ನಾವು ಹೊಣೆಯೂ ಅಲ್ಲ. ನಮ್ಮ ಮಕ್ಕಳ ಯೋಗಕ್ಷೇಮ ನಾವು ನೋಡಿಕೊಂಡರೆ ಸಾಕು. ನನ್ನ ಮನಸ್ಸಿನಲ್ಲಿ ಬಹಳ ದಿನದಿಂದ ಒಂದು ಯೋಚನೆ ಇದೆ. ನಿಮಗೆ ಹೇಗೆ ತೋರುತ್ತೋ ನಾನು ಕಾಣೆ. ಪ್ರಯತ್ನಪಟ್ಟು ನೋಡೋಣ ಅಂತ ನನ್ನ ಮನಸ್ಸು. ಅದಕ್ಕೆ, ನಿಮ್ಮ ಸಹಾಯ ಸ್ವಲ್ಪ ಆಗಬೇಕು."

"ಅದು ಏನು ಹೇಳಿ, ಕೈಲಾದದ್ದನ್ನ ಅಗತ್ಯವಾಗಿ ಮಾಡೋಣ."

"ನಮ್ಮ ಮಕ್ಕಳಿಗೆ 'ಜೀವನಾಂಶ' ಕೊಡಿ ಅಂತ ಅವರ ಮಾವನವರನ್ನ ಕೇಳುವುದು."

"ಹ್ಞಾ, ಇದು ನನಗೆ ಹೊಳೆದೇ ಇರಲಿಲ್ಲ!" ಎಂದು ವೆಂಕಟಸುಬ್ಬಯ್ಯನವರು ಆಶ್ಚರ್ಯವನ್ನು ವ್ಯಕ್ತಪಡಿಸಿದರು: "ಆದರೆ ನಾವು ಕೇಳಿದೆವು ಅಂತ

ಕೇಳಿದ ಮಾತ್ರಕ್ಕೇ ಕೊಟ್ಟುಬಿಡುತ್ತಾರೆಯೇ?" ಎಂದು ಜೊತೆಗೆ ಸಂದೇಹ ವನ್ನೂ ಸೂಚಿಸಿದರು.

"ಅದನ್ನೆಲ್ಲಾ ನಾನು ವಿಚಾರ ಮಾಡಿದೇನೆ. ಲಾಯರ್ ನಂಜುಂಡಯ್ಯ ನವರಲ್ಲಿಯೂ ಸಲಹೆ ಕೇಳಿದೇನೆ. ಬಸವಾಪಟ್ಟಣದಲ್ಲಿರುವುದು ಪಿತ್ರಾರ್ಜಿತ ಆಸ್ತಿ. ಕಾನೂನು ಪ್ರಕಾರ ನಮ್ಮ ಅಳಿಯಂದಿರಿಗೆ ಬರಬೇಕಾದ ಭಾಗದಲ್ಲಿ ಅವರ ಹೆಂಡಿರಿಗೂ ಹಕ್ಕಿದೆ. ಕೋರ್ಟು ಕಚೇರಿ ಹತ್ತಿದರೆ, ಸುಮ್ಮನೆ ಎಳೆದು ಕೊಂಡು ಹೋಗುತ್ತೆ. ಒಬ್ಬನಾದ ಮೇಲೆ ಒಬ್ಬನಂತೆ ಇಬ್ಬರನ್ನು ಕಳೆದು ಕೊಂಡು ಪುತ್ರಶೋಕದಲ್ಲಿರುವವರನ್ನು ಈ ವಿಚಾರದಲ್ಲಿ ಕಾಡಬಾರದು ಅಂತ ನಾನು ಇದುವರೆಗೂ ಸುಮ್ಮನಿದ್ದೆ. ಕೋರ್ಟಿಗೆ ಹೋದರೆ, ತಲಾ ಸಾವಿರದ ಮೇಲೆಯೇ ಸಿಕ್ಕಬಹುದು ಅಂತ ಹೇಳುತ್ತಾರೆ. ಇಬ್ಬರಿಗೂ ಸಾವಿರ ಸಾವಿರ ರೂಪಾಯಿ ಕೊಡಿ ಅಂತ ಕೇಳೋಣ. ಸಿಧಾನವಾಗಿ ಕೊಡಲಿ; ಆತುರವಿಲ್ಲ. 'ಇಲ್ಲ' ಎಂದರೆ ಕೋರ್ಟಿಗೆ ಹೋಗುವುದು. ನನಗೂ ಬಹುಶಃ ಮೈಸೂರಿಗೆ ವರ್ಗವಾದೀತು. ಈ ವ್ಯವಹಾರ ಹೂಡಿಕೊಂಡು ಕುಳಿತರೆ, ಬಿಡುವೆಲ್ಲಿ ತರಲಿ? ನೀವು ಹೇಗೂ ಅಲ್ಲಿ ಇಲ್ಲಿ ಸುತ್ತಾಡುತ್ತಿರುತ್ತೀರಿ. ನೀವು ಬಸವಾಪಟ್ಟಣಕ್ಕೆ ಒಂದು ಹೆಜ್ಜೆ ಹೋಗಿ ಮೈಲಾರಯ್ಯನವರನ್ನ ಕಂಡುಬನ್ನಿ. ನಾನು ಹೇಳಿದೆ ಅಂತಲೂ ಹೇಳಿ. ನೋಡೋಣ, ಏನು ಹೇಳುತ್ತಾರೆ."

ಶಾಮಣ್ಣನವರ ಸಲಹೆಯನ್ನು ಕೇಳಿ ವೆಂಕಟಸುಬ್ಬಯ್ಯನವರಿಗೆ ಕೈಗೆ ಸಾವಿರ ರೂಪಾಯಿ ಸಿಕ್ಕಿದಷ್ಟೆ ಸಂತೋಷವಾಯಿತು. "ಅಗತ್ಯವಾಗಿ ಆಗಲಿ. ಇಲ್ಲಿನ ಕೆಲಸ ಮುಗಿದ ಕೂಡಲೆ, ಊರಿಗೆ ಒಂದು ಕಾಗದ ಬರೆದುಹಾಕಿ, ಇಲ್ಲಿಂದಲೇ ಬಸವಾಪಟ್ಟಣಕ್ಕೆ ಹೊರುಟಬಿಡುತ್ತೇನೆ" ಎಂದು ಕಾರ್ಯಭಾರ ವನ್ನು ಒಪ್ಪಿಕೊಂಡರು.

೩

'ಕಟ್ಟೆ ಪುರಾಣ' ನಡೆಯದ ಊರು ಯಾವುದು? ಕೊಳಲೂರೇನು ಈ ನಿಯಮಕ್ಕೆ ಹೊರತಲ್ಲ. ನಗರದಲ್ಲಿ ದೊಡ್ಡ ದೊಡ್ಡ ಅಧಿಕಾರಿಗಳು, ಲಾಯರು ಗಳು, ಹಣವಂತರು, 'ರಿಟೈರ್' ಆದವರು—ಎಲ್ಲ ಸೇರಿ, ಒಂದು ಸುಂದರ ಭವನವನ್ನು ಬಾಡಿಗೆಗೆ ಗೊತ್ತುಮಾಡಿಕೊಂಡು, ತಿಂಗಳು ತಿಂಗಳೂ ಚಂದಾ

ಹಣ ಕೊಟ್ಟು, ಕೆಲವರು ಇಸ್ಪೀಟಾಡುತ್ತಲೂ ಇನ್ನು ಕೆಲವರು ಟೆನಿಸ್ ಆಡು ತ್ತಲೂ, ನಡುನಡುವೆ ವಿರಾಮಕಾಲದಲ್ಲಿ ಗುಂಪುಗುಂಪಾಗಿ ಹರಟೆ ಹೊಡೆಯು ತ್ತಲೂ ಕಾಲ ಕಳೆಯುವ ಏರ್ಪಾಟು 'ಕ್ಲಬ್', 'ಸಂಘ' ಎಂಬ ಗೌರವಕ್ಕೆ ಪಾತ್ರವಾಗಿದೆ. ಇಲ್ಲಿ ನೆರೆಯುವವರ ವಿದ್ಯಾಸಂಸ್ಕೃತಿಗಳಿಗೆ ತಕ್ಕಂತೆ ಅವರ ಮಾತುಕತೆಯಲ್ಲಿಯೂ ಒಂದು ನಯ, ಬಣ್ಣ, ಬೆಡಗು ಕಾಣಬರುತ್ತವೆ. ಇವರು ಆಡುವ ಗಂಭೀರ ಭಾಷೆಯು ವಾಕ್ ಕಲಹಗಳು ವಾಗ್ವಾದ, ಚರ್ಚೆ, ವಿಚಾರವಿನಿಮಯ ಎಂಬ ನಾಗರಿಕ ಸಂಬೋಧನೆಗೆ ಪಾತ್ರವಾಗುತ್ತವೆ. ಇಲ್ಲಿನ ಕುಚೋದ್ಯಗಳು, ಲೇವಡಿಯ ಮಾತು, ಹಾಸ್ಯ ಪ್ರತಿಹಾಸ್ಯಗಳು 'jokes, witticisms' ಎಂಬ ಘನಗೌರವಕ್ಕೆ ಪಾತ್ರವಾಗುತ್ತವೆ. ಇದು ನಾಗರಿಕ 'ಹರಟೆ'; ಕ್ಲಬ್ಬಿನಿಂದ ಹೊರಗೆ ಅದಕ್ಕೆ ಪ್ರಭಾವವಿಲ್ಲ. ಇಲ್ಲಿನ ಟೀಕೆಗಳು ಎಷ್ಟೇ ಕಟುವಾದರೂ, ಹುಡುಗರ ಆಟದ ಪಿಸ್ತೂಲು.

ಆದರೆ ಹಳ್ಳಿಗಾಡಿನ 'ಕ್ಲಬ್ಬು'ಗಳು ಧನಬಲ ಜನಬಲದಿಂದ ಕೂಡಿರ ದಿದ್ದರೂ, ಊರ ಮೇಲೆ ಅವುಗಳ ಪ್ರಭಾವ ಹೆಚ್ಚು. ನಿತ್ಯ ಹಾಜರಿಯೇ ಸಂಘಕ್ಕೆ ಕೊಡಬೇಕಾದ ಚಂದಾ; ಸದಸ್ಯರ ಮಾತುಕತೆ ಸಂಘದ ನಿರ್ಣಯ. ಅವರಿವರನ್ನು ಕುರಿತು ಅಲ್ಲಿ ಚಿಮ್ಮಿದ ಕುತ್ಸಿತ ಟೀಕೆ ವಿಷಬಾಣ. ಊರಿನಲ್ಲಿ ನಡೆಯುವ ಮಹತ್ವದ ಸುದ್ದಿಗಳೆಲ್ಲಾ ಹೇಗೋ ಈ ಹರಟೆಯ ಕಟ್ಟೆಗೆ ಮುಟ್ಟು ತ್ತದೆ; ಸುದ್ದಿಯ ಮೊಟ್ಟೆಗೆ ಹರಟೆ ಕಾವು ಕೊಟ್ಟು, ಮೊಟ್ಟೆಯೊಡೆದು ಮರಿ ಯಾಗಿ, ಅದಕ್ಕೆ ರೆಕ್ಕೆ ಪುಕ್ಕ ಎಲ್ಲ ಬಲಿತು, ರಾಕ್ಷಸ ಹಕ್ಕಿಯಾಗಿ ಬೆಳೆದು, ಊರ ಮೇಲೆಲ್ಲಾ ಹಾರಾಡುತ್ತದೆ; ತಪ್ಪು ಎಸಗಿದವರ ತಲೆ ಕುಕ್ಕುತ್ತದೆ; ಕೆಲವು ವೇಳೆ ಹಳ್ಳಿಯ 'ಪೀನಲ್‌ಕೋಡ್' ಆಗಿ ಕಾರ್ಯಕಾರಿಯಾಗುತ್ತದೆ; ಹಲವು ವೇಳೆ, ನಿರಪರಾಧಿಗಳ ನೆತ್ತಿಗಳನ್ನೂ ಕುಕ್ಕುತ್ತದೆ. ಅಂತೂ, ಹಳ್ಳಿ ಗಳ 'ಹರಟೆಯ ಕಟ್ಟೆ'ಯ ಹಕ್ಕಿಯ ಕೊಕ್ಕು ಬಲು ಚೂಪು.

ಕೊಳಲೂರಿನಲ್ಲಿ ಎರಡು ಮೂರು ಜೂಜಿನ ಕಟ್ಟೆಗಳೂ ಮೂರು ನಾಲ್ಕು ಹರಟೆಯ ಕಟ್ಟೆಗಳೂ ಇದ್ದುವು. ಪೇಟೆಯ ಜನರಲ್ಲಿ ಕೆಲವರು ಸಾಹುಕಾರ ರಾಮಪ್ಪನವರ ಅಂಗಡಿಯ ಮುಂದಿನ ಕೈಸಾಲೆಯಲ್ಲಿ ಸೇರುತ್ತಿದ್ದರು; ಕೋಟೆಯ ಜನರಲ್ಲಿ ಪ್ರಮುಖರಾದವರು ರಾಮದೇವರ ಗುಡಿಯ ಅಂಗಳದಲ್ಲಿ ನೆರೆಯುತ್ತಿದ್ದರು. ಇಲ್ಲಿಯವರು ಅಲ್ಲಿಗೂ ಅಲ್ಲಿಯವರು ಇಲ್ಲಿಗೂ ಆಗಾಗ್ಗೆ

ಹೋಗಿ ಬಂದು ಬೆರೆಯುತ್ತಿದ್ದುದೂ ಉಂಟು. ಪ್ರತಿ ಸಂಜೆ ಈ ಗುಡಿಯ ಸಭೆಗೆ ತಪ್ಪದೆ ಸೇರುತ್ತಿದ್ದವರು, ನಂಜುಂಡಶಾಸ್ತ್ರಿಗಳು, ನರಸಿಂಹಪಂಡಿತರು, ರಾಮಾಜೋಯಿಸರು, ತಿಪ್ಪಾವಧಾನಿಗಳು, ನರಸಿಂಹಾಚಾರ್ರು, ರಾಮುಶೆಟ್ಟಿ ತಂದೆ ಸುಬ್ಬಯ್ಯಶೆಟ್ಟರು ; ಹಿಂದಿದ್ದ ಪೋಸ್ಟ್‌ಮಾಸ್ಟರೂ ತಪ್ಪದೆ ಬರುತ್ತಿದ್ದರು. ಪುಟ್ಟಣ್ಣಯ್ಯ ಅದೇನು ಕಾರಣದಿಂದಲೊ ಗುಡಿಗೆ ಬಂದರೂ ಸಭೆಗೆ ಸೇರುತ್ತಿರಲಿಲ್ಲ. ಮಿಡ್ಲ್‌ಸ್ಕೂಲು ಹೆಡ್‌ಮಾಸ್ಟರು ಸುಬ್ಬರಾಯರು ಸಾಧಾರಣವಾಗಿ ರಜಾ ದಿವಸಗಳಲ್ಲಿ ತಪ್ಪದೆ ಬರುತ್ತಿದ್ದರು. ಶಾನುಭೋಗ ಕೃಷ್ಣಪ್ಪನವರು ಯಾರ ಗೋಷ್ಠಿಗೂ ಸೇರದೆ 'ಸಾಧುಪ್ರಾಣಿ' ಎಂದು ಪ್ರಸಿದ್ಧರಾಗಿದ್ದರು. ವೆಂಕಟಸುಬ್ಬಯ್ಯನವರು ರಾಮಪ್ಪನವರಿಗೆ ಹಲವು ಬಗೆಗಳಲ್ಲಿ ಋಣಿಗಳಾಗಿದ್ದರಿಂದ ಪೇಟೆಯ ಗುಂಪಿನಲ್ಲಿ ಹೆಚ್ಚಾಗಿ ಕಲೆಯುತ್ತಿದ್ದರು ; ಪುಟ್ಟಣ್ಣಯ್ಯನೂ ಆಗೊಮ್ಮೆ ಈಗೊಮ್ಮೆ ಇಲ್ಲಿಗೆ ಸುಳಿಯುತ್ತಿದ್ದ. ಶಿವರಾಮುಭಟ್ಟರು ಗುಡಿಯ ಸಭೆಯ 'ಖಾಯಂ ಕನ್ನಿನರು' ಎಂದು ಬೇರೆ ಹೇಳಲೇಬೇಕಾಗಿಲ್ಲ. ಸುಬ್ಬಾಭಟ್ಟ ಕಿರಿಯನೆಂಬ ಕಾರಣದಿಂದ ಈ ಸಭೆಗೆ ಸೇರುವ ಅಧಿಕಾರವನ್ನು ಪಡೆದಿರಲಿಲ್ಲ. ಅವನು ರಾಮುಸ್ವಾಮಿ ಹುಸೇನಿ ಕರಿಯಣ್ಣ ಇವರ 'ದುಷ್ಟ ಸಹವಾಸ'ವನ್ನು ಬಿಟ್ಟು 'ಸಭ್ಯ'ನಾದ ಮೇಲೆ, ಈ ಸಭೆಯವರ ಮಾತುಕತೆಗಳನ್ನು ಆಲಿಸುತ್ತಾ ಕುಳಿತುಕೊಳ್ಳತೊಡಗಿದ. ಒಮ್ಮೊಮ್ಮೆ, ನಡುವೆ ಬಾಯಿ ಹಾಕುತ್ತಲೂ ಇದ್ದ ; ತಂದೆಯ ಕೈಲಿ ಬಯ್ಯಿಸಿಕೊಳ್ಳುತ್ತಲೂ ಇದ್ದ.

ಸುಬ್ಬಾಭಟ್ಟನ ಆಪಾದನೆಯಿಲ್ಲದೆಯೇ ರಾಮುಸ್ವಾಮಿ, ಕರಿಯಣ್ಣ, ಹುಸೇನಿ—ಈ 'ತ್ರಿಮೂರ್ತಿ'ಗಳ ಪ್ರಸಿದ್ಧಿ ಊರಿನಲ್ಲೆಲ್ಲಾ ಹರಡಿತ್ತು ; ಕೋಟೆಪೇಟೆಗಳ ಮನೆಮಾತಾಗಿತ್ತು. ಸುಬ್ಬಾಭಟ್ಟ ಅವರ ಸಹವಾಸವನ್ನು ಬಿಟ್ಟಮೇಲೆ ಬಣ್ಣವೇರುತ್ತಿದ್ದ ; ಅವರ ಕುಪ್ರಸಿದ್ಧಿಗೆ ಮೆರುಗು ಕೊಡತೊಡಗಿದ. ಹೊಳೆಯ ದಂಡೆಯ ಮುರುಕು ಮಂಟಪ ಬಹಿರಂಗ ಸ್ಥಳವೇ ; ಭಂಡ ಬಿದ್ದಿದ್ದ ಆ ಮೂವರು ಅದನ್ನೇ ತಮ್ಮ ಜೂಜಿನಕಟ್ಟೆಯನ್ನಾಗಿ ಮಾಡಿಕೊಂಡಿದ್ದರು, ಅಷ್ಟೆ. ರಾಮಯ್ಯಂಗಾರಿಯೂ ಜೂಜಿಗೆ ಮಾತ್ರ ಅವರೊಂದಿಗೆ ಸೇರುತ್ತಿದ್ದುದರಿಂದ, ಅವನೂ ಜೂಜುಕೋರನೆಂದೇನೋ ಊರಿನಲ್ಲಿ ಹೆಸರಾಗಿದ್ದನು. ಆದರೂ, ಅದು ಹೇಗೋ ಆ ಮೂವರ ಪಂಕ್ತಿಯಲ್ಲಿ ಇವನ ಹೆಸರು ಸೇರದೆ ತಪ್ಪಿಸಿಕೊಂಡಿತ್ತು. ಅಷ್ಟರಮಟ್ಟಿಗೆ ಅವನು ತನ್ನ ಮರ್ಯಾದೆಯನ್ನು ಕಾಪಾಡಿ

ಕೊಂಡಿದ್ದನು. ಆದರೂ, ಗುಡಿಯ ಸಭೆಯಲ್ಲಿ ಅವನ ಪ್ರಸ್ತಾಪ ಒಂದು ಸಲ ಬಂದಾಗ, ಅಲ್ಲಿಗೆ ಸಾಧಾರಣವಾಗಿ ಬರುತ್ತಿದ್ದ ಕೃಷ್ಣಯ್ಯಂಗಾರ್ಯರು ಮನೆಗೆ ಬಂದು ರಾಮಯ್ಯಂಗಾರಿಗೆ ಚೆನ್ನಾಗಿ ಛೀಮಾರಿ ಮಾಡಿದರು; 'ಮಗ ಇಂಥ ವನೇ!' ಎಂದು ಅವಮಾನವಾದಂತಾಗಿ, ಅಂದಿನಿಂದ 'ಸಭೆ'ಗೆ ಬರುವುದನ್ನೇ ಬಿಟ್ಟುಬಿಟ್ಟಿದ್ದರು. ಸುಬ್ಬಾಭಟ್ಟನ ವಿಚಾರವೇನೂ ಬಹಿರಂಗಪಡದೆ ಇರಲಿಲ್ಲ. ಶಿವರಾಮಭಟ್ಟರಿಗೆ ತಮ್ಮ ಮಗನ ಕೆಟ್ಟ ಸಹವಾಸದ ವಿಷಯ ತಿಳಿದ ಕೂಡಲೆ, ಅವನೊಂದಿಗೆ ಬಹು ಉಗ್ರವಾಗಿ ನಡೆದುಕೊಂಡರು. ತಂದೆಯ ಉಗ್ರವರ್ತನೆ ಸುಬ್ಬಾಭಟ್ಟನ ಮೇಲೆ ಪ್ರಭಾವ ಬೀರದೆ ಇರಲಿಲ್ಲ. ಅವನು ನಿಜವಾಗಿ ಸಭ್ಯ ನಾಗತೊಡಗಿದ್ದ. ಆದರೆ ಸೀತೆಯ ಮೇಲಣ ಆಸೆ ಮಾತ್ರ ಅವನ ಹೃದಯದ ಹುತ್ತದಲ್ಲಿ ಸುಪ್ತವಾಗಿತ್ತು; ಹೊರಬರಲು ಹವಣಿಸುತ್ತಿತ್ತು. ಸೀತೆಗೋಸ್ಕರ ಅವನು ಬಾಯಿಬಾಯಿ ಬಿಡುತ್ತಿದ್ದುದು ಹೊರಗಿನವರಿಗೆ ತಿಳಿಯದಾದದ್ದರಿಂದ, ಅದರಿಂದ ಅವನು ಹೊಸದಾಗಿ ಗಳಿಸಿದ್ದ 'ಸಭ್ಯ'ತನಕ್ಕೆ ಕುಂದು ತಂದಿರಲಿಲ್ಲ.

ಸುಬ್ಬಾಭಟ್ಟ ಕಾಮತೃಷೆಯಿಂದ ಸೀತೆಯನ್ನು ಹಿಂಬಾಲಿಸಿದ್ದು ದಿಟ. ಆದರೆ ತನ್ನ ಹೆಸರು ಕೆಡುವ ಮಟ್ಟಿಗೆ ಅವಳೊಂದಿಗೆ ಹೀನಾಯವಾಗಿ ವರ್ತಿ ಸುವುದಿಲ್ಲವೆಂದೂ ಅವನು ನಿರ್ಧರಿಸಿಕೊಂಡಿದ್ದನು. ಆದರೆ ಪುಟ್ಟಣ್ಣಯ್ಯ ತನ್ನ ಮೇಲೆ ಬರಬಹುದಾದ ಆರೋಪಣೆಯ ಸಂಭವವನ್ನು ಸುಬ್ಬಾಭಟ್ಟನ ಮೇಲೆಯೇ ತಿರುಗಿಸಿದಾಗ ಸುಬ್ಬಾಭಟ್ಟನಿಗೆ ಆಶ್ಚರ್ಯದೊಂದಿಗೆ ಕೋಪವೂ ಉಂಟಾಯಿತು. 'ಎಲಾ ಪುಟ್ಟಣ್ಣಯ್ಯ, ಇರಲಿ; ನಿನ್ನ ಕೈಲಿ ಕೊಟ್ಟಣ ಕುಟ್ಟಿ ಸುತ್ತೀನೆ' ಎಂದು ಸುಬ್ಬಾಭಟ್ಟ ತನ್ನಲ್ಲಿಯೇ ಶಪಥ ಮಾಡಿಕೊಂಡನು. ಮಾರನೆಯ ದಿನ ಸಂಜೆ ಗುಡಿಯ ಸಭೆಯಲ್ಲಿ, "ಪುಟ್ಟಣ್ಣಯ್ಯ ಸೀತೆಯ ಮೇಲೆ ಕೈಮಾಡಿದ" ಎಂದು ಘೋಷಿಸಿದನು.

ಕುಳಿತಿದ್ದವರಿಗೆಲ್ಲಾ ಕಟ್ಟಚ್ಚರಿಯಾಯಿತು.

"ನೀನು ಕಂಡೆಯೇನೋ? ಇಲ್ಲದ್ದು ಸಲ್ಲದ್ದು ಹೇಳಿ ಕಿತಾಪತಿ ಹಚ್ಚಿಸ ಬೇಡ" ಎಂದು ಶಿವರಾಮಭಟ್ಟರು ಮಗನನ್ನು ಝಂಕಿಸಿದರು.

"ಕಾಣುವ ಹೊತ್ತಿಗೆ ತಾನೆ ಹೇಳಿದ್ದು? ಇವತ್ತು ಸೀತೆಗೆ ಹಾಗೆ ಮಾಡಿದ; ನಾಳೆ ಇನ್ನೊಬ್ಬರು. ದೊಡ್ಡವರು ಅವನಿಗೆ ಬುದ್ಧಿ ಕಲಿಸಬೇಕು ಅಂತ ತಾನೆ ನಾನು ಹೇಳಿದ್ದು? ಇಲ್ಲದಿದ್ದರೆ, ನನಗೇನು?"

"ಎಲ್ಲಿ? ಯಾವಾಗ" ಎಂದು ಕುತೂಹಲದಿಂದ ಪ್ರಶ್ನಿಸಿದರು ರಾವ: ಜೋಯಿಸರು.

"ನಿನ್ನೆ ಸಂಜೆ. ಅಂಚೆಕಚೇರಿಯೊಳಗೇ."

"ಈ ವಿಚಾರ ನಿನಗೆ ಹೇಗೆ ಮೊದಲು ಗೊತ್ತಾಯಿತು?"

"ನಾನು ಹೊಳೆಯಿಂದ ಬಟ್ಟೆ ಒಗೆದುಕೊಂಡು ಸಂಧ್ಯಾವಂದನೆ ಮಾ ಕೊಂಡು ಬರುತ್ತಿದ್ದೆ. ಆಗ ಸೀತಮ್ಮ ಅಂಚೆಕಚೇರಿಯ ಕಡೆ ಹೋಗುತ್ತಿದ್ದಳ ಕೈಯಲ್ಲಿ ಕಾಗದ ಇತ್ತು. ಈಚೆಗಂತೂ ಅವಳು ಎಂದೂ ಮನೆ ಬಿಟ್ಟು ಹೊ ಟವಳಲ್ಲ. ಅದು ಎಲ್ಲರಿಗೂ ಗೊತ್ತು. ನಾನು ಹಿಂದೆಯೇ ಹೋದೆ."

"ಕರೆಯದೆ ಮಾಡದೆ ನೀನು ಯಾಕೆ ಹಿಂದೆ ಹೋದೆ?" ಎಂದು ಸು ರಾಯರು ಪ್ರಶ್ನಿಸಿದರು. ಸುಬ್ಬಾಭಟ್ಟನಿಗೆ ಈ ಪ್ರಶ್ನೆ ಇಕ್ಕಟ್ಟಿನಲ್ಲಿ ಸಿಲುಕಿಸಿತ

"ನನಗೆ ಏನೋ ಅನುಮಾನವಾಯಿತು. ಪುಟ್ಟಣ್ಣಯ್ಯನವರ ಸಂಸಾ ಊರಿನಲ್ಲಿ ಇಲ್ಲ. ಯಾರೂ ಹೆಚ್ಚಾಗಿ ತಿರುಗಾಡುವ ಸ್ಥಳವಲ್ಲ. ಸ್ಕೂಲಿಗ ರಜ. ಹುಡುಗರೂ ಅತ್ತ ಸುಳಿಯುವುದಿಲ್ಲ. ಪುಟ್ಟಣ್ಣಯ್ಯನವರ ಸ್ವಭಾ ಸ್ವಲ್ಪ ಕೆಟ್ಟದ್ದು ಅಂತ ಸೀತಮ್ಮನ ಅಣ್ಣ ರಾಮಸ್ವಾಮಿಯೇ ನನಗೆ ಒಂ ಸಲ ತಿಳಿಸಿದ್ದ. ಇದರ ಮೇಲೆ ಏನಾದರೂ ಇರಲಿ, ಪರೀಕ್ಷೆ ಮಾಡಿಯೆ ಬಿಡೋಣ ಎಂದು ಹಿಂದೆ ಹೋಗಿ, ಅರಳಿಕಟ್ಟೆಯ ಬಳಿ, ಕುಳಿತಿದ್ದೆ— ಎಂದು ಸಮಯಸ್ಫೂರ್ತಿಯಿಂದ ತನ್ನ ಕಥನವನ್ನು ಪ್ರಾರಂಭಿಸಿ, ಮುಂ ನಡೆದದ್ದೆಲ್ಲವನ್ನೂ ತಾನು ಕಂಡಂತೆ ಬಣ್ಣ ಕಟ್ಟಿ ಬಿತ್ತರಿಸಿದ.

"ಹೀಗೆಯೇ ಆಗಿದ್ದರೆ ನಿಮ್ಮ ಮಕ್ಕಳ ಊಹೆ ಸರಿಯಾಗಿದೆ. ಆದ ಪುಟ್ಟಣ್ಣಯ್ಯನೊಬ್ಬನೇ ಅಪರಾಧಿ ಎಂದು ಹೇಗೆ ಹೇಳುವುದು? ಸೀತೆ ತಾನ ಗಿಯೇ ಇಷ್ಟಪಟ್ಟು ಅಲ್ಲಿಗೆ ಹೋಗಿರಬಹುದಲ್ಲ? ಆಗ ನಾವು ಏನೂ ಮಾಡು ಹಾಗಿಲ್ಲ" ಎಂದರು ನರಸಿಂಹಾಚಾರ್ರು.

ನಿಜದ ಸಂಗತಿ ಹಾಗಿರಲಿಲ್ಲ. ಹಾಗಿದ್ದರೂ ಇರಬಹುದಲ್ಲವೆ ಎಂ ಸಂದೇಹ ಸುಬ್ಬಾಭಟ್ಟನನ್ನು ಬಾಧಿಸದೆ ಹೋಗಲಿಲ್ಲ. ಆದರೆ ತಾನೇ ಬಯಸಿ ಸೀತೆ, ತನ್ನೊಡನೆಯೇ ಹಾಗೆ ನಡೆದುಕೊಂಡಿಲ್ಲದ ಏನೂ ಅರಿಯದ ಹುಡುಗಿ ಕೆಟ್ಟವಳಾಗಲು ಬಯಸಿದ್ದಾಳೆ ಎಂದು ನಂಬಲು ಅವನು ಸಿದ್ಧನಾಗಿರಲಿಲ್ಲ ಸೀತೆಯ ಮೇಲಣ ಪಕ್ಷಪಾತ ಅವಳ ನಿರ್ದೋಷಿತ್ವವನ್ನು, ನಿರಪರಾಧಿತ್ವ

ವನ್ನು ಸ್ಥಾಪಿಸಲು ಅವನನ್ನು ಪ್ರೇರಿಸಿತು.

"ತಂದೆತಾಯಿ ಅಂಕೆಯಲ್ಲಿರುವ ಸೀತೆಯಂಥ ಹೆಣ್ಣುಕೂಸು ಪುಂಶ್ಚಲಿಯಾಗುತ್ತಾಳೆ ಎಂದರೆ ನಂಬುವುದು ಕಷ್ಟ. ಇದರಲ್ಲಿ ಏನೋ ತಳತಂತ್ರ ಇದೆ" ಎಂದರು ನಂಜುಂಡಶಾಸ್ತ್ರಿಗಳು.

ಸುಬ್ಬಾಭಟ್ಟನಿಗೆ ನಂಜುಂಡಶಾಸ್ತ್ರಿಗಳ ಮಾತಿನಿಂದ ಸ್ವಲ್ಪ ಬೆಂಬಲ ಸಿಕ್ಕಿದಂತಾಗಿ, ಬಾಯಿ ಬಿಟ್ಟನು :

"....ನನಗೆ ಅನುಮಾನವಾಗಿ ತಾನೆ ನಾನು ಪೋಸ್ಟಾಫೀಸಿನ ಜಗಲಿಯ ಮೇಲೆ ಕಾದು ಕುಳಿತದ್ದು? ಹತ್ತು ಹದಿನೈದು ನಿಮಿಷ ಹಾಗೆ ಕಾದು ಕುಳಿತಿದ್ದೆ. ಪುಟ್ಟಣ್ಣಯ್ಯ ಸೀತೆ ಇಬ್ಬರೂ ಹೊರಕ್ಕೆ ಬಂದಾಗ ನೋಡಿದೆನಲ್ಲ: ಸೀತೆಯ ತಲೆಯ ಕೂದಲೆಲ್ಲ ಕೆದರಿತ್ತು. ಕಣ್ಣೆಲ್ಲ ಅತ್ತು ಅತ್ತು ಕೆಂಪಗಾಗಿತ್ತು. ಕೆನ್ನೆ ಕೂಡ ಒದ್ದೆಯಾಗಿತ್ತು. ಅವಳು ತಾನಾಗಿಯೇ ಇಷ್ಟಪಟ್ಟು ಅಲ್ಲಿಗೆ ಹೋಗಿದ್ದಿದ್ದರೆ, ಅವಳು ಹಾಗಿರುತ್ತಿದ್ದಳೆ? ನಗುತ್ತ ನಗುತ್ತ ಹೊರಕ್ಕೆ ಬರುತ್ತಿದ್ದಳು. ಹೌದೋ ಅಲ್ಲವೋ?"

ಎಲ್ಲರೂ ಕ್ಷಣಕಾಲ ಸ್ತಂಭೀಭೂತರಾಗಿದ್ದರು. ಸುಬ್ಬಾಭಟ್ಟನ ತರ್ಕಬದ್ಧವಾದ ಮಾತು ಎಲ್ಲರ ಮನಸ್ಸಿಗೂ ಸರಿ ಕಂಡಿತು; ಎಲ್ಲರ ಮನಸ್ಸಿನ ಮೇಲೂ ಪರಿಣಾಮವುಂಟುಮಾಡಿತ್ತು. ಎಲ್ಲವನ್ನೂ ಕೇಳಿಯಾದಮೇಲೆ ನಂಜುಂಡಶಾಸ್ತ್ರಿಗಳು ಅಧಿಕಾರವಾಣಿಯಿಂದ ನುಡಿದರು :

"ಸೀತೆ ಕಚೇರಿಯೊಳಗೆ ಪರಪುರುಷನೊಂದಿಗೆ ಏಕಾಂತದಲ್ಲಿ ಸ್ವಲ್ಪ ಹೊತ್ತು ಇದ್ದದ್ದು ಉಂಟು. ಇಷ್ಟರಿಂದಲೇ, ಅವಳೇ ಒಪ್ಪಿಕೊಂಡ ಹೊರತು ಅವಳ ಮಾನಭಂಗವಾಗಿದೆಯೆಂದು ಊಹಿಸುವುದಕ್ಕೆ ಪ್ರಮಾಣಗಳಿಲ್ಲ. ಆದರೂ ಇದು ಒಂದು ಹೇಯವಾದ ಪ್ರಕರಣ. ಯಾವುದೂ ಪ್ರಕಟವಾಗಿ ನಡೆಯದೇ ಇರುವುದರಿಂದ, ಹೆಣ್ಣುಮಗುವಿನ ಮಾನ ಕಾಪಾಡಬೇಕಾದ್ದು ನಮ್ಮ ಕರ್ತವ್ಯ. ಹೆಚ್ಚು ಗುಲ್ಲಿಗೆ ಅವಕಾಶ ಕೊಡಬಾರದು. ನಾವು ಮೊದಲು ಮಾಡಬೇಕಾದ ಕೆಲಸ ಎಂದರೆ, ಮಗಳ ವಿಚಾರದಲ್ಲಿ ಹೆಚ್ಚು ಜಾಗರೂಕರಾಗಿರಬೇಕೆಂದು ವೆಂಕಟಸುಬ್ಬಯ್ಯನವರಿಗೆ ಎಚ್ಚರಿಕೆ ಕೊಡಿಸುವುದು. ಎರಡನೆಯದಾಗಿ, ಸಾಧ್ಯವಾದಷ್ಟು ಬೇಗ ಶಾಸ್ತ್ರೋಕ್ತ ರೀತಿಯಲ್ಲಿ ಸೀತಮ್ಮನಿಗೆ ಮಡಿ ಕೊಡಿಸುವುದು : ಇದರಿಂದ ಅವಳಿಗೂ ಕ್ಷೇಮ, ಕುಟುಂಬಕ್ಕೂ ನೆಮ್ಮದಿ, ಊರೊಟ್ಟಿನ ಶುದ್ಧ

ಜೀವನಕ್ಕೂ ಶ್ರೇಯಸ್ಕರ. ಮೂರನೆಯದಾಗಿ...." ಎಂದು ಶಾಸ್ತ್ರಿಗಳು ಸ್ವಲ್ಪ ತಡವರಿಸಿದರು.

"ಪುಟ್ಟಣ್ಣಯ್ಯನ ಕೈಲಿ ಕೊಟ್ಟಣ ಕುಟ್ಟಿಸುವುದು" ಎಂದು ಸುಬ್ಬಾಭಟ್ಟ ಉದ್ರೇಕಗೊಂಡು ತಟ್ಟನೆ ನುಡಿದುಬಿಟ್ಟ. "ಹಾಗೆಂದರೇನೋ?" ಎಂದು ತಂದೆ ಮಗನನ್ನು ಪ್ರಶ್ನಿಸಿದರು. "ಅವನನ್ನು ಬೇರೆಯ ಊರಿಗೆ ಎತ್ತಿ ಹಾಕಿಸಿ ಬೇರೆಯ ಪೋಸ್ಟ್‌ಮಾಸ್ಟರನ್ನು ಬರಮಾಡಿಕೊಳ್ಳುವುದು!" ಎಂದು ಸುಬ್ಬಾಭಟ್ಟನು ವಿವರಣೆಯಿತ್ತನು. "ಅದೇನೂ ಕಷ್ಟವಿಲ್ಲ. ಪೋಸ್ಟ್ ಇಲಾಖೆಗೆ ಒಂದು ಮೂಗರ್ಜಿ ಬರೆದು ಹಾಕಿದರಾಯಿತು. ಕೆಲವು ವೇಳೆ, ಮೂಗರ್ಜಿಗೆ ಇರುವ ಬೆಲೆ, ರುಜು ಹಾಕಿದ ಅರ್ಜಿಗೆ ಇರುವುದಿಲ್ಲ. ರುಜು ಹಾಕಿದರೆ, ಪೋಸ್ಟಲ್ ಇನ್‌ಸ್ಪೆಕ್ಟರು ಬಂದು ನಮ್ಮನ್ನೆಲ್ಲಾ ವಿಚಾರಿಸುತ್ತಾರೆ. ಇದಕ್ಕೆಲ್ಲಾ ದಾಖಲೆ, ಪ್ರಮಾಣ, ಸಾಕ್ಷಿ ಎಲ್ಲಿಂದ ತರುವುದು? ಮೂಗರ್ಜಿಯಾದರೆ, ಏನೇನು ಬೇಕಾದರೂ ಬರೆಯಬಹುದು" ಎಂದರು ಸುಬ್ಬರಾಯರು. "ನೀವೇ ಬರೆಯಬೇಕು ಅರ್ಜಿಯನ್ನ, ಇಂಗ್ಲಿಷಿನಲ್ಲಿ" ಎಂದು ಸಲಹೆ ಮಾಡಿದ ಸುಬ್ಬಾಭಟ್ಟ. "ಅಯ್ಯಯ್ಯೊ, ಅದು ಮಾತ್ರ ಬೇಡ ಅಪ್ಪ. ನಾನು ಸರ್ಕಾರಿ ನೌಕರ. ನಾನು ಅಂತ ಸುಲಭದಲ್ಲೇ ಗೊತ್ತಾಗಿಹೋಗುತ್ತೆ" ಎಂದು ಸುಬ್ಬರಾಯರು ಭೀತಿಯನ್ನು ವ್ಯಕ್ತಪಡಿಸಿದರು. "ಬೇಡ, ಕನ್ನಡದಲ್ಲೇ ಬರೆದು ಕೊಡಿ. ನಾನೇ 'ಕಾಪಿ' ಮಾಡಿ ಕಳಿಸುತ್ತೇನೆ" ಎಂದು ಸುಬ್ಬಾಭಟ್ಟನೂ ತಾನು ಕಲಿತಿದ್ದಷ್ಟು ವಿದ್ಯೆಗೆ ತಕ್ಕ ಹೆಮ್ಮೆಯನ್ನು ಬೆರಸಿ ಹೇಳಿದನು.

ತುಸು ಹೊತ್ತು ಎಲ್ಲರೂ ಮೌನವಾಗಿದ್ದರು.

"ವೆಂಕಟಸುಬ್ಬಯ್ಯನವರು ಯಾವಾಗಲಾದರೂ ದೇವಸ್ಥಾನಕ್ಕೆ ಬಂದರೆ ನಾನು, ಕಂಡೂ ಕಾಣದ ಹಾಗೆ, ತಿಳಿದೂ ತಿಳಿಯದ ಹಾಗೆ, ಯಾರೋ ಕಂಡದ್ದನ್ನು ಯಾರೋ ಹೇಳಿ ಸುಬ್ಬಾಭಟ್ಟ ಕೇಳಿ ನನಗೆ ತಿಳಿಸಿದ ಹಾಗೆ, ಅತಿ ಸೂಕ್ಷ್ಮವಾಗಿ ಅವರಿಗೆ ತಿಳಿಸಿಬಿಡುತ್ತೇನೆ. ಆಗಬಹುದು ತಾನೆ?" ಎಂದು ಶಿವರಾಮಭಟ್ಟರು 'ಸಭೆ'ಯ ಅಪ್ಪಣೆ ಕೇಳಿದರು. "ಅದೇ ಸರಿಯಾದ ಮಾರ್ಗ" ಎಂದು ಎಲ್ಲರೂ ಒಪ್ಪಿದರು. "ಮುಡಿ ಗಿಡಿ ಹಿಡಿಸುವ ವಿಚಾರ ಹೇಳುವುದಕ್ಕೆ ಹೋಗಬೇಡಿ. ಅದು ಅವರಿಗೆ ಸೇರಿದ ವಿಚಾರ. ನಾವು ಪ್ರಶ್ನಿಸುವುದೂ ಬೇಡ" ಎಂದರು ಸುಬ್ಬರಾಯರು. "ಇರಲಿ, ಆ ವಿಚಾರ ಸದ್ಯಕ್ಕೆ

ಬೇಡ. ಮುಂದೆ ನಾನು ಸಮಯ ಸಂದರ್ಭ ಸಿಕ್ಕಿದಾಗ ತಿಳಿಸುತ್ತೇನೆ" ಎಂದು ಶಾಸ್ತ್ರಿಗಳು ಹೇಳಿದರು.

ಮಾರನೆಯ ದಿನದಿಂದ 'ಸಭೆ'ಯಲ್ಲಿ ಸುಬ್ಬಾಭಟ್ಟನಿಗೆ ಒಂದು ಗೌರವದ ಸ್ಥಾನ ಕಲ್ಪಿತವಾಯಿತು. ಹಿರಿಯರ ಮಾತುಕತೆಯಲ್ಲಿ ಕ್ರಮ ಕ್ರಮವಾಗಿ ಬೆರೆಯತೊಡಗಿದನು.

೪

ಎರಡು ಮೂರು ದಿನಗಳಲ್ಲಿ ಹಿಂದಿರುಗುತ್ತೇನೆ ಎಂದು ತಿಳಿಸಿಹೋಗಿದ್ದ ವೆಂಕಟಸುಬ್ಬಯ್ಯನವರು ಊರಿಗೆ ಮರಳಲು ಒಂದು ವಾರವೇ ಹಿಡಿಯಿತು. ಈ ನಡುವೆ, ಸೀತೆಯ ಪ್ರಕರಣ ಊರ ಮಾತಾಗಿತ್ತು. ಗುಡಿಯ ಸಭೆಯ ಪ್ರಭೃತಿಗಳು ವಿಷಯವನ್ನು 'ಪೇಟೆಯ ಮಾತಾಗಿ' ಮಾಡಲು ಇಷ್ಟಪಡದೆ ಇದ್ದರೂ ದಿನವೊಪ್ಪೊತ್ತಿನಲ್ಲಿ ಅದು 'ಕೋಟೆಯ ಮಾತಾಗಿ' ಬಿಟ್ಟಿದ್ದಿತು. ಗಂಡಸರು ತಮ್ಮ ತಮ್ಮ ಮನೆಯ ಹೆಂಗಸರಲ್ಲಿ, 'ಹೀಗಂತೆ, ಅಯ್ಯೋ ಪಾಪ' ಎಂದು ಸೀತೆಯ ಬಗೆಗೆ ಮರುಕವನ್ನು ತಳೆದೇ ವಿಷಯವನ್ನು ಪಿಸುಮಾತಿನಲ್ಲಿ ಅರುಹುತ್ತಿದ್ದರು. ಹೆಂಗಸರ ಕಿವಿಗೆ ಒಂದು ಹೆಣ್ಣಿನ ವಿಷಯವೇ ಬಿದ್ದರೆ ಕೇಳ ಬೇಕೆ? ಕಿವಿಯಿಂದ ಕಿವಿಗೆ, ಬಾಯಿಂದ ಬಾಯಿಗೆ ಬಿದ್ದು, ಜಗಲಿಯಿಂದ ಜಗಲಿಗೆ ಹಾರಿ, ಕೋಟೆಯನ್ನು ಬಿಟ್ಟು ಪೇಟೆಗೂ ಕಾಲಿಕ್ಕಿತು. ಕರಿಯಣ್ಣನೇ ರಾಮುಸ್ವಾಮಿಯನ್ನು ಕೇಳಿದ: "ಏನೋ, ಆ ಪುಟ್ಟಣ್ಣಯ್ಯನೋರಿಗೆ ಸ್ವಲ್ಪ ಗ್ರಾಚಾರ ವಕ್ರಿಸಿರುವ ಹಾಗೆ ಕಾಣುತ್ತದಲ್ಲೋ. ಅದೇನೋ ಮೊನ್ನೆ ಸಂಜೆ ನಿನ್ನ ತಂಗೀ ಮೇಲೆ ಒಸಿ ಕೈಮಾಡಿದನಂತೆ?" ರಾಮುಸ್ವಾಮಿ ಸ್ವಾರ್ಥಕ್ಕೋಸ್ಕರ ಪುಟ್ಟಣ್ಣಯ್ಯನವರ ವಕೀಲಿ ವಹಿಸಲೇಬೇಕಾಯಿತು. "ಇದು, ಸುಬ್ಬಾಭಟ್ಟ ಹರಡುತ್ತಿರುವ ಸುಳ್ಳು ಸುದ್ದಿ, ತನ್ನ ಮಾನ ಕಾಪಾಡಿಕೊಳ್ಳುವುದಕ್ಕೆ. ನಿಜವಾಗಿ ನಡೆದದ್ದೇನು, ನಿನಗೆ ಗೊತ್ತೆ?" ಎಂದು ರಾಮುಸ್ವಾಮಿ ಹೇಳಿದಾಗ, ಕರಿಯಣ್ಣನಿಗೆ ಆಶ್ಚರ್ಯವಾಯಿತು. "ಏನು?" ಎಂದು ಕುತೂಹಲಗೊಂಡು ಪ್ರಶ್ನಿಸಿದ. ಪುಟ್ಟಣ್ಣಯ್ಯನೂ ರಾಮುಸ್ವಾಮಿಯೂ ಒಟ್ಟುಗೂಡಿ ಆಲೋಚನೆ ಕಟ್ಟಿದ ಕಥೆಯನ್ನು ರಾಮುಸ್ವಾಮಿ ಕರಿಯಣ್ಣನಿಗೆ ಸವಿಸ್ತಾರವಾಗಿ ಹೇಳಿ, ಪುಟ್ಟಣ್ಣಯ್ಯ ವಾಸ್ತವವಾಗಿ ಸೀತೆಯ ಮಾನವನ್ನು ಕಾಪಾಡುವುದಕ್ಕೆ

ಪ್ರಯತ್ನಪಟ್ಟನೆಂದು ಸ್ಥಾಪಿಸಿದ. ಈ ವಿಷಯ ಕ್ರಮಕ್ರಮವಾಗಿ ಕೋಟೆ ಯೊಳಕ್ಕೆ ಹರಿದುಬಂದಿತು. ಇದರ ಫಲಿತಾಂಶವಾಗಿ, ಸೀತೆಯ ಮೇಲಿನ ಕಳಂಕ ಇನ್ನಷ್ಟು ಕಪ್ಪಾಯಿತು ; ಯಾರು ಕೆಡಿಸಿದರೇನು, ಅವಳು ಕೆಟ್ಟದ್ದು ಮುಖ್ಯ ಎಂದು ಸಿದ್ಧಾಂತವಾಯಿತು.

ಊರ ಹೆಂಗಸರು ಸ್ನಾನಘಟ್ಟದಲ್ಲಿ ಸೇರಿದಾಗ ಇಂಥ ವಿಚಾರಗಳನ್ನು ಕುರಿತು ಧಾರಾಳವಾಗಿ ಮನಃಪೂರ್ತಿಯಾಗಿ ಮಾತನಾಡುವರು. ಸಾಧಾರಣ ವಾಗಿ ಹೆರರ ಹುಳುಕನ್ನು ಎತ್ತಿ ಆಡುವುದೇ ಅವರ ಸಂಭಾಷಣೆಯ ಸಾಮಗ್ರಿ ; ಆಗುವವರು, ಆಗದೆ ಇರುವವರು ಎಂಬ ತಾರತಮ್ಯ ಭೇದವಿಲ್ಲದೆ ಎಲ್ಲರ ಮೇಲೂ ವಿಷ ಕಾರುವುದೇ ನಾಲಗೆಯ ಕಡಿತಕ್ಕೆ ಮದ್ದು ; ಪರಿಣಾಮದ ಮೇಲೆ ಲಕ್ಷ್ಯವಿಡದೆ ಟೀಕೆ ಮಾಡುವುದೇ ಹಲ್ಲನ್ನು ಹರಿತವಾಗಿಡಲು ಸಾಣೆಯಕಲ್ಲು. ಊರಿನೊಳಗೆ ಗುಸುಗುಸು ಪಿಸಪಿಸ ಎನ್ನುವವರೆಲ್ಲ ಸ್ನಾನಘಟ್ಟದಲ್ಲಿ ಗಂಟಲು ಬಿಟ್ಟು ಮಾತಾಡುವರು : ಇಲ್ಲದಿದ್ದರೆ ಆ ಹೊಳೆಯ ಗಾಳಿಯ ಮರಗಳ ಮೊರೆತದಲ್ಲಿ ಕೇಳಿಸುವುದಿಲ್ಲವಲ್ಲ ! ಮನಸ್ಸಿನಲ್ಲಿ ತುಂಬಿರುವ ಹೊಲಸಿನ ವೈಲಿಗೆ ಯನ್ನೆಲ್ಲಾ ಮಾತಾಡಿ ತೊಳೆದುಕೊಂಡು ಮಡಿಯಾಗಿ ಮನೆಗಳಿಗೆ ಹಿಂದಿರುಗು ವರು ! ವೈಲಿಗೆಯ ಮಾತನ್ನು ಗಾಳಿ ಹೊಡೆದುಕೊಂಡು ಹೋಗುವುದು, ಹೊಳೆ ಕೊಚ್ಚಿಕೊಂಡು ಹೋಗುವುದು. ಈ ಮಾತುಕತೆಯಿಲ್ಲದಿದ್ದರೆ ಹಳ್ಳಿಯ ಮಂದಿ ಬದುಕುವುದಾದರೂ ಹೇಗೆ ?

ಪಕ್ಕದ ಮನೆಯ ಸಾತಮ್ಮನವರಿಗೆ ಹೊಸ ಸುದ್ದಿ ಕಿವಿಗೆ ಬಿದ್ದ ಕೂಡಲೆ ಅವರು ಅದನ್ನು ಪಾರ್ವತಮ್ಮನವರಿಗೆ ತಿಳಿಸಿಬಿಡುದಾಗಿ ನಿರ್ಧರಿಸಿಬಿಟ್ಟಿದ್ದರು. ಅಲ್ಲದೆ ಕೋಟೆಯ ನೆರೆಹೊರೆಯ ಹೆಂಗಸರು ಆ ಕಾರ್ಯಭಾರವನ್ನು ಅವರಿಗೇ ವಹಿಸಿಬಿಟ್ಟಿದ್ದರು : " ನೋಡಿ, ನೀವಾದರೆ ತೀರ ಪಕ್ಕದ ಮನೆಯವರು. ಸಲಿಗೆ ವಹಿಸಿ ಒಂದು ಮಾತು ಹೇಳಬಹುದು. ನಾವು ಏನೂ ಅಂತ ಹೇಳೋಣ ? " ಎಂದಿದ್ದರು. ಅದೇ ಮೇರೆಗೆ, ಎರಡು ಮೂರು ದಿನ ಆದಮೇಲೆ, ತಮಗಿಂತ ಮುಂಚೆಯೇ ಹೊಳೆಗೆ ಹೊರಟಿದ್ದ ಪಾರ್ವತಮ್ಮನವರನ್ನು ಮನೆಯ ಬಾಗಿಲಿಗೆ ರಂಗೋಲಿಯಿಡುತ್ತಿದ್ದ ಸಾತಮ್ಮನವರು ನಿಲ್ಲಿಸಿಕೊಂಡು,

" ಏನು, ಆಗಲೆ ಹೊಳೆಗೆ ಹೊರಟುಬಿಟ್ಟರಿ ? " ಎಂದರು.

" ಹೋಗದೆ ಇದ್ದರೆ ಆಗುತ್ತೆಯೆ. ಕುಡಿಯುವುದಕ್ಕಾದರೂ ಎರಡು

ಬಿಂದಿಗೆ ನೀರು ಬೇಕಲ್ಲ. ಹೊತ್ತಾಗಿ ಹೊರಟರೆ, ರಾಮುಸ್ವಾಮಿ ಎಷ್ಟುಹೊತ್ತು ಅಂತ ಮನೆಯಲ್ಲಿರುತ್ತಾನೆ ? ಅವರೂ ಊರಿನಲ್ಲಿ ಇಲ್ಲ. ಸೀತೆ ಒಬ್ಬಳನ್ನೇ ಬಿಟ್ಟುಹೋಗುವುದು ಹೇಗೆ ? ”

“ ಸೀತೆಗೆ ಹೇಗಿದೆ ಈಗ ಮೈಗೆ ? ಏನೋ ಪಿತ್ತಸಂಕಟ ಅಂತ ಮೊನ್ನೆ ದೊಡ್ಡಿಪತ್ರೆ ಕೇಳಿ ತೆಗೆದುಕೊಂಡು ಹೋದಿರಲ್ಲ ? ”

“ ಹಾಗೆಯೇ ಇದೆಯಮ್ಮ. ಸ್ವಲ್ಪ ಜ್ವರಾನೂ ಕಾಣಿಸಿಕೊಂಡಿತ್ತು. ಆಸ್ಪತ್ರೆ ಔಷಧಿ ತಂದುಕೊಟ್ಟಿದಾನೆ ರಾಮುಸ್ವಾಮಿ. ರಾತ್ರಿಯ ಹೊತ್ತು ಸರಿಯಾಗಿ ನಿದ್ದೇನೇ ಮಾಡುವುದಿಲ್ಲ ; ಏನೇನೋ ಕನವರಿಕೆ. ಏನೋ ಭೀತಿ ಶಂಕೆ ಆಗಿರುವ ಹಾಗಿದೆಯಮ್ಮ. ಎಲ್ಲೂ ಹೊರಗೆ ಕೂಡ ಕಳಿಸುವುದಿಲ್ಲ.... ”

“ ನೀವು ಕಳಿಸುವುದಿಲ್ಲ ಅನ್ನಿ. ನನಗೆ ತಿಳಿಯದೆ ? ಇನ್ನೇನು ಬಂದೆ, ಒಟ್ಟಿಗೇನೇ ಹೋಗೋಣ ” ಎಂದು, ರಂಗೋಲೆಯಿಕ್ಕಿ ಮುಗಿಸಿದ್ದ ಸಾತಮ್ಮ ನವರು ಒಳಕ್ಕೆ ಹೋಗಿ, ಒಗೆಯಬೇಕಾದ ಸೀರೆಬಟ್ಟೆಗಳನ್ನೂ ಬಿಂದಿಗೆ ತಂಬಿಗೆ ಗಳನ್ನೂ ಹೊತ್ತುಕೊಂಡು ಜೊತೆಗೂಡಿದರು.

ಅರ್ಧ ದಾರಿ ಸಾಗಿದಾಗ, ಸಾತಮ್ಮನವರು ಹಿಂದೆ ಮುಂದೆ ಅಕ್ಕಪಕ್ಕ ತಿರುಗಿ ನೋಡಿದರು. ಯಾರೂ ಇರಲಿಲ್ಲ. ಮನಸ್ಸಿನಲ್ಲಿದ್ದುದನ್ನು ನುಡಿಯ ತೊಡಗಿದರು :

“ ಈಗ ಸ್ವಲ್ಪ ದಿನದ ಹಿಂದೆ, ಹೊತ್ತಿಗೆ ಮುಂಚೆ ನಿಮ್ಮ ಸೀತೆ ಒಬ್ಬಳೇ ಶಾನುಭೋಗರ ಮನೆಗೆ ಹಾಲಿಗೆ ಅಂತ ಹೊರಟಿದ್ದಳು. ನಮ್ಮ ಮನೆಯಲ್ಲಿ ಕೇಳಿದ್ದರೆ ಕೊಡುತ್ತಿರಲಿಲ್ಲವೆ ? ಹಾಗೆ ಒಬ್ಬಳನ್ನೇ ಹೊರಕ್ಕೆ ಬಿಡಬಾರದು ಅಂದ್ರೆ. ನಾನು ಹೀಗಂದೆ ಅಂತ ಏನೂ ತಿಳಿದುಕೊಳ್ಳಬೇಡಿ.... ”

“ ಆವೊತ್ತೂ ಹೀಗೇ ಹೊಳೆಗೆ ಹೋಗಿದ್ದೆ. ರಾಮುಸ್ವಾಮಿ ಕಾಫಿ ಕಾಸಿಕೊಡು ಅಂದನಂತೆ. ಮನೆಯಲ್ಲಿ ಹಾಲಿರಲಿಲ್ಲ. ಶಾನುಭೋಗರ ಮನೆಗೆ ಹೋಗಿ ತೆಗೆದುಕೊಂಡು ಬಾ ಅಂತ ಹೇಳಿಕಳಿಸಿದನಂತೆ. ಅವರು ಕರಾವು ಕಟ್ಟಿದಾರೆ ಅಂತ ಅಲ್ಲಿಗೆ ಹೇಳಿಕಳಿಸಿದ ಅಂತ ಕಾಣುತ್ತೆ. ಆಮೇಲೆ, ನಾನೇ ಅವಳನ್ನ ಚೆನ್ನಾಗಿ ಬೈದೆ : ಹಾಗೆಲ್ಲಾ ಹೇಳದೆ ಕೇಳದೆ ಹೋಗಬಾರದು, ಅಂತ. ”

“ ನೀವು ಕಳಿಸುವುದಿಲ್ಲ ಅನ್ನಿ. ನನಗೆ ಗೊತ್ತಿಲ್ಲವೆ ? ಅದು ಸರಿ. ಮೊನ್ನೆ

ಏನೋ ಮತ್ತೆ ಸಂಜೆ ಪೋಸ್ಟಾಫೀಸಿಗೆ ಹೋಗಿದ್ದಳಂತೆ.... ಅಲ್ಲಿ...."

"ಅದೇ ಅಮ್ಮ, ನಾನು ಹೇಳುವುದಕ್ಕೆ ಹೊರಟದ್ದು. ಅಂಚೆಗೆ ಹಾಕ ಬೇಕು ಅಂತ ಅವರು ಊರಿಗೆ ಹೋಗುವ ದಿನ ರಾಮುಸ್ವಾಮಿಯ ಕೈಗೆ ಒಂದು ಕಾಗದ ಕೊಟ್ಟಿದ್ದರಂತಮ್ಮ. ಅವನು ಅದನ್ನ ಮರೆತುಬಿಟ್ಟ. ಸಂಜೆ ಅವನಿಗೆ ಸಿಡಿಯುವ ತಲೆನೋವು. ನನ್ನ ಎದುರಿಗೇನೇ ಕಾಗದ ಹಾಕುವ ಹಾಗೆ ಹೇಳಿದ. ನಾನೂ ಒಪ್ಪಿಬಿಟ್ಟೆ ಅನ್ನಿ. ಕಳಿಸಬಾರದಾಗಿತ್ತು ಅಂತ ಈಗ ಅನ್ನಿಸುತ್ತೆ. ಹೋಗುವಾಗಲೆ ಮುಚ್ಚಂಜೆ. ದಾರಿಯಲ್ಲಿ ಆ ಅರಳಿಕಟ್ಟೆ ಇದೆಯಲ್ಲಮ್ಮ, ಅಲ್ಲಿ ಅದು ಯಾವ ದೆವ್ವ ಪಿಶಾಚಿ ಕಾಣಿಸಿಕೊಂಡಿತೋ, ಹೆದರಿಬಿಟ್ಟಿದಾಳೆ ಅಂತ ಕಾಣುತ್ತೆ. ಎಷ್ಟು ಹೊತ್ತಾದರೂ ಮನೆಗೇ ಬರಲಿಲ್ಲ. ಪಾಪ, ಪುಟ್ಟಣ್ಣಯ್ಯನವರೇ ಕರೆದುಕೊಂಡುಬಂದು ಬಿಟ್ಟುಹೋದರು. ಇನ್ನು ಮೇಲೆ ಕಳಿಸುತ್ತೇನೆಯೇ, ಖಂಡಿತ ಕಳಿಸುವುದಿಲ್ಲ. ಅವತ್ತು ದಿಗಿಲುಪಟ್ಟು ಬಿಟ್ಟಿದಾಳೆ. ಅದರ ನಚ್ಚು ಅಂತ ಕಾಣುತ್ತೆ, ಜ್ವರ...."

"ನಚ್ಚುಗಿಚ್ಚು ಅದೇನೂ ಇಲ್ಲ, ಪಾತಮ್ಮ. ನಾನು ಕೇಳಿದ್ದರಲ್ಲಿ.... ಸೀತೆ.... ಪೋಸ್ಟಾಫೀಸಿನೊಳಗೇ ತುಂಬ ಹೊತ್ತು ಇದ್ದಳಂತೆ...."

"ನಾನೇ ಹೇಳಿದೆನಲ್ಲಮ್ಮಾ. ಹೌದು. ಪುಟ್ಟಣ್ಣಯ್ಯನವರೇ ಕರೆದು ಕೊಂಡುಬಂದು ಬಿಟ್ಟುಹೋದರು ಅಂತ ಹೇಳಿದೆನಲ್ಲ...."

"ಅವರ ಹೆಂಡತಿ ಶಾರದಮ್ಮನೂ ಊರಿನಲ್ಲಿ ಇಲ್ಲವಂತೆ...."

"ಹೌದು, ತೌರುಮನೆಗೆ ಹೋಗಿದಾಳೆ, ಬಾಣಂತನಕ್ಕೆ."

"ಮನೆಯಲ್ಲಿ ಗಂಡಸರು ಒಬ್ಬರೇ ಇರುವಾಗ ಅವಳು ಒಳಕ್ಕೆ ಹೋಗ ಬಹುದೇ? ಮನೆತಪ್ಪಿದ ಹುಡುಗಿ, ಈಗ ದೊಡ್ಡೋಳು ಬೇರೆ ಆಗಿದಾಳೆ; ಶಾರದಮ್ಮನ ಹಾಗೆ ಕುರೂಪಿಯೂ ಅಲ್ಲ.... ಈ ಗಂಡಸರನ್ನ ನೆಚ್ಚೋದಕ್ಕೇ ಇಲ್ಲವಮ್ಮ...."

"ಸೀತೆ ತುಂಬ ಭಯಸ್ಥೆ ಅಂದ್ರೆ. ಹಾಗೆಲ್ಲಾ...."

"ಸೀತೆ ಗಂಡುಬೀರಿ ಅಲ್ಲವಮ್ಮ. ನನಗೂ ಗೊತ್ತು. ಗಂಡಸರು ಮಾನಮರ್ಯಾದೆ ಬಿಟ್ಟಾಗ ಹೆಂಗಸಿನ ಭಯ ಅವಳನ್ನ ಕಾಪಾಡುತ್ತೆಯೆ, ಪಾತಮ್ಮ? ಸೀತೆ.... ನಿಮ್ಮ ಸೀತೆ ಅಲ್ಲ.... ರಾಮನ ಹೆಂಡತಿ ಸೀತೆ, ರಾವಣನ ಹಿಂದೆ ಓಡಿಹೋದಳೆ? ದುರ್ಯೋಧನ ಗಂಡಂದಿರ ಎದುರಿಗೇನೇ ದ್ರೌಪದಿಯ

ಸೀರೆ ಸೆಳಸಲಿಲ್ಲವೆ ? ನಿಮ್ಮ ಸೀತೆಯದೇನು ಹೆಚ್ಚು ?.... ಮಾಡಿದೋರ ಪಾಪ ಆಡಿದೋರ ಬಾಯಲ್ಲಿ ಅಂತ ನಮಗ್ಯಾಕೆ ಹೇಳಿ ಇದೆಲ್ಲ. ಅದೇನೋ ಶಿವರಾಮಭಟ್ಟರ ಮಗನೇ ಕಣ್ಣಾರೆ ಕಂಡನಂತಮ್ಮ.... ಸೀತೆ ಪುಟ್ಟಣ್ಣಯ್ಯ ಇಬ್ಬರೂ ಕಚೇರಿಯಿಂದ ಹೊರಕ್ಕೆ ಬಂದದ್ದನ್ನ. ಎಷ್ಟು ದಿಟವೋ ಎಷ್ಟು ಸುಳ್ಳೋ ಯಾರಿಗೆ ಗೊತ್ತಮ್ಮ ? ನಾನು ಹೀಗೆ ಹೇಳಿದೆ ಅಂತ ಏನೂ ತಿಳಿದು ಕೊಳ್ಳಬೇಡಿ. ಇನ್ನುಮೇಲೆ ಸ್ವಲ್ಪ ಕಟ್ಟುನಿಟ್ಟಾಗಿದ್ದರೆ ವಾಸಿ. ಈಚಲ ಮರದ ಕೆಳಗೆ ಮಜ್ಜಿಗೆ ಕುಡಿದಹಾಗೆ. ಏನೂ ಇಲ್ಲದೇನೆ ಇರಬಹುದು; ಆದರೂ ಜನಾನೂ ಮೆಚ್ಚಿಸಬೇಕಲ್ಲಮ್ಮ."

ಇಷ್ಟು ಹೊತ್ತಿಗೆ ಹೊಳೆಯೂ ಸಿಕ್ಕಿತು. ಇತರರ ಎದುರು ಇನ್ನ ಈ ಮಾತು ಬೆಳೆಯುವ ಹಾಗಿಲ್ಲ; ಅಲ್ಲಿಗೇ ನಿಂತಿತು.

ಸಾತಮ್ಮನವರು ಪಾರ್ವತಮ್ಮನವರ ಮನಸ್ಸಿನಲ್ಲಿ ಒಂದು ಶಂಕೆಯ ಬೀಜವನ್ನು ಬಿತ್ತಿದರು. ಅವರ ಮನಸ್ಸು ತುಸು ಕಳವಳಗೊಂಡಿತು. ಹೊಳೆಯಲ್ಲಿ ಎಲ್ಲರಿಗೂ ಮುಖ ಕೊಟ್ಟು ನಿಲ್ಲುವುದಕ್ಕೂ ಮನಸ್ಸಾಗಲಿಲ್ಲ. ಬೇಗನೆ ಮಡಿಯುಟ್ಟು, ನೀರು ತುಂಬಿದ ಬಿಂದಿಗೆಗಳನ್ನು ಹೊತ್ತು ಮನೆಯ ಕಡೆ ಕಾಲು ಹಾಕಿದರು. ಆ ದಿನ ತಲೆಯ ಮೇಲಿನ ಬಿಂದಿಗೆ ಎಂದಿಗಿಂತ ಹೆಚ್ಚು ಭಾರವಾಗಿ ಕಾಣತೊಡಗಿತು ಅವರಿಗೆ.

೫

ಸಾತಮ್ಮನವರು ಹೇಳಿದ್ದು ಒಂದುವೇಳೆ ನಿಜವೇ ಆದರೂ ಆ ಬಗೆಗೆ ಮನೆಯಲ್ಲಿ ಹಗರಣ ಮಾಡಿ ಪ್ರಯೋಜನವಿಲ್ಲವೆಂದು ಪಾರ್ವತಮ್ಮನವರು ಭಾವಿಸಿದರು. 'ಪಾಪ, ಅವಳೇನು ಮಾಡುತಾಳೆ ? ಅವಳ ದುರದೃಷ್ಟ ಇನ್ನೂ ಅವಳನ್ನ ಎಷ್ಟು ಬಗೆಯಲ್ಲಿ ಕಾಡಬೇಕಾಗಿದೆಯೋ. ದುಷ್ಟರಿಂದ ದೂರ ಇದ್ದರಾಯಿತು. ಏನೇ ಆಗಲಿ, ಇನ್ನು ಅವಳನ್ನ ಮನೆ ಬಿಟ್ಟು ಹೊರಕ್ಕೆ ಕಳಿಸುವುದಿಲ್ಲ' ಎಂದು ನಿರ್ಧಾರಮಾಡಿಕೊಂಡರು. 'ಅವರು ಊರಿಗೆ ಬಂದಮೇಲೆ ಅವರ ಕೈಲಿ ಹೇಳುವುದೋ ಬಿಡುವುದೋ ?' ಎಂದು ಅವರ ಮನಸ್ಸು ಇಬ್ಬಗೆಯಾಯಿತು. 'ಪಾಪ, ಅವರೇನು ಮಾಡುತ್ತಾರೆ. ನಾನು ಎಚ್ಚರಿಕೆಯಿಂದ ಇರಬೇಕು' ಎಂದುಕೊಂಡರು. ಒಂದು ಕಡೆ ಮಗಳ

ಮೇಲೆ ಮರುಕ; ಇನ್ನೊಂದು ಕಡೆ 'ಹೀಗೂ ಆಗಬೇಕಾಗಿತ್ತೆ?' ಎಂಬ ಕೊರಗು; ಮಗುದೊಂದು ಕಡೆ ತಮ್ಮ ಮುಂದಿನ ಹೊಣೆಗಾರಿಕೆಯ ಬಗೆಗೆ ಚಿಂತೆ. ಹೆತ್ತ ಕರುಳು ಮೂಕನೋವಿನಿಂದ ವಿಲವಿಲನೆ ಒದ್ದಾಡತೊಡಗಿತು.

ಸೀತೆಯ ಮನಸ್ಸೂ ಅಸ್ವಸ್ಥವಾಗಿತ್ತು. ಮತ್ತೆ ಒಂದಿರುಳು ಹಿಂದಿನಂತೆ ಕನವರಿಸಿಕೊಂಡಳು. ಅವಳ ಅರ್ಥಂಬರ್ಥ ವಾಕ್ಯಗಳ, ಕೂಗಿಕೊಂಡ ಹೆಸರುಗಳ ಹಿಂದಿನ ಹಿನ್ನೆಲೆ ಸಾತಮ್ಮನವರು ಹೇಳಿದ್ದೇ ಇದ್ದರೂ ಇರಬಹುದೆಂದು ಪಾರ್ವತಮ್ಮನವರಿಗೆ ಭಾಸವಾಗತೊಡಗಿತು. ಅವಳ ದೇಹದ ಅಸ್ವಸ್ಥತೆಗೂ ಅದೇ ಕಾರಣವಿರಬಹುದೆಂದೂ ಅವರು ಶಂಕಿಸತೊಡಗಿದರು. ತಾಯಿಯ ಸೂಚನೆಯಂತೆ ರಾಮುಸ್ವಾಮಿ ಆಸ್ಪತ್ರೆಯಿಂದಲೇ ಔಷಧವನ್ನು ತಂದುಕೊಡುತ್ತಿದ್ದನು.

ಪಾರ್ವತಮ್ಮನವರು ಹೊಳೆಗೆ ಹೋಗುವ ಕಾರ್ಯಕ್ರಮವನ್ನೇ ನಿಲ್ಲಿಸಿಬಿಟ್ಟರು. ಅಡಿಗೆಗೂ ಕುಡಿಯುವುದಕ್ಕೂ ಮನೆಯ ಬಾವಿಯ ನೀರನ್ನೇ ಉಪಯೋಗಿಸತೊಡಗಿದರು. ರಾಮುಸ್ವಾಮಿ ಊಟಕ್ಕೆ ಕುಳಿತಾಗ, "ಯಾಕೆ, ನೀರು ಸ್ವಲ್ಪ ಉಪ್ಪುಪ್ಪಾಗಿದೆಯಲ್ಲ? ಬಾವಿಯ ನೀರೆ?" ಎಂದು ಕೇಳಿದ. "ಹೌದಪ್ಪ. ಏನು ಮಾಡೋದು ಹೇಳು. ನನಗೂ ವಯಸ್ಸಾಗುತ್ತ ಬಂತು. ಹೊಳೇ ನೀರು ಹೊತ್ತೂ ಹೊತ್ತೂ ನನ್ನ ಸೊಂಟವೆಲ್ಲ ಬಿದ್ದುಹೋಯಿತು. ಇನ್ನುಮೇಲೆ ನನ್ನ ಕೈಲಾಗೋದಿಲ್ಲ. ಮುಖ್ಯ, ಸೊಸೆಯ ಕೈಲಿ ಸೇವೆ ಮಾಡಿಸಿಕೊಳ್ಳೋ ಪುಣ್ಯ ನನ್ನ ಹಣೆಯಲ್ಲಿ ಬರೆದಿಲ್ಲ" ಎಂದು ಬೇಸರದ ದನಿಯಲ್ಲಿ ಹೇಳಿದರು. ರಾಮುಸ್ವಾಮಿ ಬಾಯಿ ಮುಚ್ಚಿಕೊಂಡು ಊಟಮಾಡಿ ಎದ್ದುಹೋದ.

ರಾಮುಸ್ವಾಮಿಗೆ ಇನ್ನು ಯಾವ ಬಗೆಯ ಆತಂಕವೂ ಇರಲಿಲ್ಲ. ಹಣ ಬರಲಿಲ್ಲವಲ್ಲಾ ಎನ್ನುವುದೊಂದೇ ಚಿಂತೆ. ಅಂಚೆಯ ಕಚೇರಿಗೆ ಅವನ ನಿತ್ಯ ಪ್ರಯಾಣ ತಪ್ಪುವಹಾಗೇ ಇರಲಿಲ್ಲ.

ಒಂದು ಸಲ, ಸಹಜವಾಗಿಯೇ ಮಾತು ಎದ್ದಿತು :

"ಏನು ರಾಮುಸ್ವಾಮಿ, ಏನು ಸಮಾಚಾರ? ಎಲ್ಲಾ ಸರಿಹೋಯಿತು ತಾನೆ?"

"ಸರಿಹೋಗದೇನು? ಪೇಟೆಯಲ್ಲಿ ಸುಬ್ಬಾಭಟ್ಟನ ಮಾತು ನಡೆಯುವ

ಹಾಗೇ ಇಲ್ಲ. ಕೋಟೆಯಲ್ಲೇನೋ ಸ್ವಲ್ಪ ಪುಕಾರು ಹಚ್ಚಿದ್ದಾನೆ. ಸ್ವಲ್ಪ ಬೆಳೆಯಲಿ ಅಂತಲೇ ನಾನು ಸುಮ್ಮನಿದ್ದೇನೆ; 'ಖತ್ನ' ಮಾಡಬೇಕಾದರೆ, ಸ್ವಲ್ಪ ಬೆಳೆಯುವುದಕ್ಕೆ ಅವಕಾಶ ಕೊಡಬೇಕು. ಈಗ, ನೀವು ಅಂಚೆಯ ಕಚೇರಿಯಲ್ಲಿ ಅಡಗಿಕೊಂಡು ಕುಳಿತಿದ್ದರೆ ಆಗುವುದಿಲ್ಲ. ಅವೊತ್ತು ರಾತ್ರಿ ಧೈರ್ಯವಾಗಿ ಬಂದೋರು, ಈಗ ಯಾಕೆ ಹೆದರಿ ಕುಳಿತಿದೀರಿ? ನೀವು ಹೀಗಿದ್ದರೆ, ಇಲ್ಲದ ಸಂಶಯಕ್ಕೆ ಅವಕಾಶವಾಗುತ್ತೆ. ನೀವು ಎಂದೂ ಎಂದಿನ ಹಾಗೆ ತಿರುಗಾಡಿಕೊಂಡಿರಿ. ಎಲ್ಲ ನಾನು ನೋಡಿಕೊಳ್ಳುತೇನೆ. ನಿಮಗೆ ಯಾಕೆ ಹೆದರಿಕೆ?" ಎಂದು ಪುಟ್ಟಣ್ಣಯ್ಯನವರಿಗೆ ಧೈರ್ಯ ಹೇಳಿದನು.

"ಹೆದರಿಕೆಯೂ ಇಲ್ಲ ಏನೂ ಇಲ್ಲವಪ್ಪ. ಹೆದರಿದರೆ ನಿನಗೆ ಹೆದರಬೇಕಯ್ಯಾ" ಎಂದು ಪುಟ್ಟಣ್ಣಯ್ಯ ನಕ್ಕರು.

"ನಿಮ್ಮನ್ನ ಹೆದರಿಸೋದಕ್ಕೆ ತಾನೆ ನಾನು ಈಗ ಬಂದಿರುವುದು. ಎಲ್ಲಿ, ಒಂದು ಹತ್ತು ರೂಪಾಯಿದ್ದರೆ ಕೊಡಿ ಮತ್ತೆ. ಮನಿಯಾರ್ಡರು ಬಂದಮೇಲೆ ಕೊಡುತ್ತೇನೆ" ಎಂದು ರಾಮುಸ್ವಾಮಿಯೂ ನಕ್ಕು ನುಡಿದನು.

"ಏನು, ಹುಡುಗಾಟವಾಡುತೀಯಲ್ಲ, ರಾಮುಸ್ವಾಮಿ."

"ಹೆದರಿಸೋ ಮಾತು ಹುಡುಗಾಟ. ಹಣದ ಮಾತು...."

"ಇಸ್ಪೀಟಾಟ!"

"ಈಗೇನು, ಉಂಟೋ ಇಲ್ಲವೋ?"

ಪುಟ್ಟಣ್ಣಯ್ಯ ಎದ್ದುಹೋಗಿ ಐದು ರೂಪಾಯಿ ತಂದು ರಾಮುಸ್ವಾಮಿಯ ಕೈಗೆ ಹಾಕಿದ. ರಾಮುಸ್ವಾಮಿ ಸುಪ್ರಸನ್ನನಾದ.

"ಅದು ಸರಿಯೆ. ನನ್ನ ಕೆಲಸದ ವಿಚಾರ ಏನು? ಎಲ್ಲಿಗಾದರೂ ಅರ್ಜಿ ಹಾಕಿಸುತ್ತೇನೆ ಎಂದು ಹೇಳಿದ್ದಿರಲ್ಲ?"

"ಆತುರಪಟ್ಟರೆ ಆಗುತ್ತೇನಯ್ಯಾ? ಎಲ್ಲಾದರೂ ಖಾಲಿ ಇರುವುದು ತಿಳಿದರೆ ಹಾಕಿಸಬಹುದು. ನೋಡೋಣ. ಹಾಸನದ ಡಿ.ಇ.ಓ. ನಾನು ಬಲ್ಲೆ; ನಮ್ಮ ಜನ. ಹಾಸನದ ಕಡೆ ಹೋದಾಗ ವಿಚಾರಿಸಿ ನೋಡುತ್ತೇನೆ, ಸರಿಯೆ?"

"ಅಂತೂ ಮರೆಯಬೇಡಿ...." ಎಂದು ರಾಮುಸ್ವಾಮಿ ಗೆಲುವುಗೂಡಿ ಎದ್ದನು.

ಪುಟ್ಟಣ್ಣಯ್ಯನೂ ಗೆಲುವುಗೂಡಿಯೇ ಇದ್ದರೂ, ಮನಸ್ಸು ಹುಳ್ಳ ಹುಳ್ಳಗೆ ಇದ್ದಿತು. ಪರಿಣಾಮ ಏನಾಗುವುದೋ ಎಂದು ಭೀತಿಗೊಂಡಿದ್ದನು.

'ರಾಮಸ್ವಾಮಿ ಹೇಳಿದ ಹಾಗೆ ಮಾಡುವುದೇ ಸರಿ' ಎಂದು ನಿರ್ಧರಿಸಿ ಕೊಂಡನು.

ಪುಟ್ಟಣ್ಣಯ್ಯ ಹಾಸನದ ಮಾತೆತ್ತಿದಾಗ ರಾಮಸ್ವಾಮಿಯ ತೀರದ ಬಯಕೆಯೊಂದು ಕಾಡತೊಡಗಿತು. ತಂದೆ ಊರಿಗೆ ಮರಳಿದಮೇಲೆ, ಡಿ.ಇ.ಒ. ಅವರನ್ನು ಕಾಣುವ ನೆಪ ಮುಂದಿಟ್ಟುಕೊಂಡು ಹುಸೇನಿಯೊಡನೆ ಹಾಸನಕ್ಕೆ ಹೋಗುವ ಯೋಚನೆ ಮಾಡಿದ.

ವೆಂಕಟಸುಬ್ಬಯ್ಯನವರು ಇನ್ನೂ ಊರಿಗೆ ಮರಳಿರಲಿಲ್ಲವಷ್ಟೆ. ಆಗ ಪುಟ್ಟಣ್ಣಯ್ಯ ರಾಮಸ್ವಾಮಿಯ ಸಲಹೆಯನ್ನು ಅನುಸರಿಸಿ, ಎರಡು-ಮೂರು ದಿನ ವೆಂಕಟಸುಬ್ಬಯ್ಯನವರ ಮನೆಯ ಮುಂದೆಯೇ ಕೋಟೆಯನ್ನು ಹಾದು ಪೇಟೆಗೆ ಧೈರ್ಯವಾಗಿ ಹೋದನು. ಗುಡಿಯ ಮೂಲೆಯಲ್ಲಿ ಸುಬ್ಬಾಭಟ್ಟ ಕಾಣದೆ ಇರಲಿಲ್ಲ. ಒಬ್ಬರನ್ನೊಬ್ಬರು ದುರುಗುಟ್ಟಿಕೊಂಡು ನೋಡಿದರು. ಆ ದೃಷ್ಟಿಯುದ್ಧದ ರಹಸ್ಯ ಅವರಿಬ್ಬರಿಗೆ ಮಾತ್ರ ಗೊತ್ತು.

ಪುಟ್ಟಣ್ಣಯ್ಯ ಇದುವರೆಗೆ ನಾರಾಯಣಶೆಟ್ಟರ ಅಂಗಡಿಯಲ್ಲಿ ವ್ಯಾಪಾರ ಮಾಡುತ್ತಿದ್ದನು. ಇದ್ದಕ್ಕಿದ್ದಂತೆ ಸಾಹುಕಾರ ರಾಮಪ್ಪನವರ ಅಂಗಡಿಗೆ ಹೋಗಿ, ಅಲ್ಲಿ ವ್ಯಾಪಾರ ಮಾಡತೊಡಗಿದನು. ರಾಮಸ್ವಾಮಿಯ ಮೂಲಕ ಅವನಿಗೆ ಕರಿಯಣ್ಣನ 'ವಾಕ್ ಸಹಾಯ' ದೊರಕಿತ್ತಷ್ಟೆ. ಪೇಟೆಯ ಜನ ಕೋಟೆಯ ಜನಕ್ಕಿಂತ ಪ್ರಬಲರು ಎಂದು ವ್ಯವಹಾರಜ್ಞನಾದ ಪುಟ್ಟಣ್ಣಯ್ಯ ಬಲ್ಲನು. ಅವರ ಬೆಂಬಲ ತನಗಿದ್ದರೆ ಸಾವಿರ ಸುಬ್ಬಾಭಟ್ಟರು ಕೂಡ ತನ್ನನ್ನು ಏನೂ ಮಾಡಲಾರರೆಂದು ನಂಬಿದ್ದನು.

ಈ ನಂಬಿಕೆ ಅವನಿಗೆ ಮೊದಲಿದ್ದಿಲ್ಲದ ಒಂದು ಹೊಸ ಧೈರ್ಯವನ್ನು ಕೊಟ್ಟಿತು. ವೆಂಕಟಸುಬ್ಬಯ್ಯನವರ ಮನೆಯ ಕಡೆ ಸುಮ್ಮನೆ ತಿರುಗಿ ನೋಡಿ ಹೋಗುತ್ತಿದ್ದವನು, ಒಂದು ಸಂಜೆ ಅವರ ಮನೆಯ ಮುಂದೆ ನಿಂತು "ರಾಮಸ್ವಾಮಯ್ಯಾ" ಎಂದು ಕೂಗು ಹಾಕಿದನು. ಉತ್ತರ ಬರಲಿಲ್ಲ. ಜಗಲಿಯ ಮೆಟ್ಟಲು ಹತ್ತಿ, ಬಾಗಿಲ ಮುಂದೆಯೇ ನಿಂತನು. ಒಳಗಡೆ ಕೆಳಹಜಾರದಲ್ಲಿ ಮುಂಬಾಗಿಲ ಬಳಿಯೆ ಪಾರ್ವತಮ್ಮನವರು ಎಲೆ ಹಚ್ಚಿಸುತ್ತ ಕುಳಿತಿದ್ದರು. ಸೀತೆ, ಮೇಲಿನ ಹಜಾರದಲ್ಲಿ, ಚಾಪೆಯ ಮೇಲೆ ಹಾಸಿಗೆಯ ಸುರಳಿಗೊರಗಿ ಕೊಂಡು ಕುಳಿತಿದ್ದಳು.

"ರಾಮುಸ್ವಾಮಯ್ಯ ಮನೆಯಲ್ಲಿಲ್ಲವೊ?" ಎಂದು ಪುಟ್ಟಣ್ಣಯ್ಯ ಕೇಳಿದನು. ಸೀತೆಯ ಮುಖವನ್ನು ದೃಷ್ಟಿಸಿ ನೋಡಿದನು; ಸೀತೆ ತನ್ನ ಮುಖವನ್ನು ಬೇರೆಯ ಕಡೆಗೆ ತಿರುಗಿಸಿಕೊಂಡಳು. "ಇಲ್ಲ...." ಎಂದು ಪಾರ್ವತಮ್ಮನವರು ತಲೆ ಬಗ್ಗಿಸಿಕೊಂಡೇ ಹೇಳಿದರು.

ಪುಟ್ಟಣ್ಣಯ್ಯನ ಕೊಂಕುಳಿನಲ್ಲಿ 'ವೃತ್ತಾಂತ ಪತ್ರಿಕೆ'ಯ ಪ್ರತಿ ಇದ್ದಿತು. ಅವನಿಗೆ ಏನೋ ಹೊಳೆಯಿತು. ತಟ್ಟನೆ ಹೇಳಿದ: "ಯಜಮಾನರು ಪತ್ರಿಕೆ ಬೇಕು ಅಂತ ಕೇಳಿದ್ದರಂತೆ. ಬಾರಯ್ಯ ತೆಗೆದುಕೊಂಡು ಹೋಗು ಅಂತ ಹೇಳಿದ್ದೆ. ಬರಲೇ ಇಲ್ಲ. ತೆಗೆದುಕೊಳ್ಳಿ, ಓದಿಯಾದಮೇಲೆ ನಿಧಾನವಾಗಿ ಕಳಿಸಿದರಾಯಿತು" ಎಂದು ಪತ್ರಿಕೆಯನ್ನು ಬಾಗಿಲ ಬಳಿ ಇರಿಸಿದ. "ಸೀತಮ್ಮನಿಗೆ ಈಗ ಹೇಗಿದೆ? ಏನೊ ಮೈಗೆ ಸ್ವಸ್ಥವಿಲ್ಲ ಅಂತ ಹೇಳಿದನಲ್ಲ ರಾಮುಸ್ವಾಮಿ?" ಎಂದು ಹೊರಟಿದ್ದವನು, ಈ ಪ್ರಶ್ನೆ ಕೇಳಿ ನಿಂತ.

ಪಾರ್ವತಮ್ಮನವರು ಏನು ಹೇಳುವುದಕ್ಕೂ ತೋರದೆ, ಏನು ಮಾಡಲೂ ಅರಿಯದೆ, ಮೌನವಾಗಿದ್ದರು.

"ಎದ್ದು ಕುಳಿತಿದ್ದಾಳಲ್ಲ, ಈಗ ಮೇಲೂ ಅಂತ ಕಾಣುತ್ತೆ" ಎಂದು ತಾನೇ ಉತ್ತರ ಕೊಟ್ಟುಕೊಂಡು, ಹೇಳಿದ: "ಯಜಮಾನರು ಬಂದಿಲ್ಲ ಊರಿಗೆ ಅಂತ ಹೇಳಿದ ರಾಮುಸ್ವಾಮಿ. ಬಂದರೆ ನಾನು ಬಂದಿದ್ದೆ ಅಂತ ಹೇಳಿ ತಾಯಿ. ಪತ್ರಿಕೆಗೆ ಭಾನುವಾರ ಹೊತ್ತಿಗೆ ಬಿಡುವಾಗಿರುತ್ತೆ. ಪ್ರತಿವಾರವೂ ಬಂದು ತೆಗೆದುಕೊಂಡುಹೋಗಲಿ, ಬೇಕಾದರೆ. ಇಲ್ಲದಿದ್ದರೆ ಈ ಕಡೆ ಬರುತಾ ನಾನೇ ತಂದುಕೊಟ್ಟು ಹೋಗುತೇನೆ, ಏನು ಮಹಾ.... ಬರುತೇನೆ."

"ಒಳ್ಳೆಯದಪ್ಪ" ಎಂದರು ಪಾರ್ವತಮ್ಮನವರು.

ಪುಟ್ಟಣ್ಣಯ್ಯ ಹೊರಟುಹೋದನು.

'ಆತ ಅವೊತ್ತು ಹಾಗೆ ನಡೆದುಕೊಂಡಿದ್ದರೆ ಇವೊತ್ತು ಹೀಗೆ ಧೈರ್ಯವಾಗಿ ಬರುತ್ತಿದ್ದನೆ? ಈ ಜನ ಇಲ್ಲದ ಚಾಡಿಕ್ಷುದ್ರ ಚುಚ್ಚುತ್ತಿದ್ದಾರೆಯೊ?' ಎಂಬ ಶಂಕೆ ಪಾರ್ವತಮ್ಮನವರ ಮನಸ್ಸಿನಲ್ಲಿ ಸುಳಿಯಿತು.

'ಅಮ್ಮಾ, ಈ ಪುಟ್ಟಣ್ಣಯ್ಯನವರನ್ನ ಇನ್ನು ಮೇಲೆ ನಮ್ಮ ಮನೆಯ ಬಾಗಿಲಿಗೆ ಬರಬೇಡಿ ಅಂತ ಹೇಳಮ್ಮ' ಎಂದು ಬಾಯಿಗೆ ಬಂದಿದ್ದ ಮಾತನ್ನು ಸೀತೆ ಹಲ್ಲುಕಚ್ಚಿ ನುಂಗಿಕೊಂಡಳು.

೬

ಮೂರು–ನಾಲ್ಕು ದಿನಗಳಲ್ಲಿ ಹಿಂದಿರುಗುತ್ತೇನೆಂದು ಹೇಳಿ ಹೋಗಿದ್ದ ವೆಂಕಟಸುಬ್ಬಯ್ಯನವರು ಹತ್ತು ದಿನದಮೇಲೆ ಊರಿಗೆ ಮರಳಿದರು. ಅವರು ಹಿಂದಿರುಗಿದಾಗ ಸೀತೆ ಹೊರಗಾಗಿ ಕುಳಿತಿದ್ದಳು ; ಕೂಡಲೆ ಜ್ವರವೂ ನಿಂತಿತ್ತು.

ವೆಂಕಟಸುಬ್ಬಯ್ಯನವರು ಬಸ್ಸಿನಿಂದ ಇಳಿದು ಬಂದವರು ' ಉಸ್ಸಪ್ಪಾ ' ಎನ್ನುತ್ತಲೇ ಮನೆಯನ್ನು ಪ್ರವೇಶಿಸಿದರು. ಕಾರಣ, ತಮ್ಮ ಗಂಟುಮೂಟೆಯ ಜೊತೆಗೆ ಒಂದು ಭಾರಿ ಹಲಸಿನ ಹಣ್ಣನ್ನು ಹೊತ್ತು ತಂದಿದ್ದರು. ಪ್ರವೇಶಿಸಿದ ಕೂಡಲೆಯೇ, " ಸ್ವಲ್ಪ ಬಾರೇ ಇಲ್ಲಿ, ಈ ಹಣ್ಣು ಇಳುಕಿಕೋ ಬಾ " ಎಂದು ಹೆಂಡತಿಯನ್ನು ಕೂಗಿ ಕರೆದರು.

ಪಾರ್ವತಮ್ಮನವರು ಅಡುಗೆಯ ಮನೆಯಿಂದ ಬಂದರು.

" ನೀವೂ ಸರಿಯೆ ಅಂದರೆ. ಪ್ರಯಾಣದ ಮುಟ್ಟುಚಿಟ್ಟನ್ನ ಮುಟ್ಟಿಸಿ ಕೊಳ್ಳಲೆ? ಹಾಗೇ ಮೆಲ್ಲಗೆ ಇಳುಕಿಸಿ " ಎಂದರು ಪಾರ್ವತಮ್ಮ.

" ಮನೇ ಕಡೆ ಎಲ್ಲ ಸ್ವಸ್ಥ ತಾನೆ ? "

" ಸ್ವಸ್ಥವೇನು ಸ್ವಸ್ಥ ? ಸೀತೆಗೆ ಮೂರು–ನಾಲ್ಕು ದಿನ ಜ್ವರ ಬಂತು. ನಿನ್ನೆಯಿಂದ ಇಲ್ಲ "

" ಸುಬ್ರಮಣ್ಯಪಂಡಿತರ ಹತ್ತಿರ ಔಷಧಿ ತರಿಸಿಕೊಟ್ಟೆಯೋ ಇಲ್ಲವೊ ? "

" ಪಂಡಿತರ ಔಷಧಿ ಬೇಡ ಅಂದಳು. ಆಸ್ಪತ್ರೆಯಲ್ಲೆ ರಾಮಸ್ವಾಮಿ ತಂದುಕೊಡುತಾ ಇದಾನೆ. ಅದು ಸರಿ, ಘಟ್ಟಕ್ಕೆ ಉಪ್ಪು ಕೊಂಡುಹೋದರು ಅನ್ನೋಹಾಗೆ, ಇದೇನಿದು ಊರಿಂದ ಊರಿಗೆ ಹಲಸಿನ ಹಣ್ಣು ತಂದಿದ್ದೀರಿ ? "

" ಬಸವಾಪಟ್ಟಣಕ್ಕೆ ಹೋಗಿದ್ದೆ. ಅಲ್ಲಿ ಒಂದೆರಡು ದಿನ ಇದ್ದೆ. ಕಾಗದ ಬರೆಯೋಣ ಅಂತ ಮಾಡಿಕೊಂಡಿದ್ದೆ, ಆಗಲಿಲ್ಲ. ಅಲ್ಲಿಯ ಹಣ್ಣು ರುಚಿ ಅಂತ ಬಲವಂತಮಾಡಿ ಒಂದು ಹಣ್ಣನ್ನು ಕೊಟ್ಟು ಕಳಿಸಿದರು."

" ಎಲ್ಲಾ ಬಿಟ್ಟು ಅಲ್ಲಿಗೆ ಯಾಕೆ ಹೋದಿರಿ ? "

" ಅಲ್ಲಿಗೆ ಯಾಕೆ ಹೋದಿರಿ ಅಂದರೆ ? ಕೆಲಸ ಇತ್ತು ಹೋದೆ ? ಇರಲಿ, ಆ ಪುರಾಣವನ್ನೆಲ್ಲಾ ಸಿಧಾನವಾಗಿ ಹೇಳ್ತೇನೆ. ಮೊದಲು ಹೊಳೆಗೆ ಹೋಗಿ ಬರ್ತೇನೆ. ಅನ್ನಗಿನ್ನ ಮಾಡಬೇಕಾದರೆ ಅಷ್ಟುಹೊತ್ತಿಗೆ ಮಾಡಿಬಿಡು."

" ಪ್ರಯಾಣದ ಆಯಾಸ ಬೇರೆ. ಹೊಳೆಯ ಸ್ನಾನ ಯಾಕೆ?

ಒಂದಿಷ್ಟು ಬಿಸಿನೀರನ್ನೇ ಕಾಸುತೀನಿ. ಅಷ್ಟು ಹೊತ್ತಿಗೆ ಒಂದಿಷ್ಟು ಅನ್ನವೂ ಆಗುತ್ತೆ."

ಊಟಕ್ಕೆ ಕುಳಿತಾಗ ರಾಮುಸ್ವಾಮಿ ಹಿಂದೆ ಹಾಕಿದ ಪ್ರಶ್ನೆಯನ್ನೇ ವೆಂಕಟಸುಬ್ಬಯ್ಯನವರು ಹಾಕಿದರು :

" ಯಾಕೆ, ಕುಡಿಯುವ ನೀರು ಉಪ್ಪುಪ್ಪಾಗಿದೆ ? ಬಾವಿಯ ನೀರೆ ? "

" ಏನು ಮಾಡಲಿ ಹೇಳಿ. ಸೊಂಟವೆಲ್ಲ ನೋವು. ಹೊಳೆಗೆ ಹೋಗೋಕೆ ಆಗಲಿಲ್ಲ—" ಎಂದು ಹೇಳಿ, ನಿಜವಾದ ಕಾರಣವನ್ನು ಸಮಯ ಸಿಕ್ಕಿದಾಗ ಏಕಾಂತದಲ್ಲಿ ಹೇಳುವುದೆಂದು ನಿಶ್ಚಯಿಸಿದರು.

" ರಾಮುಸ್ವಾಮೀದು ಊಟ ಆಯಿತೋ ಇಲ್ಲವೋ ? "

" ನೀವು ಊರಿನಲ್ಲಿ ಇಲ್ಲದಿರುವಾಗಲೇ ವಾಸಿ ಅಂತ ಕಾಣುತ್ತೆ. ಹೊತ್ತಿಗೊತ್ತಿಗೆ ಊಟ ಮಾಡುತ ಇದ್ದ. ಊಟ ಮಾಡಿಕೊಂಡು ಎಲ್ಲಿಯೋ ಹೊರಕ್ಕೆ ಹೋದ."

ಸೀತೆ ತೂಕಡಿಸುತ್ತ ಇದ್ದವಳು, ಹಾಗೆಯೇ ಚಾಪೆಯ ಮೇಲೆ ನಿದ್ದೆ ಹೋಗುತ್ತಿದ್ದಳು. " ಸೀತೆಗೆ ನಿದ್ದೆ ಬಂದಿದೆಯೋ ಏನೋ. ಹೋಗಿ ಬಾಗಿಲು ಹಾಕಿಕೊಂಡು ಬರುತ್ತೇನೆ " ಎಂದು ಪಾರ್ವತಮ್ಮನವರು ಹಜಾರಕ್ಕೆ ಬಂದು, ಮುಂದುಗಡೆಯ ಬಾಗಿಲು ಹಾಕಿಕೊಂಡು ಮತ್ತೆ ಒಳಕ್ಕೆ ಹೋದರು.

" ಹೊಳೇನರಸೀಪುರದ ತಮ್ಮಯ್ಯ ಗೊತ್ತು ತಾನೆ ? "

" ಯಾರು, ಆ ಉಚ್ಚಂಗಿಯ ಗೌರಮ್ಮನ ಯಜಮಾನರೆ ? "

" ಹ್ಞೂ, ಅವರೇ ಆಕಸ್ಮಾತ್ ಹಾಸನದಲ್ಲಿ ಸಿಕ್ಕಿದ. ಅವನಿಗೆ ನಮ್ಮ ಜನದ ಬುಡಕಟ್ಟೆಲ್ಲಾ ಗೊತ್ತು. ಕೇಳುವುದೇ ತಡ, ತನಗೆ ಗೊತ್ತಿರುವ ಗಂಡು ಹೆಣ್ಣುಗಳ ಕುಲಗೋತ್ರಗಳನ್ನೆಲ್ಲಾ ಪಾಠ ಒಪ್ಪಿಸಿದಹಾಗೆ ಹೇಳಿಬಿಡುತ್ತಾನೆ. ನಮ್ಮ ರಾಮುಸ್ವಾಮಿಗೆ ಸರಿಯಾದ ಒಂದು ಹೆಣ್ಣು ಗೊತ್ತುಮಾಡಿಕೊಡಯ್ಯ ಅಂದೆ. ಅವನು ಏನು ಹೇಳಿದ ಗೊತ್ತೆ ? "

" ಏನು ಹೇಳಿದರು ? "

" ನಿಮ್ಮ ರಾಮುಸ್ವಾಮಿಗೆ ತಕ್ಕ ಹೆಣ್ಣು ತಲಾಷ್ ಮಾಡುವುದು ಕಷ್ಟ ಅಂದ ! "

" ಹಾಗಂದರೆ ? "

"ಹಾಗಂದರೆ, ನಿನ್ನ ಮಗ ಲೋಕವಿಖ್ಯಾತನಾಗಿದ್ದಾನೆ ಅಂತ" ಎಂದು ಸ್ವಲ್ಪ ಕೋಪದ ಧ್ವನಿಯಲ್ಲಿಯೇ ಹೇಳಿದರು ವೆಂಕಟಸುಬ್ಬಯ್ಯನವರು.

"ಅದಕ್ಕೆ ನನ್ನ ಏನು ಮಾಡು ಅಂತೀರಿ ?"

"ನೀನೂ ಏನೂ ಮಾಡುವಹಾಗಿಲ್ಲ, ನಾನೂ ಏನೂ ಮಾಡುವಹಾಗಿಲ್ಲ. ತಮ್ಮಯ್ಯ ಏನಾದರೂ ಹೆಣ್ಣು ಗೊತ್ತುಮಾಡಿ ಅವನಿಗೆ ಮದುವೆಯಾದರೆ ಆದಹಾಗೆ. ಇಲ್ಲವೋ, ಅವನ ಪಾಡು ಅಂತ ಸುಮ್ಮನಿರುವುದು. ಎತ್ತಲಾಗಾದರೂ ಹಾಳಾಗಿಹೋಗಲಿ. ಅವನಿಗೂ ಎರಡು ತುತ್ತು ಅನ್ನಕ್ಕೆ ಹಕ್ಕಿದೆ. ತಿಂದುಕೊಂಡು ಹೋಗಲಿ."

"ಗಂಡಮಕ್ಕಳದು ಹೇಗೋ ಆಗುತ್ತೆ. ಅವರ ದಾರಿ ಅವರು ನೋಡಿಕೊಳ್ಳುತ್ತಾರೆ. ಹೆಣ್ಣುಮಕ್ಕಳದ್ದು ತಾನೇ ಇರೋದು, ಕಷ್ಟ. ಸೀತೆಯ ಹಾಗೆ ಆಗಿಬಿಟ್ಟರಂತೂ ಅವರ ಪಾಡು ಬೇಡ."

"ಅದೇ ವಿಚಾರಕ್ಕೆ ನಾನು ಬಸವಾಪಟ್ಟಣಕ್ಕೆ ಹೋಗಿದ್ದು. ಶಾಮಣ್ಣನವರು ಹೇಳಿದರು, ಅವರ ಮಗಳು ಗೌರಮ್ಮನಿಗೂ ಸೀತೆಗೂ ಜೀವನಾಂಶ ಏನಾದರೂ ಕೊಡಬೇಕು ಅಂತ."

"ಹೊತ್ತು ಹೋಗದ ಮಾತು. ಅವರು ಯಾಕೆ ಕೊಡುತಾರೆ ಹೇಳಿ. ಕೊಟ್ಟರೆ ಸೀತೆಯ ಪುಣ್ಯ."

"ಯಾರ ಅಪ್ಪನ ಮನೆಯ ಗಂಟು ? ಕೊಡಬೇಕಾದ್ದನ್ನು ಕೊಡಲೇಬೇಕು. ಅವರು ಇಲ್ಲ ಅಂತ ಹೇಳಲೂ ಇಲ್ಲವಲ್ಲ. ನಾನು ಲೆಕ್ಕಾಚಾರ ಹಾಕಿದ್ದರಲ್ಲಿ ಒಂದು ಸಾವಿರ ರೂಪಾಯಿಯಾದರೂ ಬರಬೇಕು. ಅದಕ್ಕೆ ಅವರೂ ಒಪ್ಪಿಕೊಂಡರು...."

"....ಏನೋ ಆ ಮುಂಡೇದರ ಪುಣ್ಯ" ಎಂದು ಪಾರ್ವತಮ್ಮನವರು ಕಂಬನಿ ಮಿಡಿದು, ಅದನ್ನು ಸೆರಗಿನ ಕೊನೆಯಿಂದ ಒರಸಿಕೊಂಡರು.

"ಸದ್ಯಕ್ಕೆ ಸಾಧ್ಯವಿಲ್ಲ. ಮಗಳ ಮದುವೆ ಮಾಡಬೇಕು. ಆಮೇಲೆ ಏರ್ಪಾಡು ಮಾಡೋಣ ಅಂದರು. ಪಾಪ, ಅವರೂ ಮಕ್ಕಳನ್ನ ನೆನಸಿಕೊಂಡು ತುಂಬ ಅತ್ತರು. ನಾನು ಯಾಕಪ್ಪ ಈ ವಿಷಯ ಎತ್ತಿದೆ ಎನ್ನಿಸಿಬಿಟ್ಟಿತು. ಏನು ಮಾಡುವುದು ? ಹಾಗಂತ ಸುಮ್ಮನಿದ್ದರೆ, ನಮ್ಮ ಮಕ್ಕಳು ಬದುಕಬೇಕಲ್ಲ."

" ಏನೋ, ದೇವರ ದಯದಿಂದ ಅವರು ದೊಡ್ಡ ಮನಸ್ಸುಮಾಡಿ ಹಣ ೂಟ್ಟರೆ, ಅವಳ ಹೆಸರಿನಲ್ಲಿ ಒಂದು ತುಂಡು ಗದ್ದೆ ತೆಗೆದರೆ, ಎಲ್ಲಿದ್ದರೂ ಅವಳ ೂಟ್ಟೆಬಟ್ಟೆ ಕಳೆಯುತ್ತೆ."

" ನನ್ನ ಯೋಚನೆಯೂ ಅದೇ " ಎಂದರು ವೆಂಕಟಸುಬ್ಬಯ್ಯನವರು.

ಈ ಸಂತೋಷದ ಸುದ್ದಿ ಕೇಳಿದ ಹೊತ್ತಿನಲ್ಲಿ ಗಂಡನಿಗೆ ಕಹಿಯ ಸುದ್ದಿ ನನ್ನು ತಿಳಿಸಲು ಪಾರ್ವತಮ್ಮನವರ ಮನಸ್ಸು ಒಡಂಬಡಲಿಲ್ಲ; ಇನ್ನೆಂದಾ ರೂ ಹೇಳಿದರಾಯಿತು ಅಥವಾ ಹೇಳದೆ ಇದ್ದರೂ ಆಯಿತು, ಎಂದು ೂಂಡರು.

೭

ಅದೇ ಹೊತ್ತಿನಲ್ಲಿ ರಾಮುಸ್ವಾಮಿ ಪೋಸ್ಟಾಫೀಸಿನಲ್ಲಿ ಕುಳಿತಿದ್ದ. ಅವನ ್ಲಿ ವೆಂಕಟಸುಬ್ಬಯ್ಯನವರಿಗೆ ಅವನ ಅಣ್ಣ ಸುಬ್ಬಸ್ವಾಮಿ ಬರೆದ ಕಾಗದ ತ್ತು. ರಾಮುಸ್ವಾಮಿಯ ಮುಖದ ಮೇಲೆ ನಿರಾಶೆಯ ಮುದ್ರೆಯೊತ್ತಿತ್ತು.

" ನಿಮ್ಮ ಅಣ್ಣ ಬರೆದ ಕಾಗದ ತಾನೆ ? " ಪುಟ್ಟಣ್ಣಯ್ಯ ಪ್ರಶ್ನಿಸಿದ.

" ಹೌದು."

" ನಿನ್ನ ಕಾಗದಕ್ಕೆ ಉತ್ತರವೋ ? "

" ಹ್ಞೂ."

" ಹಣ ಕಳಿಸುವುದಕ್ಕೆ ಆಗುವುದಿಲ್ಲ ಅಂತ ತಾನೆ ಬರೆದಿದಾರೆ ? "

" ಆಗುವುದಿಲ್ಲ ಅಂತ ಖಂಡಿತವಾಗಿ ಬರೆದಿಲ್ಲ. ಎಷ್ಟು ಪ್ರಯತ್ನ ಟ್ಟರೂ ಹಣ ದೊರೆತಿಲ್ಲವಂತೆ. ತರದೂದು ಮಾಡುತ್ತಿದಾನಂತೆ. ಸಿಕ್ಕಿದ ೂಡಲೆ ಕಳಿಸಿಕೊಡುತ್ತಾನಂತೆ."

" ಈಗ ಏನು ಮಾಡುತ್ತೀ, ಹಾಗಾದರೆ ? "

" ಇದ್ದೇ ಇದೆಯಲ್ಲ, ನಿಮ್ಮ ಕಚೇರಿಗೆ ನಿತ್ಯ ಪ್ರಯಾಣ."

" ನಿನ್ನ ಪೇಚಾಟ ನೋಡಿ ನನಗೆ ನಗು ಬರುತ್ತೆ ಕಣಯ್ಯ. ಹಣ ರುತ್ತೆ ಬರುತ್ತೆ ಅಂತ ನೀನು ಊರಿನಲ್ಲಿ ಇರುವುದು ಮಾತ್ರವಲ್ಲ, ನಿತ್ಯ ಇಲ್ಲಿ ರುತ್ತಲೂ ಇರಬೇಕು."

" ನಾನು ಬರುವುದರಿಂದ ನಿಮಗೆ ಬೇಸರವೇನು ? "

" ಬೇಸರ ಅಂತ ಅಲ್ಲವಯ್ಯ. ಒಂದು ವೇಳೆ, ಏನೋ ಕಾರಣದಿಂದ ನೀನು ಊರು ಬಿಡಬೇಕಾಯಿತು ಅಂತ ಇಟ್ಟುಕೊಳ್ಳಯ್ಯ...."

" ನೀವು ಹೇಳುವುದೂ ದಿಟ ಅನ್ನಿ. ಹಾಸನಕ್ಕೆ ಹೋಗಬೇಕೂ ಅಂತ ಮಾಡಿಕೊಂಡಿದ್ದೆ. ಈಗ ಹೋಗುವಹಾಗಿಲ್ಲ."

" ನಿಮ್ಮ ತಂದೆ ಎಲ್ಲಾದರೂ ನಿನ್ನನ್ನ ಕಳಿಸಿದರು ಅಂತ ಇಟ್ಟುಕೊಳ್ಳಯ್ಯ. ಆಗಲೇ ಹಣ ಬಂದರೆ, ನಾನು ಏನು ಮಾಡಬೇಕು ಅನ್ನುತಿ ? "

" ಎರಡು ಮೂರು ದಿನ ತಡೆಯುವುದಕ್ಕಾಗುವುದಿಲ್ಲವೆ ? "

" ಹತ್ತು ದಿನ ಇಟ್ಟುಕೊಳ್ಳಬಹುದು. ಒಂದುವೇಳೆ, ಆಗಲೂ ನೀನು ಇರಲಿಲ್ಲ ಅನ್ನು. ಆಗ ಏನು ಮಾಡಬೇಕು ? "

" ಹಣವನ್ನ ಹಿಂದಕ್ಕೆ ಕಳಿಸಿಬಿಡಿ, ಅಷ್ಟೆ."

" ಅಂತೂ ನಿನಗೆ ಹಣ ಇಲ್ಲ. ಅದರ ಬದಲು, ' ಬೇರೆ ಏರ್ಪಾಡು ಮಾಡಿಯಾಯಿತು. ಹಣ ಬೇಡ ' ಅಂತ ಈಗಲೇ ಒಂದು ಕಾಗದ ಬರೆದು ಹಾಕಿಬಿಡು."

" ಅಲ್ಲಾ ಇಷ್ಟೆಲ್ಲಾ ಮಾಡಿ, ಈಗ...."

" ಈಗ ನಮಗೆ ದೇವರು ದಾರಿ ತೋರಿಸಿದ್ದಾನೆ. ತಪ್ಪಿಸಿಕೊಳ್ಳುವುದು ಒಳ್ಳೆಯದು. ನಾನು ಯಾವುದೋ ಘಳಿಗೆಯಲ್ಲಿ ಒಪ್ಪಿಬಿಟ್ಟೆ. ಆಲೋಚನೆ ಮಾಡಿದ್ದರಲ್ಲಿ, ನಾವು ಮಾಡುತಾ ಇರುವುದು, ಇಬ್ಬರೂ ಜೈಲಿಗೆ ಹೋಗುವ ಕೆಲಸ."

ರಾಮಸ್ವಾಮಿ ಯೋಚನೆಯಲ್ಲಿ ಮುಳುಗಿದ.

ತಾನು ಕೈಕೊಂಡಿದ್ದ ಕಾರ್ಯಕ್ರಮ ನಿಜವಾಗಿ ಮಾಡಬಾರದ ಕೆಲಸ ಮಾತ್ರವಲ್ಲ, ಅಪಾಯಕಾರಿ ಎಂಬುದನ್ನೂ ತಿಳಿದಿದ್ದ. ತನ್ನ ಮೇಲೆ ' ಕೇಸು ' ಮಾಡಿದರೆ ತನ್ನ ತಂದೆ ಇಲ್ಲ ಅಣ್ಣ ಮಾಡಬೇಕು. ಅವರು ಅಷ್ಟಕ್ಕೆ ಹೋಗುವುದಿಲ್ಲವೆಂದು ಅವನ ಎಣಿಕೆ. ಆದರೆ ವಿಷಯ ಹೊರಬಿದ್ದರೆ ಪುಟ್ಟಣ್ಣಯ್ಯನಿಗೆ ತೊಂದರೆಯಾಗುವುದರಲ್ಲಿ ಸಂಶಯವಿಲ್ಲವೆಂದು ಊಹಿಸಿದನು. ಪುಟ್ಟಣ್ಣಯ್ಯನ ಆಸೆ ತೀರಿತು ; ಇನ್ನು ತನ್ನ ರಕ್ಷಣೆಯ ಉಪಾಯ ನೋಡಿಕೊಳ್ಳುತ್ತಿದ್ದಾನೆ, ' ಒಪ್ಪಂದ 'ದಿಂದ ಜಾರಿಕೊಳ್ಳುತ್ತಿದ್ದಾನೆ—ಎಂದು ರಾಮಸ್ವಾಮಿ ಹೇಗೂ ಸುಲಭವಾಗಿ ಊಹಿಸಿದ. ತನ್ನ ಜುಟ್ಟು ಪುಟ್ಟಣ್ಣಯ್ಯನ ಕೈಯಲ್ಲಿದೆ ಎಂದು

ಅವನು ಬಲ್ಲನು. ಪುಟ್ಟಣ್ಣಯ್ಯ ತನ್ನ ರುಜು ಹಾಕಿಸಿಕೊಳ್ಳಲು ಒಪ್ಪದಿದ್ದರೂ ಆಯಿತು, ಇಲ್ಲವೆ ನೇರವಾಗಿ ತನ್ನ ತಂದೆಗೇ ಹಣ ಪಾವತಿ ಮಾಡಿಬಿಟ್ಟರೂ ಆಯಿತು. ಪುಟ್ಟಣ್ಣಯ್ಯ ಹೇಳಿದಹಾಗೆ ಕೇಳದೆ ವಿಧಿಯಿಲ್ಲವೆಂದುಕೊಂಡನು. ಬೆಂದ ಮನೆಗೆ ಹಿರಿದದ್ದೇ ಲಾಭ, ಸಾಧ್ಯವಾದರೆ ಇನ್ನಷ್ಟು ಹಿರಿಯುವುದು—ಎಂದು ರಾಮುಸ್ವಾಮಿ ಆಲೋಚಿಸಿದನು. ಇನ್ನು ಕೆಲವು ದಿನಗಳಾದರೂ ಕಾದು ನೋಡಬೇಕೆಂದು ಅವನ ಮನಸ್ಸು.

"ಯೋಚನೆ ಮಾಡಿ ನೋಡುತ್ತೇನೆ, ಪುಟ್ಟಣ್ಣಯ್ಯನವರೆ?" ಎಂದು ರಾಮುಸ್ವಾಮಿ ಕಾಗದವನ್ನು ಮಡಿಚಿ ಜೇಬಿಗೆ ಹಾಕಿಕೊಂಡು ಎದ್ದನು.

ರಾಮುಸ್ವಾಮಿ ನಿತ್ಯವೂ ಆಲೋಚನೆಮಾಡುತ್ತಲೇ ಇದ್ದನು; ಪುಟ್ಟಣ್ಣಯ್ಯನು ನಿತ್ಯವೂ ಅವನನ್ನು, "ನನ್ನ ಮಾತು ಕೇಳು. ಇಬ್ಬರಿಗೂ ಕ್ಷೇಮ. ಹಣ ಬೇಡ ಅಂತ ನಿಮ್ಮ ಅಣ್ಣನಿಗೆ ಕಾಗದ ಬರೆದುಬಿಡು" ಎಂದು ಪೀಡಿಸತೊಡಗಿದನು. "ಆ ಹಣವನ್ನೇ ನೆಚ್ಚಿಕೊಂಡಿದ್ದೆ. ಹಣಕ್ಕೆ ಏನು ಮಾಡಲಿ?" ಎಂದು ರಾಮುಸ್ವಾಮಿ ಗೊಣಗುವನು; "ನಿನಗೇನಯ್ಯ, ಹಣಸಂಪಾದನೆಗೆ ನೂರು ಮಾರ್ಗಗಳಿವೆ. ನಮ್ಮಂಥವರಿಗಾದರೆ ಕಷ್ಟ—" ಎಂದು ಪುಟ್ಟಣ್ಣಯ್ಯ 'ಪುಸಲಾಯಿಸು'ವನು.

ತನಗೆ ಇಷ್ಟವಿಲ್ಲದಿದ್ದರೂ ರಾಮುಸ್ವಾಮಿ ಪುಟ್ಟಣ್ಣಯ್ಯನ ಸಲಹೆಯನ್ನು ಅನುಸರಿಸಲೇಬೇಕಾದ ಪರಿಸ್ಥಿತಿ ಬೇಗನೆಯೇ ಹುಟ್ಟಿಕೊಂಡಿತು. ಎಂದಿನಂತೆ ಒಂದು ದಿನ ರಾಮುಸ್ವಾಮಿ ಅಂಚೆಕಚೇರಿಗೆ ಭೇಟಿ ಕೊಟ್ಟಾಗ, ಪುಟ್ಟಣ್ಣಯ್ಯ ಬಹು ಕಳವಳದಿಂದ ರಾಮುಸ್ವಾಮಿಗೆ ತಿಳಿಸಿದ:

"ಏನಯ್ಯ ರಾಮುಸ್ವಾಮಿ, ನನ್ನ ಮೇಲೆ ಅಂಚೆ ಇಲಾಖೆಗೆ ದೂರು ಹೋಗಿರುವ ಹಾಗೆ ಕಾಣುತ್ತದೆಯಲ್ಲಯ್ಯ? ಯಾರೋ ಮೂಗರ್ಜಿ ಗುಜರಾಯಿಸಿದ್ದಾರೆ ಅಂತ ಕಾಣುತ್ತೆ."

"ನಿಮಗೆ ಹೇಗೆ ಗೊತ್ತಾಯಿತು? ಯಾರು ಹೇಳಿದರು?"

"ಯಾಕೆ, ಕರಿಯಣ್ಣ ನಿನಗೆ ಏನೂ ಹೇಳಲಿಲ್ಲವೆ, ಈ ವಿಚಾರ?"

"ನನಗೆ ಸಂಬಂಧಪಟ್ಟದ್ದಲ್ಲ ಅಂತ ಹೇಳಿಲ್ಲ ಅಂತ ಕಾಣುತ್ತೆ. ಇಲ್ಲ, ಎಲ್ಲೋ ಮರೆತಿದ್ದಾನೆ. ಏನು ಸಮಾಚಾರ?"

"ಹಾಸನದಿಂದ 'ಪೋಸ್ಟಲ್ ಇನ್‌ಸ್ಪೆಕ್ಟರ್' ಬಂದಿದ್ದರಂತೆ. ಯಾರು

ಯಾರನ್ನೋ ವಿಚಾರಣೆಮಾಡಿದರಂತೆ. ಸಾಹುಕಾರ ರಾಮಪ್ಪನವರನ್ನೂ ವಿಚಾರಣೆ ಮಾಡಿದರಂತೆ. ನಾನು ಜನರಿಗೆ ಬೇಕಾದವನಾಗಿದ್ದೇನೆಯೇ, ಕಚೇರಿಯಲ್ಲಿ ಕೆಲಸ ಹೊತ್ತಿನಲ್ಲಿ ಗೈರುಹಾಜರಿಯಾಗಿರುತ್ತೇನೆಯೆ, ಕಚೇರಿಗೆ ಬಂದವರೊಡನೆ ಸರಿಯಾಗಿ ನಡೆಸುಕೊಳ್ಳುತ್ತೇನೆಯೇ ಎಂತ ಏನೇನೋ ಪ್ರಶ್ನೆ ಕೇಳಿದರಂತೆ. ರಾಮಪ್ಪನವರೇನೋ ನನಗೆ ತೊಂದರೆ ಆಗುವ ಹಾಗೆ ಏನೂ ಹೇಳಿಲ್ಲವಂತೆ. ಆದರೆ, ಯಾರು ಯಾರು ಏನು ಹೇಳುತ್ತಾರೆಯೋ ಹೇಗೆ ಹೇಳುವುದು ? ಕರಿಯಣ್ಣ ನನಗೆ ಹೇಳಿದ್ದು ನಿಜವಾದರೆ ನನ್ನನ್ನು ವರ್ಗಮಾಡಿ ಬಿಡುತ್ತಾರೆ, ಅದು ಖಂಡಿತ. ಅಷ್ಟರಲ್ಲಿ, ನಿನ್ನ 'ಫೋರ್ಜರಿ' ಕಾರ್ಯಕ್ಕೆ ನಾನೂ ಸಾಮಿಲಾದರೆ, ಇಬ್ಬರೂ ಒಟ್ಟಿಗೇ 'ಮಾವನ ಮನೆಗೆ' ಹೋಗ ಬೇಕಾಗುತ್ತೆ, ಖಂಡಿತ."

ಈ ಕೂಡಲೆ ಕಾಗದವನ್ನು ಬರೆದು ಹಾಕಿಬಿಡಬೇಕೆಂದು ಪುಟ್ಟಣ್ಣಯ್ಯ ಬಲಾತ್ಕಾರ ಮಾಡತೊಡಗಿದ. ರಾಮಸ್ವಾಮಿ ಇಕ್ಕಟ್ಟಿನಲ್ಲಿ ಸಿಲುಕಿದ.

"ಬೇಗ ಹೇಳಯ್ಯ, ಕಾಗದ ಬರೆದು ಹಾಕುತ್ತೀಯೋ ಇಲ್ಲ...."

"ಏನು ಮಾಡುತ್ತೀರಿ ? ಈಗೇನೂ ಹಣ ಬಂದಿಲ್ಲವಲ್ಲ, ಇನ್ನೂ."

"ಮಾಡುವುದೇನು ? ನಿಜ ಸ್ಥಿತಿಯನ್ನ ನಿಮ್ಮ ತಂದೆಗೆ ತಿಳಿಸಿಬಿಡು ತ್ತೇನೆ."

ಪುಟ್ಟಣ್ಣಯ್ಯನೊಂದಿಗೆ ಕಲಹವಾಡುವುದರಿಂದ ತನ್ನ ಕಾರ್ಯಸಾಧನೆ ಯಾಗುವುದಿಲ್ಲವೆಂದು ರಾಮಸ್ವಾಮಿ ತರ್ಕಿಸಿದ.

"ಪುಟ್ಟಣ್ಣಯ್ಯನವರೇ, ನೀವು ಹೇಳಿದಂತೆ ಮಾಡುವುದರಲ್ಲಿ ಬಾಧಕ ವೇನಿಲ್ಲ. ನನಗೆ ಬೇಕಾದ್ದು ಒಂದುನೂರು ರೂಪಾಯಿ, ಯಾರು ಕೊಟ್ಟರೇನು ? ನೀವು ಹೇಳಿದಹಾಗೆ ಕಾಗದ ಬರೆದು ಹಾಕಿಬಿಡುತ್ತೇನೆ. ಈಗಾಗಲೇ ನೀವು ನನಗೆ ಇಪ್ಪತ್ತೈದು ರೂಪಾಯಿ ಕೊಟ್ಟಿದ್ದೀರಿ. ಹೋಗಲಿ, ನೂರನ್ನೂ ಕೇಳು ವುದು ನ್ಯಾಯವಲ್ಲ. ಇನ್ನು ಐವತ್ತು ರೂಪಾಯಿ ಕೊಟ್ಟುಬಿಡಿ. ಸರಿ ತಾನೆ ?"

ಪುಟ್ಟಣ್ಣಯ್ಯ ಬಾಯಿ ಬಾಯಿ ಬಿಟ್ಟ.

"ಏನಯ್ಯಾ ಇದು ! ಒಳ್ಳೆ ತಮಾಷೆಯಾಯಿತಲ್ಲ ನಿನಗೆ ! ನೀನು ಕಾಗದ ಬರೆಯಬೇಕಾದರೆ ನಾನು ನಿನಗೆ ಐವತ್ತು ರೂಪಾಯಿ ಕೊಡಬೇಕೆ ? ಒಳ್ಳೇ ಚೆನ್ನಾಗಿದೆ, ಭೇಷ್ !"

" ಕಾಗದ ಬರೆಯುವುದಕ್ಕಲ್ಲ, ಪುಟ್ಟಣ್ಣಯ್ಯ. ನೀವು ಮರೆತುಬಿಟ್ಟಿರಿ ಅಂತ ಕಾಣುತ್ತೆ. ಪಟ್ಟ ಸುಖ ಯಾರಿಗೆ ಜ್ಞಾಪಕ ಇರುತ್ತೆ, ಹೇಳಿ. ನೀವು ನನಗೆ ಐವತ್ತು ಕೊಡುವುದು ಹೆಚ್ಚಲ್ಲ, ಪುಟ್ಟಣ್ಣಯ್ಯನವರೆ? ಯೋಚನೆ ಮಾಡಿ ನೋಡಿ."

" ಎಲ್ಲಿ, ಮೊದಲು ಕಾಗದ ಬರೆದುಕೊಡು. ಹಾಳಾಗಿಹೋಗು. ನನಗೂ ಶನಿಕಾಟ ಮೊದಲಾಗಿರುವ ಹಾಗೆ ಕಾಣುತ್ತೆ " ಎಂದು ಪುಟ್ಟಣ್ಣಯ್ಯ ಹತ್ತು ರೂಪಾಯನ್ನು ತಂದು ರಾಮುಸ್ವಾಮಿಯ ಕೈಗೆ ಹಾಕಿದ.

" ಏನು, ಇಷ್ಟೇನೇ! "

" ಮೊದಲು ಕಾಗದ ಬರೆದುಕೊಡಯ್ಯ."

" ಅಂಥ ಕಾಗದವನ್ನ ಕುಳಿತ ಘಳಿಗೆಯಲ್ಲಿಯೆ ಬರೆಯುವುದಕ್ಕಾಗುತ್ತದೆಯೆ? ನಾಳೆ ಬರೆದು ತರುತ್ತೇನೆ " ಎಂದು ರಾಮುಸ್ವಾಮಿ ಎದ್ದ.

ರಾಮುಸ್ವಾಮಿ ವಿಚಾರಿಸದೆ ಬಿಡಲಿಲ್ಲ. ಪುಟ್ಟಣ್ಣಯ್ಯ ಹೇಳಿದ್ದೆಲ್ಲ ನಿಜವೆಂದು ಕರಿಯಣ್ಣನಿಂದ ತಿಳಿಯಬಂದಿತು. ಪುಟ್ಟಣ್ಣಯ್ಯ ಸಲಹೆಮಾಡಿದ್ದ ರೀತಿಯಲ್ಲಿ ತಂದೆ ಬರೆದಂತೆ ತನ್ನ ಅಣ್ಣನಿಗೆ ಒಂದು ಕಾಗದವನ್ನು ತಯಾರು ಮಾಡಿ, ಅದನ್ನು ಪುಟ್ಟಣ್ಣಯ್ಯನ ಕೈಗೇ ಕೊಟ್ಟ. ಆತ ಓದಿಕೊಂಡು ತೃಪ್ತಿಗೊಂಡಮೇಲೆ, ಅದನ್ನು ಲಕ್ಕೋಟೆಗೆ ಹಾಕಿ ರಾಮುಸ್ವಾಮಿಯಿಂದ ವಿಳಾಸ ಬರಸಿ ಇಟ್ಟುಕೊಂಡ.

" ಎಲ್ಲಿ, ಬಾಕಿ? " ಎಂದು ರಾಮುಸ್ವಾಮಿ ನಗುತ್ತ ಕೈಚಾಚಿದ.

" ಏನೋ ಅಂತಿದ್ದೆ ಕಣಯ್ಯ. ನೀನು ಬಲು ಘಾಟಿ. ಇನ್ನು ತೊಲಗಯ್ಯ, ಈ ಕಡೆ ಸುಳಿಯಲೇ ಬೇಡ. ಇನ್ನು ನಿನ್ನ ಸಹವಾಸ ಸಾಕಯ್ಯ, ನಮುಸ್ಕಾರ " ಎಂದು ಪುಟ್ಟಣ್ಣಯ್ಯ ಇನ್ನು ಹದಿನೈದು ರೂಪಾಯಿಗಳನ್ನು ರಾಮುಸ್ವಾಮಿಗೆ ತೆತ್ತನು.

" ನನ್ನ ಸಹವಾಸ ನಿಮಗೆ ಹೇಗೆ ರುಚಿಸುತ್ತೆ?....ಎಷ್ಟು ಲಭ್ಯವೋ ಅಷ್ಟೆ " ಎಂದು ರಾಮುಸ್ವಾಮಿ ಅಂಚೆಯ ಕಚೇರಿಗೇ ನಮುಸ್ಕಾರಮಾಡಿ ಹೊರಟುಬಿಟ್ಟ.

# ಪ್ರಕರಣ ಐದು

ಪುಟ್ಟಣ್ಣಯ್ಯನಿಂದ ಇಪ್ಪತ್ತೈದು ರೂಪಾಯಿಗಳನ್ನು ಕಕ್ಕಿಸಿದ ರಾಮುಸ್ವಾಮಿ ಹುಸೇನಿಯೊಂದಿಗೆ ಹಾಸನಕ್ಕೆ ಹೊರಟ. ರಾಮಯ್ಯಂಗಾರಿ ತಮ್ಮ ಜೊತೆ ಬರುವುದಿಲ್ಲವೆಂದು ಅವರಿಗೆ ಗೊತ್ತು. "ನಮಗೆಲ್ಲಾ ನಾವು ಹಾಕಿ ನಮ್ಮ ಕಾಸು ಕಸಿಯೋದರಲ್ಲಿ ಅವನು ಕದೀಮ" ಎಂದು ಹುಸೇನಿ ಅವನ ಬಗ್ಗೆ ಆಗಾಗ್ಗೆ ಹೇಳುತ್ತಿದ್ದ. ಕೈಲಿರುವ ಕಾಸು ಈ ಸಲ ಕೈಬಿಟ್ಟುಹೋಗುವ ಮುನ್ನವೇ ಹುಸೇನಿಯ ಜೊತೆ ಹಾಸನಕ್ಕೆ ಹೋಗಿ ಬರಬೇಕೆಂದು ರಾಮುಸ್ವಾಮಿಯ ಹಂಬಲ. ಸಂಗಡಿಗರಿಗೆ ತಿಳಿಸಿಯೇ ಹೋಗಬೇಕು; ಅವರವರಲ್ಲಿ ಗುಟ್ಟುಗೋಪ್ಯ ಏನೂ ಇರಲಿಲ್ಲ. ಕರಿಯಣ್ಣನನ್ನೂ ರಾಮುಸ್ವಾಮಿ ಕರೆದಾಗ ಅವನು ಬರುವುದಿಲ್ಲವೆಂದ. "ಅವನು ಯಾಕೆ ಬರ್ತಾನೆ, ರಾಮುಸ್ವಾಮಿ? ಒಳ್ಳೆ ಕಸಿ ಮಾವಿನಹಣ್ಣು ಕೈಗೆ ಎಟಕಿರೋವಾಗ ಕಂತ್ರೀ ಹಣ್ಣಿಗೆ ಎಗರಾಡುತಾರಾ, ಯಾರಾದ್ರು?" ಎಂದು ಹುಸೇನಿ ನಕ್ಕ. "ಅದು ಯಾರಪ್ಪ ಅದು! ನಾನು ಕಾಣದೋರು?" ರಾಮುಸ್ವಾಮಿ ಆಶ್ಚರ್ಯವನ್ನು ವ್ಯಕ್ತಪಡಿಸಿದ. "ನಿಂಗೆ ಗೊತ್ತಿಲ್ಲ? ಅಪ್ಪ ಮಕ್ಳು ಒಂದೇ ಕಡೆ ಸೇರಿಬಿಟ್ರು. ಆ ಕಮಲಮ್ಮ ಇದಾಳಲ್ಲ, ಸೈತಾನ್ ಬಚ್ಚಿ, ಜೋಡಿ ಬಿಂದಿಗೇಲಿ ನೀರು ಸೇದೋಕೆ ಷುರುಮಾಡಿಬುಟ್ಟವಳೆ. ಕರಿಯಣ್ಣಾ, ಹುಷಾರಾಗಿರು! ನಿಮ್ಮ ಮನೆ ಚೊಕ್ಕಟಮಾಡಿ ಬಿಡುತ್ತಾಳೆ—" ಎಂದು ದಾಡಿ ಬೆಳಸಿಲ್ಲದ ಹುಸೇನಿ ಗಲ್ಲ ನೀವಿಕೊಂಡ. "ಲೋ ಹುಸೇನಿ, ಜೋಕೆ. ಹಲ್ಲು ಕಚ್ಚಿ ಮಾತಾಡು" ಎಂದು ಕರಿಯಣ್ಣ ಹುಸಿ ಮುನಿಸು ನಟಿಸಿ ಎಚ್ಚರಿಕೆ ಕೊಟ್ಟನು. "ಹಲ್ಲು ಕಚ್ಚು ಎಂತ ಹೇಳೋ ಸಾವಕಾರ, ಕಾಸು ಬಿಚ್ಚು, ಮತ್ತೆ. ರಾಮುಸ್ವಾಮಿ ಜೊತೆ ನಾನು ಹಾಸನಕ್ಕೆ ಹೋಗಬೇಕೋ ಇಲ್ಲೋ?" ಎಂದು ಹುಸೇನಿ ಕೈನೀಡಿದ. "ಒಳ್ಳೆ ಸೈತಾನ್ ಕಣೋ ನೀನು. ಇನ್ನುಮೇಲೆ ನೀನು-ರಾಮುಸ್ವಾಮಿ ಜೊತೆ; ಹಾಸನಕ್ಕೆ ನಾನು ಬರೋಕಿಲ್ಲ. ತಿಳೀತೋ?" ಎಂದು ಕರಿಯಣ್ಣ ಹುಸೇನಿಯ ಕೈಗೆ ಒಂದು ರೂಪಾಯಿ ಹಾಕಿದ. "ನಿಮ್ದು ತಿತೀವೊಳ್ಗೆ ಅದೇನೋ ದಕ್ಷಿಣೆ ಅಂತ ಕೈಗೆ ಮಡಗುತಾರಂತೆ, ಎಸ್ಟೋ?" ಎಂದು ರಾಮುಸ್ವಾಮಿಯ ಕಡೆ ತಿರುಗಿ

ಹುಸೇನಿ ನಗತೊಡಗಿದ. “ಅದರ ನಾಲ್ಕರಷ್ಟು ಬಂತು, ಬಿಡು. ಈ ಸಲ ನಿನ್ನ ಖರ್ಚೆಲ್ಲ ನಾನು ನೋಡಿಕೋತೀನಿ, ಸರಿಯೆ?” ಎಂದು ರಾಮಸ್ವಾಮಿ ಹುಸೇನಿಗೆ ಭರವಸೆ ಕೊಟ್ಟ. “ಬಹುತ್ ಅಚ್ಚಾ ಆದ್ಮಿ ರಾಮಸ್ವಾಮಿ” ಎಂದು ಹುಸೇನಿ ತನ್ನ ‘ಖುಷಿ’ಯನ್ನು ವ್ಯಕ್ತಪಡಿಸಿದ. ಹುಸೇನಿ ರಾಮಸ್ವಾಮಿ ಇಬ್ಬರೂ ಹಾಸನಕ್ಕೆ ಹೊರಟರು. ಹಾಸನದಲ್ಲಿ ಡಿ.ಇ.ಓ. ಅವರನ್ನು ಭೇಟಿ ಮಾಡಿ ಒಂದು ಉದ್ಯೋಗ ದೊರಕಿಸಿಕೊಳ್ಳಲು ತಾನು ಹೋಗುತ್ತಿರುವುದಾಗಿ ರಾಮಸ್ವಾಮಿ ತಂದೆಗೆ ತಿಳಿಸಿದಾಗ ಅವರು ‘ಮಗ ದಾರಿಗೆ ಬರುತ್ತಿದ್ದಾನೆ’ ಎಂದು ಒಳಗೊಳಗೆ ತುಸು ನಲಿದರು. ಅವನ ‘ದಾರಿ’, ಹಾಸನದ ಡಿ.ಇ.ಓ. ಕಚೇರಿಯ ಆಚಿನ ತೋಪಿನಲ್ಲಿ ಬಿಡಾರ ಮಾಡಿದ್ದ ದೊಂಬರ ಪಾಳ್ಯದ ಕಡೆಗೆ ತಿರುಗಿತ್ತೆಂಬುದನ್ನು ಅವರರಿಯರು.

ರಾಮಸ್ವಾಮಿ ಹಾಸನಕ್ಕೆ ಹೊರಡುವುದಕ್ಕೆ ಮುಂಚೆಯೇ ವೆಂಕಟ ಸುಬ್ಬಯ್ಯನವರಿಗೆ ಶಿವರಾಮಭಟ್ಟರಿಂದ ಸೀತೆಗೆ ಒದಗಿದ ದುರ್ಘಟನೆಯ ಸುದ್ದಿ ಮುಟ್ಟಿತ್ತು. ಪುಟ್ಟಣ್ಣಯ್ಯನ ಮೇಲೆ ಇನ್ನಿಲ್ಲದಷ್ಟು ಕ್ರೋಧ ಉಕ್ಕೇರಿತು. ಅವನನ್ನು ತಾವು ಯಾವ ರೀತಿ ಶಿಕ್ಷಿಸಹೋಗುವುದರಿಂದಲೂ ತಮ್ಮ ಮಗಳ ಹೆಸರನ್ನು ಇನ್ನೂ ಬೀದಿಗೆಳೆದಂತಾಗುವುದೆಂದು ಭಾವಿಸಿ, ಅವರು ತಮ್ಮ ಕೋಪವನ್ನು ನುಂಗಲಾರದೆ ನುಂಗಿಕೊಂಡರು. “ನಿನಗೆ ವಿಷಯ ಗೊತ್ತಿತ್ತೋ ಇಲ್ಲವೋ? ಬಂದ ಕೂಡಲೆ ನನಗೆ ಯಾಕೆ ತಿಳಿಸಲಿಲ್ಲ? ಸೀತೆಯನ್ನ ಅಂಚೆಯ ಕಚೇರಿಗೆ ಕಳಿಸಲು ನೀನು ಯಾಕೆ ಒಪ್ಪಿದೆ? ಅವಳು ಯಾವಾಗ ಬರಲಿಲ್ಲವೋ ನೀನೇ ಹೋಗಿ ನೋಡಿಕೊಂಡು ಬರುವುದಕ್ಕೆ ನಿನಗೇನಾಗಿತ್ತು? ನಿನ್ನನ್ನೇನು ಬ್ರಹ್ಮರಾಕ್ಷಸ ಮೆಟ್ಟಿಕೊಳ್ಳುತ್ತಿತ್ತೆ? ಪುಟ್ಟಣ್ಣಯ್ಯ ದುಷ್ಟನಾಗಿ ನಡೆದುಕೊಳ್ಳದೆಯೇ ಇರಬಹುದು. ಸೀತೆಗೆ ಕೆಟ್ಟ ಹೆಸರು ಬರುವುದಂತೂ ಬಂತೋ?” ಎಂದು ಮುಂತಾಗಿ, ಪ್ರಶ್ನೆಗಳ ಸುರಿಮಳೆ ಸುರಿಸಿ, ಕ್ರೂರದೃಷ್ಟಿಯ ಕೋಲ್ಮಿಂಚನ್ನು ಬೀರಿ, ಆರ್ಭಟಗಳ ಗುಡುಗನ್ನು ಮೊಳಗಿಸಿ, ನುಂಗಿದ್ದ ಕೋಪವನ್ನು ಹೆಂಡತಿಯ ಮೇಲೆ ಕಾರಿದರು. “ಅದು ಏನು ಕಾಗದ, ಅಂಥ ಕೊಳ್ಳಿ ಹೋಗ್ತಿದ್ದದ್ದು? ಮರುದಿನ ಬೆಳಗ್ಗೆ ನೀನೇ ಹಾಕುವುದಕ್ಕೆ ಏನಾಗಿತ್ತು?” ಎಂದು ರಾಮಸ್ವಾಮಿಯನ್ನು ಝಂಕಿಸಿದರು. “ಯಾವುದೋ ಸ್ಕೂಲು ಮೇಷ್ಟರ ಕೆಲಸಕ್ಕೆ ಅರ್ಜಿ. ಪುಟ್ಟಣ್ಣಯ್ಯನವರೇ ಹಾಕು ಅಂತ

ಹೇಳಿದರು. ಅವೊತ್ತು ಹಾಕದೆ ಇದ್ದರೆ ವಾಯಿದೆ ತಾರೀಕು ಮೀರಿಹೋಗುತ್ತೆ ಅಂತ ಅವಳ ಕೈಲಿ ಕಳಿಸಿದೆ. ಹೀಗೆ ಆಗುತ್ತೆ ಅಂತ ನನಗೆ ಏನು ಗೊತ್ತು ?" ಎಂದು ರಾಮಸ್ವಾಮಿ ನುಣುಚಿಕೊಂಡಾಗ, ಇಷ್ಟಕ್ಕೆಲ್ಲಾ ಅವನೇ ಕಾರಣ ಎಂಬುದನ್ನು ಅವರು ಶಂಕಿಸಲಾರದೆ ಹೋದರು ; ರಾಮಸ್ವಾಮಿ ಕೆಲಸಕ್ಕೆ ಪ್ರಯತ್ನಪಡುವುದಕ್ಕಾಗಿಯೇ ಹಾಸನಕ್ಕೆ ಹೋಗುತ್ತೇನೆಂದಾಗ, ಅವನು ಹೇಳಿದ್ದ ಮಾತು ಹದಿನಾರಾಣೆ ನಿಜವೆಂದೇ ಅವರು ನಂಬಿಬಿಟ್ಟರು. "ಬಸ್ ಚಾರ್ಜಿಗೆ ಬೇಡವೆ ? ತಗೋ" ಎಂದು ಅವನ ಕೈಗೆ ಎರಡು ರೂಪಾಯಿ ಹಾಕಿದರು. "ಶಾಮಣ್ಣನವರ ಮನೆ ಇದೆಯಲ್ಲಾ, ಅಲ್ಲೇ ಇಳಿದುಕೋ. ಏನು, ಒಂದು ಎರಡು ದಿನ ತಾನೆ" ಎಂದು ಸಲಹೆಯಿತ್ತರು. ರಾಮಸ್ವಾಮಿ ಆ ಸಂದರ್ಭಕ್ಕೆ ಅವಶ್ಯವಾದ ವಿಧೇಯತೆಯನ್ನು ನಟಿಸಿ, ಪ್ರಯಾಣಕ್ಕೆ ಸನ್ನದ್ಧನಾಗಿ ಮನೆಯನ್ನು ಬಿಟ್ಟ.

. ವೆಂಕಟಸುಬ್ಬಯ್ಯನವರು ಸೀತೆಗೆ ಸಲ್ಲದ ಪ್ರಶ್ನೆಗಳನ್ನು ಹಾಕಿ ಅವಳ ಮನಸ್ಸನ್ನು ನೋಯಿಸಲು ಇಷ್ಟಪಡಲಿಲ್ಲ. ಇದರಲ್ಲಿ ಅವಳ ತಪ್ಪು ಏನೂ ಇಲ್ಲವೆಂದು ನಿರ್ಧರ ಮಾಡಿದರು ; ಅವಳ ಗ್ರಹಚಾರ, ಎಂದುಕೊಂಡರು ; ಏನಿದ್ದರೂ ತಪ್ಪು ತಮ್ಮದು ಎಂದು ಭಾವಿಸತೊಡಗಿದರು. ಆ ವೇಳೆಯಲ್ಲಿ ಸಹಜವಾಗಿಯೇ ಅವರ ಮನಸ್ಸಿನಲ್ಲಿ ಶಾಮಣ್ಣನವರೊಂದಿಗೆ ತಾವು ಆಡಿದ ಮಾತುಕತೆ ಮರುದನಿ ಕೊಡುತ್ತಿತ್ತು. 'ಏನು ಮಾಡುವುದು, ಏನು ಮಾಡುವುದು ?' ಎಂದು ಕೈಕೈ ಹಿಸುಕಿಕೊಳ್ಳುತ್ತಿದ್ದರು. ರಾತ್ರಿಯೆಲ್ಲ ನಿದ್ದೆ ಬಾರದು ; ಸೀತೆಯದೇ ಆಲೋಚನೆ. ತಮ್ಮ ದುಃಖವನ್ನು ಯಾರಲ್ಲಿ ತೋಡಿಕೊಳ್ಳಬೇಕು ? ಸೀತೆಯ ಎದುರಿನಲ್ಲಿ ಕೈಹಿಡಿದ ಹೆಂಡತಿಯೊಂದಿಗೂ ಹೇಳಿಕೊಳ್ಳುವ ಹಾಗಿಲ್ಲ. ಆದ್ದರಿಂದ, ಎಂದಾದರೂ ರಾತ್ರಿ ಸೀತೆ ನಿದ್ದೆಹೋದ ಮೇಲೆ, ಹೆಂಡತಿಯೊಂದಿಗೇ ಆಲೋಚನೆ ಮಾಡಿ, ಸೀತೆಯ ಭವಿಷ್ಯವನ್ನು ಸುಗಮ ಮಾಡಲೆಳಸಿದರು.

ರಾಮಸ್ವಾಮಿ ಊರು ಬಿಟ್ಟು ಹೋದದ್ದು, ಸೀತೆಯ ವಿಚಾರದಲ್ಲಿ ಹೆಂಡತಿಯೊಂದಿಗೆ ಮನಬಿಚ್ಚಿ ಮಾತಾಡಲು ಅವರಿಗೂ ಒಳ್ಳೆಯ ಅವಕಾಶವೇ ದೊರೆತಂತಾಯಿತು. ಅದೇ ರಾತ್ರಿ, ಎಂದಿಗಿಂತ ಹೊತ್ತಿಗೆ ಮುಂಚೆಯೇ ಊಟ ಮಾಡಿ, "ನಾನು ಸ್ವಲ್ಪ ನಂಜುಂಡಶಾಸ್ತ್ರಿಗಳನ್ನ ನೋಡಿಕೊಂಡು ಬರುತ್ತೇನೆ.

ನೀವು ಬಾಗಿಲು ಹಾಕಿಕೊಂಡು ಮಲಗಿಕೊಳ್ಳಿ " ಎಂದು ಅಲ್ಲಿ ಇಲ್ಲಿ ಸುತ್ತಾಡಿಕೊಂಡು, ಅವರಿವರನ್ನು ಮಾತನಾಡಿಸಿಕೊಂಡು, ಸ್ವಲ್ಪ ತಡವಾಗಿಯೇ ಮನೆಗೆ ಬಂದರು. ಸೀತೆಗೆ ಎಚ್ಚರವಾಗಬಾರದೆಂದು ಮೆಲ್ಲನೆ " ಲೇ, ಲೇ; ಲೇ, ಲೇ " ಎಂದು ಕೂಗಿ, ಬಾಗಿಲು ತಟ್ಟಿದರು. ಪಾರ್ವತಮ್ಮನರಿಗೆ ನಿದ್ರೆ ಹತ್ತಿರಲಿಲ್ಲ. ಎದ್ದು ಬಂದು ಬಾಗಿಲು ತೆರೆದರು.

ಮೇಲು ಹಜಾರದ ಒಂದು ಪಕ್ಕದಲ್ಲಿ ಸೀತೆ ಪಾರ್ವತಮ್ಮನವರು ಒಟ್ಟಿಗೆ ಮಲಗುತ್ತಿದ್ದರು; ಕೆಳ ಹಜಾರದಲ್ಲಿ, ಬೀದಿಯ ಬಾಗಿಲ ಹತ್ತಿರ, ರಾಮುಸ್ವಾಮಿ ಮಲಗುತ್ತಿದ್ದನು. ಮನೆಗೆಲ್ಲಾ ಒಂದೇ ಒಂದಾದ ಮಲಗುವ ಕೋಣೆಯಲ್ಲಿ ವೆಂಕಟಸುಬ್ಬಯ್ಯನವರು ಮಲಗುತ್ತಿದ್ದರು. ಈಗ ರಾಮುಸ್ವಾಮಿ ಇಲ್ಲದ್ದರಿಂದ, ವೆಂಕಟಸುಬ್ಬಯ್ಯನವರೂ ಮೇಲು ಹಜಾರದಲ್ಲಿ ಈ ಪಕ್ಕದಲ್ಲಿ ಹಾಸಿಗೆ ಹಾಸಿಕೊಂಡಿದ್ದರು.

ವೆಂಕಟಸುಬ್ಬಯ್ಯನವರು ಬಾಗಿಲು ಹಾಕಿಕೊಂಡು, ತಮ್ಮ ಹಾಸಿದ್ದ ಹಾಸಿಗೆಯ ಮೇಲೆ ಕುಳಿತರು. " ಸ್ವಲ್ಪ ಬಾ ಇಲ್ಲಿ " ಎಂದು ಮೆಲುದನಿಯಲ್ಲಿ ಹೆಂಡತಿಯನ್ನು ಕರೆದರು.

ಅವರ ದಾಂಪತ್ಯಜೀವನದಲ್ಲಿ ಸರಸ ಭಾಗ ಎಂದೋ ಕೊನೆಗಂಡಿತ್ತು. ಯಾವುದೋ ಮುಖ್ಯವಾದ, ಗೋಪ್ಯವಾದ ಗೃಹಕೃತ್ಯ ವಿಚಾರವನ್ನು ಯಜಮಾನರು ತಮ್ಮೊಡನೆ ಮಾತನಾಡ ಬಯಸುತ್ತಾರೆಂದು ಪಾರ್ವತಮ್ಮನವರು ಸುಲಭವಾಗಿ ಗ್ರಹಿಸಿದರು. ಗಂಡನ ಹಾಸಿಗೆಯ ಬಳಿ ಬಂದು, ಪಕ್ಕದಲ್ಲಿ ನೆಲದ ಮೇಲೆ ಕುಳಿತರು.

ಕುರಿತ ವಿಷಯವನ್ನು ವೆಂಕಟಸುಬ್ಬಯ್ಯನವರು ನೇರವಾಗಿ ಎತ್ತಿದರು; ಸೀತೆಯ ದುಃಸ್ಥಿತಿಯ ಬಗ್ಗೆ ಪೇಚಾಡಿದರು; ತಮಗೆ ಸುದ್ದಿ ತಿಳಿದ ಬಗೆಯನ್ನು ವಿವರಿಸಿದರು; ಹಾಸನದಲ್ಲಿ ತಮಗೂ ಶಾಮಣ್ಣನವರಿಗೂ ನಡೆದ ಮಾತುಕತೆಯನ್ನು ವಿವರಿಸಿದರು. ಪತ್ನಿಯ ಸಲಹೆಯನ್ನು ಕೋರಿದರು.

"....ನೋಡಿದೆಯಾ, ಹೀಗಿದೆ ಸಮಾಚಾರ. ಶಾಮಣ್ಣನವರು ಹೇಳಿದ ಮಾತು ಇಷ್ಟು ಬೇಗ ನಿಜವಾಗಿಬಿಡುತ್ತೆ ಅಂತ ನಾನು ಕನಸುಮನಸಿನಲ್ಲಿಯೂ ಎಣಿಸಿರಲಿಲ್ಲ. ಏನೋ, ಆದದ್ದು ಆಗಿಹೋಯಿತು. ಇನ್ನು ಆ ವಿಚಾರ ಚಿಂತಿಸಿ ಪ್ರಯೋಜನವಿಲ್ಲ. ಇದರಲ್ಲಿ ಸೀತೆಯದೇನೂ ತಪ್ಪು ಕಾಣಲಿಲ್ಲ,

ನನಗೆ. ಮುಖ್ಯ, ಅವಳ ಗ್ರಹಚಾರ, ನಮ್ಮ ದುರದೃಷ್ಟ. ನನ್ನ ನಿನ್ನ ಕಣ್ಣೆದುರಿಗೆ ಅವಳು ಇರುವ ವರೆಗೂ ಇನ್ನು ಮುಂದೆ ಇಂಥಾದ್ದು ನಡೆಯದಂತೆ ಸರ್ಪಗಾವಲಾಗಿರಬಹುದು. ಹಿಂಚೋ ಮುಂಚೋ ಒಬ್ಬರಾದ ಮೇಲೆ ಒಬ್ಬರು, ನಾವಿಬ್ಬರೂ ಎಂದಾದರೂ ಒಂದು ದಿನ ಕಂತೆ ಒಗೆಯಲೇಬೇಕಲ್ಲ. ಆಮೇಲೆ ಇವಳ ಗತಿ ಏನು? ರಾಮುಸ್ವಾಮಿ ಕೆಲಸ ಹಿಡಿದು, ಸಂಸಾರಮಾಡಿ, ಯೋಗ್ಯ ಅಂತ ಅನ್ನಿಸಿಕೊಂಡ ಮೇಲೆ ತಾನೆ ತಂಗಿಯನ್ನ ಕಾಪಾಡುವ ಮಾತು? ಅವನು ಗಡ್ಡೆ ಹತ್ತುವ ಹಾಗೆ ತೋರುವುದಿಲ್ಲ. ಇನ್ನು ಸುಬ್ಬಸ್ವಾಮಿ: ಸೀತೆಗೆ ಒಂದಿಷ್ಟು ನೆರಳು ಸಿಕ್ಕಬೇಕಾದರೆ, ಅಲ್ಲಿ ಸಿಕ್ಕಬೇಕು. ಅದು ತಪ್ಪಿದರೆ, ಕಾವೇರಿಯ ಮನೆ. ಎಲ್ಲಿಯೇ ಆದರೂ, ಎಷ್ಟು ದಿನ ಅಂತ ಕೂರಿಸಿ ಹಾಕುತ್ತಾರೆ? ದುಡಿಯುವ ಎತ್ತಿಗೆ ಒಂದು ಹಿಡಿ ಹುಲ್ಲು ಹಾಕುತ್ತಾರೆ. ಮೈಗಳ್ಳ ಎತ್ತನ್ನ, ಮುದಿ ಎತ್ತನ್ನ, ಮೂರಕ್ಕೋ ಆರಕ್ಕೋ ಸೀಯುತ್ತಾರೆ. ಸೀತೆ ಇರುವ ಹಾಗೇ ಇದ್ದರೆ ಹಬ್ಬಹರಿದಿನ ಮಡಿಹುಡಿ ಯಾವುದಕ್ಕೂ ಆಗುವುದಿಲ್ಲ. ಜೀವನಾಂಶದ ಹಣ ಬಂದರೆ, ಅವಳ ಹೊಟ್ಟೆಬಟ್ಟೆಗೆ ಒಂದು ದಾರಿಯಾಗುತ್ತೆ. ಆದರೂ, ನೆರಳಿಗೆ ಇನ್ನೊಬ್ಬರನ್ನ ಆಶ್ರಯಿಸಲೇಬೇಕೋ? ಎಲ್ಲಾ ಭಾಗದಲ್ಲೂ ಯೋಚನೆ ಮಾಡಿದ್ದರಲ್ಲಿ, ಸೀತೆಗೆ ಮಡಿ ಮಾಡಿಸುವುದೇ ಸೂಕ್ತ ಅಂತ ನನಗೆ ತೋರುತ್ತೆ. ನಿನ್ನ ಅಭಿಪ್ರಾಯವೇನು?"

ಪಾರ್ವತಮ್ಮನವರು ಏನೂ ಉತ್ತರ ಕೊಡದೆ, ಮೌನವಾಗಿದ್ದರು.

"ಯಾಕೆ, ನಿನಗೆ ಇಷ್ಟವಿಲ್ಲವೆ? ಶಾಮಣ್ಣನವರ ಮಗಳು ಗೌರಮ್ಮನ ವಿಚಾರದಲ್ಲಿ ನಾವೇ ಬಲವಂತ ಮಾಡಲಿಲ್ಲವೆ? ಸೀತೆಯ ಗಂಡ ಹೋದಾಗ ದುಃಖದ ಹೊಸದರಲ್ಲಿ ನನಗೂ ಮೋಹ ಮುಚ್ಚಿಕೊಂಡುಬಿಟ್ಟಿತು. ಸುಮ್ಮನಿದ್ದುಬಿಟ್ಟೆ. ಗಂಡನೇ ಇಲ್ಲದಿದ್ದ ಮೇಲೆ, ವೇಷ ಹೇಗಿದ್ದರೇನು? ಶಾಮಣ್ಣನವರು ಹೇಳಿದ ಹಾಗೆ, ಕೆಂಪು ಸೀರೆ ಒಂದು ಕಾವಲು ಅವರಿಗೆ."

ಪಾರ್ವತಮ್ಮನವರು ಮೌನವಾಗಿಯೇ ಇದ್ದರು.

"ಸರಿ, ನಿನಗಿಷ್ಟವಿಲ್ಲ ಅಂತ ಕಾಣುತ್ತೆ, ಬಿಡು. ಆದರೆ ಇವತ್ತು ನಾನು ಏನು ಹೇಳಿದೆ ಅನ್ನುವುದನ್ನ ಬರೆದಿಟ್ಟುಕೋ. ನಿನ್ನ ಮಕ್ಕಳು ಅವಳನ್ನ ಕಾಪಾಡತಕ್ಕವರಲ್ಲ. ರಾಮುಸ್ವಾಮಿ ಶುದ್ಧ ಅಪಾಪೋಲಿ. ಸುಬ್ಬಸ್ವಾಮಿಗಿರೋ ಮನೇ ವಾಂಛಲ್ಯವೂ ಅಷ್ಟರಲ್ಲೇ ಇದೆ. ಒಂದುವೇಳೆ ಅವನು ತಂಗಿಯನ್ನ

ಕೈಬಿಡದಿದ್ದರೂ, ಸಾವಿತ್ರಿ ಸುಮ್ಮನಿರುತ್ತಾಳೆಯೋ? ಮಾವನಿಗೆ ಮಣೆ ಹಾಕದ ಸೊಸೆ ನಾದಿನಿಗೆ ಕೂರಿಸಿ ಮಾಡುತ್ತಾಳೆಯೆ? ಕಾವೇರಿ ಸ್ವತಂತ್ರಳಲ್ಲ: ಅಲ್ಲದೆ, ರಂಗಸ್ವಾಮಿಗೆ ಆಸ್ತಿಯಿಲ್ಲ, ಪಾಸ್ತಿಯಿಲ್ಲ; ಒಡ ಸ್ಕೂಲು ಮೇಷ್ಟ್ರು. 'ಅಯ್ಯೋ ಪಾಪ' ಅಂತ ನಾದಿನಿಯನ್ನು ಕಾಪಾಡಿದರೆ ಸರಿ, ಸಂತೋಷ. ಇಲ್ಲದಿದ್ದರೆ ನಾವು ಕಣ್ಣುಮುಚ್ಚಿಹೋದಮೇಲೆ, ಅವಳು ಬೀದಿಯ ಪಾಲಾಗುತ್ತಾಳೆ; ಇಲ್ಲವೋ ಹೊಳೆಗೋ ಕೆರೆಗೋ ಮಗುಚಿಕೊಳ್ಳಬೇಕಾಗುತ್ತೆ."

ಕಡೆಗೆ ಪಾರ್ವತಮ್ಮನವರು ಬಾಯಿಬಿಟ್ಟರು:

"ನಾಳೆ ಏನಾಗುತ್ತೆ ಅನ್ನುವುದನ್ನ ಕಂಡಿರುವವರು ಯಾರು? ಮೈಲಾರಯ್ಯನವರ ಮನೆಗೆ ಕೊಡುವ ಬದಲು ಶಿವರಾಮುಭಟ್ಟರ ಮನೆಗೇ ಕೊಟ್ಟಿದ್ದರೆ, ಅವಳಿಗೆ ಈ ಗತಿಯೇ ಒದಗುತ್ತಿರಲಿಲ್ಲವೋ? ಹೀಗಾಗುತ್ತೆ ಅಂತ ನಾವು ಆಗ ಕಂಡಿದ್ದೆವೆ? ಇಲ್ಲದ್ದನೆಲ್ಲ ನಾವು ಯಾಕೆ ಕುರಿಯಬೇಕು? ಜೀವನಾಂಶ ಅಂತ ಒಂದು ಸಿಕ್ಕಿ, ಆ ಹಣಕ್ಕೆ ನೀವು ಹೇಳಿದ ಹಾಗೆ ಒಂದು ತುಂಡು ಗದ್ದೆ ಅವಳ ಹೆಸರಿಗೆ ತೆಗೆದರೆ, ಯಾರ ಹಂಗೂ ಇಲ್ಲವೊ? ಅವಳ ಅನ್ನ ಅವಳು ಬೇಯಿಸಿಕೊಂಡು ತಿನ್ನುತ್ತಾಳೆ. ಗಂಡ ಹೋದ ಹೊಸದರಲ್ಲೇ ಮುಡಿ ಕೊಡಿಸಿದ್ದರೆ ಚೆನ್ನಾಗಿತ್ತು. ಈಗ ಹಾಗೆ ಮಾಡುವುದಕ್ಕೆ ಹೋದರೆ, ಹುಳುಕು ಮುಚ್ಚೋದಕ್ಕೆ ಇದೊಂದು ವೇಷ ಅಂತ ಇನ್ನಷ್ಟು ಇಲ್ಲದ ಆಡಿಕೆಗೆ ಕಾರಣ ವಾಗುತ್ತೆ. ಇದ್ದ ಹಾಗೆ ಇದ್ದುಕೊಳ್ಳಲಿ. ನಾವು ಕಣ್ಣುಮುಚ್ಚಿದಮೇಲೆ, ಅವಳನ್ನ ನೋಡಿಕೊಳ್ಳುವ ಧರ್ಮ ಕರ್ಮ ಅವಳ ಅಣ್ಣಂದಿರಿಗೆ ಸೇರಿದ್ದು. ಬುದ್ಧಿ ತಿಳಿದಮೇಲೆ, ಸೀತೆ ತಾನೇ ಮುಡಿ ಹಿಡಿಯುತ್ತಾಳೆ. ಇನ್ನೊಬ್ಬರು ಹೇಳಬೇಕೆ? ನಾನು ಬದುಕಿರುವಾಗ ಅದನ್ನ ಕಣ್ಣಿಂದ ನೋಡಲಾರೆ. ಬಾಯಿ ಬಿಟ್ಟು ಹೇಳದಿದ್ದರೇನು, ಅದು ಎಷ್ಟು ನೊಂದುಕೊಳ್ಳುತ್ತೋ ಪಾಪ. ಇಷ್ಟರ ಮೇಲೆ ನಿಮ್ಮ ಇಷ್ಟ.... ಇನ್ನೇನೂ ಇಲ್ಲ ತಾನೆ?" ಎಂದು ಎಲ್ಲವೂ ನಿರ್ಧಾರ ವಾದ ರೀತಿಯಲ್ಲಿಯೇ ಪಾರ್ವತಮ್ಮನವರು ಹೋಗಿ ಹಾಸಿಗೆಯ ಮೇಲೆ ಮಲಗಿದರು. ಸೀತೆ ಯಾವಾಗಲೋ ಎಚ್ಚರಗೊಂಡು, ತಮ್ಮ ಮಾತುಕತೆ ಯನ್ನು ಆಲಿಸಿದ್ದಳೆಂಬುದನ್ನು ಇಬ್ಬರೂ ಅರಿಯರು.

೨

ರಾಮುಸ್ವಾಮಿ ಎರಡು ಮೂರು ದಿನಗಳಲ್ಲಿಯೆ ಹಾಸನದಿಂದ ಹಿಂತಿರುಗಿದನು. ಅವನಿಗೆ ಅಂತರ್ಯದಲ್ಲಿ ಹಿಗ್ಗು. ಹಾಸನಕ್ಕೆ ಹೋದ ಕೆಲಸ ಏನಾಯಿತು ಎಂದು ತಂದೆ ವಿಚಾರಿಸಿದಾಗ, ರಾಮುಸ್ವಾಮಿ ಸಪ್ಪೆ ಮುಖವನ್ನು ಹಾಕಿಕೊಂಡು, "ಏನೂ ಫಲಕಾರಿಯಾಗಲಿಲ್ಲ. ಯಾವುದಾದರೂ ಕೆಲಸ ಖಾಲಿ ಬಿದ್ದಾಗ ನೇಮಿಸಿಕೊಂಡು 'ಇಂಡಾರ್ಸು' ಕೊಡುತ್ತೇವೆ ಅಂತ ಹೇಳಿದರು" ಎಂದು ಸಿದ್ಧವಾದ ಮಿಥ್ಯೆಯ ಮಾತ್ರೆಯನ್ನು ನುಂಗಲು ಕೊಟ್ಟ. ಎಂದಿನಂತೆ ತನ್ನ ನಿತ್ಯ ಕಾರ್ಯಕ್ರಮಗಳಲ್ಲಿ ಸಂಪೂರ್ಣವಾಗಿ ನಿರತನಾಗತೊಡಗಿದ. ತಂದೆ ಊರಿನಲ್ಲಿದ್ದಾಗಲೇ ಅವನಿಗೆ ಸಂಪೂರ್ಣ ಸ್ವಾತಂತ್ರ್ಯ!

ಮಾನಸಿಕ ಆಘಾತದ ಪರಿಣಾಮವಾಗಿ ಮೊದಲಿಟ್ಟ ಅಸ್ವಸ್ಥತೆಯಿಂದ ಸೀತೆ ಚೇತರಿಸಿಕೊಂಡಿದ್ದರೂ, ಏನೋ ಒಂದು ಬಗೆಯ ಮಂಕು ಅವಳನ್ನು ಆವರಿಸಿತು. ಗಂಡ ಹೋದಮೇಲೆ ಅವಳು ಎಲ್ಲಿಯೂ ಹೊರಗೆ ಹೋಗಲು ತಾಯಿ ಅವಕಾಶ ಕೊಡದಿದ್ದರೂ, ಮನೆಯೊಳಗೆ ನಾಲ್ಕು ಗೋಡೆಯ ನಡುವಣ ಬಾಳನ್ನು ಅವಳು ಒಂದು ಬಂಧನವೆಂಬುದಾಗಿ ಭಾವಿಸಿರಲಿಲ್ಲ. ಕಳೆದ ವರ್ಷದ ಹಬ್ಬಸಾಲಿನಲ್ಲಿ, ಇತರರಂತೆ ತಾನೂ ನೋಹಿವ್ರತಗಳನ್ನು ಮಾಡಿಕೊಂಡು, ಉಂಡು ಉಟ್ಟು ನಲಿಯುವುದಕ್ಕಿಲ್ಲವಲ್ಲಾ ಎಂದೇನೋ ಒಳಗೊಳಗೇ ಕೊರಗಿದ್ದಳು; ಆದರೂ ಮಂಕಾಗಿರಲಿಲ್ಲ. ತನ್ನ ಕಾರಣದಿಂದ ಹಬ್ಬ ಯಾವುದೂ ನಿಲ್ಲಲಿಲ್ಲ. ಮಡಿಯ ಅಗತ್ಯವಿಲ್ಲದ ಕಾರ್ಯಗಳಲ್ಲೆಲ್ಲಾ ತಾಯಿಗೆ ನೆರವಾಗುತ್ತಿದ್ದಳು; ಮನೆಯನ್ನೆಲ್ಲಾ ಸಾರಿಸಿ ರಂಗೋಲಿ ಇಡುತ್ತಿದ್ದಳು; ತಾಯಿಯೊಡನೆ ನಿತ್ಯ ಐದೋ ಹತ್ತೋ ಎಲೆ ಹಚ್ಚಿಸುತ್ತಿದ್ದಳು. ಹಿತ್ತಿಲಿನಲ್ಲಿ ತನ್ನದೇ ಒಂದು ಸಣ್ಣ ಕೈತೋಟಮಾಡಿ, ಅದರ ಆರೈಕೆಯಲ್ಲಿ ಸ್ವಲ್ಪ ಹೊತ್ತು ಕಳೆಯುತ್ತಿದ್ದಳು. ತನ್ನ ಬಟ್ಟೆ ತಾನು ಒಗೆದುಕೊಳ್ಳುತ್ತಿದ್ದಳು. ಒಂದೊಂದು ದಿನ, ರಾಮುಸ್ವಾಮಿ ಗೋಗರೆದು ಕೇಳಿಕೊಂಡಾಗ, ಅವನ ಬಟ್ಟೆಗಳನ್ನು ಒಗೆದುಕೊಡುತ್ತಿದ್ದಳು. ಪಾರ್ವತಮ್ಮನವರು ಇದನ್ನು ಕಂಡು, "ಅವನಿಗೇನು ಬಂದಿದೆ ಧಾಡಿ, ಅವನ ಬಟ್ಟೆ ಅವನು ಒಗೆದುಕೊಳ್ಳಲಿ. ತೂಕಡಿಸುವವರಿಗೆ ಹಾಸಿಗೆ ಹಾಸಿಕೊಟ್ಟಹಾಗೆ. ನಾಳೆಯಿಂದ ನಿತ್ಯ ಒಗೆದುಕೊಡು ಅನ್ನುತಾನೆ. ಇನ್ನೂ, ಅವರದ್ದಾದರೂ ಎಂದಾದರೂ ಒಗೆದುಹಾಕು. ನೀರು ಹುಯ್ದು

ಕೊಂಡು ನಾನು ಮುಡಿಯಲ್ಲಿ ಹರವಿಕೊಳ್ಳುತ್ತೇನೆ" ಎಂದು ಗದರಿಸಿ ಬುದ್ಧಿವಾದ ಹೇಳುತ್ತಿದ್ದರು ಅಂತೂ, ಸೀತೆಗೆ ಹೊತ್ತು ಹೋಗಲು ತಕ್ಕಷ್ಟು ಕೆಲಸವಿತ್ತು. ಸಂಜೆ ತಮ್ಮ ಮನೆಗೇ ಬರುವ ನೆರೆಹೊರೆಯ ಹೆಂಗಸರೊಂದಿಗೆ, ಹೆಣ್ಣುಮಕ್ಕಳೊಂದಿಗೆ, ಮಾತುಕತೆಯಲ್ಲಿಯೂ ಕಲೆಯುತ್ತಿದ್ದಳು; ಹಾಡು ಗಾಟದಲ್ಲಿ ಸೇರಿಕೊಳ್ಳುತ್ತಿದ್ದಳು; ನಗೆಯಲ್ಲಿ ಬೆರೆಯುತ್ತಿದ್ದಳು. ಇದು ಯಾವುದಕ್ಕೂ ಯಾರ ಅಡ್ಡಿಯೂ ಇರಲಿಲ್ಲ ನಿತ್ಯ ಇಟ್ಟುಕೊಳ್ಳದೆ ಇದ್ದುದ್ದರಿಂದ, ಹಣೆಯ ಕುಂಕುಮ ಇಲ್ಲದ್ದು ಅವಳಿಗೆ ಗೊತ್ತು; ಆದರೆ ಅವಳ ಬಾಳ ತೊರೆ ಎಂದಿನಂತೆಯೇ ಕಲಕಲ ನಾದದಿಂದ ಹರಿಯುತ್ತಿತ್ತು; ಮೊನ್ನೆಮೊನ್ನೆಯ ವರೆಗೂ ಹಾಗೆಯೇ ಹರಿದಿತ್ತು.

ಈಗ ಕೆಲವು ದಿನಗಳಿಂದ, ಹೆಚ್ಚೆಂದರೆ ತಿಂಗಳಿಂದ ಈಚೆಗೆ, ಅವಳ ಬಾಳಿನಲ್ಲಿ ಮಂಕು ಕವಿಯತೊಡಗಿದ್ದು. ಮೈಗೆ ಸ್ವಸ್ಥವಿಲ್ಲ; ತಾಯಿ ಕೆಲಸ ಮಾಡಗೊಡಿಸರು. ಆದ್ದರಿಂದ ಮಂಕು, ಜಷ್ಟೆ, ಎಂದು ಅವಳು ತನಗೆ ತಾನೇ ಸಮಾಧಾನಮಾಡಿಕೊಳ್ಳುವಳು ಸ್ವಯಂ ರೋಗಸಿದಾನ ಯಾರಿಗಾದರೂ ದುಸ್ಸಾಧ್ಯ. ತನ್ನ ಬಾಳು ದುಷ್ಕರವಾಗತೊಡಗಿದೆಯೆಂಬುದನ್ನು ಅವಳು ಹೇಗೆ ತಾನೆ ಅರಿತಾಳು?

ಅಂದಿನ ರಾತ್ರಿಯಲ್ಲದೆ, ರಾಮುಸ್ವಾಮಿ ಹಿಂದಿರುಗುವವರೆಗೆ ಪ್ರತಿ ರಾತ್ರಿಯೂ ತನ್ನ ತಂದೆತಾಯಿ ತನ್ನ ಬಗೆಗೆ ಆಡಿದ ಕೊರಗು ನುಡಿಗಳನ್ನು, ವಿಷಾದವಚನಗಳನ್ನು, ಕಿವಿಗೆ ಹಾಕಿಕೊಂಡಳು; ಅವರು ಸುರಿಸಿದ ಕಂಬನಿಯ ಹೊಳೆಗೆ ತನ್ನ ಕಣ್ಣೀರ ಕಾಲುವೆಯನ್ನೂ ಕೂಡಿಸಿದಳು; ಅವರ ನಿಟ್ಟುಸಿರಿನ ಬೇಗೆಗೆ ತನ್ನುದರ ಬೇಗೆಯನ್ನೂ ಬೆರಸಿದಳು. ತನ್ನ ಭವಿಷ್ಯದ ಬಗೆಗೆ ಅವರ ಆತಂಕದಲ್ಲಿ ತಾನೂ ಪಾಲುಗೊಂಡಳು; ಹಿಂದೆ ಇಲ್ಲದಿದ್ದ ಪ್ರಶ್ನಾರ್ಥಕ ಚಿಹ್ನೆಗಳನ್ನು ಕಲ್ಪಿಸಿಕೊಂಡಳು; ಅವನ್ನು ಒಗ್ಗಣ್ಣಿಂದ ತಿದ್ದತೊಡಗಿದಳು.

ಮೊದಲಿರುಳಿನ ಮಾತುಕತೆಯ ಅರ್ಥದಲ್ಲಿ ಅವಳಿಗೆ ಎಚ್ಚರವಾಯಿತು; ತನ್ನ ವಿಷಯದ ಮಾತುಕತೆಯೆಂದು ಅರಿವಾಯಿತು; ಪೂರ್ಣವಾಗಿ ಅರ್ಥವಾಗಲಿಲ್ಲ. ಆದ್ದರಿಂದ ಉದ್ದೇಶಪೂರ್ವಕವಾಗಿಯೇ ಮಾರನೆಯ ದಿನ ನಿದ್ದೆಯನ್ನು ನಟಿಸಿ, ಎಚ್ಚರವಾಗಿದ್ದು, ಹೆತ್ತವರ ಕರುಳ ಮಿಡಿತವನ್ನು ಕಿವಿಗೊಟ್ಟು ಕೇಳಿದಳು; ಅವರ ವಿಷಾದಕ್ಕಾಗಿ ತಾನು ಮರುಗಿದಳು.

ಮರುದಿನವೂ ಅದೇ ವಿಷಯ, ಅದೇ ಕಥನ; ಅದೇ ವಿವರ, ಅದೇ ಪ್ರವರ; ಮಾತು ಬೇರೆ, ಮಾತಿನ ರೀತಿ ಬೇರೆ; ಹುರುಳು ತಿರುಳು ಒಂದೇ.

ಈ ಮಾತುಕತೆ ಕೇಳಿದ್ದರ ಪರಿಣಾಮ: ಸೀತೆಯ ಒಡೆದ ಬಾಳಿನ ಸ್ಪಷ್ಟ ಚಿತ್ರ ಅವಳ ಚಿತ್ತದಲ್ಲಿ ಅಂಕಿತವಾಯಿತು; ತಂದೆತಾಯಿಗೆ ತಾನು ಇಂದೂ ಮುಂದೂ ಬೇಕಾದವಳಾದರೂ ಇತರರು ಯಾರಿಗೂ ಬೇಡದವಳಾಗುವೆನೆಂದು ಖಚಿತಪಡಿಸಿಕೊಂಡಳು. ಸಾಧ್ಯವಾದರೆ, ಬೇಕಾಗುವಂತೆ ನಡೆದುಕೊಳ್ಳ ಬೇಕೆಂದು ನಿಶ್ಚಯಿಸಿದಳು. ಸದ್ಯಕ್ಕಂತೂ, ತನ್ನ ತಾಯಿ ಇಟ್ಟ ಗೆರೆ ದಾಟುವು ದಿಲ್ಲವೆಂದು ಶಪಥಮಾಡಿಕೊಂಡಳು.

ಹೆಣ್ಣಿನ ನಡತೆ ಎಂದರೇನು, ನಡತೆ ಕೆಡುವುದು ಎಂದರೇನು, ನಡತೆ ಕೆಟ್ಟರೆ ಪರಿಣಾಮ ಏನು ಎಂಬುದರ ಸ್ಥೂಲ ಕಲ್ಪನೆ ಅವಳಿಗೆ ಉಂಟಾಯಿತು. ತನ್ನ ನಡತೆ ಕೆಟ್ಟಿತೆಂಬ ಬಗ್ಗೆ ತಂದೆತಾಯೇ ಇನ್ನೂ ತುಸುಮಟ್ಟಿಗೆ ಸಂದೇಹ ದಲ್ಲಿದ್ದರೂ, ತನಗೆ ತಾನೇ ಸಾಕ್ಷಿಯಾಗಿರುವಾಗ, ತನ್ನನ್ನು ತಾನು ಮೋಸ ಪಡಿಸಿಕೊಳ್ಳಲು ಸಾಧ್ಯವಿಲ್ಲವೆಂದುಕೊಂಡಳು. ತನ್ನ ವಿಷಯ ಊರ ಬಾಯಿಗೆ ಬೀಳುವಂತಾಯಿತೆ ಎಂದು ಕೊರಗಿದಳು.

ಅಂದಿನ ಘಟನೆಯನ್ನು ವಿವರ ವಿವರವಾಗಿ ಮತ್ತೆ ನೆನೆದಳು; ಮನ ದಲ್ಲಿಯೇ ನಡುಗಿದಳು; ಜಾಗ್ರದವಸ್ಥೆಯ ಚಿಂತನೆಯಾದ್ದರಿಂದ ಚೀರಿ, ತಂದೆತಾಯನ್ನು ಗಾಬರಿಪಡಿಸಲಿಲ್ಲ; ಅದನ್ನು ಮರೆಯಲು ಪ್ರಯತ್ನಪಟ್ಟಳು. ತನ್ನ ಭಾಗದ ದೈವವಾಗಿ ಹಿಂಬಾಲಿಸುತ್ತಿದ್ದ ಸುಬ್ಬಾಭಟ್ಟನನ್ನು ಮೊದಲೇ ಮರೆಹೊಕ್ಕಿದ್ದರೆ ಚೆನ್ನಾಗಿರುತ್ತಿತ್ತೆಂದು ಮರುಗಿದಳು; ಪುಟ್ಟಣ್ಣಯ್ಯನನ್ನು ಮನಸ್ಸಿನಲ್ಲಿಯೇ ಸಾವಿರ ಸಲ ಶಪಿಸಿದಳು.

ತನ್ನ ಅಣ್ಣಂದಿರ ಶೀಲಸ್ವಭಾವಗಳ ಸ್ವರೂಪವೂ ಮಸಕುಮಸಕಾಗಿ ಮೊತ್ತಮೊದಲು ಅವಳ ಅರಿವಿಗೆ ಬಂದಿತು.

ಮೂರು ಇರುಳು ಕಳೆಯುವಷ್ಟರಲ್ಲಿ, ಸೀತೆ ಮೂರು ವರ್ಷಗಳಷ್ಟು ಬೆಳೆದಿದ್ದಳು. ಅವಳ ಮುಖದ ದುಗುಡದ ಭಾವದಲ್ಲಿ ಗಾಂಭೀರ್ಯದ ಮುದ್ರೆ ಮೊಳೆತು ಮೂಡತೊಡಗಿದ್ದು ತಂದೆತಾಯ ಗಮನಕ್ಕೆ ಮಾತ್ರ ಬರಲಿಲ್ಲ. ಅವರ ಭಾವನೆಯಲ್ಲಿ ಅದು 'ಏನೋ ಮಂಕು.' ಅವರ ದೃಷ್ಟಿಯಲ್ಲಿ ಅವಳಿನ್ನೂ ಎಂದಿನ ಏನೂ ಅರಿಯದ ಹಸುಳೆ.

೩

ಹಬ್ಬಸಾಲು ಹಾರಿಬಂದಿತು.

ಹಬ್ಬಸಾಲೆಂದರೆ ಹಳ್ಳಿಗಳಲ್ಲಿ ಸಡಗರದ ದಿನಗಳು. ಅದರಲ್ಲಿಯೂ ಹೆಣ್ಣುಮಕ್ಕಳ ಹಿಗ್ಗಿನ ಸುಗ್ಗಿಯ ದಿನಗಳು. ಎಷ್ಟೇ ಬಡವರಾದರೂ ಹಬ್ಬ ವೆಂದರೆ ಕಾರ್ಪಣ್ಯ ಮಾಡರು. ಹಳ್ಳಿಯ ಸಂಸ್ಕೃತಿಯೆಲ್ಲ ಹಬ್ಬಗಳಲ್ಲಿ ಹೊಮ್ಮು ವುದು. ಹಬ್ಬಸಾಲಿನ ಮೂರು ನಾಲ್ಕು ತಿಂಗಳು ಊರೆಲ್ಲ ಒಂದು ಬಾಳನ್ನು ಬಾಳುವುದು. ಊರಿನ ಒಬ್ಬರೋ ಇಬ್ಬರೋ ಜೋಯಿಸರು ಊರಿಗೆಲ್ಲ ಬೇಕು. ಎಲ್ಲರೂ ಎಲ್ಲರ ಮನೆಗೂ ಹೋಗಬೇಕು. ಎಲ್ಲರ ಮನೆಯ ಬಾಗಿಲ ಹಸುರು ತೋರಣ ಎಲ್ಲರಿಗೂ 'ಒಳಕ್ಕೆ ಬನ್ನಿ' ಎಂದು ಕರೆ ಕೊಡುವುದು. ನಗರ ಗಳಲ್ಲಿನಂತೆ ಗ್ರಾಮಗಳಲ್ಲಿ ಹಬ್ಬಗಳು ಮನೆಮನೆಯ ನಲಿದಾಟವಲ್ಲ; ಊರೊಟ್ಟಿನ ಒಸಗೆ.

ಕೊಳಲೂರಿನಲ್ಲಿಯೂ ಭೀಮನಮಾವಾಸ್ಯೆಯಿಂದ ಹಬ್ಬಸಾಲು ಮೊದ ಲಿಟ್ಟಿತು. ಅದು ಗಂಡನ ಪೂಜೆಯ ದಿನ. ಸೀತೆಯೂ ಮದುವೆಯಾದಮೇಲೆ ಒಂದು ವರ್ಷ ಭೀಮೇಶ್ವರನ ಪೂಜೆಮಾಡಿದಳು. ಕಳೆದ ವರ್ಷ ಭೀಮೇ ಶ್ವರನ ಅನುಗ್ರಹ ಅವಳ ಮೇಲೆ ತಪ್ಪಿತು. ಅಂದಿನಿಂದ ಮೊದಲಿಟ್ಟ ಪಾರ್ವ ತಮ್ಮನವರ ಕಂಬನಿಯ ಕಾವೇರಿ ಹಬ್ಬಸಾಲಿನ ಪೂರ್ತ ಹರಿಯಿತು.

ಈ ವರ್ಷವೂ ಪಾರ್ವತಮ್ಮನವರ ಕಣ್ಣಿನಲ್ಲಿ ನೀರು ತೊಟ್ಟಿಕ್ಕದಿರಲಿಲ್ಲ. ಸೀತೆ ಮೊದಲೇ ಮಂಕು. ತಾವು ದುಃಖವನ್ನು ಪ್ರದರ್ಶಿಸಿ ಅವಳ ಹುಣ್ಣಿನ ಮೇಲೆ ಬರೆ ಎಳೆಯಲು ಅವರು ಇಷ್ಟಪಡಲಿಲ್ಲ. ದುಃಖವನ್ನು ನುಂಗಿಕೊಂಡರು. ಅಭ್ಯಾಸಬಲದಿಂದ ತೋರಣ ಕಟ್ಟಿದ ರಾಮಸ್ವಾಮಿಯನ್ನು ಅಡ್ಡಿಪಡಿಸಲಿಲ್ಲ. ಪಾಯಸದ ಅಡಿಗೆ ಮಾಡಿದರು; ಮಗಳಿಗೆ ಮುಂದಿನ ಜನ್ಮದಲ್ಲಿಯಾದರೂ ಕುಂಕುಮ ಭಾಗ್ಯವನ್ನು ಕರುಣಿಸೆಂದು ಭೀಮೇಶ್ವರನನ್ನು ಮನಸ್ಸಿನಲ್ಲಿಯೇ ಪ್ರಾರ್ಥಿಸಿದರು.

ಸೀತೆಯೇನೋ ತನ್ನ ಮಂಕನ್ನು ಕೊಡವಿಕೊಳ್ಳಲು ಪ್ರಯತ್ನಿಸ ಹೋದಳು. ಎಂದಿನಂತೆ ತನ್ನ ದಿನಚರಿಯಲ್ಲಿ ತೊಡಗಬಯಸಿದಳು. ಸಹಜ ವಾದ ಅವಳ ಆಂತರಿಕ ಪ್ರೇರಣೆಗೆ ತಾಯಿಯೇ ಅಡ್ಡಬಂದರು. ಕೆಲಸ ಮಾಡಿ ದರೆ ಅವಳು ದಣಿಯುವಳೆಂದು ಭಾವಿಸಿದರು. ಅವಳನ್ನು ಯಾವ ಕೆಲಸಕ್ಕೂ

ಹಾಯಗೊಡುತ್ತಿರಲಿಲ್ಲ. ಕೆಲಸವಿಲ್ಲದ ಸೀತೆಯ ಮನಸ್ಸಿನಲ್ಲಿ ಹಿಂದೆ ಇರದಿದ್ದ ಚಿಂತೆ ಒಕ್ಕಲುಬಂದಿತು; ಅದನ್ನು ಅವಳ ಮ್ಲಾನವಾದ ಗೆಲವಿಲ್ಲದ ಮುಖ ಸಾರಿ ಹೇಳಿತು. ಮಗಳ ಒಳಬೇಗುದಿಯ ಧಗೆ ಹೆತ್ತವರಿಗೆ ತಾಕದೆ ಹೋಗ ಲಿಲ್ಲ. ಗಂಡಹೆಂಡಿರಿಬ್ಬರೂ ಮಗಳ ಸದ್ಯದ ಜೀವನವನ್ನು ಸುಖಮಯವಾಗಿ ಮಾಡುವ ಸಾಧ್ಯಾಸಾಧ್ಯತೆಗಳನ್ನು ಕುರಿತು ಚಿಂತಿಸತೊಡಗಿದರು.

ಪಾರ್ವತಮ್ಮನವರಿಗೆ ಒಂದು ಆಲೋಚನೆ ಹೊಳೆಯಿತು; ಅದನ್ನು ಗಂಡನ ಮುಂದಿಟ್ಟರು: "ಕಾವೇರಿ ಈಚೆಗೆ ಬಂದೇ ಇಲ್ಲ. ಕಳೆದ ಬಾಣಂತನ ದಲ್ಲಿ ಬಂದದ್ದೆಷ್ಟೋ ಅಷ್ಟೆ. ರಂಗಸ್ವಾಮಿಗೆ ಒಂದು ಕಾಗದ ಹಾಕಿ. ಬಂದು ಇದ್ದು ಹಬ್ಬಸಾಲು ಕಳೆದುಕೊಂಡು ಹೋಗಲಿ." "ಸರಿ ಸರಿ, ನಿನಗೇನೋ ಸುಮಾನ. ಮೂರು ತಿಂಗಳು ಒಂದು ಸಂಸಾರ ತಡೆಯುವುದು ಎಂದರೆ ಬಾಯಿ ಮಾತಾಗಿಹೋಯಿತೆ?" ಎಂದು ವೆಂಕಟಸುಬ್ಬಯ್ಯನವರು ಅಸಮ್ಮತಿಯನ್ನು ಸೂಚಿಸಿದರು. "ಹೇಗೋ ಆಗುತ್ತೆ. ಅವರಾಗಿಯೇ ಬಂದರೆ ಬರಬೇಡಿ ಅನ್ನುತ್ತೀವೆಯೆ? ಹಾಗೆ ಅಂತಲೇ ತಿಳಿದುಕೊಳ್ಳುವುದು. ಒಳ್ಳೆ ಕಾಯನ್ನ ಭಾರ ಅಂದರಾಗುತ್ತೆಯೆ? ಅಲ್ಲದೆ, ಸೀತೆಯೂ ಈಚೆಗೆ ತುಂಬ ಕಂಗೆಟ್ಟು ಹೋಗಿದಾಳೆ. ಕಾವೇರಿ ಬಂದರೆ, ಒಂದೆರಡು ತಿಂಗಳು ಅಕ್ಕನೊಡನೆ ಮಾತು ಕತೆಯಾಡಿಕೊಂಡು ನೆಮ್ಮದಿಯಾಗಿರುತ್ತಾಳೆ. ಆಮೇಲೆ ಬೇಕಾದರೆ ಅವರೂರಿಗೆ ಹೋಗಿ ಅಲ್ಲಿ ಒಂದೆರಡು ತಿಂಗಳು ಇದ್ದು ಬರಲಿ" ಎಂದು ಪಾರ್ವತಮ್ಮನವರು ತಮ್ಮ ಸಲಹೆಯನ್ನು ವಿವರಿಸಿದರು. ವೆಂಕಟಸುಬ್ಬಯ್ಯನವರು ಹೆಂಡತಿಯ ಸಲಹೆಯನ್ನು ಅನುಮೋದಿಸಿ, ಮೈಸೂರಿಗೆ ಕಾಗದ ಹಾಕಿದರು. ಆಗ ರಂಗ ಸ್ವಾಮಿ ಮೈಸೂರಿನಲ್ಲಿ ಉಪಾಧ್ಯಾಯರ ಟ್ರೈನಿಂಗ್ ಪರೀಕ್ಷೆಗೆ ಆಯ್ಕೆ ಗೊಂಡು, ಅದಕ್ಕಾಗಿ ಓದುತ್ತಿದ್ದನು

ಸೀತೆ ದಿನದಿನಕ್ಕೆ ಸೊರಗುತ್ತಿದ್ದುದನ್ನು ಕಂಡು ಅವಳಿಗೆ ಏನೋ ಒಳ ವ್ಯಾಧಿಯೂ ಇರಬೇಕೆಂದು ವೆಂಕಟಸುಬ್ಬಯ್ಯನವರು ಶಂಕಿಸಿದರು; ಅವಳನ್ನು ಸುಬ್ರಹ್ಮಣ್ಯಪಂಡಿತರ ಮನೆಗೆ ಕರೆದುಕೊಂಡುಹೋಗಿ ಅವಳ ಕೈತೋರಿಸಿದರು. ಅವರು ಅಂತಹ ವ್ಯಾಧಿಯೇನೂ ಇಲ್ಲವೆಂದು ಹೇಳಿ, ದೇಹಪುಷ್ಟಿ ಸ್ವಲ್ಪ ಕಡಮೆ ಯಾಗಿದೆಯೆಂದು ಹೇಳಿ, ಒಂದು ದೊಡ್ಡ ಡಬ್ಬಿಯ ತುಂಬ ಲೇಹ್ಯವನ್ನು ಮಾಡಿಕೊಟ್ಟರು.

ಶಿವರಾಮಭಟ್ಟರಿಂದ ತಮ್ಮ ಕಿವಿ ಮುಟ್ಟಿದ ಕೆಟ್ಟ ಸುದ್ದಿ ನಿಜವಾದದ್ದೇ ಕುಹಕದ್ದೇ ಎಂದು ತಿಳಿಯಬೇಕೆಂದು ವೆಂಕಟಸುಬ್ಬಯ್ಯನವರ ಕುತೂಹಲ. ಪುಟ್ಟಣ್ಣಯ್ಯ ಸಭ್ಯನೆಂದೇ ಅವರು ಭಾವಿಸಿದ್ದರು. ಸುಬ್ಬಾಭಟ್ಟ ಇಲ್ಲದ ಕೀಟಲೆ ವ್ಯಾಜ್ಯ ತೆಗೆಯುವುದಕ್ಕಾಗಿ ಇಂತಹ ಕತೆ ಕಟ್ಟಿ ಹರಡಿರಬಹುದಲ್ಲವೇ ಎಂದೂ ಅವರು ಸಂದೇಹಪಡುತ್ತಿದ್ದರು. ಪುಟ್ಟಣ್ಣಯ್ಯನನ್ನೆ ನೇರವಾಗಿ ಪ್ರಶ್ನಿಸಿದರೆ ಆತ ಎಂದಾದರೂ ಅಪರಾಧವನ್ನು ಒಪ್ಪಿಕೊಳ್ಳುತ್ತಾನೆಯೆ ? ಇಲ್ಲವೆಂದು ಅವರು ಬಲ್ಲರು. ಆದರೆ ಕೋಟೆಯ ಜನರೆಲ್ಲ ಈ ಅಪರಾಧವನ್ನು ಆತನ ತಲೆಗೇ ಕಟ್ಟಿದ್ದರು. ಇದರ ನಿಜಾಂಶವೇನಿರಬಹುದು ? ತಿಳಿಯಬೇಕೆಂಬ ಕುತೂಹಲ ಅವರನ್ನು ಬಾಧಿಸುತ್ತಿತ್ತು.

ಮಿಡ್ಲ್‌ಸ್ಕೂಲ್ ಹೆಡ್‌ಮಾಸ್ಟರಾದ ಸುಬ್ಬರಾಯರಲ್ಲಿ ವೆಂಕಟಸುಬ್ಬಯ್ಯನವರಿಗೆ ವಿಶೇಷ ಗೌರವ. ಅವರು ವಿದ್ಯಾವಂತರಾಗಿದ್ದುದು ಮಾತ್ರವಲ್ಲದೆ ಮುಚ್ಚುಮರೆ ಇಲ್ಲದೆ ಮಾತಾಡುವವರು. ಅವರು ದೈವಭಕ್ತರಾದ್ದರಿಂದ ತಪ್ಪದೆ ಸಂಜೆಗೆ ಗುಡಿಗೆ ಹೋಗಿ, ಮಾತಿಗೆಂದು ಸೇರಿದವರೊಡನೆ ಹೊತ್ತುಗಳೆಯುವುದಕ್ಕಾಗಿ ತಾವೂ ತುಸು ಹೊತ್ತು ಸಂಭಾಷಣೆಯಲ್ಲಿ ಬೆರೆಯುವರು. ಅಲ್ಲಿ ನೆರೆಯುತ್ತಿದ್ದವರೆಲ್ಲ ಬಹುಮಟ್ಟಿಗೆ ವೈದಿಕರು, ಪೂರ್ವಾಚಾರ ಪ್ರಿಯರು, ಮೂಢ ನಂಬಿಕೆಗಳಿಗೆ ಮನಸ್ಸು ತೆತ್ತವರು. ಸುಬ್ಬರಾಯರು ಪ್ರಾಚೀನ ಸಂಸ್ಕೃತಿಯಲ್ಲಿ ಪ್ರೇಮವುಳ್ಳವರೇ ಆದರೂ ಎಲ್ಲ ಪೂರ್ವ ಸಂಪ್ರದಾಯಗಳನ್ನೂ ಅನುಮೋದಿಸುತ್ತಿರಲಿಲ್ಲ. ಆದರೆ ತಮ್ಮ ಅಭಿಪ್ರಾಯಗಳಿಗೆ ಗೋಷ್ಠಿಯಲ್ಲಿ ಮನ್ನಣೆಯಿಲ್ಲವೆಂದು ಅರಿತ ಅವರು ಅವುಗಳನ್ನು ಇತರರ ಮೇಲೆ ಹೇರಲು ಹೋಗುತ್ತಿರಲಿಲ್ಲ. ಮಾತನಾಡಬೇಕಾದ ಸಂದರ್ಭ ಬಂದಾಗ ಸ್ಪಷ್ಟವಾಗಿಯೆ ತಮ್ಮ ಅಭಿಪ್ರಾಯಗಳನ್ನು ತಿಳಿಸುತ್ತಿದ್ದರು.

ಮೈಸೂರಿಗೆಂದು ಬರೆದ ಕಾಗದವನ್ನು ವೆಂಕಟಸುಬ್ಬಯ್ಯನವರು ಅಂಚೆಯ ಕಚೇರಿಗೆ ಹಾಕಲು ಹೋದಾಗ, ಶಾಲೆಗೆ ಹೋಗುತ್ತಿದ್ದ ಸುಬ್ಬರಾಯರನ್ನು ಕಂಡರು. ಆವೊತ್ತು ಶನಿವಾರ ; ಬೆಳಗ್ಗೆಯ ಶಾಲೆ. ಏನೋ ವಿಶೇಷ ಕಾರ್ಯಕ್ಕಾಗಿ ಶಾಲೆಯ ಕಡೆ ಹೊರಟಿದ್ದಾರೆಂದು ವೆಂಕಟಸುಬ್ಬಯ್ಯನವರು ಊಹಿಸಿದರು. ಸುಬ್ಬರಾಯರನ್ನು ಕೇಳಿದರೆ ನಿಜಾಂಶ ಗೊತ್ತಾಗುವುದೆಂದು ಎಣಿಸಿದರು. ಬೇಗಬೇಗನೆ ಕಾಲುಹಾಕಿ ಅವರನ್ನು ಹಿಂಬಾಲಿಸಿದರು.

ಸುಬ್ಬರಾಯರು ಶಾಲೆಯ ಬಾಗಿಲನ್ನು ತೆರೆದು, ತಮ್ಮ ಕೋಣೆಯನ್ನು ಪ್ರವೇಶಿಸಿ, ಕಿಟಕಿಯ ಬಾಗಿಲುಗಳನ್ನು ತೆರೆದು, ಮತ್ತೆ ಮುಂಬಾಗಿಲನ್ನು ಹಾಕಿಕೊಳ್ಳುವುದಕ್ಕೆ ಬರುವ ಹೊತ್ತಿಗೆ ಸರಿಯಾಗಿ ವೆಂಕಟಸುಬ್ಬಯ್ಯನವರು ಶಾಲೆಯ ಜಗಲಿ ಹತ್ತಿದ್ದರು.

"ಓಹೋಹೋ, ಏನು ವೆಂಕಟಸುಬ್ಬಯ್ಯನವರೆ? ಅಪರೂಪವಾಗಿ ಇಲ್ಲಿಯವರೆಗೆ ದಯಮಾಡಿಸೋಣವಾಯಿತು?" ಎಂದು ಅವರೇ ಮಾತಾಡಿಸಿ ಕೊಂಡು ಮುಂದೆ ಬಂದರು.

"ತಾವು ಇಲ್ಲಿಗೆ ಬರುತ್ತಿದ್ದದ್ದನ್ನ ಕಂಡೆ. ಹಾಗೇ ಬಂದೆ. ಸ್ವಲ್ಪ ಮಾತಾಡುವುದಿತ್ತು."

"ಬನ್ನಿ, ಬನ್ನಿ, ಒಳಕ್ಕೆ ಹೋಗೋಣ" ಎಂದು ಸುಬ್ಬರಾಯರು ವೆಂಕಟಸುಬ್ಬಯ್ಯನವರನ್ನು ತಮ್ಮ ಕೋಣೆಗೆ ಕರೆದುಕೊಂಡುಹೋಗಿ, ಅವರಿಗೆ ಕುರ್ಚಿ ಕೊಟ್ಟು, ಮುಂಬಾಗಿಲ ಅಗಳಿ ಹಾಕಿಕೊಂಡು ಬಂದು, ತಾವು ಒಂದು ಸ್ಟೂಲಿನ ಮೇಲೆ ಕುಳಿತುಕೊಂಡರು.

ಇಬ್ಬರೂ ಲೋಕಾಭಿರಾಮವಾಗಿ ಸ್ಕೂಲಿನ ವಿಚಾರ, ಮಳೆ ಬೆಳೆಯ ವಿಚಾರ ಮುಂತಾದುವುಗಳನ್ನು ಕುರಿತು ತುಸು ಹೊತ್ತು ಮಾತನಾಡಿದ ಮೇಲೆ,

"ಏನೂ ಇಲ್ಲ...." ಎಂದು ತಡವರಿಸುತ್ತ ತಡವರಿಸುತ್ತ ತೊಡಗಿ, ಸೀತೆಯ ವಿಚಾರವಾಗಿ ತಾವು ಕೇಳಿದ ಸುದ್ದಿ, ವಿಧವೆಯರ ಕೂದಲು ತೆಗೆಸುವ ವಿಚಾರ, ಸೀತೆಯ ವಿಚಾರದಲ್ಲಿ ತಾವು ಕೈಕೊಳ್ಳಬೇಕಾದ ಕಾರ್ಯ ಇವನ್ನು ಅವರ ಮುಂದಿಟ್ಟು, "ನಿಮ್ಮ ಅಭಿಪ್ರಾಯ ಏನು, ತಿಳಿಸಿ. ನೀವು ವಿದ್ಯಾ ವಂತರು. ಈಗಿನ ಕಾಲದವರು. ನೀವು ಹೇಳಿದ ಹಾಗೆ ಕೇಳುತ್ತೇನೆ" ಎಂದು ಹೇಳಿ, ವೆಂಕಟಸುಬ್ಬಯ್ಯನರು ನೀಳವಾಗಿ ನಿಟ್ಟುಸಿರು ಬಿಟ್ಟರು.

ಸುಬ್ಬರಾಯರು ನಡುವೆ ಒಂದು ಮಾತನ್ನೂ ಆಡದೆ ವೆಂಕಟಸುಬ್ಬಯ್ಯ ನವರು ಹೇಳಿದ್ದನ್ನೆಲ್ಲ ಬಹು ತಾಳ್ಮೆಯಿಂದ ಕೇಳಿದರು. ಬಹು ಸಂಗ್ರಹವಾಗಿ ತಮ್ಮ ನಿಶ್ಚಿತಾಭಿಪ್ರಾಯವನ್ನು ವೆಂಕಸುಬ್ಬಯ್ಯನವರ ಮುಂದಿಟ್ಟರು:

"....ಗುಡಿಯಲ್ಲಿ ಈ ಮಾತು ಬಂದಾಗ ನಾನು ಬೇಕೆಂದೇ ಸುಮ್ಮನಿದ್ದೆ. ಈ ಊರಿನಲ್ಲಿ ಇರುವವರೆಗೂ ನಾನು ಎಲ್ಲರೊಡನೆಯೂ ಹೊಂದಿಕೊಂಡು ಹೋಗಬೇಕೋ ಇಲ್ಲವೋ?"

" ಅದು ದಿಟ ಅನ್ನಿ."

" ಅವರು ಹೇಳಿದ್ದಕ್ಕೆ ಅಸ್ತು ಎಂದೆ. ಪ್ರಕೃತ, ನೀವು ಹೇಳುವ ಹಾಗೆ ಪುಟ್ಟಣ್ಣಯ್ಯ ಸಭ್ಯನಾಗಿಯೇ ಕಾಣುತ್ತಾನೆ. ನಾನು ಸ್ಕೂಲಿಗೆ ಹೋಗುವಾಗ ಬರುವಾಗ ಎಂದಾದರೂ ಒಂದೊಂದು ದಿನ ಆತನೊಡನೆ ಮಾತಾಡಿರುವುದೂ ಉಂಟು. ಸುಬ್ಬಾಭಟ್ಟ ಹೇಳಿರುವುದು ನಿಜವಾದರೆ, ಆತನ ಮೇಲೆ ಕ್ರಿಮಿನಲ್ ಕೇಸ್ ಬೇಕಾದರೂ ಮಾಡಬಹುದು. ಆಗ ಸೀತೆಯೇ ಮುಖ್ಯ ಸಾಕ್ಷಿಯಾಗ ಬೇಕಾಗುತ್ತದೆ. ಒಪ್ಪಿಕೊಳ್ಳದಿದ್ದರೆ, ಅವನ ಮೇಲೆ ಕೇಸು ನಿಲ್ಲವುದಿಲ್ಲ; ಒಪ್ಪಿಕೊಂಡರೆ, ಈಗ ಬಂದಿರುವ ಕೆಟ್ಟ ಹೆಸರನ್ನು ಶಾಸನದಲ್ಲಿ ಕೆತ್ತಿದಂತಾಗು ತ್ತದೆ. ಆದ್ದರಿಂದ, ಈಗ ನೀವು ಇರುವ ಹಾಗೆ ಈ ವಿಚಾರದಲ್ಲಿ ಉದಾಸೀನ ರಾಗಿದ್ದುಬಿಡಿ. ಪುಟ್ಟಣ್ಣಯ್ಯನಿಗೂ ಇನ್ನೇನು ವರ್ಗವಾಗುತ್ತದೆ; ಅನಕ್ಕೆ ಏರ್ಪಾಡಾಗಿದೆ. ಇನ್ನು ನಿಮ್ಮ ಮಗಳ ವಿಚಾರ: ಕೂದಲು ತೆಗೆಸುವುದು ಎನ್ನುವುದು ಬಹಳ ಅನಾಗರಿಕ ಸಂಪ್ರದಾಯ. ನಾನು ಮೈಸೂರಿನಲ್ಲಿ ಮರಿಮಲ್ಲಪ್ಪನವರ ಹೈಸ್ಕೂಲಿನಲ್ಲಿ ಓದಿದವನು. ಅದರ ಹೆಡ್‌ಮಾಸ್ಟರು ವೆಂಕಟಕೃಷ್ಣಯ್ಯನವರು ಮೈಸೂರಿನಲ್ಲಿ ತುಂಬ ಪ್ರಸಿದ್ಧರು. ವಿದ್ವಾಂಸರು; ಮೇಧಾವಿಗಳು. ಎಲ್ಲ ಬಗೆಯಲ್ಲೂ ನಮ್ಮ ಜನ ಮುಂದುವರಿಯಬೇಕೆಂದು ಬಯಸುವವರು. ವಿಧವೆಯರು ದಾರಿ ತಪ್ಪಿ ಹೋಗದಂತೆ ಮಾಡಬೇಕಾದರೆ, ಅವರನ್ನು ವಿಕಾರಗೊಳಿಸಿ, ಮೈ ಒಣಗಿಸಿ, ಯಂತ್ರದಂತೆ ಕಾಣುವುದಕ್ಕಿಂತ ಅವರಿಗೆ ಮತ್ತೆ ಮದುವೆಮಾಡಿ ಮನುಷ್ಯರಂತೆ ಕಾಣಬೇಕೆಂದು ಎಷ್ಟೋ ಸಲ ಹೇಳಿರುವುದನ್ನು ನಾನು ಕೇಳಿದ್ದೇನೆ. ಅಂದರೆ, ಮಕ್ಕಳುಮರಿ ಆಗಿರುವ ವಯಸ್ಸಾದ ವಿಧವೆಯರಿಗಲ್ಲ; ನಿಮ್ಮ ಮಗಳಂಥ ಬಾಲವಿಧವೆಯರಿಗೆ...."

" ಏನು ಸುಬ್ಬರಾಯರೆ, ನೀವು ಹೇಳುವುದು!" ಎಂದು ವೆಂಕಟಸುಬ್ಬಯ್ಯ ನವರು ಅಚ್ಚರಿಯಿಂದ ಬಾಯಿಬಿಟ್ಟರು.

" ನೀವು ಹಾಗೆ ಮಾಡಿ ಅಂತ ನಾನು ಹೇಳುವುದಿಲ್ಲ. ಅದು ನಿಮ್ಮ ಇಷ್ಟ, ಧೈರ್ಯ."

" ಇಷ್ಟ ಧೈರ್ಯ ಹಾಗಿರಲಿ, ಸ್ವಾಮಿ. ಮಾಡಿಕೊಳ್ಳುವವ ಯಾರು? ಸೀತೆಯನ್ನ ತಮ್ಮ ಮಗನಿಗೆ ಕೊಡಬೇಕು ಅಂತ ಶಿವರಾಮಭಟ್ಟರು ಬಾಯಿ ಬಿಟ್ಟು ಕೇಳಿದ್ದರು. ಈಗ ಇನ್ನೂ ಅವನಿಗೆ ಮದುವೆಯಾಗಿಲ್ಲ. ನೀವು ಅವರನ್ನ

ಒಪ್ಪಿಸಿಬಿಡಿ ಸ್ವಾಮಿ, ನಾನು ನಿಮ್ಮ ಮಾತಿಗೆ ಒಪ್ಪಿಬಿಡುತ್ತೇನೆ."

"ಅದೂ ದಿಟ ಅನ್ನಿ. ಉಪದೇಶ ಮಾಡುವುದು ಸುಲಭ; ಅನುಸರಿಸುವುದು ಕಷ್ಟ. ವೆಂಕಟಕೃಷ್ಣಯ್ಯನವರ ದೃಷ್ಟಿ ಎಷ್ಟು ದೂರಕ್ಕೆ ಹರಿಯುತ್ತೆ, ಎಷ್ಟು ವಿಶಾಲವಾದ್ದು ಎನ್ನುವುದಕ್ಕೆ ಹೇಳಿದೆ. ಮನೆತಪ್ಪಿದ ಹೆಣ್ಣುಮಕ್ಕಳ ಕ್ಷೇಮಕ್ಕೋಸ್ಕರ 'ವಿಡೋಸ್ ಹೋಮ್' ಸ್ಥಾಪನೆಗೆ ತುಂಬ ಬೆಂಬಲ ಕೊಟ್ಟರು. ಹೇಳಿದಂತೆ ಮಾಡುವ ಮಹನೀಯರು ಅವರು."

ಸುಬ್ಬರಾಯರು ವೆಂಕಟಕೃಷ್ಣಯ್ಯನವರಿಗೆ ತುಸು ಹೊತ್ತು ಮೌನದ ಗೌರವವನ್ನು ಸಲ್ಲಿಸಿದರು. "ಈಗ ನಾನು ಏನು ಮಾಡಲಿ, ದಯವಿಟ್ಟು ಅಪ್ಪಣೆ ಕೊಡಿಸೋಣವಾಗಲಿ. ಮದುವೆ ಗಿದುವೆ ಆಗದ ಹೋಗದ ಮಾತು. ಅವಳನ್ನ ಮನೆಯಲ್ಲೇ ಕಟ್ಟಿಹಾಕಿಕೊಳ್ಳುವುದಕ್ಕೆ ಆಗುತ್ತೆಯೆ? ಎಲ್ಲರಂತೆ ಹೊರಗೆ ತಿರುಗಾಡಿಕೊಂಡಿರಬೇಕಾದರೆ....ಮಡಿ ಕೊಡಿಸುವುದು ಅಗತ್ಯವಲ್ಲವೆ? ಹೀಗೇ ಬಿಟ್ಟರೆ, ಮುಂದೆ ತಾನಾಗಿಯೇ ಕಟ್ಟೆ ಚಾಳಿಗೆ ಇಳಿದರೋ? ನನಗೆ ದಿಕ್ಕೇ ತೋಚದ ಹಾಗಾಗಿದೆ, ಸ್ವಾಮಿ. ನಂಜುಂಡಶಾಸ್ತ್ರಿಗಳನ್ನ ಕೇಳಿದರೆ ತಲೆ ಬೋಳಿಸಿ ಎನ್ನುತ್ತಾರೆ. ಮನೆಯ ಹೆಂಗಸರಿಗೆ ಅದು ಇಷ್ಟವಿಲ್ಲ. ನನಗೂ ಒಂದೊಂದು ಸಲ, 'ಥೂ. ಎಂಥ ಕ್ರೂರ ಕೆಲಸ' ಅನ್ನಿಸುತ್ತದೆ. ನೀವು ನನಗೆ ದಾರಿ ತೋರಿಸಬೇಕು, ಸ್ವಾಮಿ. ನಾನು ತಮ್ಮ ವಿದ್ಯಾರ್ಥಿ ಇದ್ದೊತ್ತು."

"ಅದು ದೊಡ್ಡ ಮಾತು, ವೆಂಕಟಸುಬ್ಬಯ್ಯನವರೆ. ನಾನು ಸ್ವಲ್ಪ ಓದಿದ ಮಾತ್ರಕ್ಕೆ ಹಿರಿಯರಾದ ನಿಮ್ಮಂಥವರಿಗೆ ಬುದ್ಧಿ ಹೇಳುವುದಕ್ಕೆ ನಾನು ಶಕ್ತನೆ? ನೀವು ಏನೂ ತಿಳಿದುಕೊಳ್ಳದೆ ಹೋದರೆ, ನನಗೆ ತೋರಿದ್ದನ್ನ ಹೇಳುತ್ತೇನೆ."

"ಇದರಲ್ಲಿ ತಿಳಿದುಕೊಳ್ಳುವುದು ಏನು ಬಂತು? ನಾನಾಗಿಯೇ ನಿಮ್ಮ ಅಭಿಪ್ರಾಯ ಕೇಳುತ್ತಿದೇನೆಯೇ ಹೊರತು, ನೀವೇನೂ ಮೇಲೆಬಿದ್ದು ನನಗೇನೂ ಹೇಳುವುದಕ್ಕೆ ಬರುತ್ತಿಲ್ಲನಲ್ಲ? ನಿಮಗೆ ತೋರಿದ್ದನ್ನ ದಯವಿಟ್ಟು ಯಾವ ಸಂಕೋಚವೂ ಇಲ್ಲದೆ ತಿಳಿಸಿ."

"ಎಲ್ಲಕ್ಕಿಂತ ಮೊದಲು ಹೇಳುವುದೇನೆಂದರೆ, ಈ ಮಡಿ ಕೊಡಿಸುವುದು ಅನ್ನುವ ಮಾತನ್ನ ಮರೆತುಬಿಡಿ. ಮುಂದೆ ವಯಸ್ಸಾದಮೇಲೆ ಸ್ವಂತ ಇಷ್ಟದಿಂದ ಆ ಸಂಪ್ರದಾಯವನ್ನು ಅವರು ಅನುಸರಿಸಿದರೆ ಅನುಸರಿಸಲಿ. ಅಲ್ಲದೆ,

ಸಣ್ಣಪುಟ್ಟ ವಯಸ್ಸಿನಲ್ಲಿ ಮಡಿ ಹಿಡಿದ ಮಾತ್ರಕ್ಕೆ ದುರ್ಮಾರ್ಗಕ್ಕೆ ಬೀಳುವು ದಿಲ್ಲ ಅನ್ನುವ ಭ್ರಾಂತಿಯನ್ನೂ ಬಿಟ್ಟುಬಿಡಿ. ಅಂದರೆ, ಅವಕಾಶ ಕಡಮೆ; ಪ್ರವೃತ್ತಿಯೂ ಕಡಮೆ. ಆ ವಿಚಾರ ಹಾಗಿರಲಿ. ಸಣ್ಣಪುಟ್ಟ ವಯಸ್ಸಿನಲ್ಲಿ ಗಂಡ ಹೋದ ಹೆಣ್ಣುಮಕ್ಕಳಿಗೆ ತಂದೆತಾಯಿಯ ಸಂರಕ್ಷಣೆ ಇರುವವರೆಗೂ ಭಯವಿಲ್ಲ; ಹೊಟ್ಟೆಯ ಪಾಡಿಗೋಸ್ಕರ ಕೆಟ್ಟ ದಾರಿಗೆ ಬೀಳಬೇಕಾಗಿಲ್ಲ. ತಂದೆತಾಯಿಗಳು ಕಣ್ಣುಮುಚ್ಚಿದಮೇಲೆ ಆಗ ಅವರ ಸ್ಥಿತಿ ಕಷ್ಟವಾಗುತ್ತೆ. ಆದ್ದರಿಂದ ತಂದೆತಾಯಿಗಳು, ಅವರಿಗೆ ಮತ್ತೆ ಮದುವೆಯಾಗುವುದಕ್ಕೆ ಸದ್ಯ ಕ್ಕಂತೂ ಸಾಧ್ಯವಿಲ್ಲದೆ ಇರುವುದರಿಂದ, ಅವರು ತಮ್ಮ ಕಾಲ ಮೇಲೆ ತಾವು ನಿಲ್ಲುವಂತೆ ಏನಾದರೂ ಏರ್ಪಾಡು ಮಾಡಬೇಕು. ಅವರ ಹೆಸರಿಗೆ ಗಂಡನ ಕಡೆಯ ಆಸ್ತಿಪಾಸ್ತಿ ಬಂದರೆ ಸಂತೋಷ. ನೀವೇನೋ ಸೀತೆಗೆ ಒಂದು ಸಾವಿರದಷ್ಟು ಜೀವನಾಂಶ ಬರಬಹುದು ಅಂದಿರಲ್ಲ, ಅದು ಯಾವ ಮೂಲೆಗೆ ಹೇಳಿ? ಆದ್ದರಿಂದ ನನಗೆ ಏನು ತೋರುತ್ತೆ ಅಂದರೆ, ನಿಮ್ಮ ಮಗಳಿಗೆ ವಿದ್ಯಾ ಭ್ಯಾಸ ಮಾಡಿಸಬೇಕು. ಈಗ ಈ ಊರಿನಲ್ಲಿ 'ಗರ್ಲ್ಸ್‌ಸ್ಕೂಲ್' ಬೇರೆ ಇಲ್ಲ. ಇನ್ನು ಎರಡು ಮೂರು ವರ್ಷಗಳಲ್ಲಿಯೇ ಖಂಡಿತ ಗರ್ಲ್ ಸ್ಕೂಲ್ ಕೊಡು ತ್ತಾರೆ. ಅಷ್ಟುಹೊತ್ತಿಗೆ ನಿಮ್ಮ ಮಗಳು ಲೋವರ್ ಸೆಕಂಡರಿ ಪರೀಕ್ಷೆ ಮಾಡಿ ಕೊಂಡಿದ್ದರೆ, ಈ ಊರಿನ ಸ್ಕೂಲಿಗೇ ಮೇಡಂ ಆದರೂ ಆಗಬಹುದು. ಜೀವನಾಂಶ ಹಣದಿಂದ ನೀವು ಹೇಳುವ ಹಾಗೆ ಒಂದೆರಡೆಕರೆ ಜಮೀನು ಮಾಡಿಕೊಂಡರೆ, ಯಾರ ಹಂಗೂ ಇಲ್ಲದೆ ಜೀವನ ಮಾಡಿಕೊಂಡಿರಬಹುದು."

"ನೀವು ಹೇಳುವುದನ್ನು ಒಪ್ಪಿದೆ. ಇನ್ನೊಬ್ಬರ ಹಂಗಿಲ್ಲದೆ ಹೊಟ್ಟೆ ಹೊರೆದುಕೊಳ್ಳುವುದಕ್ಕೇನೋ ಒಂದು ಮಾರ್ಗವಾಗುತ್ತೆ. ಆದರೆ ದುಷ್ಟರ ಕಣ್ಣಿಗೆ ಬೀಳುವ ಅವಕಾಶ ಇದ್ದೇ ಇರುತ್ತಲ್ಲ, ಸ್ವಾಮಿ?"

"ಅದು ಹೇಗೆ ಇರುತ್ತೆ? ವಯಸ್ಸಾಗಿರುತ್ತೆ; ವಿದ್ಯಾಬುದ್ಧಿಯಿಂದ ತಿಳಿವಳಿಕೆ ಬಂದಿರುತ್ತೆ; ವಿವೇಕವಿರುತ್ತೆ. ಇದರಿಂದ ಒಂದು ಧೈರ್ಯ ಬಂದಿ ರುತ್ತೆ. ದುಷ್ಟ ಕೈಮಾಡಲು ಬಂದರೆ ಕಪಾಳಕ್ಕೆ ಬಿಗಿಯುತ್ತಾಳೆ. ಹೆಂಗಸಿನ ಮನಸ್ಸು ವಜ್ರವಾದರೆ ದಶ ದುಶ್ಶಾಸನರೂ ಶತ ರಾವಣರೂ ಅವಳನ್ನ ಕೆಡಿಸ ಲಾರರು."

"ಅದು ಸರಿಯೆ, ಆದರೆ...."

" ಅವಳೀ ಮನಸ್ಸು ಸೋತರೋ ಅಂತ ನಿಮ್ಮ ಸಂದೇಹವೇನೋ ? "

" ಹೌದು, ಹೌದು. ನೀವು ಸರಿಯಾಗಿ ಹೇಳಿದಿರಿ. ನನಗೆ ಹೇಗೆ ಹೇಳುವುದೂ ಅಂತ ತಿಳಿಯಲಿಲ್ಲ."

" ಆಗ ನಮ್ಮ ಹೊಣೆಯಿಲ್ಲ."

" ಹೊಣೆಯಿಲ್ಲ, ಸರಿಯೆ. ಅಂಥವರನ್ನ ಹಾಗೆ ಸ್ವೇಚ್ಛೆಯಾಗಿರಲು ಬಿಡಬಹುದೆ ? "

" ಅಡ್ಡಿಪಡಿಸಲು ನಮಗೆ ಏನು ಹಕ್ಕಿದೆ ? ಸುಖಭೋಗ ಅನುಭವಿಸುವ ಹಕ್ಕು ಗಂಡಸಿಗೊಬ್ಬನಿಗೇ ಮೀಸಲೆ ? "

ಸುಬ್ಬರಾಯರ ಲೋಕಾನುಭವ, ಪ್ರಜ್ಞೆ ಇವನ್ನು ಕಂಡು ವೆಂಕಟ ಸುಬ್ಬಯ್ಯನವರಿಗೆ ಆಶ್ಚರ್ಯವಾಯಿತು ; ಅವರೊಂದಿಗೆ ಚರ್ಚೆ ಮಾಡುವ ಸಾಮರ್ಥ್ಯ ತಮಗಿಲ್ಲ ಎಂದು ತೋರಿತು.

"....ಈಗ ಪ್ರಕೃತ, ನಮ್ಮ ಸೀತೆಯ ವಿಚಾರ ಏನು ಮಾಡು ಅಂತೀರಿ ? ನಾವು ಕಣ್ಣುಮುಚ್ಚಿದಮೇಲೆ ಆಗುವುದಕ್ಕೆ ಈಗಲೇ ಕೊರಗಿ ಏನು ಪ್ರಯೋಜನ ? "

" ಅದೇ ಸರಿಯಾದ ದೃಷ್ಟಿ. ನಿಮ್ಮ ಮಗಳು ಎಲ್ಲಿಯವರೆಗೆ ಓದಿದಾಳೆ? "

" ಕನ್ನಡ ಮೂರನೆಯ ಕ್ಲಾಸಿನಲ್ಲಿ ಓದುತ್ತಿದ್ದಳು. ಮದುವೆಯಾದ ಮೇಲೆ ಬಿಡಿಸಿಬಿಟ್ಟಿತು."

" ಈಗ ನೀವು ಮತ್ತೆ ಮಗಳನ್ನ ಸ್ಕೂಲಿಗೆ ಸೇರಿಸಿ. ಸದ್ಯಕ್ಕೆ ಕನ್ನಡ ಲೋವರ್ ಸೆಕಂಡರಿ ಪರೀಕ್ಷೆ ಮಾಡಲಿ. ' ಪ್ರೈವೇಟ್ ಸ್ಟಡಿ ' ಎಂದು ಬರೆದು ಕೊಂಡು ನಾನು ಲೋವರ್ ಸೆಕಂಡರಿ ಕ್ಲಾಸಿಗೇ ಸೇರಿಸಿಕೊಳ್ಳುತ್ತೇನೆ."

" ಆ ಕ್ಲಾಸಿಗೆ ಹುಡುಗಿಯರು ಯಾರಾದರೂ ಬರುತ್ತಿದಾರೆಯೊ ? "

" ಯಾರೂ ಇಲ್ಲ. ಅದೇನು ಪರವಾ ಇಲ್ಲ. ಸ್ಕೂಲಿಗೆ ಬಹಳ ಮಂದಿ ಬರುತ್ತಾರಲ್ಲ. ಹೋಗಿಬರುವುದಕ್ಕೆ ಜೊತೆ ಇರುತ್ತೆ."

" ಈ ವರ್ಷ ಕಾಲ ಮೀರಿಹೋಯಿತಲ್ಲವೆ ? "

" ಏನು ಪರವಾ ಇಲ್ಲ. ನೀವು ಧೈರ್ಯಮಾಡಿ ಕಳಿಸಿದರೆ, ಈ ವರ್ಷವೇ ನಿಮ್ಮ ಹುಡುಗಿಯನ್ನ ಪರೀಕ್ಷೆಗೆ ಕಟ್ಟಿಸಿ, ಪ್ಯಾಸುಮಾಡಿಸುವ ಭಾರ ಮಾತ್ರ ನನ್ನದು. ನಮ್ಮ ಮೇಷ್ಟ್ರು ಗೋಪಾಲಯ್ಯನವರಿಗೆ ಹೇಳ್ತೀನೆ. ಆತ

ಮನೆಗೆ ಬಂದು ಸ್ವಲ್ಪ ಲೆಕ್ಕ, ಕನ್ನಡ ಪದ್ಯ, ವ್ಯಾಕರಣ ಹೇಳಿಕೊಡುತ್ತಾನೆ. ಜೊತೆಗೆ ಸ್ವಲ್ಪ ಇಂಗ್ಲಿಷನ್ನೂ ಈಗಿನಿಂದಲೇ ಪ್ರಾರಂಭಿಸಲಿ. ಮುಂದಿನ ವರ್ಷವೇ ಇಂಗ್ಲಿಷ್ ಲೋವರ್‌ಸೆಕಂಡರಿ ಪರೀಕ್ಷೆಯನ್ನೂ ಪ್ಯಾಸುಮಾಡಿಬಿಡ ಬಹುದು. ಆಮೇಲೆ ಮುಂದಿನ ಯೋಚನೆ.... ಅಂದರೆ ಮಾತ್ರ, ಗೋಪಾಲಯ್ಯ ನವರಿಗೆ ತಿಂಗಳಿಗೆ ಎರಡೋ ಮೂರೋ.... ನಿಮ್ಮ ಶಕ್ತಿ ಇದ್ದಷ್ಟು 'ಫೀಜು' ಕೊಡಿ. ಪಾಪ, ಆತನೂ ತಾಪತ್ರಯದ ಮನುಷ್ಯ...."

"ಒಳ್ಳೆಯದು, ಮೇಷ್ಟ್ರೆ. ಯಾವುದೂ ಇನ್ನು ಎರಡು ಮೂರು ದಿನದಲ್ಲಿ ಯೋಚನೆಮಾಡಿ ತಿಳಸುತೀನಿ.... ಏನೋ ಕೆಲಸ ಮಾಡೋಣ ಅಂತ ಬಂದಿದ್ರಿ ಅಂತ ಕಾಣುತ್ತೆ. ನಾನು ಬಂದು ನಿಮ್ಮ ಕೆಲಸವನ್ನೆಲ್ಲ ಹಾಳುಮಾಡಿದ ಹಾಗಾಯ್ತು. ಏನೂ ತಿಳಿದುಕೊಳ್ಳಬೇಡಿ" ಎಂದು ಮೇಲೆದ್ದು, ಹೊರ ಹೊರಟರು.

ಸುಬ್ಬರಾಯರು ಅವರನ್ನು ಬಾಗಿಲವರೆಗೂ ಬಿಟ್ಟು, ಒಳಕ್ಕೆ ಬಂದು ತಮ್ಮ ಕಚೇರಿಯ ಕೆಲಸದಲ್ಲಿ ತೊಡಗಿದರು.

೪

ಗೌರಿಯ ಹಬ್ಬ ಒಂದು ವಾರ ಎನ್ನುವಾಗ ರಂಗಸ್ವಾಮಿ ತನ್ನ ಹೆಂಡತಿ ಮಕ್ಕಳನ್ನು ಕರೆದುಕೊಂಡು ಬಂದನು. ಒಂದು ಕಣ್ಣು ಕುರುಡಾಯಿತೆಂದು ಇನ್ನೊಂದನ್ನು ಯಾರೂ ತಿವಿದುಕೊಳ್ಳುವುದಿಲ್ಲವಲ್ಲ. ಕಾವೇರಿಯನ್ನೂ ಮಕ್ಕಳನ್ನೂ ಕಂಡು ಪಾರ್ವತಮ್ಮನವರು ಹಿಗ್ಗಿದರು.

ಮನೆಯ ಮಂಕು ಚೆದರಿತು; ಸೀತೆಯ ಮುಖವೂ ಗೆಲವುಗೂಡಿತು. ಅವಳ ಮುಖದಲ್ಲಿ ಮೆಲುನಗೆಯಾಡತೊಡಗಿದ್ದು ಪಾರ್ವತಮ್ಮನವರ ಗಮನಕ್ಕೆ ಬಾರದೆ ಹೋಗಲಿಲ್ಲ.

ಆದರೆ ಈ ಹೊಸ ಹಿಗ್ಗು ಒಮ್ಮೆಯೆ ಹೊಮ್ಮಲಿಲ್ಲ. ಅದಕ್ಕೆ ಕಾರಣವೂ ಇತ್ತು. ಸೀತೆಯ ಗಂಡ ತೀರಿದಾಗ, ರಂಗಸ್ವಾಮಿ ಅರಸೀಕೆರೆಯಲ್ಲಿದ್ದ. ವೆಂಕಟಸುಬ್ಬಯ್ಯನವರು ದುಃಖದ ಸುದ್ದಿ ತಿಳಿಸಿ ಮಗಳಿಗೆ ಕಾಗದವನ್ನೂ ಹಾಕಿದ್ದರು. "ಬೇಕಾದರೆ ಒಂದೆರಡು ದಿನ ಹೋಗಿಬಿಟ್ಟು ಬರೋಣ. ನನ್ನ ನೇನೂ ಅಡ್ಡಿಯಿಲ್ಲ" ಎಂದು ರಂಗಸ್ವಾಮಿಯೇ ಹೆಂಡತಿಗೆ ಸಲಹೆಮಾಡಿದ.

ಆದರೆ, " ನಾನು ಸೀತೆಯ ಮುಖ ನೋಡಲಾರೆ. ಅಲ್ಲದೆ ಏನು ಮಾಡಿಬಿಡು ತ್ತಾರೆಯೋ ಏನೋ. ಅದನ್ನೆಲ್ಲಾ ಹೇಗೆ ಕಣ್ಣಿಂದ ನೋಡುವುದು. ನಾನು ಈಗ ಹೋಗುವುದಿಲ್ಲ. ಹೋಗಬೇಕಾಗಿ ಬಂದಾಗ ಹೋದರಾಯಿತು " ಎಂದು ಕಾವೇರಿಯೇ ಕೊಳಲೂರಿಗೆ ಬರಲು ಇಷ್ಟಪಡಲಿಲ್ಲ. ರಂಗಸ್ವಾಮಿಯನ್ನು ಯು.ಜಿ.ಟಿ.ಗೆ (Under Graduates' Training) ಆಯ್ಕೆಮಾಡಿ ದಾಗಲೂ, ಕೊಳಲೂರಿನಲ್ಲಿ ಎರಡು ದಿನ ಇದ್ದು ಪ್ರಯಾಣಮಾಡುವ ಸೂಚನೆ ಯನ್ನು ಮತ್ತೆ ಅವನೇ ಮುಂದಿಟ್ಟ. ಈ ಹೊತ್ತಿಗೆ ಸೀತೆ, ಹಿಂದೆ ಇದ್ದಹಾಗೆಯೆ ಇದ್ದಾಳೆ ಎಂದು ಕೇಳಿ ತಿಳಿದು ಕಾವೇರಿ ಸಮಾಧಾನಗೊಂಡಿದ್ದಳು ; ಆದರೆ ತವರುಮನೆ ಇನ್ನೂ ದುಃಖದ ಮನೆಯೆಂದೇ ಅವಳ ಭಾವನೆ. ಈ ಸಲವೂ ತಂಗಿಯ ಮುಖದರ್ಶನ ಮಾಡಲು ಅವಳು ಇಚ್ಛಿಸಲಿಲ್ಲ. ಆದರೆ ತವರು ಮನೆಯಿಂದಲೇ ಹಬ್ಬಕ್ಕೆಂದು ಕರೆ ಬಂದಾಗ ಅದನ್ನು ನಿರಾಕರಿಸಲೂ ಸಾಧ್ಯ ವಾಗಲಿಲ್ಲ. ಈ ಸಲ ರಂಗಸ್ವಾಮಿಯೇ ದುಡ್ಡಿನ ತಾಪತ್ರಯವೆಂದು ಗೊಣ ಗಿದ ; ಆದರೆ ಕಾವೇರಿ ತವರುಮನೆಗೆ ಹೋಗಲು ' ಇಷ್ಟ 'ವನ್ನು ವ್ಯಕ್ತಪಡಿಸಿ ದಾಗ, ಅವನು ಸ್ವಲ್ಪ ಸಾಲಮಾಡಲೂ ಹಿಂದೆ ಮುಂದೆ ನೋಡಲಿಲ್ಲ. ತವರು ಮನೆಗೆ ಬರಲು ಅವಳಿಗೆ ಬೇರೆ ಉದ್ದೇಶವೂ ಇದ್ದಿತು.

ಕಾವೇರಿ ಮನೆಯೊಳಕ್ಕೆ ಕಾಲಿಟ್ಟ ಕೂಡಲೆ, ಮೂರು ಹೆಣ್ಣು ಹೃದಯ ಗಳೂ ಒಂದೇ ಕ್ಷಣದಲ್ಲಿ ಉದ್ವೇಗದ ಕಿಡಿಯ ಸೋಂಕಿಗೆ ಸಿಲುಕಿ, ದುಃಖದ ಸಿಡಿಮದ್ದು ಆಸ್ಫೋಟಿಸಿತು. ಕಾವೇರಿ ಸೀತೆಯನ್ನು ತಬ್ಬಿಕೊಂಡಳು ; ಪಾರ್ವತಮ್ಮನವರು ಇಬ್ಬರನ್ನೂ ತಬ್ಬಿಕೊಂಡರು. ಮೂರು ಕಂಠಗಳು ಬೆರೆತ ಒಂದೇ ದುಃಖಗೀತ ಮನೆಯಲ್ಲೆಲ್ಲಾ ಮಾರ್ದನಿಗೊಡುತ್ತಿತ್ತು. ಏನೆಂದು ಅರಿಯದಿದ್ದರೂ ಕಾವೇರಿಯ ಮಕ್ಕಳೂ ಅಳತೊಡಗಿದುವು. ಆಗ ವೆಂಕಟ ಸುಬ್ಬಯ್ಯನವರು ಮನೆಯಲ್ಲಿರಲಿಲ್ಲ. ರಂಗಸ್ವಾಮಿ ದುಃಖದ ದೃಶ್ಯವನ್ನು ನೋಡಲಾರದೆ ಜಗಲಿಯ ಮೇಲಕ್ಕೆ ಹೋಗಿ ನಿಂತುಕೊಂಡನು. ರೋದನ ಧ್ವನಿಯನ್ನು ಕೇಳಿ ಪಕ್ಕದ ಮನೆಯ ಸಾತಮ್ಮನವರೂ ಓಡಿಬಂದರು ; ನಿಜ ವನ್ನು ತಿಳಿದು, ಕಾವೇರಿಯ ಕ್ಷೇಮಸಮಾಚಾರವನ್ನು ವಿಚಾರಿಸಿ, ಹಿಂದಿರು ಗಿದರು.

ಆದರೆ ಈ ದುಃಖದ ಉರುಬು ಹೊಳೆಯ ಪ್ರವಾಹದಂತೆ ಬೇಗನೆ

ಇಳಿಯಿತು. ಅಂದಿನ ಸಂಜೆಯೆಲ್ಲಾ ಪರಸ್ಪರ ಕ್ಷೇಮಸಮಾಚಾರದ ಪ್ರಶ್ನೋತ್ತರ, ಮೈಸೂರಿನ ಜೀವನದ ವಿಚಾರದ ಮಾತುಕತೆಯಲ್ಲಿ ತುಂಬಿಕೊಂಡಿತು. ವೆಂಕಟಸುಬ್ಬಯ್ಯನವರು ಮನೆಗೆ ಬಂದ ಕೂಡಲೆ ಅಳಿಯನೊಂದಿಗೆ ಮಾತುಕತೆಗೆ ತೊಡಗಿದರು. ಎಂದಿಗಿಂತ ಹೊತ್ತಿಗೆ ಮುಂಚೆಯೇ ಮನೆಗೆ ಬಂದ ರಾಮಸ್ವಾಮಿ, ಅಕ್ಕನ ಮಕ್ಕಳನ್ನು ನಲಿದಾಡಿಸುವುದಕ್ಕೆ ಮುಂದಾದನು.

ಒಮ್ಮೆ ತಾಯಿ–ಮಗಳು–ಕಾವೇರಿ; ಮತ್ತೊಮ್ಮೆ ಅಕ್ಕ–ತಂಗಿ; ಇನ್ನೊಮ್ಮೆ ಭಾವ–ಭಾವಮೈದುನ, ಮಾವ–ಅಳಿಯ; ಒಮ್ಮೆ ಎಲ್ಲರೂ ಒಟ್ಟಿಗೆ—ಹೀಗೆ, ಕೊನೆಯೇ ಇಲ್ಲವೋ ಎಂಬಂತೆ ಮನೆಯಲ್ಲಿ ಪ್ರತಿನಿತ್ಯ ಮಾತು ಸಾಗಿತ್ತು. ಮನೆಯ ವಾತಾವರಣದಲ್ಲಿ ಮಳೆಯ ನಡುವಣ ಬಿಸಿಲಿನಂತೆ ಒಂದು ಹೊಸ ಉತ್ಸಾಹ ಮೂಡಿತ್ತು.

ಒಂದು ಸಂಜೆ, ಪಾರ್ವತಮ್ಮನವರು ಕಾವೇರಿಗೆ ಕೇಳಿದರು:

"ಮೈಸೂರಿಗೆ ಹೋದಮೇಲೆ ಚಿಕ್ಕಮ್ಮನ ಮನೆಗೆ ಏನಾದರೂ ಹೋಗಿದ್ದೆಯೇನೆ?" ಚಿಕ್ಕಮ್ಮ ಎಂದರೆ ಪಾರ್ವತಮ್ಮನವರ ತಂಗಿ, ಲಕ್ಷ್ಮೀದೇವಮ್ಮ.

"ಒಂದು ಸಲವೋ ಎರಡು ಸಲವೋ ಹೋಗಿದ್ದೆನಮ್ಮ, ಅಷ್ಟೆ. ಕರೆಯದೇನೇ ಎಷ್ಟು ಸಲ ಅಂತ ಹೋಗೋಕಾಗುತ್ತೆ? ಅಲ್ಲದೆ, ಅವರ ಮನೆ ಇರೋದು ಶಿವರಾಮಪೇಟೇಲಿ; ನಮ್ಮ ಮನೆ ಹಳೇ ಅಗ್ರಹಾರದಲ್ಲಿ. ತುಂಬ ದೂರ."

"ಕರೆಯುವುದಕ್ಕೆ ನಿತ್ಯ ನಿತ್ಯ ಏನು ಇರುತ್ತೆ ಹೇಳು. ಮನೇ ಹಬ್ಬ ಬಿಟ್ಟು ಯಾರು ಬರ್ತಾರೆ ಅಂತ ಯಾವುದಕ್ಕೂ ಕರೆಯದೆ ಇರಬಹುದು. ಲಕ್ಷ್ಮೀದೇವಿಯ ಗಂಡ ರಾಮಕೃಷ್ಣಯ್ಯ ನಮ್ಮ ಮನೆಯವರು ಅಂದರೆ ಒದ್ದುಕೊಳ್ಳುತ್ತಾನೆ. ಸುಬ್ಬಸ್ವಾಮಿಯನ್ನ ಮೂರು ವರ್ಷ ಇಟ್ಟುಕೊಂಡು ಓದಿಸಲಿಲ್ಲವೆ?"

"ಈಗಲೂ ಇಬ್ಬರು ಮೂರು ಜನ ಅವರ ಮನೇಲಿ ಓದಿಕೊಂಡಿದಾರೆ. ಒಂದು ಸಲ ನಾನೇ ನೋಡಿಕೊಂಡು ಬರೋಣ ಅಂತ ಹೋಗಿದ್ದಾಗ, ಸಂಜೆಯಾಗಿಹೋಯಿತು. ಕೃಷ್ಣಮೂರ್ತಿ ಅನ್ನೋ ಹುಡುಗನ್ನ ಜೊತೆಗೆ ಕಳಿಸಿಕೊಟ್ಟಿದ್ದಳು....ಅದೇ ಕಡೆ....ಕರೆಯದೆ ಮಾಡದೆ ಸಲ ಸಲವೂ ಹೋಗುತಾನೇ ಇರುವುದಕ್ಕೆ ಸಂಕೋಚವಾಗುತ್ತಮ್ಮ. ಅಲ್ಲದೆ, ಅವರು ಅನುಕೂಲ

ಸ್ಥರು ; ನಾವು ಬಡವರು. ಎರಡು ಸಲ ಹೋದಾಗಲೂ ಕಾಫಿ ತಿಂಡಿ ಕೊಟ್ಟು ಉಪಚಾರಮಾಡಿದಳು ಚಿಕ್ಕಮ್ಮ; ಕಾಯಿ ಇಟ್ಟು ತಾಂಬೂಲ ಕೊಟ್ಟಳು...."

" ಬಂದುಹೋಗುತ್ತಾ ಇರು ಅಂತ ಹೇಳಿದಳೋ ಇಲ್ಲವೋ ? "

" ಹೇಳದೆ ಇರುತ್ತಾಳೆಯೆ ? ನಾವು ಚಿಕ್ಕಮ್ಮನ್ನ ಒಂದು ಸಲವೂ ಕರೆಯುವ ಹಾಗಿಲ್ಲ. ಸುಮ್ಮಸುಮ್ಮನೆ ಮೂರಕ್ಕೆ ನಾಲ್ಕಕ್ಕೆ ಹೋಗಿ ಕಾಫಿ ಕುಡಿದುಬರುವುದಕ್ಕಾಗುತ್ತೆಯೆ ? "

ತಂಗಿ ಮತ್ತು ಮಗಳು—ಇಬ್ಬರ ಗುಣವನ್ನೂ ಮೆಚ್ಚಿಕೊಂಡರು ಪಾರ್ವತಮ್ಮನವರು.

ಇನ್ನೊಂದು ಸಂಜೆ—

" ಅಮ್ಮಾ, ಹೋಗುತ್ತಾ ಸೀತೆಯನ್ನ ಕರೆದುಕೊಂಡುಹೋಗಬೇಕು ಅಂತ ಮಾಡಿಕೊಂಡಿದ್ದೀನಿ. ಕಳಿಸಿಕೊಡುತ್ತೀಯಾ ? ಅವಳಿಗೂ ಸ್ವಲ್ಪ ಬದಲಾವಣೆ ಆದಹಾಗಾಗುತ್ತೆ."

ಪಾರ್ವತಮ್ಮನವರು ಮೌನವಾಗಿದ್ದರು. ಅವರ ಮೌನದ ಅರ್ಥವನ್ನು ಕಾವೇರಿ ಗ್ರಹಿಸಿದಳು. ನೊಂದ ದನಿಯಲ್ಲಿ ತಾನೇ ಬಿಡಿಸಿ ಹೇಳತೊಡಗಿದಳು :

" ಮೂರನೆಯ ಸಲ ತವರುಮನೆಗೆ ಕರಸಿಕೊಳ್ಳಬಾರದು ಅಂತಾರೆ. ಅವರ ಕಡೆಯ ದಿಕ್ಕೂ ಯಾರೂ ಇಲ್ಲ. ಸೀತೆಗೆ ಹೆಚ್ಚು ಕೆಲಸ ಏನೂ ಬೀಳುವುದಿಲ್ಲ. ಮೈಸೂರಿನಲ್ಲಿ ತಿಂಗಳಿಗೆ ಎಂಟಾಣೆಯೋ ಒಂದು ರೂಪಾಯೋ ಕೊಟ್ಟರೆ ನೀರು ಹಾಕುವುದಕ್ಕೆ ಯಾರಾದರೂ ಸಿಕ್ಕುತ್ತಾರೆ. ಅವರೇ ಅಡಿಗೆ ಮಾಡಿಕೊಳ್ಳುತ್ತಾರೆ ; ಸೀತೆಗೆ ಬಿಡುವುದಿಲ್ಲ. ಅವಳು ಸ್ವಲ್ಪ ಮಕ್ಕಳನ್ನು ನೋಡಿಕೊಂಡರೆ ಸಾಕು. ಅವಳಿಗೆ ಒಗ್ಗಿದರೆ, ಬೇಕಾದರೆ ನಮ್ಮ ಮನೆಯಲ್ಲಿಯೇ ಇದ್ದುಬಿಡಲಿ...."

"....ಈಗೇನು ನಾಲ್ಕು ತಿಂಗಳು ತುಂಬಿತೋ ? "

" ಹ್ಞೂ. ಇನ್ನೇನು ತುಂಬಿದಹಾಗೆ...."

" ಏನು ಮಾಡುವುದಮ್ಮ ? ಒಬ್ಬೊಂಟಿಗರ ಬಾಳೇ ಕಷ್ಟ. ನೀನು ಹೇಳುವುದೆಲ್ಲ ಸರಿಯೆ. ಸೀತೆಯನ್ನ ಕಳಿಸುವುದಕ್ಕೆ ಅಭ್ಯಂತರವೇನೂ ಇಲ್ಲ. ಆದರೆ...."

" ಸೀತೆಯ ವಿದ್ಯಾಭ್ಯಾಸಕ್ಕೆ ತೊಂದರೆ ಆಗುತ್ತೆ ಅಂತಲೇ ? "

" ಹೌದಮ್ಮ. ಪರವೂರಿನಲ್ಲಿದ್ದ ನಿನಗೆ ಹೇಗೆ ಗೊತ್ತಾಗಬೇಕು, ಎಲ್ಲ. ಮದುವೆಯಾದಮೇಲೇನೇ ಅವಳ ಸ್ಕೂಲು ಬಿಡಿಸಿಬಿಟ್ಟಿತ್ತಲ್ಲ. ಅವಳ ಕುಂಕುಮ ಅಳಿಸಿದಮೇಲೆ, ಅವಳಿಗೆ ಹೇಗೆ ಹೇಗೊ ಆಗಿದೆ. ಮಾಡುವುದಕ್ಕೂ ಏನೂ ಕೆಲಸವಿಲ್ಲ. ವಿದ್ಯಾಭ್ಯಾಸ ಮಾಡಿಸಿ, ಒಳ್ಳೆಯದು; ಮುಂದಕ್ಕೆ ಅವಳಿಗೇ ಅನುಕೂಲ ಅಂತ ಯಾರು ಯಾರೋ ತಿಳಿದವರು ಹೇಳಿದರಮ್ಮ. ಅದರಮೇಲೆ ಈಗ ಮೊನ್ನೆತಾನೆ ಮತ್ತೆ ಸ್ಕೂಲಿಗೆ ಸೇರಿಸಿದ್ದಾಯಿತಮ್ಮ. ಅವಳ ಮುಂದಿನ ಆಲೋಚನೆ ಮಾಡಬೇಕಲ್ಲ."

" ಇದೇನಮ್ಮ, ಹೀಗಂತೀ? ಅವಳು ಪ್ಯಾಸು ಗೀಸು ಮಾಡಿ, ಕೆಲಸಕ್ಕೆ ಸೇರಿಕೊಂಡು, ಅವಳ ಅನ್ನ ಅವಳು ಹುಟ್ಟಿಸಿಕೊಳ್ಳಬೇಕೆ? ನೀವಿಲ್ಲವೆ? ರಾಮುಸ್ವಾಮಿ, ಸುಬ್ಬು ಇಲ್ಲವೆ? ಅಷ್ಟಕ್ಕೂ ಬಂದರೆ ನಾವಿಲ್ಲವೆ? ಹೇಗೂ ಸೀತೆ ಈಗ ನಮ್ಮ ಮನೆಗೆ ಬರಲಿ ಅಂತ ಹೇಳಿದೆನಲ್ಲ? ಅವಳಿಗೆ ಅಲ್ಲಿ ಒಗ್ಗಿಬಿಟ್ಟರೆ, ನಮ್ಮ ಮನೆಯಲ್ಲೇ ಇದ್ದುಬಿಡಲಿ."

" ನೀನೇನೋ ತಂಗಿಯ ಮೇಲಿನ ಪ್ರೀತಿಗೆ ಹಾಗೆ ಹೇಳುತ್ತಿ. ಅದೆಲ್ಲಾ ಎಲ್ಲಿ ನಡೆಯುತ್ತೆ? ಅಣ್ಣಂದಿರೂ ತಂಗಿಯನ್ನ ಕೈಬಿಡೋರೇನಲ್ಲ. ಅವರ ಹೆಂಡಿರ ಮನಸ್ಸಿಗೆ ಯಾರು ಹೊಣೆ? ಹೇಗಾದರೂ ಆಗಲಿ, ಒಂದು ಮೂರಕ್ಷರ ಕಲಿತಿದ್ದರೆ ಒಳ್ಳೆಯದು ಅಂತ ಹೆಡ್ಮೇಷ್ಟ್ರು ಸುಬ್ಬರಾಯರು ಹೇಳಿದರಂತಮ್ಮ. ನಾನೇನೋ ಬೇಡ ಅಂದೆ. ಅವರೇನೋ ಒಂದೇ ಮನಸ್ಸಿನಿಂದ ಸೇರಿಸಿಬಿಟ್ಟು, ಆಗಲೇ ಪುಸ್ತಕಗಿಸ್ತಕ ಎಲ್ಲ ತಂದುಕೊಟ್ಟುಬಿಟ್ಟಿದ್ದಾರೆ. ಸೀತೆಯೇನೋ ಮೊದಲು ಇಷ್ಟಪಡಲಿಲ್ಲ. ಸ್ಕೂಲುದಾರೀಲಿ ಪೋಸ್ಟಾಫೀಸು ಬಿಟ್ಟರೆ ಮನೆಯೇ ಇಲ್ಲ. ಆ ದಾರೀಲಿ ಹೋಗುವುದಕ್ಕೆ ಹೆದರಿಕೆ ಅವಳಿಗೆ. ಅದೇ ಆ ಅರಳಿ ಕಟ್ಟೆ ಇದೆಯಲ್ಲಮ್ಮ ದಾರಿಯಲ್ಲಿ, ನೀನೂ ಹೆದರಿಕೆ ಅನ್ನುತ್ತಿರಲಿಲ್ಲವೆ?...."

ಬಾಲ್ಯದ ' ಬ್ರಹ್ಮರಾಕ್ಷಸ 'ನ ಕಥೆಯು ನೆನಪಾಗಿ, ಕಾವೇರಿಯ ಮೈ ಒಮ್ಮೆ ಝಲ್ಲೆಂದಿತು.

"....ಅವರ ಬಲವಂತಕ್ಕೆ ಒಪ್ಪಿಕೊಂಡು ಅಂತೂ ಹೋಗುತಾ ಇದಾಳೆ. ಈ ವರ್ಷವೇ ಐದು ರೂಪಾಯಿನ ಪರೀಕ್ಷೆಗೆ ಕಟ್ಟಿಸಿಬಿಡುತ್ತಾರಂತೆ........ ಅದಕ್ಕೋಸ್ಕರ, ಇನ್ನೇನೂ ಇಲ್ಲ. ನಾನೇ ಬರೋಣ ಅಂದರೆ, ಇಲ್ಲಿ ಮನೆಯ ಕಡೆ ನೋಡಿಕೊಳ್ಳುವವರು ಯಾರೂ ಇಲ್ಲ. ಏನು ಮಾಡುವುದು, ನೀನೇ ಹೇಳು."

ಕಾವೇರಿ ಯಾವ ಉದ್ದೇಶದಿಂದ ತವರುಮನೆಗೆ ಹಿಗ್ಗಿನಿಂದ ಬಂದಿದ್ದಳೋ ಆ ಉದ್ದೇಶ ನೆರವೇರುವ ಸೂಚನೆ ಕಂಡುಬರಲಿಲ್ಲ. ಆ ಹಿಗ್ಗಿನ ಬುಗ್ಗೆ ತಗ್ಗಿತು. ಆದರೆ ಎಷ್ಟಾದರೂ ತವರುಮನೆಯಲ್ಲವೆ? ತಗ್ಗಿನ ಮಟ್ಟದಲ್ಲೇ ಆಡುತ್ತಿತ್ತು. "ಇನ್ನೂ ಮೂರು ನಾಲ್ಕು ತಿಂಗಳ ಮಾತು. ನೋಡಿಕೊಳ್ಳೋಣ, ಹೇಗೋ ಆಗುತ್ತೆ" ಎಂದು ಸಮಾಧಾನಗೊಂಡಳು ಕಾವೇರಿ.

ಮಾವನವರೊಂದಿಗೆ ರಂಗಸ್ವಾಮಿ ಯಾವಾಗಲೂ ಮೌನಿ. ರಂಗಸ್ವಾಮಿಯೇನು, ಎಲ್ಲ ಅಳಿಯಂದಿರೂ ಹಾಗೇ ಅಂತ ಕಾಣುತ್ತದೆ. ಆದ್ದರಿಂದ ಈ ಮಾವ–ಅಳಿಯಂದಿರು ಎಂದೂ ಹೆಚ್ಚು ಬೆರೆತು ಮಾತಾಡಿದ್ದಿಲ್ಲ. ಮಾತಾಡಿದಾಗಲೆಲ್ಲಾ, ವೆಂಕಟಸುಬ್ಬಯ್ಯನವರೇ ಮುಂದಾಗಿ ಮಾತಾಡಿಸಬೇಕು. ಮಾವನವರ ಪ್ರಶ್ನೆಗಳಿಗೆ 'ಉಂಟು—ಇಲ್ಲ—ಹೌದು—ಸರಿಯೆ—ಹ್ಞೂ' ಇಷ್ಟೇ ಅಳಿಯನ ಉತ್ತರ. ಕಾವೇರಿ ತಾಯಿಯ ಮಾತಿನಿಂದ ನಿರಾಶಳಾಗಿ, ಗಂಡನನ್ನು ತಂದೆಯ ಮೇಲೆ 'ಛೂ' ಬಿಟ್ಟಿದ್ದಳು. ಸ್ವಲ್ಪ ಸ್ವಾರ್ಥವಿದ್ದುದರಿಂದ, ಈ ಸಲ ರಂಗಸ್ವಾಮಿ ಮಾವನೊಂದಿಗೆ ತುಸು ನಿರಾಳವಾಗಿ ಸಂಭಾಷಣೆಯಲ್ಲಿ ಸಮಪಾಲುಗೊಂಡನು.

ಒಂದು ಸಂಜೆ; ರಂಗಸ್ವಾಮಿ ಅಲ್ಲಿಗೆ ಬಂದ ನಾಲ್ಕನೆಯ ಸಂಜೆ. ಒಳಗೆ ತಾಯಿ ಮಕ್ಕಳು ಹಬ್ಬದ ಅಣಿಯಲ್ಲಿ ನಿರತರಾಗಿದ್ದರು. ಜಗಲಿಯ ಮೇಲೆ, ಅದೇ ತಾನೇ ಕಾಫಿ ತಿಂಡಿ ಮುಗಿಸಿ ಮಾವ ಅಳಿಯ ಚಾಪೆಯಮೇಲೆ ಕುಳಿತಿದ್ದರು. ರಂಗಸ್ವಾಮಿಯ ಮೂರು ವರ್ಷದ ಹುಡುಗ ರಾಮಚಂದ್ರ ಅಜ್ಜನ ತೊಡೆಯ ಮೇಲಿಂದ ತಂದೆಯ ತೊಡೆಗೆ ಬರಲು ಹಾತೊರೆಯುತ್ತಿದ್ದ.

ಆಗ, ಸೀತೆ ಶಾಲೆಯಿಂದ ತಲೆಬಗ್ಗಿಸಿಕೊಂಡುಬಂದು ಜಗಲಿ ಹತ್ತಿದಳು. ಅವಳ ಜೊತೆಯಲ್ಲಿದ್ದ ಇನ್ನಿಬ್ಬರು ಹುಡುಗಿಯರು, "ನಾವು ಬರುತೀವಿ, ಸೀತೆ" ಎಂದು ಹೇಳಿ, ಮುಂದಕ್ಕೆ ನಡೆದುಹೋದರು.

ಎಲೆ ಮೆಲ್ಲಲು ಮೊದಲಿಟ್ಟಿದ್ದ ವೆಂಕಟಸುಬ್ಬಯ್ಯನವರು, ಚರ್ವಣ ಒಂದು ಹದಕ್ಕೆ ಬಂದಿದ್ದಾಗ, ಒಂದು ಚೂರು ಹೊಗೆಯಸೊಪ್ಪನ್ನು ಬಾಯಿಗೆ ಎಸೆದುಕೊಂಡರು.

ಸೀತೆ ಮನೆಯೊಳಕ್ಕೆ ಹೋದಮೇಲೆ, ರಂಗಸ್ವಾಮಿಯೇ ಮಾತಿಗೆ ತೊಡಗಿದನು :

" ಸೀತೆಯನ್ನ ಸ್ಕೂಲಿಗೆ ಕಳಿಸಿ ಒಳ್ಳೆಯ ಕೆಲಸ ಮಾಡಿದಿರಿ."

ಹಿಂದಿನ ಸಂಜೆ ಮಾವ ಅಳಿಯ ಇಬ್ಬರೂ ತಿರುಗಾಡಿಕೊಂಡು ಬರಲು ಹೊಳೆಯ ತಾವಿಗೆ ಹೋಗಿದ್ದರು. ಹಳ್ಳಿಯ ಜೀವನ-ಪಟ್ಟಣದ ಜೀವನ ಇವುಗಳ ತಾರತಮ್ಯ, ರಂಗಸ್ವಾಮಿ ಮತ್ತು ಅವನ ತಮ್ಮ ಈಚೆಗೆ ಪಾಲಾದದ್ದು, ಸೀತೆಗೆ ಜೀವನಾಂಶ ಕೇಳುವ ವಿಚಾರ—ಈ ಬಗ್ಗೆ ಮಾತುಕತೆ ನಡೆದಿತ್ತು. ಇಂದು ತನ್ನ ಕೋರಿಕೆಯನ್ನು ಮುಂದಿಡಲು, ಸೀತೆ ಕಾಣಿಸಿಕೊಂಡದ್ದು ಅವನಿಗೆ ಅನುಕೂಲವಾಯಿತು.

ವೆಂಕಟಸುಬ್ಬಯ್ಯನವರು, " ಒಳ್ಳೆಯ ಕೆಲಸವೇನೋ ಆಯ್ತು. ಆದ್ರೆ ಊರಿನ ಜನ ಆಡ್ಕೊಳ್ಳೋಕೆ ಶುರು ಮಾಡಿದಾರೆ " ಎಂದರು.

" ಇದೇ ನೋಡಿ, ಪಟ್ಟಣವಾಸಕ್ಕೂ ಹಳ್ಳಿಯ ಜೀವನಕ್ಕೂ ಇರುವ ವ್ಯತ್ಯಾಸ. ಮೈಸೂರಿನಲ್ಲಿ ನಮ್ಮ ಬೀದಿಯಲ್ಲೇ ಒಬ್ಬ ಮನೆತಪ್ಪಿದ ಹೆಣ್ಣು ಮಗಳು ಮಹಾರಾಣಿ ಹೈಸ್ಕೂಲಿಗೆ ಹೋಗ್ತಾ ಇದಾಳೆ. ಸ್ಕೂಲಿನದೇ ಪೆಟ್ಟಿಗೆ ಗಾಡಿ ಮನೆಯ ಬಾಗಿಲಿಗೆ ಬರುತ್ತೆ. ಆಕೆಯ ಶ್ರದ್ಧೆ ಕಂಡು ಬೀದಿಯೋರೆ ಸಂತೋಷಪಡುತಾರೆ. ಆಕೇನೂ ಅಷ್ಟೆ, ತುಂಬ ಗಂಭೀರ, ತುಂಬ ಮರ್ಯಾದೆ. ಲೋವರ್ ಸೆಕೆಂಡರಿ ಆದಮೇಲೆ ಸೀತೆಯನ್ನ ಮೈಸೂರಿಗೆ ಕಳಿಸಿ, ಹೈಸ್ಕೂಲಿಗೆ ಸೇರಿಸಿ."

" ಸರಿ, ಅದು ಮುಂದಿನ ಆಲೋಚನೆ. ಸದ್ಯ, ಈಗ, ಈ ಒಂದು ವರ್ಷ ಕಳೆದರೆ ಸಾಕಾಗಿದೆ."

" ಅದನ್ನೇ ನಾನೂ ಹೇಳೋಣ ಅಂತ ಹೊರಟೆ. ಮೈಸೂರಿಗೆ ನಮ್ಮ ಜೊತೆ ಬಂದುಬಿಡಲಿ. ಅಲ್ಲಿ ಸ್ಕೂಲಿಗೂ ಏನೂ ಹೋಗಬೇಕಾಗಿಲ್ಲ. ನಾನೇ ಬೇಕಾದರೆ ಪಾಠಹೇಳಿಕೊಟ್ಟು ಪ್ರೈವೇಟಿನಲ್ಲಿ ಪರೀಕ್ಷೆಗೂ ಕಟ್ಟಿಸಿಬಿಡುತ್ತೇನೆ. ಅವಳಿಗೂ ಸ್ವಲ್ಪ ನೆರವಾದಹಾಗಾಗುತ್ತೆ...."

" ಅವಳು ಹೇಳಿದಳು. ಕಾವೇರಿಗೂ ಮೂರು ತಿಂಗಳು ಆಗಿದೆಯಂತೆ."

ಸಹಜವಾಗಿಯೆ ರಂಗಸ್ವಾಮಿ ಮೌನವಾಗಿದ್ದನು.

" ಅವಳಂತೂ ಬರೋಹಾಗಿಲ್ಲ. ಇಲ್ಲಿಗೇ ಕರಸಿಕೊಳ್ಳೋಣ ಅಂದ್ರೆ, ಮೂರನೇ ಹೆರಿಗೆ ಅದೇನೊ ಕೂಡದು ಅಂತಾರೆ. ಪರೀಕ್ಷೆ ಯಾಕೆ ಮಾಡೋಕೆ ಹೋಗ್ಬೇಕು ? ಸೀತೆಯಿಂದ ಏನು ಸಹಾಯ ಆಗುತ್ತೆ ? ನಿನ್ನ ಸಂಧ್ಯಾವಂದ್ನೆ,

ಮಡಿಹುಡಿ ಎಲ್ಲ ಕಂಡು ನನಗೆ ಅದೆಷ್ಟೋ ಸಂತೋಷವಾಗಿದೆ. ಸೀತೆ, ಸಂಧ್ಯಾ ವಂದನೇಗೆ ಒಂದು ನೀರು ಇಡೋಹಾಗಿಲ್ಲ, ದೇವರಿಗೆ ನೈವೇದ್ಯಕ್ಕೆ ಇಡೋ ಹಾಗಿಲ್ಲ. ಪಾಪ, ಅವಳಿಗೆ ಇನ್ನು ಬಾಣಂತನ ಏನು ಮಾಡೋಕೆ ಬರುತ್ತೆ? ವಿದ್ಯದ ಮಾತು ಹಾಗಿರಲಿ: ನಡೆವರೂ ಆಯ್ತು ಬಿಟ್ರೂ ಆಯ್ತು. ಹುಟ್ಟಿಸಿದ ದೇವ್ರು ಎಲ್ಲೋ ಒಂದು ಹಿಡಿ ಅನ್ನ ಇಟ್ಟೇ ಇರ್ತಾನೆ....ಸುಮ್ನೆ ನಿಮಗೆ ಒಂದು ಭಾರ....ಅದಕ್ಕೆ ಹೇಳಿದೆ...." ಎಂದು, ಚಡಪಡಿಸುತ್ತಿದ್ದ ರಾಮಚಂದ್ರನನ್ನು ಅಳಿಯನ ತೊಡೆಯ ಮೇಲೆಯೇ ಕೂರಿಸಿ, ಮೇಲೆದ್ದು, ತಂಬುಲದ ರಸವನ್ನು ಪಿಚಕ್ಕನೆ ಬೀದಿಯ ಕಡೆ ಉಗಿದು, ಮತ್ತೆ ಬಂದು ಕುಳಿತರು.

ರಾಮಚಂದ್ರ ತಂದೆಯ ತೊಡೆಯನ್ನು ಬಿಟ್ಟು ಎದ್ದು ಒಳಕ್ಕೆ ಹೋದ— ತಪ್ಪುಹೆಜ್ಜೆ ಹಾಕುತ್ತ.

"ಸದ್ಯಕ್ಕೆ ಇಲ್ಲೇ ಸ್ಕೂಲಿಗೆ ಹೋಗುತಾ ಇರಲಿ. ಇನ್ನೂ ಎರಡು ಮೂರು ತಿಂಗಳಾದಮೇಲೆ ತಾನೆ ಆ ಮಾತು? ನಿನಗೆ ಸಮಯವಾದಾಗ ಒಂದು ಕಾಗದ ಹಾಕು. ಕಳಿಸಿಕೊಡೋಣ, ಅದಕ್ಕೇನು ಮಹಾ" ಎಂದರು.

ರಂಗಸ್ವಾಮಿಗೆ ಬೇಕಾಗಿದ್ದುದು ಇದೇ ಉತ್ತರ. ಅವನಿಗೆ ಸಂತೋಷ ವಾಯಿತು; ಸಮಾಧಾನವಾಯಿತು.

"ರಾಮದೇವರ ದೇವಸ್ಥಾನಕ್ಕೆ ಹೋಗಿ ದೇವರ ದರ್ಶನ ಮಾಡಿ ಬರೋಣ ಬಾ"— ಎಂದು ವೆಂಕಟಸುಬ್ಬಯ್ಯನವರು ಮೇಲೆದ್ದರು. ಮಾವ ಅಳಿಯ ಇಬ್ಬರೂ ಜಗಲಿ ಇಳಿದರು. ಆ ಹೊತ್ತಿಗೆ, "ಎಲ್ಲಿಗೆ ಹೋಗ್ತಿ, ಅಪ್ಪಾ. ನಾನೂ ಬರ್ತೇನೆ" ಎಂದು ಗೋಗರೆಯುತ್ತ, ಐದು ವರ್ಷದ ಸುಬ್ಬಲಕ್ಷ್ಮಿ ತಂದೆಯನ್ನು ಹಿಂಬಾಲಿಸಿದಳು.

೫

ಕಳೆದ ವರ್ಷ ಗೌರಿಯ ಹಬ್ಬದ ದಿನ ಮನೆಯೆಲ್ಲ 'ಬಿಕೋ' ಎನ್ನುತ್ತಿತ್ತು, ಗೋಳು ತುಂಬಿತ್ತು. 'ನನ್ನ ಮಗಳ ಮಾಂಗಲ್ಯ ಕಿತ್ತುಕೊಂಡೆಯಲ್ಲೇ, ತಾಯೀ! ಮುಂದಿನ ಜನ್ಮದಲ್ಲಾದರೂ ಅವಳ ಮಾಂಗಲ್ಯ ಉಳಿಸಿ ಕೊಡು; ಕಾವೇರಿಗಾದರೂ ಶುಭ ದಯಪಾಲಿಸು; ನನಗೆ ಮುತ್ತೈದೆ ಸಾವು ಕೊಡು' ಎಂದು ಜಪಿಸುತ್ತ, ಮನೆಯಲ್ಲೇ ಗೌರೀಪೂಜೆಯ ಶಾಸ್ತ್ರಮಾಡಿದರು.

ಶಿವರಾಮುಭಟ್ಟರ ಹೆಂಡತಿ ಎಷ್ಟು ಬಗೆಯಲ್ಲಿ ಬಂದು ಬೇಡಿಕೊಂಡರೂ ಗುಡಿಯಲ್ಲಿ ಕೂರಿಸಿದ್ದ ಗೌರಿಯ ಪೂಜೆಗೆ ಹೋಗಿರಲಿಲ್ಲ. ಈ ಸಲವೂ ಕಾವೇರಿಯನ್ನು ಮಾತ್ರ ಪೂಜೆಗೆ ಕಳಿಸಿಕೊಟ್ಟರೇ ಹೊರತು, ತಾವು ಹೋಗಲಿಲ್ಲ. "ನೀನೂ ಬಾ, ಅಮ್ಮಾ" ಎಂದು ಕಾವೇರಿ ಬಲವಂತಮಾಡಲು, "ನೀನು ಹೋಗೇ, ತಾಯಿ. ಹೋದ ವರ್ಷ ಒರಿಯ ಪಾಯಸ ಅಷ್ಟು ಮಾಡಿದ್ದೆ. ಈ ಸಲ ನೀನು ಅಪರೂಪಕ್ಕೆ ಬಂದಿದ್ದೀಯೆ. ಇನ್ನೂ ಒಬ್ಬಟ್ಟಿನ ಅಡಿಗೆಯಾಗಬೇಕು, ಕಡುಬು ಹುಯ್ಯಬೇಕು. ಬೇಕಾದಷ್ಟು ಕೆಲಸ ಇದೆಯಮ್ಮ. ಮನೆಯಲ್ಲಿ ಸೀತೆಯನ್ನ ಒಬ್ಬಳನ್ನೆ ಬಿಟ್ಟು ಹೇಗೆ ಬರಲೇ, ತಾಯಿ. ಅದು ನೊಂದುಕೊಳ್ಳುತ್ತೆ" ಎಂದು ಕಂಬನಿಯಿಕ್ಕಿದರು. ಕಾವೇರಿಯೂ ತಂಗಿಗಾಗಿ ಕಂಬನಿ ಸುರಿಸಿ, ಅವಳಿಗೆ ತನ್ನ ದುಃಖವನ್ನು ತೋರಗೊಡದೆ, ಪೂಜೆಗೆ ಹೊರಟಳು. ಮಡಿಯ ಲಂಗ ಉಟ್ಟಿದ್ದ ಸುಬ್ಬಲಕ್ಷ್ಮಿಯೂ ತಾಯಿಯೊಡನೆ ಗೌರೀಪೂಜೆಗೆ, ತನ್ನ ಪುಟ್ಟ ಮೊರದ ಜೊತೆ ಹಿಡಿದು, ನಡೆದಳು.

ಹೋಗುವಾಗ, "ಅಜ್ಜೀ, ಪೂಜೆಗೆ ಬರುವುದಿಲ್ಲವೇನಮ್ಮ?" ಎಂದು ಸುಬ್ಬಲಕ್ಷ್ಮಿ ಮುದ್ದುಮಾತಿನಲ್ಲಿ ಪ್ರಶ್ನಿಸಿದಳು.

"ಅಜ್ಜಿ ಗುಡಿಗೆ ಬಂದು ಗೌರಿಯ ಮುಂದೆ ಕುಳಿತರೆ ಇಲ್ಲಿ ಒಲೆಯ ಮುಂದೆ ಕುಳಿತು ನಿನಗೆ ಒಬ್ಬಟ್ಟು ಹುಯ್ಗಡುಬು ಮಾಡುವವರ್ಯಾರಮ್ಮಾ?" ಎಂದು ಕಾವೇರಿ ಮಗಳಿಗೆ ಸಮಾಧಾನಕೊಡುವ ರೀತಿಯ ಉತ್ತರ ಕೊಟ್ಟಳು.

"ಸೀತ ಚಿಕ್ಕಮ್ಮ—ಯಾಕಮ್ಮ ನಿನ್ನ ಹಾಗೆ ಹೊಸ ಸೀರೆ ಉಟ್ಟುಕೊಂಡಿಲ್ಲ? ಅವಳೂ ಪೂಜೆಗೆ ಬರುವುದಿಲ್ಲವೆ?"

ಈ ಪ್ರಶ್ನೆ ಕೇಳಿದಾಗ ಸೀತೆ ಅಲ್ಲೇ ಇದ್ದಳು. ಕಾವೇರಿಗೆ ಏನು ಹೇಳಬೇಕೋ ತೋರಲಿಲ್ಲ. ಮನಸ್ಸಿಗೆ ತುಂಬ ಕಸಿವಿಸಿಯಾಯಿತು; ಕರುಳು ಕಿವಿಚಿ ಬಂದಿತು; ಒಣಗಿದ್ದ ಕಣ್ಣು ಮತ್ತೆ ತೇವವಾಯಿತು.

ಸೀತೆ ಇದನ್ನು ಗಮನಿಸದೆ ಹೋಗಲಿಲ್ಲ. ಹಿಂದಿನ ವರ್ಷದಂತೆ ತಾಯಿಯೊಂದಿಗೆ ಮೂಕರೋದನ ಮಾಡುವ ಮಟ್ಟವನ್ನು ಅವಳು ಈಗ ಮೀರಿಬಿಟ್ಟಿದ್ದಳು. ತನ್ನ ಸ್ಥಿತಿಯ ಬಗ್ಗೆ ಅರಿವಿನ ಅಂಕುರವಾಗಿತ್ತು; ಅಕ್ಕನ ಬರವಿನಿಂದ ಸಡಗರದ ಬೆಡಗುತೊಟ್ಟ ಗೌರಿಯ ಹಬ್ಬ ಆ ಅರಿವಿನ ಅಂಕುರಕ್ಕೆ ನೀರು ಹೊಯ್ದು ಬೆಳಸಿತ್ತು. ದಿನದಿನಕ್ಕೆ ಒಳಕ್ಕಿಳಿಯುತ್ತಿದ್ದ ಆ ಮೊಳಕೆಯ

ಬೇರನ್ನು ಒಳಗೇ ಮರಸಿಕೊಂಡು, ಗಾಂಭೀರ್ಯದ ಹಸುರನ್ನೂ ಹುಸಿನಲಿವಿನ ನಗೆಮೊಗ್ಗುಗಳನ್ನೂ ಮಾತ್ರ ಹೊರಕ್ಕೆ ಮೆರೆಯುವ ಸಾಹಸಮಾಡುವ ಪ್ರಥಮ ಪಾಠ ಇಂದು ತಾನಾಗಿ ಆಗತೊಡಗಿತ್ತು. ಪ್ರಕೃತಿ ಕಲಿಸಿದ ಪಾಠವನ್ನು ಸೀತೆ ಕಲಿತಳು; ಕಲಿತು ಒಪ್ಪಿಸಿದಳು.

ತಾಯಿಯ ಮೌನ ಸುಬ್ಬಲಕ್ಷ್ಮಿಗೆ ಅರ್ಥವಾಗಲಿಲ್ಲ.

"ಸೀತ ಚಿಕ್ಕಮ್ಮ, ನೀನು ಯಾಕೆ ಬರೋದಿಲ್ಲ ಪೂಜೆಗೆ?"

"ನಿಮ್ಮಮ್ಮನ ಜೊತೆ ನೀನು ಪೂಜೆಗೆ ಹೋಗು. ನಮ್ಮಮ್ಮನ ಜೊತೆ ನಾನು ಮನೇಲಿ ಇರಬೇಕಮ್ಮ" ಎಂದು ನಗೆ ಬೆರಸಿ ನುಡಿದಳು ಸೀತೆ.

"ಪೂಜೆಗೆ ಹೊತ್ತಾಯ್ತು, ಬಾರಮ್ಮಾ" ಎಂದು ಕಾವೇರಿ ಕಂಬನಿ ಸೂಸುವ ಮುಖವನ್ನು ಬೇರೆಯ ಕಡೆಗೆ ತಿರುಗಿಸಿಕೊಂಡು, ಮಗಳನ್ನು ಕೈಹಿಡಿದು ಎಳೆದು ಕರೆದುಕೊಂಡು ಹೊರಟಳು.

ಪಾರ್ವತಮ್ಮನವರು ಅಡಿಗೆಯ ಕೆಲಸದಲ್ಲಿ ನಿರತರಾಗಿದ್ದರು. ರಂಗಸ್ವಾಮಿ ರಾಮಚಂದ್ರನನ್ನು ಕರೆದುಕೊಂಡು ತಿರುಗಾಡಿಕೊಂಡು ಬರಲು ಹೊರಟಿದ್ದ. ವೆಂಕಟಸುಬ್ಬಯ್ಯನವರು ಮಗಳ ಬರವಿನಿಂದ ತಲೆಯ ಮೇಲೆ ಕುಳಿತ ಹೆಚ್ಚಿನ ಹೊಣೆಯ ನಿರ್ವಹಣೆಗೆ ಹಣ 'ಹೊಂಚಲು' ಸಾಹುಕಾರ ರಾಮಪ್ಪನವರ ಬಳಿಗೆ ಹೋಗಿ ಮಾತನ್ನು ಧಾರಾಳವಾಗಿ ವ್ಯಯ ಮಾಡುತ್ತಿದ್ದರು. ಅವರಿಗಿಂತ ಮುಂಚೆಯೇ ರಾಮಸ್ವಾಮಿ ಅಲ್ಲಿಗೆ ಹೋಗಿ, ಗಣಪತಿಯ ಮಂಟಪದ ಅಲಂಕರಣದಲ್ಲಿ ಕರಿಯಣ್ಣನಿಗೆ ನೆರವಾಗುತ್ತಿದ್ದನು. ಮನೆಯ ವಿಜನಮೌನ ಸೀತೆಯ ಮೂಕಶೋಕಕ್ಕೆ ಮಾತು ಕಲಿಸುತ್ತಿತ್ತು; ಬಟ್ಟೆ ತಪ್ಪಿದ ಬಗೆಗೆ ದಾರಿ ತೋರಿಸುತ್ತಿತ್ತು.

ಸೀತೆ ಗೋಡೆಯೊರಗಿ ಕುಳಿತಿದ್ದಳು; ಪಕ್ಕದಲ್ಲಿ ಒಂದೆರಡು ಪುಸ್ತಕಗಳು; ಪದ್ಯದ ಪುಸ್ತಕ ತೆರೆದು ತೊಡೆಯ ಮೇಲೆ ಮಲಗಿತ್ತು; ಬೆರಳುಗಳು ಪುಟಗಳನ್ನಾಡಿಸುತ್ತಿದ್ದುವು; ಕಣ್ಣು ಗಟ್ಟಿಮಾಡಬೇಕಾಗಿದ್ದ ಪದ್ಯವನ್ನು ಹುಡುಕುತ್ತಿತ್ತು. ಆ ಪದ್ಯ ಆ ಪುಟದಲ್ಲಿಯೇ ಇದ್ದಿತು; ಕಣ್ಣಿಗೆ ಬಿದ್ದಿತು; ಮನಸ್ಸು ಓದತೊಡಗಿತು:

'ಮಗನೆ ಬಂದಯ್ ಮನುಕುಲಾಂಬರ
ಗಗನಮಣಿ ಬಂದಯ್...............'

‘ ಮನುಕುಲಾಂಬರ=ಮನುವಂಶವೆಂಬ ಆಕಾಶದ
ಗಗನಮಣಿ=ಸೂರ್ಯ........ಅಂದರೆ, ಅಂದರೆ........’

.........................................

‘ ರಾಮಚಂದ್ರ—ಕಾವೇರಿಯ ಮಗ....ಮಗನೆ ಬಂದಯ್ ಅಂತ ಅವಳೂ ಹೇಳ್ತಾಳೆ....’

‘ ನಾನು ಹೇಳೋ ಹಾಗಿಲ್ಲ.’

‘ ನಾನು ಗೌರಿಯ ಪೂಜೆ ಮಾಡುವ ಹಾಗಿಲ್ಲ.’

‘ ಆಚೆ ವರ್ಷ ಸುಬ್ಬಾಭಟ್ಟನೇ ನನಗೆ ಪೂಜೆ ಮಾಡಿಸಿದ್ದ.’

‘ ಅವನನ್ನೇ ಮದುವೆಯಾಗಿದ್ದಿದ್ದರೆ ?....’

‘ ಗೌರೀಪೂಜೆ, ಹೊಸ ಸೀರೆ....ಇದೇ ಊರು....ಆ ಕಾಲು ಮಾವನ ಮನೆ, ಈ ಕಾಲು ತವರುಮನೆ....ಕಾವೇರಿ ಬಂದಿದಾಳೆ....ಬಸುರಿ....ಮಗು ....ಬಾಣಂತನ....ನಾನು ಹೋಗಬೇಕಂತೆ, ಕರೀತಾ ಇದಾಳೆ....ಅಪ್ಪ ಒಪ್ಪಿದಾನಂತೆ....ಅವಳ ಮನೆಯಲ್ಲಿ ಇನ್ನೊಂದು ಮಗು....ಸುಬ್ಬಲಕ್ಷ್ಮಿ. ರಾಮಚಂದ್ರ ....ಸುಬ್ಬಾಭಟ್ಟ, ಸುಬ್ಬಸ್ವಾಮಿ, ಸುಬ್ಬನರಸಿಂಹ, ಸುಬ್ಬಕೃಷ್ಣ....ಥೂ, ಈ ‘ ಸುಬ್ಬ ’ ಬಿಟ್ಟು ಬೇರೆ ಹೆಸರೇ ಇಲ್ಲವೆ ? ‘ ಸುಬ್ಬಾಭಟ್ಟ ’....ಆ ಹೆಸರೂ ಚೆನ್ನಾಗಿಲ್ಲ, ಅವನೂ ಚೆನ್ನಾಗಿಲ್ಲ,....ಅವನನ್ನ ನಾನು ಮದುವೆಯಾಗಿದ್ದಿದ್ದರೆ....ಥೂ....ಆದರೆ, ನನ್ನ ಕಂಡರೆ ಎಷ್ಟು ಆಸೆಪಡುತ್ತಾ ಇದ್ದ ? ಈಗಲೂ ಆಸೆ. ಆದರೆ ಇವನು........ಅವರು....ಅಂದಹಾಗೇ, ಅವರು ಹೇಗಿದ್ದರು ? ಮರೆತೇ ಹೋಗಿದೆ. ಸುಬ್ಬಾಭಟ್ಟನ ಹಾಗೆ ಕಪ್ಪಂತೂ ಅಲ್ಲ; ಬೆಳ್ಳಗಿದ್ದರು.........ಭಾವಯ್ಯನೂ ಚೆನ್ನಾಗಿದಾರೆ....ಆದರೆ ಯಾರೂ ನಮ್ಮ ರಾಮಸ್ವಾಮಿಯ ಸಮಕ್ಕೆ ಬರೋದಿಲ್ಲ....ಈಗ ಯಾಕೋ ಸಮೆದುಕೊಂಡು ಬರ್ತಾ ಇದಾನೆ....ಅವನ ಚಾಳಿ ಚೆನ್ನಿಲ್ಲ ಅಂತ ಅಮ್ಮ ಅಂತಿರುತಾಳೆ.... ರೂಪ ಹೇಗಿದ್ದರೇನು ? ನಡತೆ ಮುಖ್ಯ. ಸುಬ್ಬಾಭಟ್ಟನ ರೂಪ ಹೇಗಿದ್ದರೆ ಏನು ? ನನ್ನ ಕಂಡರೆ ಅವನಿಗೆ ಆಸೆ....ಆದರೆ ಅವನನ್ನ ಕಂಡರೆ ಯಾಕೋ ಯಾವಾಗಲೂ ಥೂ ಅನ್ನಿಸೋದು....ಸ್ವಲ್ಪ ಉಬ್ಬುಹಲ್ಲು....ಭಾವಯ್ಯನಿಗೂ ಸ್ವಲ್ಪ ಉಬ್ಬುಹಲ್ಲೇ ಅಲ್ಲವೆ ? ಅಲ್ಲ, ಅದು ಯಾಕೆ, ಅಷ್ಟು ಸಲಿಗೆಯಿಂದ ಮಾತನಾಡಿಸುತ್ತ ಇದ್ದೋರು ಈಗ ಮಾತನಾಡಿಸೋದೇ ಇಲ್ಲ ಹೆಚ್ಚಾಗಿ ?....

ಅಂದರೆ, ಆಗ ಚಿಕ್ಕೋಳಾಗಿದ್ದೆ....ಒಂದು ದಿವಸ ತೊಡೆಯ ಮೇಲೆ ಕೂರಿಸಿ ಕೊಂಡಿದ್ದರು....ಥೂ ಹಾಳಾದ್ದು, ಕೆನ್ನೆ ಎಲ್ಲ ಎಂಜಲುಮಾಡಿಬಿಟ್ಟರು....ಆಗ ನನಗೆ ಮದುವೆ ಆಗಿರಲಿಲ್ಲ....ಆಮೇಲೆ, ಮದುವೆಯಾಯಿತು....ಅವರು ಇಲ್ಲ ....ಮುಂದಿನ ಜನ್ಮದಲ್ಲಿ ನಾನು ಅವರನ್ನೇ ಮದುವೆಯಾಗಬಹುದಲ್ಲವೆ.... ಆದರೆ ಅವರು ಈಗ ಆಗಲೇ ಹುಟ್ಟಿಬಿಟ್ಟಿದಾರೆ....ರಾಮುಚಂದ್ರನ ಹಾಗೆ ಮೂರು ವರ್ಷ....ಎಲ್ಲೋ ಬೆಳೀತಾ ಇದಾರೆ....ಮತ್ತೆ ಅವರಿಗೆ ಹದಿನೆಂಟು ವರ್ಷ ಆದಾಗ ಮದುವೆಮಾಡಿಕೊಳ್ಳುತ್ತಾರೆ....ಅಷ್ಟು ಹೊತ್ತಿಗೆ....ನನಗೆ.... ಮೂವತ್ತು ಆಗಿಹೋಗಿರುತ್ತೆ....ಛೆ ಛೆ, ಸಾಧ್ಯವಿಲ್ಲ....ನಾನು ಈಗಲೇ ಸತ್ತು ಹೋದರೆ, ಮತ್ತೆ ಹುಟ್ಟಿ, ಅವರನ್ನ ಮದುವೆಯಾಗಬಹುದು....ಆದರೆ ನಾನು ಬದುಕಿರುತೀನಿ....ಅದೇನೋ ಅಪ್ಪ ನನಗೆ ಮಾವನವರ ಮನೆಯಿಂದ ಜೀವ ನಾಂಶ ಕೊಡಿಸುತ್ತಾರಂತೆ....ಸಾವಿರ ರೂಪಾಯಿ....ಯಾವಾಗಲೂ ಇಲ್ಲೇ ಇರೋದು ಅಂತ ಆಯ್ತು....ಇದ್ದು ಏನುಮಾಡಬೇಕು....ಗೌರಿಪೂಜೆ ಮಾಡೊ ಹಾಗಿಲ್ಲ....ನಾನು ಮಾಡಿದ ಅಡಿಗೆಯನ್ನ ಯಾರೂ ಊಟ ಮಾಡೋದಿಲ್ಲ ವಂತೆ....ಮೊನ್ನೆ ಭಾವಯ್ಯನಿಗೆ ಸಂಧ್ಯಾವಂದನೆಗೆ ನೀರು ಇಡುವುದಕ್ಕೆ ಹೋದರೆ, ಅಮ್ಮ ಬೇಡ ಅಂದಳು.....ಇನ್ನೂ ವಯಸ್ಸಾದಮೇಲೆ ನಾನು ಮಡಿ ಹಿಡಿಯಬೇಕು, ಈಗ ಬೇಡ ಅಂದುಕೊಂಡಳು ಅಮ್ಮ. ವಾರಗಿತ್ತಿ.... ಗೌರಮ್ಮನಿಗೆ, ಶಾಮಣ್ಣನವರು ಮಡಿ ಹಿಡಿಸಿದ್ದಾರಂತೆ....ಗೌರಮ್ಮ ನನಗಿಂತ ಚೆನ್ನಾಗಿದಾಳಂತೆ....ಏನಿದ್ದೇನು, ' ಕುಂಕುಮ ಭಾಗ್ಯ ' ಇಲ್ಲದೆ ಇದ್ದಮೇಲೆ, ಅಂತ ಪೇಚಾಡಿಕೊಂಡಳು ಅಮ್ಮ....ಕುಂಕುಮ ಇಟ್ಟುಕೊಂಡರೇನು ತಪ್ಪು? ....ಒಂದು ದಿನ ಇಟ್ಟುಕೊಂಡು ನೋಡಬೇಕು....ಅಲ್ಲ ಆ ನೀಚಮುಂಡೇಗಂಡ ....ಅಯ್ಯೋ ಪಾಪ, ಬಿಡುತುಬಿಡುತು........ಶಾರದಮ್ಮನನ್ನ ಬಯ್ದ ಹಾಗೆ ಆಯ್ತು, ಛೆ....ಹಣೆಯಲ್ಲಿ ಕುಂಕುಮ ಇಲ್ಲದೆ ಇರುವ ಹೊತ್ತಿಗೆ ತಾನೆ ಪುಟ್ಟಣ್ಣಯ್ಯ....ಅವತ್ತು....ಹಾಗೆ...' ಸೀತೆಯ ಬಗೆಯೋಟ ಮುಗ್ಗರಿಸಿ ಬಿದ್ದಿತು; ಮೈ ಝುಲ್ಲೆಂದು ನಡುಗತೊಡಗಿತು; ಕೈಗಳು ತಾವಾಗಿ ಹೋಗಿ ಮುಖವನ್ನು ಮುಚ್ಚಿದುವು.........

" ಲೇ, ಸೀತಾ, ಇದೇನೇ ಇದು ? ತೊಡೇ ಮೇಲೆ ಪುಸ್ತಕ ಇಟ್ಟು ಕೊಂಡು ಮುಖ ಮುಚ್ಚಿಕೊಂಡಿದ್ದೀ ?........ಇವತ್ತು ಹೇಗೂ ತಿಂಡೀನೂ

ಮಾಡಿಲ್ಲ, ಊಟವೂ ಹೊತ್ತಾಗುತ್ತೆ....ತಗೋ, ಸ್ವಲ್ಪ ಕಾಫೀನಾದರೂ ಕುಡಿ...." ಎಂದು ಪಾರ್ವತಮ್ಮನವರು ಮಗಳ ಮುಂದೆ ಕಾಫಿಯ ಬಟ್ಟಲನ್ನು ಇಟ್ಟರು.

ಮುಖ ಮುಚ್ಚಿದ್ದ ಕೈಗಳನ್ನು ತೆಗೆದು, ಕಣ್ಣುಬಿಟ್ಟಳು; ಅವಳ ಕೆನ್ನೆಯ ಮೇಲೆ ಧಾರಾಕಾರವಾಗಿ ನೀರು ಹರಿಯುತ್ತಿದ್ದುದು, ಅಡಿಗೆಯ ಮನೆಯ ಹೊಗೆಯಿಂದ ಮಂಜಾಗಿದ್ದ ಪಾರ್ವತಮ್ಮನವರ ಕಣ್ಣಿಗೂ ಬಿದ್ದಿತು.

"....ಹಾಗೆಲ್ಲಾ ಅಳಬಾರದಮ್ಮ. ಗೌರೀಪೂಜೆ ಮಾಡುವ ಭಾಗ್ಯವನ್ನ ಕೇಳಿಕೊಂಡು ಬರಲಿಲ್ಲ, ನಿನ್ನ ದುರದೃಷ್ಟ...." ಎಂದು ಗದ್ಗದ ಕಂಠದಿಂದ ಸಮಾಧಾನ ಮಾಡುತ್ತ ನಿಂತರು.

ಬಟ್ಟಲ ಕಾಫಿ ಹಾಗೇ ಇದ್ದಿತು.

ಕಣ್ಣೀರು ಆರುವ ಮುನ್ನವೇ ಅದು ಆರಿಹೋಗಿತ್ತು.

## ಪ್ರಕರಣ ಆರು

### ೧

ರಂಗಸ್ವಾಮಿ ಹೆಚ್ಚು ದಿನ ರಜ ಪಡೆಯಲು ಸಾಧ್ಯವಾಗಿರಲಿಲ್ಲ. ಗಣೇಶನ ಹಬ್ಬದ ಮಾರನೆಯ ದಿನವೇ ಹೊರಟುಬಿಡಬೇಕಾಗಿದ್ದಿತು. "ಗೌರಮ್ಮನಿಗೆ 'ಸೋಗಲಕ್ಕಿ' ಇಡದೆ ಹೇಗೆ ಹೋಗುವುದು ?" ಎಂದು ಪಾರ್ವತಮ್ಮನವರು ಆಕ್ಷೇಪಣೆ ಮಾಡಿದ್ದರಿಂದ, ಯತ್ನವಿಲ್ಲದೆ ಇನ್ನು ಮೂರು ದಿನ ರಜ ಹೆಚ್ಚಿಸಿ ಕೊಂಡನು. ಗೌರಿ ಕೂರಿಸಿದ ಐದನೆಯ ದಿನ ಗೌರಿ ಬಿಡುವುದಕ್ಕೆ ಪ್ರಶಸ್ತ ವಾಗಿತ್ತು. ವೆಂಕಟಸುಬ್ಬಯ್ಯನವರು ಕೋರಿದ್ದರೆ ಮೇರೆ, ಶಿವರಾಮಭಟ್ಟರು ಅವೊತ್ತೆ ಗೌರಿ ಬಿಡುವ ಏರ್ಪಾಟು ಮಾಡಿದರು. ಹೇಗೂ ಅವತ್ತು ಚಿತ್ರಾನ್ನ, ಮೊಸರನ್ನ, ಪಾಯಸ ಮಾಡಬೇಕಾಗಿದ್ದಿತು. ಜೊತೆಗೆ ಒಬ್ಬಟ್ಟು ಅಂಬೊಡೆ ಮಾಡಿ, ಅಳಿಯ ಮಗಳಿಗೆ ಪಾರ್ವತಮ್ಮನವರು ಔತಣದ ಶಾಸ್ತ್ರವನ್ನು ಮಾಡಿದರು; ಮಗಳಿಗೆ ಕುತ್ತಾಲದ ಸೀರೆ ಉಡಿಸಿದರು. ನವರಾತ್ರಿಯ ಹೊತ್ತಿಗೆ ಸೀತೆಯನ್ನು ಮೈಸೂರಿಗೆ ಕಳಿಸುವ ಆಶ್ವಾಸನೆಯನ್ನು ಪಡೆದು, ರಂಗಸ್ವಾಮಿ ಮಾರನೆಯ ದಿನ ಹೆಂಡತಿ–ಮಕ್ಕಳೊಂದಿಗೆ ಪಯಣ ಬೆಳಸಿದನು. ರಾಮಸ್ವಾಮಿ ಅವರ ಜೊತೆ ಬಸ್ಸಿನಲ್ಲಿ ಹೊಳೇನರಸೀಪುರದವರೆಗೆ ಹೋಗಿ, ಅಲ್ಲಿ ಅವರನ್ನು ರೈಲು ಹತ್ತಿಸಿ ಹಿಂದಿರುಗುವುದೆಂದು ಏರ್ಪಾಡಾಯಿತು.

ಅಳಿಯ ಮಗಳು ಊರು ಬಿಟ್ಟಮೇಲೆ, "ಸೀತೆಯನ್ನ ಮೈಸೂರಿಗೆ ಕಳಿಸುವುದಕ್ಕೆ ನಾನು ಆಗುವುದಿಲ್ಲ ಎಂದಿದ್ದೆ. ನೀವೇ ಒಪ್ಪಿಕೊಂಡುಬಿಟ್ಟಿರಿ" ಎಂದು ಪಾರ್ವತಮ್ಮನವರು ಗಂಡನನ್ನು ಆಕ್ಷೇಪಿಸಿದರು. ಅದಕ್ಕೆ ವೆಂಕಟ ಸುಬ್ಬಯ್ಯನವರು, "ಕಾವೇರಿಗೆ ತಾನೇ ಇನ್ನು ಯಾರು ದಿಕ್ಕು ? ನೀವು ಹೆಂಗಸರು ನಿಸೂರಾಗಿ ಮಾತಾಡಿಬಿಡುತ್ತೀರಿ. ನಾವು ಗಂಡಸರು ಮುಖ ದಾಕ್ಷಿಣ್ಯಕ್ಕೆ ಕಟ್ಟುಬೀಳಬೇಕಾಗುತ್ತೆ. ಇನ್ನೂ ಎರಡು ತಿಂಗಳ ಮಾತು, ಆಗ ನೋಡೋಣ. ಸಾಧ್ಯವಿಲ್ಲದಿದ್ದರೆ, ಆಗುವುದಿಲ್ಲ ಅಂತ ಕಾಗದ ಹಾಕಿ ಬಿಡುವುದು" ಎಂದರು. ಈ ಮಾತು ಅಷ್ಟಕ್ಕೇ ನಿಂತಿತು.

ಸೀತೆಯ ವಿದ್ಯಾಭ್ಯಾಸ ತೃಪ್ತಿಕರವಾಗಿ ಮುಂದುವರಿಯುತ್ತಿತ್ತು.

ಗೋಪಾಲಯ್ಯನವರು ನಿತ್ಯ ಸಂಜೆಯ ವೇಳೆಗೆ ಮನೆಗೆ ಬಂದು ಲೆಕ್ಕ, ಕನ್ನಡ, ಆರೋಗ್ಯ, ಇಂಗ್ಲಿಷು—ಈ ಪಾಠಗಳನ್ನು ವಿಶೇಷ ಶ್ರದ್ಧೆಯಿಂದಲೇ ಕಲಿಸ ತೊಡಗಿದ್ದರು. ಹೆಣ್ಣುಮಕ್ಕಳ ಜೊತೆ ಇದ್ದುದರಿಂದ ಮೊದಲ ಕೆಲವು ದಿನ ಗಳಂತೆ ಈಗ ಶಾಲೆಗೆ ಹೋಗಲು ಅಂಜುತ್ತಿರಲಿಲ್ಲ. ಅಂಚೆಯ ಕಚೇರಿ ಯನ್ನು ಹಾದು ಹೋಗುವಾಗ, ಆ ಕಡೆ ತಿರುಗಿಯೇ ನೋಡುತ್ತಿರಲಿಲ್ಲ. ಪುಟ್ಟಣ್ಣಯ್ಯನೇನೋ ಕಿಟಕಿಯ ಮುಂದೆ ಕುಳಿತು ಬೀದಿಯ ಕಡೆ ನೋಡು ತ್ತಿದ್ದಾಗ, ಒಮ್ಮೊಮ್ಮೆ ಸೀತೆ ಅವನ ಕಣ್ಣಿಗೆ ಬೀಳುತ್ತಿದ್ದಳು. ಕೆಲವು ಸಲ ಆತ ಹೊರಕ್ಕೆ ಬಂದು, ಜಗಲಿಯ ಮೇಲೆ ಸೀತೆಯ ಬರವನ್ನೆ ನಿರೀಕ್ಷಿಸುತ್ತಾ ನಿಂತು, ಅವಳು ಬಂದಾಗ ಅವಳನ್ನು ಕಣ್ಣುತುಂಬ ದಿಟ್ಟಿಸಿ ನೋಡಿ, 'ಅಲ್ಲ, ಮೂರು ತಿಂಗಳಲ್ಲಿ ಎಷ್ಟು ಬೆಳೆದುಬಿಟ್ಟಿದಾಳೆ! ಆಗಿಗಿಂತ ಈಗ ಚೆನ್ನಾಗಿ ಕಾಣುತ್ತಾಳೆ. ನನಗಿಂತ ಪುಣ್ಯಶಾಲಿ ಇನ್ನು ಯಾವನೋ ಕಾದಿದ್ದಾನೆ.... ರಾಮಸ್ವಾಮಿಯೂ ಈಗ ಈ ಕಡೆ ಬರುವುದನ್ನೇ ಬಿಟ್ಟುಬಿಟ್ಟ, ಒಳ್ಳೆ ಘಾಟಿ' ಎಂದು, ರುಚಿನೋಡಿದ ಹಣ್ಣು ಮಣ್ಣಿಗೆ ಬಿದ್ದಾಗ ಆಗುವ ವೇದನೆಯನ್ನು ಅನುಭವಿಸುತ್ತಿದ್ದನು. 'ಹ್ನೂ, ವರ್ಗವಾಗುವುದೂ ಒಂದು ರೀತಿಯಲ್ಲಿ ಒಳ್ಳೆಯದೇ ಆಯಿತು. ಕೋಟೆಯ ಜನವೆಲ್ಲ ನನ್ನ ಮೇಲೆ ವಿಷ ಕಾರುತ್ತಾ ಇದ್ದಾರೆ—' ಎಂದು ತನಗೆ ವರ್ಗವಾಗುವ ದಿನವನ್ನು ಎದುರುನೋಡುತ್ತಿ ದ್ದನು. ಅವನಿಗೆ ಕೂಡಲೆ ವರ್ಗವಾಗುವುದೆಂಬ ವದಂತಿ ದಿನದಿನಕ್ಕೆ ಬಲ ವಾಗುತ್ತಿತ್ತು.

ಸೀತೆ ಸ್ಕೂಲಿಗೆ ಹೋಗುತ್ತಿದ್ದುದನ್ನು ಪುಟ್ಟಣ್ಣಯ್ಯ ತಾನೇ ಸ್ವತಃ ಕಂಡಿದ್ದನಷ್ಟೆ. ಮೇಷ್ಟ್ರು ಗೋಪಾಲಯ್ಯ ಸೀತೆಗೆ ಮನೆಯಲ್ಲಿ ಪಾಠ ಹೇಳಿ ಕೊಡುತ್ತಿರುವನೆಂಬ ಸಮಾಚಾರ ಅವನಿಗೆ ತಿಳಿದಿತ್ತು. ಬಹು ದಿನಗಳಿಂದ ಗೋಪಾಲಯ್ಯನನ್ನು 'ಕೀಟಲೆ' ಮಾಡಬೇಕೆನ್ನಿಸಿತ್ತು. ಆ 'ಕೀಟಲೆ' ಯಿಂದ ಒಂದು ಸ್ವಸಂತೃಪ್ತಿಯನ್ನೂ ಪುಟ್ಟಣ್ಣಯ್ಯ ನಿರೀಕ್ಷಿಸಿದ್ದ. ಒಂದು ದಿನ ಶಾಲೆಯಿಂದ ಗೋಪಾಲಯ್ಯ ಒಂಟಿಯಾಗಿ ಬರುತ್ತಿದ್ದಾಗ, ಅವನನ್ನು ಪುಟ್ಟಣ್ಣಯ್ಯ ಕೂಗಿ ಕರೆದನು; ಅವನನ್ನು ಒಳಕ್ಕೆ ಕರೆದು ಕೂರಿಸಿಕೊಂಡನು. ಅಂಚೆ ಕಟ್ಟಿಯಾದ ಮೇಲೆ, ಅಂಚೆಯ ಆಳನ್ನು ಕಳಿಸಿ, ಮಾತಿಗೆ ಮೊದಲು ಮಾಡಿದನು; ಆ ಮಾತು ಈ ಮಾತು ಮುಗಿದಮೇಲೆ, ಪ್ರಕೃತ ವಿಷಯಕ್ಕೆ

ಹೊರಳಿದನು.

"ಈ ಊರಿನ ಜನ ನನ್ನ ವರ್ಗಕ್ಕೆ ಪ್ರಯತ್ನಪಡುತ್ತಾ ಇದಾರಂತೆ, ನಿಮಗೆ ಗೊತ್ತೆ, ಗೋಪಾಲಯ್ಯ ?"

"ಹಾಗಂತ ಕೇಳಿದೆ ?"

"ಅದಕ್ಕೆ ಕಾರಣ ಏನು ಗೊತ್ತೆ ?"

ಗೋಪಾಲಯ್ಯ ಮೌನವಾಗಿದ್ದ.

"ಸಂಕೋಚ ಯಾಕೆ, ಹೇಳಿ."

"ಗೊತ್ತಿಲ್ಲ ಅಂತ ಇಟ್ಟುಕೊಳ್ಳಿ."

"ಯಾಕೆ, ನೀವು ನಿತ್ಯ ಗುಡಿಗೆ ಹೋಗುವುದಿಲ್ಲವೆ ?"

"ಯಾವತ್ತಾದರೂ ದೇವರ ದರ್ಶನಕ್ಕೆ ಹೋದಾಗ, ಹೆಡ್ಮೇಷ್ಟ್ರು ಬನ್ನಿ ಅಂತ ಕರೆದರೆ ಹೋಗಿ ಸ್ವಲ್ಪ ಹೊತ್ತು ಕುಳಿತಿರುತೀನಿ. ಇಲ್ಲದೆಹೋದರೆ ಇಲ್ಲ."

"ಹೆಡ್ಮೇಷ್ಟರಿಗೂ ನಿಮಗೂ ಅಷ್ಟಕ್ಕಷ್ಟೆಯೋ, ಹೇಗೆ ?"

"ಅಂಥಾದ್ದೇನಿಲ್ಲ. ನನ್ನ ಕಂಡರೆ ಅವರು ತುಂಬ ವಿಶ್ವಾಸವಾಗಿದಾರೆ. ಎಷ್ಟಾದರೂ ಮೇಲಧಿಕಾರಿಗಳು. ಎಷ್ಟೋ ಅಷ್ಟರಲ್ಲಿರುವುದು ಒಳ್ಳೆಯದು."

"ನೀವು ಅದೃಷ್ಟಶಾಲಿಗಳು, ಗೋಪಾಲಯ್ಯನವರೇ."

"ಅದೇನೋ ನೀವು ಹೇಳುವುದು ನನಗೆ ಅರ್ಥವಾಗುವುದಿಲ್ಲ."

"ನೀವು ವೆಂಕಟಸುಬ್ಬಯ್ಯನವರ ಮಗಳಿಗೆ ಪಾಠ ಹೇಳಿಕೊಡುತ್ತಿದ್ದೀರಿ, ಅಲ್ಲವೆ ?"

"ಹೌದು."

"ನೋಡಿ, ಹಳ್ಳಿಗಾಡಿನಲ್ಲಿ ಮನೆಯ ಮೇಷ್ಟ್ರನ್ನಿಟ್ಟು ಪಾಠ ಹೇಳಿಸುವವರು ಯಾರು ? ತಿಂಗಳಿಗೊಂದು ಐದು ರೂಪಾಯಿ ಸಿಕ್ಕಿದರೆ ಅದೃಷ್ಟವಲ್ಲವೆ ?"

"ಐದು ರೂಪಾಯಿ ! ನಿಮಗೆ ಯಾರು ಹೇಳಿದವರು ಹಾಗೆ ? ಹೆಡ್ಮೆಷ್ಟ್ರು ಸುಬ್ಬರಾಯರು ಹೇಳಿದರು. ಅವರ ದಾಕ್ಷಿಣ್ಯಕ್ಕೆ ಹೋಗಿ ಹಾಗೆಯೇ ಹೇಳಿಕೊಡುತಾ ಇದೀನಿ."

"ನಿಮಗೆ ಬುದ್ಧಿ ಇಲ್ಲ."

"......................."

"ಇವತ್ತಲ್ಲ ನಾಳೆ, ನನ್ನ ಮೇಲೆ ಹುಟ್ಟಿದಹಾಗೆ ನಿಮ್ಮ ಮೇಲೂ ಪುಕಾರು ಹುಟ್ಟಿಯೇ ಹುಟ್ಟುತ್ತೆ. ನೀವು ಬಿಟ್ಟಿ ಪಾಠ ಹೇಳಿದರೂ, ಲೋವರ್ ಸೆಕೆಂಡರಿ ಪರೀಕ್ಷೆಗೆ ತಯಾರುಮಾಡುವುದು ಅಂದರೆ ಸಾಮಾನ್ಯವೆ? ತಿಂಗಳಿಗೆ ಹತ್ತು ರೂಪಾಯಿ ತೆಗೆದುಕೊಳ್ಳುತ್ತಿದ್ದರು ಅಂತಲೇ ಅಂದುಕೊಳ್ಳುತ್ತಾರೆ. ಮೇಲಧಿಕಾರಿಗಳ ಅಪ್ಪಣೆ ಪಡೆದಿಲ್ಲ ಅನ್ನುತ್ತಾರೆ...."

"ಸುಬ್ಬರಾಯರೇ ನನಗೆ ಹೇಳಿದಾರಲ್ಲ, ಸ್ವಾಮಿ."

"ನಾಳೆ ಸುಬ್ಬರಾಯರೇ, ತಾವು ಒಳ್ಳೆಯವರಾಗುವುದಕ್ಕೆ, ಜನದ ಮಾತೇ ಸರಿ ಎಂದರೆ ಏನು ಮಾಡುತ್ತೀರಿ?"

"......................."

"ಸುಬ್ಬರಾಯರು ನಿಮ್ಮ ಹೆಸರು ಕೆಡಿಸುವ ದುರುದ್ದೇಶದಿಂದಲೇ ನಿಮಗೆ ಯಾಕೆ ಈ ಪಾಠ ಗಂಟುಹಾಕಿರಬಾರದು?"

"ದುರುದ್ದೇಶ, ಹೆಸರು ಕೆಡಿಸುವುದು?—"

"ಹೌದು ಗೋಪಾಲಯ್ಯನವರೆ, ನಿಮಗೆಷ್ಟು ವಯಸ್ಸು?"

"ಇಪ್ಪತ್ತಾರು."

"ನನಗೆ ಮೂವತ್ತೈದು; ತಕ್ಕಮಟ್ಟಿಗೆ ವಯಸ್ಸಾದವನು. ನೀವು ಯುವಕರು. ನಾನು ಸೀತೆಯನ್ನ ಕೆಡಿಸಿರಬಹುದಾದರೆ, ನೀವು ಯಾಕೆ ಕೆಡಿಸಿದವರಾಗಬಾರದು? ಸೀತೆ ಒಂದು ದಿನ ಅಂಚೆಯ ಕಚೇರಿಗೆ ತಾನೇ ಕತ್ತಲೆಯಲ್ಲಿ ಬಂದು, ಹೆದರಿಕೊಂಡು, ನನ್ನನ್ನ ಜೊತೆಗೆ ಕರೆದದ್ದಕ್ಕೆ ನನ್ನ ಮೇಲೆ ಪುಕಾರು ಎದ್ದಿತು. ನಿತ್ಯ ನೀವು ಅವಳ ಮನೆಗೇ ಹೋಗಿ ಅವಳಿಗೆ ಪಾಠ ಹೇಳುತ್ತೀರಿ. ವೆಂಕಟಸುಬ್ಬಯ್ಯನವರು ಹೊಳೆಪಳೆ, ತೋಟತುಡಿಕೆ, ಕೋರ್ಟುಕಚೇರಿ ಅಂತ ಹೊರಗೇ ಇರುತ್ತಾರೆ—ಹೌದೋ ಅಲ್ಲವೊ?"

"ಹೌದು."

"ಆ ರಾಮಸ್ವಾಮಿ ಇದಾನಲ್ಲ, ಸೀತೆಯ ಅಣ್ಣ, ಅವನೊಬ್ಬ ಪೋಕರಿ. ಅವನು ಮನೆಯನ್ನೆ ಸೇರೋದಿಲ್ಲ. ಹೌದೋ ಅಲ್ಲವೋ?"

"ಅವನು ಎಂಥವನೋ ಏನೋ ನಾನು ಕಾಣೆ. ಸಾಧಾರಣವಾಗಿ ಅವನು ಮನೆಯಲ್ಲಿ ಇರುವುದಿಲ್ಲ, ನಾನು ಹೋದಾಗ."

"ನೀವು ಪಾಠ ಹೇಳುವಾಗ, ಹುಡುಗಿಯ ತಾಯಿ ನಿಮ್ಮ ಮುಂದೆಯೇ

ಕುಳಿತಿರುತಾರೆಯೆ ? ”

“ ಇಲ್ಲ. ಕೆಲಸಗಿಲಸ ಮಾಡಿಕೊಳ್ಳುತಾ ಸುತ್ತಾಡುತಾ ಇರುತಾರೆ. ಒಂದೊಂದು ದಿನ, ಪಾಠ ಹೇಳುವುದನ್ನು ಕೇಳುತಾ ಕುಳಿತೂ ಇರುತಾರೆ. ತುಂಬ ಒಳ್ಳೆಯವರು. ನನ್ನನ್ನಂತೂ ತುಂಬಾ ವಿಶ್ವಾಸವಾಗಿ ಮಾತನಾಡಿಸುತ್ತಾರೆ....”

“ ನೋಡಿದಿರಾ, ಹೇಗಿದೆ ಸಂದರ್ಭ ? ನಿಮ್ಮ ಮೇಲೆ ಪುಕಾರು ಹುಟ್ಟುವುದಕ್ಕೆ ಎಷ್ಟು ಹೊತ್ತು ? ಈಗಾಗಲೇ ಎದ್ದಿದೆಯೋ ಏನೋ, ಯಾರು ಬಲ್ಲರು ? ”

“ ಹಾಗೆ ಅನ್ನುತ್ತೀರ ? ಯಾರ ಬಾಯಿಂದಲೂ ಕೇಳಿಲ್ಲವಲ್ಲ, ಅಂಥ ಮಾತನ್ನ, ಇದುವರೆಗೆ ?....”

“ ಬೆಂಕಿ ಇಟ್ಟಕೂಡಲೆ ಹೊಗೆ ಏಳುತ್ತೆಯೆ ? ಅದಕ್ಕೆ ಕಾಲ ಬೇಕು. ಸ್ವಲ್ಪ ಕಾದು ನೋಡುತ್ತ ಇರಿ....”

“ ಹಾಗಾದರೆ, ನನ್ನ ಏನು ಮಾಡು ಅನ್ನುತ್ತೀರಿ ?....”

“ ಪಾಠ ಹೇಳುವುದನ್ನು ನಿಲ್ಲಿಸಿ. ಇನ್ನು ಆ ಕಡೆ ಸುಳಿಯಬೇಡಿ. ಅದಿಲ್ಲವೋ, ‘ ವ್ರತ ಕೆಟ್ಟರೂ ಸುಖಪಡಬೇಕು ’ ಅನ್ನುವ ಹಾಗೆ....”

“ ಅಂದರೆ........”

“ ಪ್ರಯೋಜನ ಪಡೆಯಬೇಕು. ಕೆಟ್ಟ ಹೆಸರೂ ಹೊತ್ತು, ಪ್ರಯೋಜನವೂ ಪಡೆಯದೆ ಹೋದರೆ, ನಿಮ್ಮಂಥ ಮರುಳರು ಹಿಂದೆ ಹುಟ್ಟಿಲ್ಲ, ಮುಂದೆ ಹುಟ್ಟುವುದಿಲ್ಲ.”

“ ಅಂದರೆ, ನೀವು ಹೇಳುವುದು, ಏನಾದರೂ ಫೀಜು ಕೊಡಿ ಅಂತ ನಿರ್ದಾಕ್ಷಿಣ್ಯವಾಗಿ ಕೇಳಿಬಿಡುವುದು ಅಂತಲೋ ?....”

“ ಫೀಜಾದರೆ ಫೀಜು. ಆದರೆ, ವೆಂಕಟಸುಬ್ಬಯ್ಯನವರು ನಿಮಗೆ ಕೈಯೆತ್ತಿ ಹಣ ಕೊಡುತಾರೆ ಅನ್ನುವ ನಂಬಿಕೆ ನನಗಿಲ್ಲ. ತುಂಬ ತರಲೆ ತಾಪತ್ರಯದ ಮನುಷ್ಯರು. ಹಿಂದೆ ಇಲ್ಲಿಗೆ ಒಂದೊಂದು ಸಲ ‘ ವೃತ್ತಾಂತ ಪತ್ರಿಕೆ ’ ಓದೋದಕ್ಕೆ ಬರುತ್ತಿದ್ದರು. ಆಗ ತಮ್ಮ ತಾಪತ್ರಯವನ್ನ ಹೇಳಿಕೊಳ್ಳುತಾ ಇದ್ದರು....”

“ ಏನು ಮಾಡುವುದು ಹೇಳಿ, ಧಾಕ್ಷಿಣ್ಯಕ್ಕೆ ಕಟ್ಟುಬಿದ್ದಾಯಿತು....”

"ನಾನು ಹೇಳುವುದೂ ಅದೇ. ಈಗ ದಾಕ್ಷಿಣ್ಯದ ಬಲೆಗೆ ಬಿದ್ದಿದ್ದೀರಿ; ನಾಳೆ ಅಪಕೀರ್ತಿಯ ಬಲೆಗೆ ಬೀಳುತ್ತೀರಿ. ಅದು ತಪ್ಪಿದ್ದಲ್ಲ. ಜೇನು ಹಿಂಡಿದವನು ಕೈ ನೆಕ್ಕದೆ ಇರುತ್ತಾನೆಯೇ, ಅನ್ನದೆ ಇರುವುದಿಲ್ಲ. ಅದಕ್ಕೆ ಏನು ಮಾಡಬೇಕು? ನೆಕ್ಕಿಯೇ ಬಿಡಬೇಕು. Make the best of the bad bargain. ಹೌದೋ ಅಲ್ಲವೋ...." ಎಂದು ಪುಟ್ಟಣ್ಣಯ್ಯ ಗಹಗಹಿಸಿ ನಗತೊಡಗಿದನು.

"ಈ ಲೋಕದ ವ್ಯವಹಾರವೆಲ್ಲ ಹಾಗೆಯೇ ಅಂತ ಇಟ್ಟುಕೊಳ್ಳಿ. ಮುಂದಿನ ವಾರದಿಂದ ಪಾಠಕ್ಕೆ ಹೋಗದೆ ಇದ್ದರಾಯಿತು."

"ಹಾಗೆ ದುಡುಕಬೇಡಿ. ನಿಧಾನವಾಗಿ ಆಲೋಚನೆ ಮಾಡಿ. ಅಂತೂ, make the best of the bad bargain, ಅಷ್ಟೇ ನಾನು ಹೇಳುವುದು. ಬೆಂದ ಮನೆಗೆ ಹಿರಿದಷ್ಟೇ ಲಾಭ. ಹೌದೋ ಅಲ್ಲವೋ?"

"ಸರಿಯೇ. ಇಷ್ಟೇ ತಾನೆ? ಹಾಗಾದರೆ, ಬರ್ತೇನೆ. ಇವತ್ತಂತೂ ಪಾಠಕ್ಕೆ ಹೋಗಲೇಬೇಕಲ್ಲ" ಎಂದು ಗೋಪಾಲಯ್ಯ ಪುಟ್ಟಣ್ಣಯ್ಯನನ್ನು ಬೀಳ್ಕೊಂಡ.

ಗೋಪಾಲಯ್ಯನ ಬರಿಯ ತಲೆಯೊಳಕ್ಕೆ ಪುಟ್ಟಣ್ಣಯ್ಯ ಒಂದು ಹುಳುವನ್ನು ಹೊಗಿಸಿದ. ಅದು ಅಲ್ಲಿ ಕೆಲಸಮಾಡತೊಡಗಿತು.

ಗೋಪಾಲಯ್ಯ ತಾನಾಗಿ ಪಾಠಕ್ಕೆ ಹೋಗದೆ ನಿಂತರೂ ಸರಿಯೆ; ಇಲ್ಲವೆ ಮನೆಯವರ ಸಂಶಯಕ್ಕೆ ಪಾತ್ರನಾಗಿ ಅವರೇ ಅವನನ್ನು ಬಿಡಿಸಿದರೂ ಸರಿಯೆ. ಅವನ ಬದಲು ಸುಬ್ಬರಾಯರು ಪಾಠ ಹೇಳಲು ಹೋಗದೆ ಇರುವುದಿಲ್ಲ. ಸುಬ್ಬರಾಯರು ಪಾಠಕ್ಕೆ ಹೋಗಲು ಮೊದಲುಮಾಡಿದ ಕೂಡಲೆ, ಅವರ ಒಳ್ಳೆಯ ಹೆಸರಿಗೆ ಕಳಂಕ ಹಬ್ಬುವ ಹಾಗೆ ಮಾಡುವುದು ಕಷ್ಟವಾಗಲಾರದು. ಅನಂತರ ರಾಮುಸ್ವಾಮಿಯ ಮೂಲಕ ಕರಿಯಣ್ಣನಿಗೆ ಹೇಳಿಸಿ, ಸಾಹುಕಾರ ರಾಮಪ್ಪನವರಿಂದಲೇ ಸುಬ್ಬರಾಯರ ವಿರುದ್ಧವಾಗಿ ಡಿ.ಇ.ಓ.ಗೆ ಅರ್ಜಿ ಹಾಕಿಸುವುದು. ತಾವಿಬ್ಬರೂ ಒಟ್ಟಿಗೆಯೇ ಊರು ಬಿಡುವುದು. 'ಕೆನ್ನೆಗೆ ಬೀರಿದವನಿಗೆ ತಪರಾಕ್ಕೆ ತೀಡು'—ಇದು ಪುಟ್ಟಣ್ಣಯ್ಯನ ಹಂಚಿಕೆ. ತನಗೆ ವರ್ಗವಾಗುವಷ್ಟರೊಳಗಾಗಿ ಈ ಹಂಚಿಕೆ ಹಣ್ಣಾಗದಿದ್ದರೂ ಸರಿಯೆ, ಅದರ ಬೀಜ ನೆಟ್ಟುಬಿಡಬೇಕು ಎಂದು ಅವನು ಹಾತೊರೆಯುತ್ತಿದ್ದನು. ತನ್ನ

ವರ್ಗದ ಪಿತೂರಿಗೆ ಸುಬ್ಬಾಭಟ್ಟನೇ ಕಾರಣನಾದರೂ, ಅದಕ್ಕೆ ಅರ್ಜಿ ಬರೆದು ಕೊಟ್ಟವರು ಸುಬ್ಬರಾಯರು ಎಂದು ಪುಟ್ಟಣ್ಣಯ್ಯನ ಕಿವಿಗೆ ಬಿದ್ದಿದ್ದಿತು. ಅಂಚೆಯ ಆಳು, ಧಣಿಗೆ ಆ ಸುದ್ದಿಯನ್ನು ಸಂಪಾದಿಸಿ ತಂದುಕೊಟ್ಟಿದ್ದನು. ಅಂದಿನಿಂದಲೂ, ಸುಬ್ಬರಾಯರ ಮೇಲೆ ಸೇಡು ತೀರಿಸಿಕೊಳ್ಳುವ ಛಲ ಪುಟ್ಟಣ್ಣಯ್ಯನ ನಿದ್ರೆಯನ್ನು ಕೆಡಿಸಿತ್ತು. ಗೋಪಾಲಯ್ಯನೊಡನೆ ಸಂಭಾಷಣೆ ನಡಸಿದ ರಾತ್ರಿ ಪುಟ್ಟಣ್ಣಯ್ಯನಿಗೆ ಚೆನ್ನಾಗಿ ನಿದ್ರೆ ಬಂದಿತು.

೨

ಸುಬ್ಬರಾಯರು ಗೋಪಾಲಯ್ಯನನ್ನು ಪಾಠಕ್ಕೆ ಗೊತ್ತುಮಾಡಿಕೊಟ್ಟು ಕೆಲವು ದಿನಗಳಾದಮೇಲೆ, ಗುಡಿಯಲ್ಲಿ ದೇವರ ದರ್ಶನಕ್ಕೆಂದು ಬಂದಿದ್ದ ವೆಂಕಟಸುಬ್ಬಯ್ಯನವರನ್ನು ಕಂಡು, ಅವರೊಡನೆಯೇ ಹೊರಕ್ಕೆ ಬಂದರು. ಕೋಟೆಯ ಹೊರಗೆ ಶಾಲೆಯ ದಾರಿಯಲ್ಲಿ ಸ್ವಲ್ಪ ದೂರ ಬಂದಮೇಲೆ, ದಾರಿಯಲ್ಲಿ ಮೆಲುದನಿಯಲ್ಲಿ ಮಾತೆತ್ತಿದರು; ಯಾರೂ ಇಲ್ಲವೆಂದು ಖಚಿತವಾದ ಮೇಲೆ ನಿರ್ಭಯವಾಗಿ ಹೇಳತೊಡಗಿದರು :

"ನಿಮಗೆ ಹೇಳಲು ಬಹು ಸಂತೋಷವಾಗುತ್ತೆ, ವೆಂಕಟಸುಬ್ಬಯ್ಯನವರೆ. ನಿಮ್ಮ ಮಗಳು ಬಹು ಚೆನ್ನಾಗಿ ಪಾಠ ಕಲಿಯುತ್ತಿದಾಳೆ. ಬಹು ಬುದ್ಧಿವಂತೆ. ಏನೇ ಆಗಲಿ ಎಷ್ಟೇ ಕಷ್ಟ ಬರಲಿ; ನೀವು ಅವಳನ್ನ ಹಾಸನಕ್ಕೊ ಮೈಸೂರಿಗೊ ಕಳಿಸಿ, ಹೈಸ್ಕೂಲಿನಲ್ಲಿ ಓದಿಸಬೇಕು. ಇನ್ನೊಂದು ವಿಚಾರ ಏನೂ ಅಂದರೆ, ಈ ಊರಿನ ಜನದ ಅಭಿಪ್ರಾಯವೂ ಈಗ ಸ್ವಲ್ಪ ಸ್ವಲ್ಪ ಬದಲಾಯಿಸುತ್ತ ಇರುವಹಾಗೆ ಕಾಣುತ್ತೆ. ನಿಮ್ಮ ಮಗಳನ್ನು ಓದಿಸಲು ನಾನು ಪ್ರೋತ್ಸಾಹ ಕೊಡುತ್ತಿದೇನೆ ಅಂತ ನಂಜುಂಡಶಾಸ್ತ್ರಿಗಳು, ಶಿವರಾಮಭಟ್ಟರು ಎಲ್ಲರೂ ಮೊದಮೊದಲು ಆಕ್ಷೇಪಣೆ ಮಾಡಹೊರಟರು. ಅವರ ವಿರೋಧ ಕಟ್ಟಿಕೊಳ್ಳಲು ನನಗೆ ಇಷ್ಟವಾಗಲಿಲ್ಲ. ಊರಿನ ಜನರ ವಿರೋಧ ಕಟ್ಟಿಕೊಂಡು ಯಾವ ಸರ್ಕಾರೀ ನೌಕರನೂ ನೆಮ್ಮದಿಯಾಗಿ ನೆಲೆನಿಂತಿರಲು ಸಾಧ್ಯವಿಲ್ಲ...."

"ಅದು ದಿಟ ಅನ್ನಿ. ಕಾರಣ ಏನಾದರೂ ಇರಲಿ, ಈಗ ಪುಟ್ಟಣ್ಣಯ್ಯನವರನ್ನ 'ಎತ್ತೇ ಅಗ್ನೆ' ಮಾಡುವುದಕ್ಕೆ ಹೊರಟಿಲ್ಲವೆ ?"

" ಇವತ್ತು ಪುಟ್ಟಣ್ಣಯ್ಯ, ನಾಳೆ ನಾನು. ನಾನು ಏನು ಹೇಳುವುದಕ್ಕೆ ಹೊರಟೆ ಅಂದರೆ, ನಂಜುಂಡಶಾಸ್ತ್ರಿಗಳು ನರಸಿಂಹಾಚಾರ್ರು ಎಲ್ಲರೂ ಈಗ ನಾನು ಹೇಳಿದ್ದನ್ನ ಸರಿ ಅನ್ನುತ್ತಿದ್ದಾರೆ. ನಾನು ಅವರಿಗೆ ಬಾಯಿ ಬಿಟ್ಟು ಸ್ಪಷ್ಟವಾಗಿ ತಿಳಿಸಿಬಿಟ್ಟೆ, ಒಂದು ದಿನ : ಸೀತೆಯನ್ನ ಓದಿಸಿ ಅಂತ ಒತ್ತಾಸೆ ಕೊಟ್ಟವನು ನಾನು, ಸ್ವಾಮಿ. ಹುಡುಗಿ ವಿಧವೆ. ನಿಮ್ಮ ಮಾತಿನ ಪ್ರಕಾರ, ಅವಳು ಪುನರ್ವಿವಾಹವಾಗುವುದು ಸಾಧ್ಯವೇ ಇಲ್ಲ. ಮಾತಾಪಿತೃಗಳು ತೀರಿ ಕೊಂಡಮೇಲೆ ಅವಳ ಅಣ್ಣಂದಿರು ಕಾಪಾಡುತ್ತಾರೆ ಅನ್ನುವ ಖಾತರಿ ಇಲ್ಲ. ನಮ್ಮ ದೇಶದಲ್ಲಿ ಹೆಣ್ಣಿನ ಮರ್ಯಾದೆಯನ್ನ ಕಾಪಾಡುವುದು ಅವಳ ಹಣೆಯ ಕುಂಕುಮ. ಅದು ಅಳಿಸಿದ ಮೇಲೆ, ಅದು ಗಂಡನ ಹಿಂದೆಯೇ ಹೋಯಿತು, ಮತ್ತೆ ಇಡುವ ಹಾಗಿಲ್ಲ ಎನ್ನುತೀರಿ ನೀವು. ಅದರಲ್ಲಿಯೂ ಅರ್ಥ ವಿರಬಹುದು; ನಾನು ಕಾಣೆ. ಅದು ಇಲ್ಲದಿರುವಾಗ, ಅವಳನ್ನ ಕಾಪಾಡುವುದು ಕೆಂಪು ಸೀರೆ ಎನ್ನುತ್ತೀರಿ ನೀವು. ವಿದ್ಯೆ ಎನ್ನುತ್ತೀನಿ ನಾನು. ಆಗಿನ ಕಾಲಕ್ಕೆ ಅದು, ಈಗಿನ ಕಾಲಕ್ಕೆ ಇದು. ಹೇಗಾದರೂ ಹೆಂಗಸರು ಕೆಡಬಾರದು, ತಾನೂ ಕೆಟ್ಟು ಸಮಾಜಕ್ಕೂ ಕೆಡಕಾಗಬಾರದು—ಎನ್ನುವುದು ಮುಖ್ಯ ಉದ್ದೇಶ. ನಮಗೂ ನಿಮಗೂ ಇರುವ ಭೇದ ಇಷ್ಟೆ—ಎಂದು ವಾದಿಸಿದೆ. ಎಲ್ಲಿ ವಿರೋಧ ಕಟ್ಟಿಕೊಳ್ಳುತೇನೆಯೋ ಅಂತ ದಿಗಿಲಾಗಿತ್ತು. ದೇವರ ದಯದಿಂದ, ಈಗ ಎಲ್ಲರೂ ನನ್ನ ಅಭಿಪ್ರಾಯವನ್ನ ಅನುಮೋದಿಸುತ್ತಾ ಇದ್ದಾರೆ. ಇದನ್ನ ನಿಮಗೆ ತಿಳಿಸೋಣ ಅಂತ ಇತ್ತು ನನ್ನ ಮನಸ್ಸಿನಲ್ಲಿ. ಇನ್ನು ನೀವು ಧೈರ್ಯ ವಾಗಿರಬಹುದು...."

ಸುಬ್ಬರಾಯರ ಮಾತುಗಳನ್ನು ಕೇಳಿ ವೆಂಕಟಸುಬ್ಬಯ್ಯನವರಿಗೆ ತುಂಬ ಸಂತೋಷವಾಯಿತು. ನಡುವಣ ವಿರಾಮದ ಮೌನದಲ್ಲಿ ಒಂದು ಸುಂದರ ಭವಿಷ್ಯ ಚಿತ್ರ ಅವರ ಮನಸ್ಸಿನಲ್ಲಿ ಮೂಡಿ, ತಣಿಸಿತು :

ಸೀತೆ ಶಾಲಾ ಉಪಾಧ್ಯಾಯಿನಿ. ಬಾಡಿಗೆಯ ಮನೆಯಾದರೂ ಮನೆ ಅವಳದ್ದು. ಅವಳೇ ಮನೆಯೊಡತಿ. ಗಂಡುಮಕ್ಕಳು ದೂರಮಾಡಿದ ಮುಪ್ಪಿನ ತಂದೆತಾಯನ್ನು ಅವಳು ಸಲಹುತ್ತಿದ್ದಾಳೆ. ಅವಳಿಗೆ ಇವರು ದಿಕ್ಕು ; ಇವರಿಗೆ ಅವಳು ದಿಕ್ಕು. ಮಕ್ಕಳಿಲ್ಲದಿದ್ದರೂ, ಗಂಡನಿಲ್ಲದಿದ್ದರೂ, ಅವಳ ಬಾಳು ನಲವಿನಿಂದ ತುಂಬಿದೆ. ಬದುಕಿರುವುದು ಸಾರ್ಥಕ ಎಂದುಕೊಳ್ಳುತ್ತಿದ್ದಾಳೆ....

ಸುಬ್ಬರಾಯರ ಮಾತು ವೆಂಕಟಸುಬ್ಬಯ್ಯನವರನ್ನು ಹಗಲುಗನಸಿನ ಲೋಕದಿಂದ ಹೊರಕ್ಕೆ ಕರೆಯಿತು :

" ಏನೋ ಆಲೋಚನೆ ಮಾಡುತ್ತಿರುವ ಹಾಗಿದೆಯಲ್ಲ. ನಾನು ಹೇಳಿದ್ದು ಸರಿ ತಾನೆ...."

" ಸುಬ್ಬರಾಯರೆ, ನಿಮ್ಮ ಉಪಕಾರಕ್ಕೆ ನಾನು ಏನೂ ಪ್ರತ್ಯುಪಕಾರ ಮಾಡಲಾರೆ. ನಿಮ್ಮಂಥ ವಿದ್ಯಾವಂತರಿಗೆ ನನ್ನ ಮನಸ್ಸಿನಲ್ಲಿರುವುದನ್ನ ಅದು ಹೇಗೆ ತಿಳಿಸಬೇಕೋ ನಾನು ಕಾಣೆ."

" ಉಪಕಾರವೇನು ಬಂತು, ಉಪಕಾರ. ಅದಿರಲಿ, ಗೋಪಾಲಯ್ಯ ನವರ ಪಾಠ ನಿಮಗೆ ತೃಪ್ತಿಕರವಾಗಿ ಕಂಡಿದೆಯೋ ? "

" ಅದನ್ನ ನೀವು ಹೇಳಬೇಕು."

" ಅವಳು ತರಗತಿಯಲ್ಲಿ ಚೆನ್ನಾಗಿರುವುದರಿಂದ, ಗೋಪಾಲಯ್ಯನವರು ಮುತುವರ್ಜಿ ವಹಿಸಿ ಪಾಠ ಹೇಳುತ್ತಿದಾರೆಂದೇ ನನ್ನ ಭಾವನೆ."

" ಅದರ ಮೇಲೆ ಇನ್ನು ನನ್ನ ಮಾತೇನು ? "

" ನಿಮಗೂ ಒಪ್ಪಿಗೆಯಾಗಬೇಕು ನೋಡಿ. ನಿಮ್ಮ ಮನೆಯವರ ಅಭಿಪ್ರಾಯ ಏನು ? "

" ಮೇಷ್ಟ್ರು ಬರುವ ಹೊತ್ತಿನಲ್ಲಿ ನಾನು ಇರುವುದೇ ಇಲ್ಲ. ತುಂಬ ಚೆನ್ನಾಗಿ ಹೇಳಿಕೊಡುತ್ತಾರೆ, ಸರಸವಾಗಿ ಹೇಳಿಕೊಡುತ್ತಾರೆ ಅಂತ ಮನೆಯ ಹೆಂಗಸರು ಹೇಳಿದರು. ಪಾಠ ಅಂದರೆ ಸೀತೆಗೆ ಬೇಸರ ಆಗದ ಹಾಗೆ ಹೇಳಿ ಕೊಡುತ್ತಾರಂತೆ. ತುಂಬ ನಗಿಸುತ್ತಾರಂತೆ...."

" ಸ್ಕೂಲಿನಲ್ಲಿಯೂ ಹಾಗೆ. ಪಾಠ ಮಾಡುವಾಗ ತುಂಬ ಹಾಸ್ಯಮಾಡು ತ್ತಾರೆ. ಗೋಪಾಲಯ್ಯನವರ ಪಾಠ ಎಂದರೆ ಹುಡುಗರಿಗೆ ತುಂಬ ಮೆಚ್ಚಿಗೆ. ಅದಕ್ಕೇ ನಾನು ಅವರನ್ನ ಗೊತ್ತುಮಾಡಿಕೊಟ್ಟದ್ದು. ತಲೆ ತುಂಬ ವಿಷಯ ತುಂಬಿಕೊಂಡು ಅದನ್ನ ಹುಡುಗರ ತಲೆಗೆ ಗಿಡಿಯುವುದಕ್ಕೆ ಹೋದರೆ ಅವರಿಗೆ ಹಿಡಿಯುವುದೇ ಇಲ್ಲ. ಅಂತೂ ಅವರು ಚೆನ್ನಾಗಿ ಹೇಳುತ್ತಿದ್ದಾರೆ ಎನ್ನುವುದು ಸಂತೋಷದ ವಿಷಯ."

ಇಷ್ಟೆಲ್ಲಾ ಮಾತು ಬೆಳೆದದ್ದು ಫೀಜಿನ ವಿಚಾರಕ್ಕಾಗಿ ಎಂದು ವೆಂಕಟಸುಬ್ಬಯ್ಯನವರು ಗ್ರಹಿಸಿದರು. ಸಂತೋಷಚಿತ್ತರಾಗಿಯೇ ಆ ಮಾತು

ಎತ್ತಿದರು :

" ಅವರಿಗೆ ಏನು ಕೊಡಬೇಕು? ನೀವು ಎಷ್ಟು ಅಪ್ಪಣೆ ಕೊಡಿಸಿದರೆ ಅಷ್ಟು ಕೊಡುತ್ತೇನೆ."

" ನೋಡಿ, ಆ ಮಾತು ಮಾತ್ರ ಎತ್ತಬೇಡಿ. ಆತ ಏನೂ ತೆಗೆದು ಕೊಳ್ಳುವುದಿಲ್ಲ. ನನ್ನ ಕೈಲಿ ಸಾರಿ ಹೇಳಿದ್ದಾನೆ. ನನ್ನ ದಾಕ್ಷಿಣ್ಯಕ್ಕೋಸ್ಕರ ಆತ ಪಾಠ ಹೇಳುತ್ತಿದ್ದಾನೆ. ಬೇಕಾದರೆ, ಕಡೆಯಲ್ಲಿ, ಒಂದು ಜೊತೆ ಪಂಚೆಯೋ ಏನಾದರೂ ಮರ್ಯಾದೆ ಮಾಡಿದರಾಯಿತು...." ಎಂದರು ಸುಬ್ಬರಾಯರು.

" ನನಗೂ ಅದೇ ಒಪ್ಪಿಗೆ. ಹೊಳೇನರಸೀಪುರದಿಂದ ಸೊಗಸಾದ ರೇಷ್ಮೆ ಅಂಚಿನ ಪಂಚೆ ತಂದುಬಿಡುತ್ತೇನೆ...."

ನಿಧಾನವಾಗಿ ನಡೆನಡೆಯುತ್ತಲೇ ಪೋಸ್ಟಾಫೀಸು ಸಮೀಪಿಸಿತು. ಇಬ್ಬರೂ ಹಿಂದಿರುಗಿ ಹೆಜ್ಜೆ ಹಾಕತೊಡಗಿದರು.

* * * *

ಮೂರು ತಿಂಗಳಾದ ಸುಮಾರಿನಲ್ಲಿ, ಒಂದು ದಿನ ವೆಂಕಟಸುಬ್ಬಯ್ಯ ನವರು ಇದ್ದಕ್ಕಿದ್ದ ಹಾಗೆ ತಮ್ಮ ಮನೆಗೆ ಬಂದು, ಮೇಷ್ಟ್ರ ಗೋಪಾಲಯ್ಯ ನವರ ವಿಷಯವಾಗಿ ಹಿತಕರವಲ್ಲದ ಸುದ್ದಿ ತಿಳಿಸಿದಾಗ, ಸುಬ್ಬರಾಯರು ಚಕಿತಗೊಂಡರು.

" ನಿಮ್ಮನ್ನ ಒಂದು ವಿಷಯ ಕೇಳುವುದಕ್ಕೆ ಬಂದೆ."

" ಏನು ಸಮಾಚಾರ ? "

" ಗೋಪಾಲಯ್ಯನವರು ಪಾಠ ಹೇಳುವುದನ್ನು ನಿಲ್ಲಿಸಿ, ಅವರ ಬದಲು ನೀವು ಬಂದು ಪಾಠ ಹೇಳುವುದಕ್ಕೆ ಸಾಧ್ಯವೇ ಅಂತ ? "

" ಯಾಕೆ, ಅವರು ಮುತುವರ್ಜಿ ವಹಿಸುತ್ತಿಲ್ಲವೆ ? "

" ನಾನು ಕಂಡಿಲ್ಲ, ಸ್ವಾಮಿ. ಮನೆಯ ಹೆಂಗಸರ ಗಮನಕ್ಕೆ ಬಂದ ಮಟ್ಟಿಗೆ, ಅವರು ಮಿತಿಮೀರಿ ಮುತುವರ್ಜಿ ವಹಿಸುತ್ತಿರುವ ಹಾಗೆ ಕಾಣುತ್ತೆ."

" ಲೆಕ್ಕ ಬರೆವಣಿಗೆ ಹೆಚ್ಚಾಗಿ ಕೊಟ್ಟು ತುಂಬ ಶ್ರಮ ಆಗುವ ಹಾಗೆ ಮಾಡುತ್ತಿದಾರೆಯೋ ? ಬೇಕಾದರೆ ಹೇಳೋಣ, ಅಷ್ಟೊಂದು ಬೇಸರ ಆಗುವ ಹಾಗೆ ಮಾಡಬೇಡಿ ಅಂತ."

" ನಿಮಗೆ ಅರ್ಥವಾಗಲಿಲ್ಲ ಅಂತ ಕಾಣುತ್ತೆ. ನಾನು ಹೇಗೆ ಬಿಡಿಸಿ

ಹೇಳಲಿ, ಹೇಳಿ...."

"ಅಂದರೆ...."

"ತಮ್ಮ ಶಿಷ್ಯೆಯ ಸಂಗಡ ವಹಿಸಬಾರದಷ್ಟು ಸಲಿಗೆಯನ್ನು ವಹಿಸುತ್ತಿದ್ದಾರಂತೆ...."

ಸುಬ್ಬರಾಯರು ತುಸು ಹೊತ್ತು ಮೌನವಾಗಿದ್ದರು. ಗೋಪಾಲಯ್ಯನ ಮೇಲೆ ಈ ಬಗೆಯ ಸುದ್ದಿಯನ್ನು ಅವರು ನಂಬಲು ಸಿದ್ಧರಾಗಿರಲಿಲ್ಲ; ನಂಬುವುದು ಕಷ್ಟವೂ ಆಗಿತ್ತು.

"ನಾನು ನಂಬಲಾರೆ" ಎಂದರು ಸುಬ್ಬರಾಯರು.

"ನಮ್ಮ ಮನೆಯ ಹೆಂಗಸರೇ ಹೇಳಿದರಲ್ಲ, ಸ್ವಾಮಿ."

"ಅವರು ಕಂಡರೋ ?"

"ನನ್ನ ಮಗಳೇ ತಾಯಿಯ ಸಂಗಡ ದೂರಿದಳಂತೆ. ನಾಳೆಯಿಂದ ತನಗೆ ಪಾಠ ಬೇಡ ಎಂದಳಂತೆ. ಸ್ಕೂಲಿಗೇ ಹೋಗುವುದಿಲ್ಲ ಎಂದಳಂತೆ."

"ನೀವು ಹೇಳುವ ಹಾಗೆ, ಗೋಪಾಲಯ್ಯನವರು ಏನಾದರೂ ತಪ್ಪಿ ನಡೆದಿದ್ದರೆ, ಅದಕ್ಕೆ ಅವಕಾಶ ಹೇಗಾಯಿತು ? ಪಾಠ ಹೇಳುತ್ತಿರುವಾಗ ನಿಮ್ಮ ಕುಟುಂಬಕ್ಕೆ ಕಾಣದೆ ಇರುವುದು ಹೇಗೆ ?"

"ಈಗ ಏಳೆಂಟು ದಿನದಿಂದ ಪಾಠ ಹಜಾರದಲ್ಲಿ ನಡೆಯುತ್ತ ಇಲ್ಲ. 'ಹಜಾರದಲ್ಲಿ ಹೋಗುವವರು ಬರುವವರು, ಗಲಾಟೆ, ನಿಮ್ಮ ತಂದೆಯ ಕೋಣೆಯಲ್ಲಿ ಪಾಠ ಮಾಡೋಣ' ಎಂದರಂತೆ ಗೋಪಾಲಯ್ಯ. ಏನಾದರೂ ಹೀಗೆ ನಡೆಯಬಹುದು ಅಂತ ನಮ್ಮ ಸೀತೆ ತಾನೆ ಹೇಗೆ ಊಹಿಸಿಯಾಳು ? ಕ್ರಮ ಕ್ರಮವಾಗಿ ಸರಸ ಮೀರುತ್ತ ಬಂತಂತೆ. ಆಗಲೇ ಅವಳಿಗೆ ಹೇಗೆ ಹೇಗೊ ಅನ್ನಿಸಿತಂತೆ. ಒಂದು ದಿನ...."

"ಸಂಕೋಚ ಯಾಕೆ ? ಹೇಳಿ, ಪರವಾ ಇಲ್ಲ."

"....ಅವಳ ಕೈಯನ್ನು ಹಿಡಿದುಕೊಂಡರಂತೆ...."

ಸುಬ್ಬರಾಯರು ತುಸು ಹೊತ್ತು ಮೌನವಾಗಿದ್ದರು. ಬಳಿಕ ಹೇಳಿದರು : "ತಟ್ಟನೆ ಗೋಪಾಲಯ್ಯ ಪಾಠ ಹೇಳುವುದು ನಿಂತುಹೋದರೆ ಇಲ್ಲದ ಆಡಿಕೆಗೆ ಅವಕಾಶವಾದರೂ ಆಗಬಹುದು. ಹೇಗೂ ಇನ್ನು ಕೆಲವು ದಿನಕ್ಕೆ ನವರಾತ್ರಿ ರಜ ಬರುತ್ತೆ. ರಜದಲ್ಲಿ ಪಾಠ ಬೇಡಿ ಅನ್ನಿ. ಈಗ ಸದ್ಯಕ್ಕೆ ಕೋಣೆಗೆ ಬೀಗ

ಹಾಕಿಕೊಂಡುಬಿಡಿ. ಹಜಾರದಲ್ಲಿ ಪಾಠ ಎಂದಿನಂತೆಯೇ ನಡೆಯುತ್ತಾ ಇರಲಿ. ಮುಂದೆ ಏನು ಮಾಡುವುದು ಅನ್ನುವುದನ್ನ ಆಲೋಚನೆ ಮಾಡೋಣ. ಗೋಪಾಲಯ್ಯ ಕೆಟ್ಟವರಲ್ಲ. ಒಂದುವೇಳೆ ಸ್ವಲ್ಪ ಹದ್ದುಮೀರಿ ನಡೆದು ಕೊಂಡಿದ್ದರೂ, ಸೂಚನೆ ಕೊಟ್ಟರೆ ತಿದ್ದಿಕೊಳ್ಳುತ್ತಾರೆ. ಅಂತೂ, ದುಡುಕು ವುದು ಬೇಡ ಅಂತ ನನ್ನ ಅಭಿಪ್ರಾಯ. ನಾವು ಸ್ವಲ್ಪ ಹೆಚ್ಚು ಎಚ್ಚರಿಕೆ ವಹಿಸಿದರೆ ಅಷ್ಟೇ ಸಾಕು."

"ನೀವು ಹೇಗೆ ಹೇಳಿದರೆ ಹಾಗೆ" ಎಂದು ವೆಂಕಟಸುಬ್ಬಯ್ಯನವರು ತೃಪ್ತರಾಗಿ ಹಿಂದಿರುಗಿದರು.

ವೆಂಕಟಸುಬ್ಬಯ್ಯನವರು ಹೊರಟುಹೋದ ಮೇಲೆ ಸುಬ್ಬರಾಯರು ಅದೇ ವಿಷಯವಾಗಿ ಚಿಂತಿಸತೊಡಗಿದರು. ಏನು ಮಾಡಬೇಕೆಂಬುದೇ ಅವರಿಗೆ ತಿಳಿಯದಾಯಿತು. ಗೋಪಾಲಯ್ಯನನ್ನು ಎಷ್ಟೇ ಸೂಕ್ಷ್ಮವಾಗಿ ವಿಚಾರಣೆ ಮಾಡಿದರೂ, ಎಷ್ಟೇ ಸಣ್ಣ ತಪ್ಪಾದರೂ, ಇಂಥ ವಿಚಾರಗಳಲ್ಲಿ ಆತ ತಾನೆ ಯಾಕೆ ಒಪ್ಪಿಕೊಳ್ಳುತ್ತಾನೆ ಎಂದುಕೊಂಡರು. ಅವರಿಗೆ 'ಪುಟ್ಟಣ್ಣಯ್ಯ –ಸೀತೆಯ' ಪ್ರಕರಣದ ನೆನಪಾಯಿತು. ಹೆಂಗಸರು ಸಹಜ ಭೀರುಗಳು; ಕೆಲವರ ದೃಷ್ಟಿಯಲ್ಲಂತೂ ಪುರುಷರೆಲ್ಲ ಕಾಮುಕರೇ. ಪುಟ್ಟಣ್ಣಯ್ಯನ ಪ್ರಸಂಗ ದಲ್ಲಿ ಸುಬ್ಬಾಭಟ್ಟ ಸೀತೆ ಹೊರಗೆ ಬಂದದ್ದನ್ನು ತಾನು ಕಂಡೆ ಎಂದು ಹೇಳಿದ. ಇಲ್ಲಿ ಕಂಡವರು ಯಾರೂ ಇಲ್ಲ. ಗೋಪಾಲಯ್ಯ ಯಾವತ್ತೂ ಸರಸಿ, ಹಾಸ್ಯ ಪ್ರಿಯ; ಏನೂ ದುರ್ಭಾವನೆಯಿಲ್ಲದೆಯೆ ಸೀತೆಯ ಕೈ ಹಿಡಿದುಕೊಂಡಿರ ಬಹುದು. ಅಷ್ಟೇಯೋ, ಅಥವಾ....ವೆಂಕಟಸುಬ್ಬಯ್ಯನವರು ಎಲ್ಲವನ್ನೂ ಹೇಳಲು ಸಂಕೋಚಪಟ್ಟಿರಬಹುದು. ಎಷ್ಟೇ ಆದರೂ ನಾವು ಹೆಣ್ಣುಮಕ್ಕಳ ವಿಚಾರದಲ್ಲಿ ಉಪಾಧ್ಯಾಯರು ಎಷ್ಟು ಎಚ್ಚರಿಕೆ ವಹಿಸಿದರೂ ಕಡಮೆಯೇ. ವೆಂಕಟಸುಬ್ಬಯ್ಯನವರು ಹೇಳಿದ್ದು ನಿಜವೇ ಆದ ಭಾಗದಲ್ಲಿ, ಗೋಪಾಲಯ್ಯನ ವರ್ತನೆ ಖಂಡನೀಯ. ಅದರಲ್ಲಿಯೂ, ಮದುವೆಯಾದವನು ಹೀಗೆ ವರ್ತಿಸ ಬಾರದು. ಆದರೆ ವರ್ತಿಸಿರುವನಲ್ಲಾ? ಇದಕ್ಕೇನು ಕಾರಣ? ಅವನೊ ಬ್ಬನೇ ಹೊಣೆಯೆ? ಸೀತೆ ಮೇಲೆಬೀಳುವಂಥ ಹುಡುಗಿಯಲ್ಲ. ತರಗತಿಗಳಲ್ಲಿ ಅವಳು ತಲೆ ಕೂಡ ಎತ್ತುವುದಿಲ್ಲ. ಆದರೆ ಅವಳ ಚೆಲುವು? ಬ್ರಹ್ಮ ಅವಳನ್ನು ಹೀಗೆ ಸೃಷ್ಟಿಸಿ ಅವಳ ಹಣೆಯಲ್ಲಿ ಇಂಥ ದುರ್ಗತಿಯನ್ನೇಕೆ ಬರೆದ? ಚಿಕ್ಕ

ಹುಡುಗಿಯಾದರೂ—ಹದಿನಾಲ್ಕು ಹದಿನೈದು ಇರಬಹುದು ಅಂತ ಕಾಣುತ್ತೆ—ಪ್ರೌಢೆಯಂತೆ ಕಾಣುತ್ತಾಳೆ. ಅವಳ ಚೆಲುವು, ವಯಸ್ಸು, ವೈಧವ್ಯ—ಎಂಥ ಕಬ್ಬಿಣ ಹೃದಯದ ಗಂಡನ್ನಾದರೂ ಸೆಳೆಯುವ ಸೂಜಿಗಲ್ಲು. ತಾವು ವಯಸ್ಸಾದವರು; ಬಾಳಿನಲ್ಲಿ ಕಷ್ಟ ಸುಖ ಕಂಡವರು; ಸೀತೆಯನ್ನು ತಮ್ಮ ಮಗಳು ಎಂದು ತಿಳಿಯಲಾದೀತು. ಆದರೆ ಗೋಪಾಲಯ್ಯ? ಚಿಕ್ಕ ವಯಸ್ಸು; ಚೆಲುವ; ರಸಿಕ. ಒಳ್ಳೆಯವನೂ ಹೌದು. ಆದರೆ ಇಂಥ ವಿಚಾರಗಳಲ್ಲಿ, ಒಳ್ಳೆಯತನ—'ನಾನು ಮುಸುಕು ಹಾಕಿಕೊಂಡಿದ್ದೇನೆ, ನೀನು ಬೇಕಾದ್ದು ಮಾಡಿಕೋ'—ಎನ್ನುತ್ತದೆ. ವೆಂಕಟಸುಬ್ಬಯ್ಯನವರು ಹೇಳಿದ್ದು ನಿಜ ಇದ್ದರೂ ಇದ್ದೀತು. ಆದರೆ ಇದು ಸರಿಯಲ್ಲ; ಚಪಲಕ್ಕೆ ಕಡಿವಾಣ ಹಾಕ ಬೇಕು, ಆಸೆಯನ್ನು ಅಂಕೆಯಲ್ಲಿಟ್ಟುಕೊಳ್ಳಬೇಕು; ಗೋಪಾಲಯ್ಯನ ವರ್ತನೆ ಸರಿಯಲ್ಲ. ಸಹಜ ಎಂಬ ಕಾರಣದಿಂದ ಸರಿ ಎಂದು ಹೇಳುವುದು ತಪ್ಪು.

ಇಷ್ಟೆಲ್ಲ ಒಳತರ್ಕವಾದಮೇಲೆ, ನವರಾತ್ರಿಯ ರಜ ಮುಗಿಯುವವರೆಗೆ ಕಾದು ನೋಡೋಣ ಎಂಬ ತೀರ್ಮಾನಕ್ಕೆ ಬಂದರವರು.

ಸುಬ್ಬರಾಯರು ಬಹಳ ಕಾಲ 'ಕಾದು ನೋಡುವ' ಪ್ರಮೇಯ ಬೀಳ ಲಿಲ್ಲ. ಒಂದು ದಿನ, ರಾಮಯ್ಯಂಗಾರಿಯ ತಂದೆ ಕೃಷ್ಣಯ್ಯಂಗಾರ್ಯರು ಸುಬ್ಬ ರಾಯರನ್ನು ಹೊಳೆಯ ದಾರಿಯಲ್ಲಿ ಒಬ್ಬರೇ ಸಂಧಿಸಿದಾಗ, "ಏನೋ ಒಂದು ವರ್ತಮಾನ ಕೇಳಿದೆ. ಅದನ್ನ ನಿಮಗೆ ತಿಳಿಸಬೇಕಾದ್ದು ನನ್ನ ಕರ್ತವ್ಯ ಎಂದು ತೋರಿತು. ಆದನ್ನ ಊರ ಮಾತು ಮಾಡಲು ನನಗೆ ಇಷ್ಟವಿಲ್ಲ...." ಎಂದು ಒಂದೊಂದು ಮಾತನ್ನೂ ಅಗಿದು ಅಗಿದು ಹೇಳತೊಡಗಿದರು. ಅದು ಏನು ಸಮಾಚಾರ ಎಂಬುದು ಸುಬ್ಬರಾಯರಿಗೆ ಹೊಳೆಯದೆ ಹೋಗಲಿಲ್ಲ. ಆದರೂ "ಏನು?" ಎಂದು ಪ್ರಶ್ನಿಸಿದರು.

"ನಿಮ್ಮ ಮೇಷ್ಟ್ರು ಗೋಪಾಲಯ್ಯ ಹೆಣ್ಣುಮಕ್ಕಳ ವಿಚಾರದಲ್ಲಿ ಸ್ವಲ್ಪ ಸಲಿಗೆಯಿಂದ ನಡೆದುಕೊಳ್ಳುತ್ತಾರಂತೆ. ಹೀಗಾದರೆ, ನಮ್ಮ ಹೆಣ್ಣುಮಕ್ಕಳನ್ನ ಅದು ಹೇಗೆ ಸ್ಕೂಲಿಗೆ ಕಳಿಸುವುದು?"

"ಅಂಥಾದ್ದೇನೂ ನನ್ನ ಗಮನಕ್ಕೆ ಬಂದಿಲ್ಲವಲ್ಲ. ನನ್ನ ಈ ಊರಿನ ಸರ್ವಿಸ್ಸಿನಲ್ಲಿ ಇದೇ ಮೊದಲನೆಯ ದೂರು. ನೀವು ಸರಿಯಾದ ವಿವರಗಳ ನ್ನೊದಗಿಸಿದರೆ, ನಾನು ತನಿಖೆಮಾಡುತ್ತೇನೆ, ಅದಕ್ಕೇನು?"

"ದೇವರ ದಯದಿಂದ ಸ್ಕೂಲಿನಲ್ಲಿ ಅಂಥದ್ದೇನೂ ಆಗಿಲ್ಲ ಅನ್ನಿ. ಗೋಪಾಲಯ್ಯ ವೆಂಕಟಸುಬ್ಬಯ್ಯನವರ ಮನೆಯಲ್ಲಿ ಅವರ ಮಗಳಿಗೆ ಪಾಠ ಹೇಳುತ್ತಾರಂತೆ."

"ಹೌದು."

"ಏನೋ ಆ ಹುಡುಗಿಯೊಂದಿಗೆ ಸ್ವಲ್ಪ ಅಸಭ್ಯವಾಗಿ ನಡೆದುಕೊಂಡರು ಅಂತ ಕೇಳಿದೆ."

"ನಿಮಗೆ ಯಾರು ಹೇಳಿದರು ?"

"ನನ್ನ ಮಗ ಹೇಳಿದ."

"ಅವನಿಗೆ ಹೇಗೆ ಗೊತ್ತಾಯಿತು ?"

"ವೆಂಕಟಸುಬ್ಬಯ್ಯನವರ ಮಗ ರಾಮಸ್ವಾಮಿಯೇ ಹೇಳಿದನಂತೆ."

"ಅದಕ್ಕೇನು, ವೆಂಕಟಸುಬ್ಬಯ್ಯನವರಿಗೆ ಹೇಳಿ ಪಾಠ ಬಿಡಿಸಿಬಿಟ್ಟರಾಯಿತು. ಸ್ಕೂಲಿನಲ್ಲಿ ಅಂಥಾದ್ದೇನೂ ನಡೆಯುವಹಾಗಿಲ್ಲ. ಅದಕ್ಕೆ ನಾನು ಜವಾಬ್ದಾರ. ಸರಿ ತಾನೆ ?"

"ಅಷ್ಟಾದರೆ ಆಯಿತು."

"ಅಷ್ಟು ಮಾಡೋಣ. ನೀವು ಇವನ್ನ ಇನ್ನು ಯಾರಿಗೂ ಹೇಳಬೇಡಿ. ಪಾಪ, ಗೋಪಾಲಯ್ಯನಿಗೆ ಏನಾದರೂ ತೊಂದರೆಯಾದೀತು. ನಾನು ವಿಚಾರಿಸಿ ಎಲ್ಲ ಸರಿಪಡಿಸುತ್ತೇನೆ."

"ಇನ್ನು ಯಾರಿಗಾದರೂ ಹೇಳುವ ಹಾಗಿದ್ದರೆ, ನಾನು ನಿಮ್ಮಲ್ಲಿ ಪ್ರಸ್ತಾಪ ಮಾಡುತ್ತಲೇ ಇರಲಿಲ್ಲ."

"ಅದು ದಿಟ ಅನ್ನಿ."

ಒಬ್ಬರು ಹೊಳೆಯ ಕಡೆಗೆ ಹೊರಟರು ; ಇನ್ನೊಬ್ಬರು ಮನೆಯ ಕಡೆಗೆ ಬಂದರು.

ತಮಗೆ ವೆಂಕಟಸುಬ್ಬಯ್ಯನವರು ಈ ಸಂಗತಿ ತಿಳಿಸಿದಂತೆ, ರಾಮಸ್ವಾಮಿ ತನ್ನ ಸ್ನೇಹಿತರಿಗೆ ಹೇಳಿಬಿಟ್ಟಿದ್ದಾನೆ ಎಂದು ಸುಬ್ಬರಾಯರು ಊಹಿಸಿದರು. ವಾಸ್ತವವಾಗಿ ರಾಮಸ್ವಾಮಿಗೆ ಇದೊಂದೂ ಗೊತ್ತಿಲ್ಲ. ಪುಟ್ಟಣ್ಣಯ್ಯ ಒಂದು ದಿನ ಮತ್ತೆ ಗೋಪಾಲಯ್ಯನನ್ನು ಸಂಧಿಸಿದಾಗ—"ಏನು ಗೋಪಾಲಯ್ಯ, ನೀವು ಇನ್ನೂ ಪಾಠಕ್ಕೆ ಹೋಗುತ್ತ ಇರುವಹಾಗೆ ಕಾಣುತ್ತೆ. ಪಾಠದಲ್ಲಿ

ತುಂಬ ಮುತುವರ್ಜಿ ವಹಿಸುತ್ತಿರಬೇಕಲ್ಲವೆ? ಸ್ವಾರಸ್ಯ ಇರುವ ಪಾಠವನ್ನ ಯಾಕಪ್ಪ ಬಿಡುತ್ತೀರಿ? ಸಿಕ್ಕಿದ್ದು ಸೀರುಂಡೆ. ಬಿಡಬೇಡಿ, ಬಿಡಬೇಡಿ. ಆವೊತ್ತು ನಾನು ಸುಮ್ಮನೆ ಹಾಗೆ ಹೇಳಿದೆ, ಅಷ್ಟೆ" ಎಂದು ನಗತೊಡಗಿದರು. "ನೀವು ಅನುಭವಸ್ಥರು. ನಿಮ್ಮಷ್ಟು ಧೈರ್ಯ ನನಗಿಲ್ಲವಲ್ಲ" ಎಂದು ಗೋಪಾಲಯ್ಯನೂ ನಕ್ಕನು. "ಇರುವಷ್ಟು ಧೈರ್ಯ ಉಪಯೋಗಿಸಿದಿರೋ ಇಲ್ಲವೋ?" ಎಂದು ಪುಟ್ಟಣ್ಣಯ್ಯ ಕೇಳಿ, ವ್ಯಂಗ್ಯ ನಗೆ ನಕ್ಕನು. ಗೋಪಾಲಯ್ಯ ಏನೂ ಬಾಯಿಬಿಟ್ಟು ಹೇಳದೆ, ನಗೆಗೆ ನಗೆಯ ಉತ್ತರವನ್ನೇ ಕೊಟ್ಟನು. ಪುಟ್ಟಣ್ಣಯ್ಯನಿಗೆ ಅಷ್ಟು ಸೂಚನೆಯೆ ಸಾಕಾಯಿತು. ಕಾಸಿಗಾಗಿ ಸದಾ ತೆರೆದ ರಾಮಸ್ವಾಮಿಯ ಕೈ ಬೆಚ್ಚಗೆ ಮಾಡಿ, ಗೋಪಾಲಯ್ಯನ ಮೇಲೆ ದೂರುಹೇಳಿದನು. "ಇರಲಿ, ಈ ಗೋಪಾಲಯ್ಯನನ್ನ ನೋಡಿಕೊಳ್ಳುತ್ತೇನೆ—" ಎಂದು ರಾಮಸ್ವಾಮಿ ತನ್ನ ಗೆಳೆಯರಿಗೆ ಈ ಸಂಗತಿಯನ್ನು ತಿಳಿಸಿದ್ದನು. ರಾಮಯ್ಯಂಗಾರಿಯಿಂದ ಸುಬ್ಬರಾಯರಿಗೆ ವರ್ತಮಾನ ಮುಟ್ಟಿದ್ದು ಹೀಗೆ. ಪುಟ್ಟಣ್ಣಯ್ಯನ ಕೈವಾಡವನ್ನು ಅವರು ಅರಿಯರು. ಏನಾದರೂ ಆಗಲಿ, ಸುದ್ದಿಯಲ್ಲಿ ನಿಜಾಂಶ ಇರಲಿ ಇಲ್ಲದಿರಲಿ, ತಾವು ತಕ್ಕ ಕಾರ್ಯಕ್ರಮ ಕೈಗೊಳ್ಳದೆ ಹೋದರೆ ಗೋಪಾಲಯ್ಯನ ಹೆಸರು ಕೆಟ್ಟು ಅದರ ಸೆಕೆ ತಮ್ಮನ್ನೂ ಸೋಕುವುದರಲ್ಲಿ ಸಂಶಯವಿಲ್ಲವೆಂದುಕೊಂಡರು. ಮೊದಲು ಗೋಪಾಲಯ್ಯನನ್ನು ಪಾಠದಿಂದಲೇ ಉಪಾಯವಾಗಿ ಬಿಡಿಸಿಬಿಡಬೇಕೆಂದು ತೀರ್ಮಾನಿಸಿದರು.

ಎರಡು ಮೂರು ದಿನ ಬಿಟ್ಟುಕೊಂಡು, ಸುಬ್ಬರಾಯರು ವೆಂಕಟಸುಬ್ಬಯ್ಯನವರನ್ನು ಕಂಡರು. ತಾವು ಕೃಷ್ಣಯ್ಯಂಗಾರ್ಯರಿಂದ ಕೇಳಿದ ಸಮಾಚಾರವನ್ನು ತಿಳಿಸಿ, ಸಂದರ್ಭವನ್ನು ವಿವರಿಸಿ—

"ವೆಂಕಟಸುಬ್ಬಯ್ಯನವರೇ, ಈ ವಿಷಯ ಜನದ ಬಾಯಿಗೆ ಬೀಳುವುದಕ್ಕೆ ಮೊದಲೇ ಏನಾದರೂ ಮಾಡಬೇಕಲ್ಲ!" ಎಂದರು.

"ನಾನೂ ಅದೇ ವಿಷಯ ಯೋಚಿಸುತ್ತಾ ಇದ್ದೆ. ಅಷ್ಟು ಹೊತ್ತಿಗೆ ಸರಿಯಾಗಿ ನೀವು ಬಂದಿರಿ. ಇದೇ ತಾನೇ ಮೈಸೂರಿನಿಂದ ನನ್ನ ಅಳಿಯ ಕಾಗದ ಬರೆದಿದ್ದಾನೆ. ನನ್ನ ಹಿರಿಯ ಮಗಳ ಬಾಣಂತನ ಆಗಬೇಕು. ಅವಳ ನೆರವಿಗೆ ಸೀತೆಯನ್ನ ಕಳಿಸಲು ಒಪ್ಪಿದರೆ, ನವರಾತ್ರಿ ರಜದಲ್ಲಿ ನಾನೇ ಬಂದು ಕರೆದುಕೊಂಡು ಹೋಗುತ್ತೀನಿ ಅಂತ ಬರೆದಿದ್ದಾನೆ. ಸೀತೆಯನ್ನೆ ಮೈಸೂರಿಗೆ

ಕಳಿಸಿಬಿಟ್ಟರೆ ಗೋಪಾಲಯ್ಯನವರನ್ನ ನಾವು ಬಿಡಿಸಬೇಕಾದ ಪ್ರಮೇಯವೇ ಇರುವುದಿಲ್ಲ. ಅದೇ ಒಳ್ಳೆಯದಲ್ಲವೆ?" ಎಂದು ವೆಂಕಟಸುಬ್ಬಯ್ಯನವರು ಸುಬ್ಬರಾಯರ ಸಲಹೆಯನ್ನು ಕೇಳಿದರು.

ಸುಬ್ಬರಾಯರ ತಲೆಯ ಮೇಲಿಂದ ದೊಡ್ಡ ಭಾರವನ್ನು ಇಳುಹಿದಂತೆ ಆಯಿತು. ಸಮ್ಮತಿಗೊಂಡು ನುಡಿದರು :

"ದೇವರೇ ನಮಗೆ ದಾರಿ ತೋರಿಸಿದ ಹಾಗಾಯಿತು. ಅಲ್ಲದೆ, ನಿಮ್ಮ ಹಿರಿಮಗಳ ಕಷ್ಟಕ್ಕೆ ಆಗಬೇಕಾದ್ದು ಕರ್ತವ್ಯವೇ. ಅಂದರೆ, ಒಂದೇ ಕೊರತೆ."

"ಏನು?"

"ಸೀತಮ್ಮನ ವಿದ್ಯಾಭ್ಯಾಸ ಅರ್ಧಾಂತರವಾಗುತ್ತದೆಯಲ್ಲಾ ಅಂತ ನನ್ನ ವ್ಯಥೆ, ಅಷ್ಟೆ."

"ಅದಕ್ಕೇನೂ ಯೋಚನೆಯಿಲ್ಲ. ನನ್ನ ಅಳಿಯ ರಂಗಸ್ವಾಮಿಯೂ ಸ್ಕೂಲು ಮೇಷ್ಟ್ರು ತಾನೆ. ಪಾಠ ಹೇಳಿಕೊಟ್ಟು ಪರೀಕ್ಷೆಗೂ ಕಟ್ಟಿಸುತ್ತೀನಿ ಅಂತ ಇಲ್ಲಿ ಬಂದಾಗಲೇ ಹೇಳಿದ್ದ. ಹಾಗೆ ಮಾಡಬಹುದಲ್ಲ?"

"ಹಾಗಿದ್ದರೆ ಬಾಧಕವಿಲ್ಲ. ರೊಟ್ಟಿ ಜಾರಿ ತುಪ್ಪಕ್ಕೆ ಬಿದ್ದಹಾಗಾಯಿತು—" ಸುಬ್ಬರಾಯರು ಹಗುರಗೊಂಡ ಮನಸ್ಸಿನಿಂದ ಹಿಂದಿರುಗಿದರು.

ರಾಮಸ್ವಾಮಿಯ ರೊಟ್ಟಿಯಂತೂ ಜಾರಿ ತುಪ್ಪಕ್ಕೇ ಬಿದ್ದಿತು. ಮನೆಯಲ್ಲಿ ರಂಗಸ್ವಾಮಿಯ ಕಾಗದದ ಪ್ರಸ್ತಾಪವೆದ್ದಾಗ, "ಪಾಪ, ಭಾವಯ್ಯ ಯಾಕೆ ತೊಂದರೆ ತೆಗೆದುಕೊಳ್ಳಬೇಕು? ನಾನೇ ಸೀತೆಯನ್ನ ಕರೆದುಕೊಂಡು ಹೋಗಿ ಬಿಟ್ಟುಬರುತ್ತೇನೆ. ಸೀತೆಯೂ ನವರಾತ್ರಿಯ ನೋಟ ನೋಡಿದ ಹಾಗೆ ಆಗುತ್ತೆ, ಹಬ್ಬಕ್ಕೆ ಮುಂಚೆಯೇ ಹೊರಟು ಬಿಡುವುದು" ಎಂದು ರಾಮಸ್ವಾಮಿ ಮುಂದೆ ಬಂದ. ಈಚೆಗೆ ಯಾವ ಕಾರ್ಯಕ್ಕೂ ಅವನು ಹೀಗೆ ಮುಂದಾದುದನ್ನು ತಂದೆ ತಾಯಿ ಕಂಡಿರಲಿಲ್ಲ. "ಹಾಗೆ ಮಾಡು. ಆದರೆ ಅಪರ ಪಕ್ಷದಲ್ಲಿ ಹೋಗುವುದು ಬೇಡ. ಪಾಡ್ಯ ಮಾಡಿಕೊಂಡು ಹೊರಟರಾಯಿತು" ಎಂದು ಪಾರ್ವತಮ್ಮನವರು ಸಮ್ಮತಿಸಿದರು. ವೆಂಕಟಸುಬ್ಬಯ್ಯನವರೂ ಹಾಗೆಯೇ ತೀರ್ಮಾನಿಸಿ, ಸೀತೆಯ ಪ್ರಯಾಣದ ವಿಷಯವನ್ನು ರಂಗಸ್ವಾಮಿಗೆ ತಿಳಿಸಿ ಕಾಗದ ಬರೆದು ಹಾಕಿದರು.

೩

ಪುಟ್ಟಣ್ಣಯ್ಯನ ಪ್ರತೀಕಾರ ಛಲ ಹವಣು ತಪ್ಪಿತು; ಅವನು ಬಿಟ್ಟ ಹೂಬಾಣ ಗುರಿತಪ್ಪಿತು. ರಾಮಸ್ವಾಮಿಯೊಂದಿಗೆ ಸೀತೆಯೂ ಪ್ರಯಾಣ ಮಾಡಿದ ಸುದ್ದಿ ಅವನಿಗೆ ತಿಳಿಯದೆ ಹೋಗಲಿಲ್ಲ. ಆಗ ಅವನು, ಸುಬ್ಬ ರಾಯರು ತಮ್ಮ ಸ್ಥಾನದಲ್ಲಿ ಸುಸ್ಥಿರರೆಂಬುದನ್ನು ಅರಿತು, ತುಂಬ ವ್ಯಥೆ ಗೊಂಡನು. ಗೋಪಾಲಯ್ಯನ ಮೇಲೆ ಇಲ್ಲದ ದೂರು ಹಬ್ಬಿ, ತನ್ನ ದೆಸೆಯಿಂದ ಅವನಿಗೆ ಏನು ಕೆಡಕು ಕಾದಿದೆಯೋ ಎಂದು ಮರುಗಿದನು. ಅವನಿಗೇ ಆಗಲಿ ಉಳಿದವರಿಗೇ ಆಗಲಿ, ಏನೇನು ಸಂಭವಿಸುವುದೆಂಬುದನ್ನು ಕಾಣಲು ಅವನು ಕೊಳಲೂರಿನಲ್ಲಿ ಉಳಿದಿರುವ ಹಾಗಿರಲಿಲ್ಲ. ಏಕೆಂದರೆ, ಸೀತೆ ಊರು ಬಿಟ್ಟ ಎರಡು ಮೂರು ದಿನಗಳಲ್ಲಿ ಪುಟ್ಟಣ್ಣಯ್ಯನಿಗೆ ವರ್ಗದ 'ಆರ್ಡರ್' ಬಂದಿತ್ತು. ಇದನ್ನು ಕೇಳಿ ಸಂತೋಷಪಡಲು ಸೀತೆ ಊರಿನಲ್ಲಿರಲಿಲ್ಲ. ಸುಬ್ಬಾಭಟ್ಟನ ಗೆಲವಿನ ಹರ್ಷಕ್ಕೆ ಪಾರವೇ ಇರಲಿಲ್ಲ.

ಬಹುದಿನದ ಬಯಕೆಯಾದ ಮೈಸೂರಿನ ಪ್ರಯಾಣ ರಾಮಸ್ವಾಮಿಗೆ ಅಪ್ರಯತ್ನವಾಗಿ ದೊರಕಿತ್ತು. ಈ ಸುದ್ದಿಯನ್ನು ಅವನು ತನ್ನ ಮಿತ್ರವೃಂದ ದಲ್ಲಿ ಬಹಳ ಹಿಗ್ಗಿನಿಂದ ಸಾರಿದನು: "ನೋಡು, ಕರಿಯಣ್ಣ; ರೈಲು ಖರ್ಚು ನಮ್ಮ ತಂದೆಯೇ ಕೊಡುತ್ತಾರೆ. ಇರುವುದಕ್ಕೆ ಭಾವನ ಮನೆ ಇದೆ, ಚಿಕ್ಕಮ್ಮನ ಮನೆ ಇದೆ. ನನ್ನ ದುಡ್ಡಿನ ಪ್ರಶ್ನೆ ಬಗೆಹರಿದಹಾಗೆ. ನನ್ನ ಮೇಲುಖರ್ಚನ್ನು ನೀನು ನೋಡಿಕೊಂಡುಬಿಡು" ಎಂದು ರಾಮಸ್ವಾಮಿ ಸೂಚಿಸಿದಾಗ, ಉತ್ಸಾ ಹದ ಭರದಲ್ಲಿ ಕರಿಯಣ್ಣ ಒಪ್ಪಿಕೊಂಡುಬಿಟ್ಟ. "ಅಗಸರ ರಾಮಿಯನ್ನು ಬಿಟ್ಟು ಹೋಗುತ್ತೀಯೇನೋ, ಮೈಸೂರಿಗೆ?" ಎಂದು ಹಂಗಿಸುವ ಧ್ವನಿಯಲ್ಲಿ ರಾಮಯ್ಯಂಗಾರಿ ನಗುತ್ತ ಪ್ರಶ್ನಿಸಿದ. "ಇನ್ನು ಬಿಟ್ಟು ಹೋಗೋದೆಲ್ಲಿ ಬಂತು. ಸಾಯೋತನಕ ಅವಳು ಇವರ ಕೈಹಿಡಿದವಳೆ" ಎಂದು ಕರಿಯಣ್ಣ ನಕ್ಕ. "ನನ್ನ ಕೈಹಿಡಿದಿಲ್ಲಪ್ಪ ಅವಳು, ನನ್ನ ಬೆನ್ನು ಹತ್ತಿವಳೆ!" ಎಂದು ಹುಸೇನಿ ಹಲ್ಲುಕಿರಿದ. "ಏನ್ರೋ ಇದು! ನನಗೇ ಅರ್ಥವಾಗದ ಹಾಗೆ ಮಾತಾಡ್ತೀರಿ" ಎಂದು ರಾಮಯ್ಯಂಗಾರಿ ಅಚ್ಚರಿಯಿಂದ ಬಾಯಿಬಿಟ್ಟ. "ನಿಂದೂಕೆ ಕೈ ತೋರ್ಸೊ, ನೋಡ್ಲಿ" ಎಂದ ಹುಸೇನಿ, ಹಿಗ್ಗಿನಿಂದ. ರಾಮಸ್ವಾಮಿ ತನ್ನ ಜುಬ್ಬದ ತೋಳನ್ನು ಮುದುರಿ ಕೈನೀಡಿದ; ಎಡಗೈಯ ಮುಂದೋಳಿನ ಒಳ

ಭಾಗದ ಮೇಲೆ 'ರಾಮಿ' ಎಂದು ಕನ್ನಡದ ಅಕ್ಷರಗಳಲ್ಲಿ ಹಚ್ಚೆ ಹುಯ್ದಿತ್ತು. "ನಿಮ್ಮ ತಂದೆಯೋ ತಾಯೋ ಕಂಡರೆ ಏನು ಮಾಡ್ತೀಯೋ?" ಎಂದು ರಾಮಯ್ಯಂಗಾರಿ ಪ್ರಶ್ನಿಸಿದ. "ಕಂಡೂ ಆಯಿತು ಕೇಳಿಯೂ ಆಯಿತು—" "ನೀನೇನು ಹೇಳಿದೆ?—" "ಮ ತಲೆಕೊಟ್ಟು ಮರೆತು ಬಿಟ್ಟಳು ಹಚ್ಚೆ ಹುಯ್ಯೋಳು. ನನ್ನ ಹೆಸರೇ ಎಂದೆ." ಎಲ್ಲರೂ ನಕ್ಕರು. ರಾಮಿ ಹುಸೇನಿಯ ಬೆನ್ನೇರಿರುವುದರ ಸಂಕೇತಾರ್ಥ ರಾಮಯ್ಯಂಗಾರಿಗೆ ಆಗ ಅರ್ಥವಾಯಿತು. "ನೀನು ಹಾಕಿಸಿಕೊಳ್ಳಲಿಲ್ಲವೇನೋ?" ಎಂದು ಅವನು ಕರಿಯಣ್ಣನನ್ನು ಪ್ರಶ್ನಿಸಿದನು. "ಅವನ ಮೈಮೇಲೆ ಇನ್ನೊಬ್ಬಳು ಹೆಣ್ಣಿನ ಹೆಸರು ಕಂಡರೆ ಕಮಲಮ್ಮ ಅವನ ಕಣ್ಣು ಕಿತ್ತುಬಿಡುತ್ತಾಳೆ" ಎಂದು ರಾಮಸ್ವಾಮಿ ಟೀಕಿಸಿದ. "ಅಂತೂ ಒಬ್ಬಳಿಗೆ ನೀವು ಮೂರು ಜನ ಮುತ್ತುಕೊಂಡಿದ್ದೀರ; ಮಣ್ಣು ಮುಕ್ಕುತೀರಿ, ನನಗೆ ಗೊತ್ತು" ಎಂದು ರಾಮಯ್ಯಂಗಾರಿ ಎಚ್ಚರಿಕೆ ಕೊಡುವ ರೀತಿಯಲ್ಲಿ ನುಡಿದ. "ಮೂವರಲ್ಲ ಕಣೊ, ನಾಲ್ವರು. ಅವಳನ್ನ ಬೇಲೂರ್ನಿಂದ ಹೊಡಕೊಂಡು ಬಂದ ತಿಮ್ಮಯ್ಯ ಎಲ್ಲಿಗೆ ಹೋಗಬೇಕು?" ಎಂದು ಹುಸೇನಿ ರಾಮಯ್ಯಂಗಾರಿಯನ್ನು ತಿದ್ದಿದ. "ಹಾಗಾದರೆ ಅವಳು ನಮ್ಮೂರಿನವಳೆ ಆದಹಾಗಾಯಿತು. ಅವನೂ ಅಗಸರವನೋ ಹೇಗೆ" ಎಂದು ರಾಮಯ್ಯಂಗಾರಿ ಪ್ರಶ್ನಿಸಿದನು. "ಅವನು ಅಗಸರೋನೋ ಕುಂಬಾರರವನೋ, ಯಾರಿಗೆ ಗೊತ್ತು? ಅವಳಂತೂ ಅಗಸರೋಳು. ಮೂರು ಕತ್ತೇನೂ ಹೊಡಕೊಂಡು ಬಂದಿದಾಳೆ, ಜೊತೆಗೆ" ಎಂದ ಹುಸೇನಿ. "ಸರಿ, ಹಾಗಾದರೆ. ನಿಮ್ಮ ಮೂವರನ್ನೂ ಕತ್ತೇಮೇಲೆ ಕೂರಿಸಿ ಮೆರವಣಿಗೆ ಮಾಡಿಬಿಡುತ್ತಾಳೆ" ಎಂದು ರಾಮಸ್ವಾಮಿ ಹಾಸ್ಯಮಾಡಿದ. "ಅದೆಲ್ಲಾ ಇರಲಿ, ಈಗ ನೀನು ಮೈಸೂರಿಗೆ ಬರುತ್ತೀಯೋ ಇಲ್ಲವೋ?" ಎಂದು ರಾಮಸ್ವಾಮಿ ಕೇಳಿದ. "ಈ ಊರ್ನಲ್ಲಿ ಕತ್ತೆ ಕಾಯೋದು ಬಿಟ್ಟು ಅವನೆಲ್ಲಿ ಬರ್ತಾನೆ" ಎಂದು ಹುಸೇನಿ ನಕ್ಕ. "ನೀನೂ ನನ್ನ ಜೊತೆಗೇ ಇರುತ್ತೀಯಲ್ಲೋ" ಎಂದು ರಾಮಯ್ಯಂಗಾರಿಯೂ ಪ್ರತಿಯಾಗಿ ನಕ್ಕ. ಅಂತೂ, ಇವರ ಸರಸ ಯಾವಾಗಲೂ ವಿರಸದಲ್ಲಿ ಕೊನೆಗಂಡದ್ದಿಲ್ಲ.

ರಾಮಸ್ವಾಮಿಯೊಂದಿಗೆ ಕರಿಯಣ್ಣನೂ ಮೈಸೂರಿಗೆ ಪ್ರಯಾಣ ಮಾಡುವ ನಿಶ್ಚಯವಾಯಿತು. ವೆಂಕಟಸುಬ್ಬಯ್ಯನವರ ಮನೆಯಲ್ಲಿ ಮಾತ್ರ

ಯಾರಿಗೂ ಈ ಸಂಗತಿ ತಿಳಿಯದು.

ಸೀತೆ ರಾಮಸ್ವಾಮಿಯೊಂದಿಗೆ ಮೈಸೂರಿಗೆ ಪ್ರಯಾಣಮಾಡಿದ ಸನ್ನಿವೇಶ ಪಾರ್ವತಮ್ಮನವರ ಮನಸ್ಸಿಗೆ ಏನೇನೂ ಸಂತೋಷವುಂಟುಮಾಡಲಿಲ್ಲ. 'ಎಲ್ಲಾ ಚೆನ್ನಾಗಿದ್ದರೆ ಈ ಹೊತ್ತಿಗೆ ಇವಳನ್ನ ಗಂಡನ ಮನೆಗೆ ಕಳಿಸಿಕೊಡಬೇಕಾಗಿತ್ತು. ಇನ್ನೊಬ್ಬರ ಬಾಣಂತನಕ್ಕೆ ಹೋಗುತ್ತಾ ಇದಾಳೆ. ಇನ್ನು ಇವಳ ಬಾಣಂತನ ಮುಂದಿನ ಜನ್ಮದಲ್ಲಿ ಅಂತ ಕಾಣುತ್ತೆ' ಎಂದು ಅವರು ಒಳಗೊಳಗೇ ಕೊರಗಿದರು. ಆದರೆ ಕೊರಗನ್ನು ಹೊರಕ್ಕೆ ತೋರಗೊಡದೆ, ಸೀತೆಯು ಪ್ರಯಾಣದ ದಾರಿಯ ತಿಂಡಿಗೆ, ಹಾಗೂ ಬಸುರಿಯಾದ ಮಗಳಿಗೆ ಎಂದು ಕೋಡಬಳೆ, ರವೆ ಉಂಡೆ, ಹುರಿಗಾಳು, ಹುರುಕಲು, ಪುಳ್ಳಂಗಾಯುಂಡೆ ಎಲ್ಲವನ್ನೂ ಒಂದು ದೊಡ್ಡ ಬುಟ್ಟಿಯ ತುಂಬ ಮಾಡಿದರು. ಜೊತೆಯಲ್ಲಿ ತಮ್ಮ ತಂಗಿಯ ಮನೆಗೆ ಎರಡು ಪಿಂಡಿ ಹಚ್ಚಿದ ಮುತ್ತುಗದ ಎಲೆ, ಒಂದು ಚೀಲದ ತುಂಬ ಯಾಲಕ್ಕಿಕಾಯಿ, ಒಂದು ಮಣದಷ್ಟು ಹುಣಿಸೆಹಣ್ಣು—ಇವನ್ನೆಲ್ಲ ಸಿದ್ಧಗೊಳಿಸಿದರು. ಪಯಣ ಹೊರಡುವ ಮುನ್ನ ಮಗಳು ಸುಖವಾಗಿ ಹಿಂದಿರುಗಲಿ ಎಂದು ಮನಸ್ಸಿನಲ್ಲೆ ಹರಸಿದರು. ವೆಂಕಟಸುಬ್ಬಯ್ಯನವರು ಸೀತೆಯನ್ನು ಸುರಕ್ಷಿತವಾಗಿ ಕರೆದುಕೊಂಡು ಹೋಗಬೇಕೆಂದು ಅನೇಕ ವೇಳೆ ಎಚ್ಚರಿಸಿ "ಶಾಮಣ್ಣನವರಿಗೆ ಮೈಸೂರಿಗೆ ವರ್ಗವಾಗಿದೆಯಂತೆ; ಕಾಗದ ಬರೆದಿದಾರೆ. ಜೀವನಾಂಶದ ವಿಚಾರ ಏನಾದರೂ ಅವರಿಗೆ ಕಾಗದ ಬಂದಿದೆಯೇ ವಿಚಾರಿಸು. ನಮಗೆ ಏನೂ ಬಂದಿಲ್ಲ ಅಂತ ತಿಳಿಸು. ಚಿಕ್ಕಮ್ಮನ ಮನೆಗೆ ಕೊಡಬೇಕಾದ ಸಾಮಾನನ್ನು ತಲಪಿಸಿ, ಅಲ್ಲೂ ಒಂದೆರಡು ದಿನ ಇರು...." ಎಂದು ಹೇಳಬೇಕಾದ್ದನ್ನೆಲ್ಲ ಹೇಳಿದರು. ಶಾಮಣ್ಣನವರ ಮನೆಯ ವಿಳಾಸವನ್ನು ಒಂದು ಚೀಟಿಯಲ್ಲಿ ಗುರುತು ಹಾಕಿಕೊಟ್ಟರು.

ಬಸ್ಸು ಮನೆಯ ಬಾಗಿಲಿಗೇ ಬರುವ ಏರ್ಪಾಡಾಗಿತ್ತು. ರಾಮಸ್ವಾಮಿ ಸೀತೆ ಇಬ್ಬರೂ ಬಸ್ಸು ಹತ್ತಿದರು. ಇವರ ಪ್ರಯಾಣದ ಸಂಗತಿ ಬೀದಿಯವರಿಗೆ ತಿಳಿದದ್ದು ಆಗಲೇ.

ಬಸ್ಸು ಪೇಟೆಯ ಬೀದಿಯಲ್ಲಿ ಹಾದುಹೋದಾಗ ರಾಮಪ್ಪನವರ ಅಂಗಡಿಯ ಮುಂದೆ ನಿಂತಿತು. ಕರಿಯಣ್ಣನೂ ಬಸ್ಸು ಹತ್ತಿದನು.

ಕರಿಯಣ್ಣ ಸೀತೆಯನ್ನು ಹಿಂದೆ ಕೆಲವು ಸಲ ದೂರದಿಂದ ಕಂಡಿದ್ದ

ನಾದರೂ, ಈಗಿನಂತೆ ಹತ್ತಿರದಲ್ಲಿ ನೋಡುವ ಅವಕಾಶ ಎಂದೂ ದೊರಕಿರಲಿಲ್ಲ. ಸೀತೆಯ ಬಗೆಗೆ ಕೆಟ್ಟ ಮಾತು ಅವನ ಕಿವಿಗೂ ಬಿದ್ದಿತ್ತಷ್ಟೆ. ಆದ್ದರಿಂದ ಈಗ ಅವನು ಅವಳನ್ನು ನಟ್ಟ ದೃಷ್ಟಿಯಿಂದ ನೋಡುವ ಸ್ವಾತಂತ್ರ್ಯವಹಿಸಲು ಹಿಂದೆ ಮುಂದೆ ನೋಡಲಿಲ್ಲ. ಅವನ ಮನಸ್ಸು ಅವನಿಗೆ ಈ ವರೆಗೆ ಭೋಗ ಭಾಗ್ಯವನ್ನು ಒದಗಿಸಿದ್ದ ದೊಂಬರ ಚೆನ್ನಿ, ಕಮಲಮ್ಮ, ಅಗಸರ ರಾಮಿ—ಇವರ ಚೆಲುವಿನೊಂದಿಗೆ ಸೀತೆಯ ಚೆಲುವನ್ನು ಪಕ್ಕದಲ್ಲಿಟ್ಟು ತಾರತಮ್ಯದೃಷ್ಟಿಯಿಂದ ಮೆಚ್ಚತೊಡಗಿತು. ದೊಂಬರ ಚೆನ್ನಿ ದೊಂಬರ ಚೆನ್ನಿಯೇ; ಕಾಡಿನ ಹಕ್ಕಿ; ಹಿಡಿದವರ ಬೇಟೆ. ಕಮಲಮ್ಮ ರಾಮಪ್ಪನವರು ಒಲಿದ ಮೂವತ್ತಾರು ಪ್ರಾಯಮೀರಿದ ಹೆಂಗಸು. ಸುಂದರಿಯಾದರೂ ತನಗೆ ಈಡಲ್ಲ. ಈ ಮೂವರಲ್ಲಿ ಅಗಸರ ರಾಮಿಯೇ ಮೇಲೆನಿಸಿತು. ಆದರೆ ಸೀತೆಯೊಂದಿಗೆ ಹೋಲಿಸಿದರೆ —ಅವಳೆಲ್ಲಿ, ಇವಳೆಲ್ಲಿ? ಅವಳು ಕಣಿಗಿಲೆ ಹೂ; ಇವಳು ದುಂಡುಮಲ್ಲಿಗೆ. ಆದರೂ ವೆಂಕಟಸುಬ್ಬಯ್ಯನವರ ಮಗಳು, ರಾಮಸ್ವಾಮಿಯ ತಂಗಿ ಎಂಬ ಕಾರಣದಿಂದಲೋ ಏನೋ 'ಇವಳನ್ನ ಬಯಸೋದು ಬೇಡ. ಬರುವಷ್ಟು ವಾಸನೆ ಸಾಕು' ಎಂದು ಮನಸ್ಸಿನ ಒಂದು ಒಳ್ಳೆಯ ಭಾಗ ನುಡಿಯಿತು. ಇದು ಬಸ್ಸಿನಲ್ಲಿ.

ಪಾಡ್ಯದಿಂದಲೇ ಮೊದಲಾಗಿತ್ತು ರೈಲಿನ ನವರಾತ್ರಿ ನೂಕುನುಗ್ಗಲಾಟ. ಸೀತೆಯನ್ನು ಹೆಂಗಸರ ಗಾಡಿಯಲ್ಲಿ ಕೂರಿಸಬಹುದಾಗಿದ್ದಿತು. ಆದರೆ ರಾಮಸ್ವಾಮಿಗೆ ಅದು ಹೊಳೆಯಲಿಲ್ಲ. ಮೊದಲು ಬಲಿಷ್ಠನಾದ ಕರಿಯಣ್ಣ ಯಾವುದೊ ಒಂದು ಗಾಡಿಗೆ ನುಗ್ಗಿ ತನ್ನೊಬ್ಬನಿಗೆ ಎಡೆಮಾಡಿಕೊಂಡು ಕುಳಿತ. ಅನಂತರ ರಾಮಸ್ವಾಮಿ ಕಿಟಕಿಯಿಂದಲೇ ಸಾಮಾನುಗಳನ್ನೆಲ್ಲ ಅವನ ಕೈಗೆ ಕೊಟ್ಟು ಒಳಕ್ಕೆ ಸಾಗಿಸಿದ; ಅನಂತರ ಬಹು ಕಷ್ಟಪಟ್ಟು ಸೀತೆಯನ್ನೂ ಹತ್ತಿಸಿ, ತಾನೂ ಹತ್ತಿದ; ಕುಳಿತುಕೊಳ್ಳುವುದಿರಲಿ, ನಿಲ್ಲಲೂ ಎಡೆಯಿರಲಿಲ್ಲ. ಕರಿಯಣ್ಣ ಕುಳಿತಿದ್ದ ಎಡೆಯೊತ್ತಿಗೆ ಇಬ್ಬರೂ ಸರಿದು ನಿಂತರು. ರೈಲು ಹೊರಡುವ ವರೆಗೂ ನಿಂತೇ ಇದ್ದರು. ರೈಲು ಹೊರಟಮೇಲೆ, ಕರಿಯಣ್ಣ ಪಕ್ಕದಲ್ಲಿದ್ದವರನ್ನು ಸರಿಸಿ, ತಾನೂ ಒತ್ತಿಕೊಂಡು, "ಬಾ ಸೀತಮ್ಮ, ಕುಳಿತುಕೋ" ಎಂದು ಕರೆದ. 'ಬಯಸೋದು ಬೇಡ' ಎಂದಿದ್ದ ಆ ಮನಸ್ಸಿನ ಭಾಗ ಈಗ ಹುದುಗಿ ಅಡಗಿತ್ತು. ಸೀತೆಯ ಸಾಮೀಪ್ಯವನ್ನು ಬಯಸಲು ಸಿದ್ಧನಾಗಿದ್ದ

ರಾಮಣ್ಣ. ಆದರೆ ಸೀತೆ ಹೋಗಿ ಕುಳಿತುಕೊಳ್ಳಲಿಲ್ಲ. " ನೀನು ಕೂತುಕೊ, ರಾಮಣ್ಣ. ನಾನು ನಿಂತಿರುತೀನಿ, ಪರವಾಯಿಲ್ಲ" ಎಂದು ಸೀತೆ ಹೇಳಿದಾಗ, ತನ್ನ ಪಕ್ಕದಲ್ಲಿ ಕೂರಲು ಅವಳಿಗೆ ಇಷ್ಟವಿಲ್ಲ ಎಂದು ಕರಿಯಣ್ಣ ಅರಿತನು. ಅವನಿಗೆ ತಟ್ಟನೆ ಊರಿನ ಆಡಿಕೆಯ ವಿಚಾರ ನೆನಪಾಯಿತು. ' ಇದು ಗಂಡಿಗೆ ಸೋಲುವ ಜಾತಿಯಲ್ಲ' ಎನ್ನಿಸಿತು ಅವನಿಗೆ. ' ಎಲ್ಲೋ ಪುಟ್ಟಣ್ಣಯ್ಯ ' ರಾಂಗ್ ' ಮಾಡಿದಾನೆ. ಸುಬ್ಬಾಭಟ್ಟ ಗೋಪಾಲಯ್ಯ ಇವರೂ ಅಷ್ಟೆ— ' ಕೈ ಉಚಾಯಿಸ್ದಾ'ರೆ. ದಿಕ್ಕುದೆಸೆ ಕಾಣದ ಹೆಣ್ಣು ಮಿಟಕಿಸಿದರೆ ಕೈಚಾಚ ಬಹುದೆ ಹೊರತು, ಗಂಡಸಿಲ್ಲದೆ ಇದ್ದರೂ ಇಂಥ ಕುಲಸ್ಥ ಹೆಣ್ಣನ್ನ ಕಣ್ಣೆತ್ತಿ ನೋಡೋದೂ ತರವಲ್ಲ' ಎಂದು ಒಳಗೆ ಅಡಗಿ ಅವಿತಿದ್ದ ಅವನ ಮನದ ಮೂಲೆಯಲ್ಲಿ ಮತ್ತೆ ಎಚ್ಚರಿಕೆಯ ನುಡಿ ಪಿಸುಗುಟ್ಟಿತು. " ಲೋ ರಾಮ ರಾಮುಸ್ವಾಮಿ, ನೀನು ಇಲ್ಲಿ ಕೂತುಕೋ. ನಿನ್ನ ಪಕ್ಕದಲ್ಲಿ ನಿನ್ನ ತಂಗಿ ಕೂತುಕೊಳ್ಳಲಿ. ಎಷ್ಟು ಹೊತ್ತು ಅಂತ ನಿಂತಿರುತಾಳೆ, ಪಾಪ. ನನಗೇನು, ದಾಂಡಿಗನ್ಹಾಗೆ ಇದೀನಿ, ನಿಂತಿರುತೀನಿ" ಎಂದು ಕರಿಯಣ್ಣ ತಟ್ಟನೆ ಎದ್ದು ನಿಂತ. ಕರಿಯಣ್ಣ ಹೇಳಿದಂತೆ ಅವರಿಬ್ಬರೂ ಕುಳಿತರು. ಪ್ರಯಾಣದುದ್ದಕ್ಕೂ ಕರಿಯಣ್ಣ ನಿಂತೇ ಇದ್ದ; ಜನದ ಸಂಮರ್ದ ಅತಿಯಾಗಿ ಅವರು ಇವರು ಸೀತೆಯನ್ನು ಒತ್ತರಿಸುವಂತೆ ಕಂಡಾಗ, ಅವನು ಅವಳ ಮೈಗಾವಲಂತೆ ನಡೆದುಕೊಂಡ. ' ಏನೋ ಅಂತಿದ್ದೆ, ಕರಿಯಣ್ಣ ಎಷ್ಟು ಒಳ್ಳೆಯವನು!' ಎಂದು ಸೀತೆಗೆ ಹೊಳೆಯದಿರಲಿಲ್ಲ.

# ಪ್ರಕರಣ ಏಳು

## ೧

ನವರಾತ್ರಿಯ ಕಾಲದಲ್ಲಿ ಮೈಸೂರು ಎಂದಿನಿಂದಲೂ ನೋಟಕರಿಗೆ ನಂದನ. ಮೈಸೂರಿನ ಕೋಟೆಯೊಳಗೆ ಹೊಸ ಅರಮನೆಯನ್ನು ಕಟ್ಟಿಸಿ, ಅಲ್ಲಿದ್ದ ಅರಸುಮನೆತನದವರ ಮನೆಯಿಂದ ಹಿಡಿದು ಆಳಿನ ಮನೆಯವರೆಗೆ ಎಲ್ಲವನ್ನೂ ಒಡೆಯಿಸಿದ ಮೇಲೆ, ಆ ಆವರಣದ ಅಲಂಕರಣ ಮೊದಲಾಗಿತ್ತು: ಅರಮನೆಯೆದುರಿನ ನಗಾರಿ ನವಬತ್‌ಖಾನೆಯೊಂದು ಇನ್ನೂ ಹಾಗೆಯೇ ಉಳಿದಿತ್ತು. ಕೋಟೆಯ ಹೊರಗೆ 'ಗುಂಡು ಹಾರಿಸುವ ಮನೆ' ಕಟ್ಟಿ, ಅರಮನೆಯ ಕಚೇರಿಗಳ ಭವ್ಯಕಟ್ಟಡ ನಿರ್ಮಾಣವಾಗುತ್ತಿತ್ತು. ಕರ್ಸನಪಾರ್ಕ್, ನಿಷಾತ್‌ಬಾಗ್ ಮೊದಲಾದ ಉದ್ಯಾನಗಳ ವಿಸ್ತರಣಗಳಾಗಿದ್ದುವು; ಅವು ಹೆಚ್ಚು ಪರಿಶೋಭೆಗೊಂಡಿದ್ದುವು. ವರದಾಚಾರ್ಯರ ರತ್ನಾವಳಿ ನಾಟಕ ಮಂದಿರ, ನೂರಡಿ ರಸ್ತೆಯ ಪಶ್ಚಿಮದ ಕಡೆಯಲ್ಲಿ ಸವಾರ್‌ಲೈನ್ಸ್ ಬಳಿ ಪ್ರಾರಂಭವಾಗಿದ್ದ ವಸ್ತುಪ್ರದರ್ಶನ, 'ಕಾಸ್ ಜಂಗಲಿ', ಬೆಟ್ಟದ ಜಾತ್ರೆ, ಆಗತಾನೆ ಪ್ರಾರಂಭವಾಗಿದ್ದ 'ಐ.ಎಸ್. ಸಿನಿಮಾ', 'ರಾಯಲ್ ಸಿನಿಮಾ'—ಇವೆಲ್ಲಾ ನಾಡಿನ ಜನಕ್ಕೆ ನವರಾತ್ರಿಯ ಕಾಲದ ವಿಶೇಷ ಆಕರ್ಷಣೆಗಳು; ಮಹಾರಾಜರ ದರ್ಬಾರು ಮುಖ್ಯ ಆಕರ್ಷಣೆ.

ರಾಮಸ್ವಾಮಿ ಮತ್ತು ಕರಿಯಣ್ಣ—ಇವರ ಕಣ್‌ಮನಗಳನ್ನು ತಣಿಸಲು ಇಷ್ಟೆಲ್ಲಾ ಕಾದಿತ್ತು. ಅವರ ಗಮನವೆಲ್ಲಾ ಆ ಕಡೆ. ಸಂಜೆ ರೈಲಿನಿಂದ ಇಳಿದ ಕೂಡಲೆ ಹಳೇ ಅಗ್ರಹಾರಕ್ಕೆ ಜಟಕಾಬಂಡಿಯನ್ನು ಗೊತ್ತುಮಾಡಿಕೊಂಡರು. ರಾಮಸ್ವಾಮಿಗೆ ರಂಗಸ್ವಾಮಿ ಇರುವ ಬೀದಿಯ ಹೆಸರು ಗೊತ್ತಿತ್ತು; ಆದರೆ ಆ ಸ್ಥಳ ಗೊತ್ತಿರಲಿಲ್ಲ. ಜಟಕಾದವನು ಬೇಕೆಂದೇ ಗಾಡಿಯನ್ನು ಅತ್ತ ಇತ್ತ ಸುತ್ತಿಸಿ, ಹೊತ್ತಾಯಿತೆಂದು ಗೊಣಗಿ, ರಾಮಸ್ವಾಮಿ ಹೇಳಿದ ಬೀದಿಗೆ ಗಾಡಿಯನ್ನು ಬಿಟ್ಟು, ಅಲ್ಲಿ ತಾನೇ ಅವರಿವರನ್ನು ವಿಚಾರಿಸಿ, ಕಡೆಗೆ ರಂಗಸ್ವಾಮಿಯ ಮನೆಯ ಮುಂದೆ ಗಾಡಿಯನ್ನು ನಿಲ್ಲಿಸಿದನು; ಸಾಮಾನನ್ನೆಲ್ಲಾ ರಾಮಸ್ವಾಮಿ ಕರಿಯಣ್ಣ ಇವರೇ ಇಳುಕುವಂತೆ ಮಾಡಿದನು.

ಕರಿಯಣ್ಣನೊಂದಿಗೆ ಕೊಸರಾಡಿ ಎರಡರಷ್ಟು ಬಾಡಿಗೆಯನ್ನು ಕಸಿದುಕೊಂಡು, "ಹಳ್ಳಿ ಜನ, ಹಳ್ಳಿ ಜನ! ಏನ್ ತಕರಾರು ಮಾಡ್ತಾರೆ!" ಎಂದು ಗೊಣಗುತ್ತಲೇ ಗಾಡಿಯನ್ನು ಓಡಿಸಿದನು.

ಗಾಡಿಯ ಸದ್ದು ಕೇಳಿಯೇ ಕಾವೇರಿ ಹೊರಕ್ಕೆ ಬಂದು ಜಗಲಿಯಮೇಲೆ ನಿಂತಳು; ಮುಂದಾಗಿ ಕಾಗದ ಬರದಿದ್ದರೂ, ಸೀತೆಯ ನಿರೀಕ್ಷಣೆಯಲ್ಲಿದ್ದುದರಿಂದ, ತಂಗಿಯ ಬರವನ್ನು ನಿರೀಕ್ಷಿಸುತ್ತಿದ್ದಳು. ಸೀತೆಯನ್ನು ಕಂಡೊಡನೆಯೇ, ಆದರದಿಂದ ಅವಳನ್ನು ಒಳಕ್ಕೆ ಕರೆದುಕೊಂಡುಹೋದಳು. ರಾಮಸ್ವಾಮಿಯೂ ಅವರನ್ನು ಹಿಂಬಾಲಿಸಿದ. ಕರಿಯಣ್ಣ ಹೊರಗೆ ಜಗಲಿಯ ಮೇಲೆಯೇ ನಿಂತಿದ್ದ.

ಗಾಡಿಯಿಂದ ಬರುವಾಗ ದಾರಿಯಲ್ಲಿ ವಿದ್ಯುದ್ದೀಪಗಳು ಬೆಳಗುತ್ತಿದ್ದುದನ್ನು ಸೀತೆ ಕಂಡಿದ್ದಳು; ರಂಗಸ್ವಾಮಿಯ ಮನೆಯ ಮುಂದೆಯೇ ಒಂದು ವಿದ್ಯುದ್ದೀಪದ ಕಂಬವಿದ್ದಿತು. ಮನೆಯ ಸಾಲು ಕೊಳಲೂರಿನ ಮನೆಗಳ ಸಾಲಿನಂತೆಯೇ ಕಂಡಿತ್ತು. ರಂಗಸ್ವಾಮಿಯ ಮನೆಯಂತೂ ಹಳ್ಳಿಯ ಮನೆಯೇ. ಒಳಕ್ಕೆ ಪ್ರವೇಶಿಸಿದರೆ, ತಮ್ಮ ಮನೆಯಲ್ಲಿ ಹೇಗೋ ಹಾಗೆ ಮಂಕಾಗಿ ಉರಿಯುವ 'ಲ್ಯಾಂಪು'; ಮಸಕು ಬೆಳಕು; ಹೊಗೆ ವಾಸನೆ.

ಮನೆಗೆ ಕಾಲಿಟ್ಟ ಕೂಡಲೆ ಸೀತೆ ಕೇಳಿದ ಪ್ರಶ್ನೆ—"ಇದೇನಕ್ಕ! ಎಲೆಕ್ಟ್ರಿಕ್ ದೀಪ ಇಲ್ಲವೆ?" ಎಂದು.

"ಅಗ್ರಹಾರದ ಮನೆಗಳಲ್ಲಿ ಎಲೆಕ್ಟ್ರಿಕ್ ದೀಪ ಎಲ್ಲಮ್ಮ ಬರಬೇಕು. ಚಿಕ್ಕಮ್ಮನ ಮನೆಗೆ ಹಾಕ್ಸಿದಾರಂತೆ, ಹೊಸದಾಗಿ."

"ಭಾವಯ್ಯ ಎಲ್ಲಿ, ಮಕ್ಕಳೆಲ್ಲಿ? ಕಾಣೋದೇ ಇಲ್ಲವಲ್ಲ?"

"ಮಕ್ಕಳನ್ನ ನೋಟ ನೋಡೋದಕ್ಕೆ ಕರೆದುಕೊಂಡು ಹೋಗಿದಾರೆ, ಅರಮನೆ ಮುಂದಕ್ಕೆ. ಕೂತುಕೊಂಡು ಸುಧಾರಿಸಿಕೊಳ್ಳಿ. ನಾನು ಒಲೆ ಹೊತ್ತಿಸಿಬಿಟ್ಟು ಬರುತೀನಿ" ಎಂದು ಕಾವೇರಿ ಒಂದು ಸೀಮೆಯೆಣ್ಣೆಯ ಬುಡ್ಡಿಯನ್ನು ಹೊತ್ತಿಸಿಕೊಂಡು ಅಡಿಗೆಯ ಮನೆಗೆ ಹೋದಳು.

ಕಾವೇರಿ ಒಲೆ ಹೊತ್ತಿಸಿ ಹೊರಕ್ಕೆ ಬಂದಳು. ಆಗ ರಾಮಸ್ವಾಮಿ—"ನನಗೆ ಹಸಿವಿಲ್ಲ, ನನಗೇನೂ ಅಡಿಗೆ ಮಾಡಬೇಡ, ಅಕ್ಕ. ನಾನು ಸ್ವಲ್ಪ ಹೋಗಿ ಬರ್ತೀನೆ" ಎಂದ.

" ಇರಲಿ ಹೋಗುವೆಯಂತೆ, ನಾಳೆಯಿಂದ ಇದ್ದೇ ಇದೆ ನೋಟ ನುಡಿಕೆ. ಈಗ ಊಟಮಾಡಿ ಮಲಗಿಕೋ" ಎಂದು ಉಪಚಾರ ಹೇಳಿದಳು ಕಾವೇರಿ.

" ಇಲ್ಲ, ಕರಿಯಣ್ಣ ಕಾದಿದ್ದಾನೆ ಹೊರಗೆ. ಯಾವುದಾದರೂ ಹತ್ತಿರ ದಲ್ಲೆ ಹೋಟಲು ಇದ್ದರೆ ನೋಡಿಕೊಂಡು ಬರಬೇಕು. ಸ್ವಲ್ಪ ಜೊತೆಯಲ್ಲಿ ಹೋಗಿಬಿಟ್ಟು ಬರ್ತೀನೆ."

" ಯಾರು, ನಿಮ್ಮ ಜೊತೆಯಲ್ಲಿ ಗಾಡಿ ಇಳಿದರಲ್ಲ, ಅವರೆ ?"

" ಹ್ಞಾ. ಅವರೇ."

" ಯಾರು ಅವರು ? "

" ನೀನು ನೋಡಿಲ್ಲ ಅಂತ ಕಾಣುತ್ತೆ, ಅಕ್ಕ. ಸಾವುಕಾರ ರಾಮಪ್ಪ ನವರಿಲ್ಲವೆ ? "—ಮಾತಾಡಿದವಳು ಸೀತೆ.

" ಹ್ಞಾ, ಗೊತ್ತು."

" ಅವರ ಮಗ—" ಎಂದು ಅಕ್ಕನಿಗೆ ತಿಳಿಯಹೇಳಿ, " ಇವತ್ತು ರಾತ್ರಿ ಅವರೂ ಇಲ್ಲೇ ಊಟ ಮಾಡಿಬಿಡಲಿ. ನಾಳೆ ಬೆಳಗ್ಗೆ ಹೋಟಲು ನೋಡಿ ಕೊಂಡರಾಯಿತು. ಕತ್ತಲೆಯಲ್ಲಿ ಯಾಕೆ ತೊಂದರೆ" ಎಂದು ಅಣ್ಣನ ಪರವಾಗಿ ತಾನೆ ಹೇಳಿಬಿಟ್ಟಳು ಸೀತೆ.

ಸೀತೆಯ ಮಾತು ನಿಂತಿತು. ಕರಿಯಣ್ಣನೂ ಅಂದಿನ ರಾತ್ರಿ ಅಡಿಗೆಯ ಲೆಕ್ಕಕ್ಕೆ ಸೇರಿಕೊಂಡ.

ಹಳೆಯ ಅಗ್ರಹಾರದಲ್ಲಿ ಊಟದ ಹೋಟಲು ಯಾವುದೂ ಇರಲಿಲ್ಲ. ನಾರಣಾಚಾರ್ರ ಕಾಫಿಯ ಹೋಟಲು ಮಾತ್ರ ಇತ್ತು. ಕರಿಯಣ್ಣ ಸುತ್ತಿ ಸುತ್ತಿ ಸಂತೇಪೇಟೆಯ ಒಂದು ಹೋಟಲಿನಲ್ಲಿ ಇಳಿದುಕೊಂಡ. ರಾಮಸ್ವಾಮಿ ಊಟಕ್ಕೆ ಮಾತ್ರ ಮನೆಗೆ ಬರುತ್ತಿದ್ದು, ಕರಿಯಣ್ಣನೊಂದಿಗೆಯೇ ಇರತೊಡ ಗಿದ. ಅವನೇನೋ ಬಂದ ಮಾರನೆಯ ದಿನವೇ ಅಕ್ಕನಿಗೆ ಎಚ್ಚರಿಕೆ ಕೊಟ್ಟು ಬಿಟ್ಟಿದ್ದ : " ನನಗೋಸ್ಕರ ಊಟಕ್ಕೆ ಕಾಯಬೇಡ. ಬಂದಾಗ ಬರುತ್ತೇನೆ. ಅಂತೂ ಬರುತ್ತೇನೆ." ರಂಗಸ್ವಾಮಿ, " ನಾವು ಮೊನ್ನೆ ಅವರ ಊರಿಗೆ ಹೋಗಿದ್ದಾಗ ನೋಡಿದೆವಲ್ಲ. ಅವನು ಮನೆಯಲ್ಲಿ ಎಲ್ಲಿ ಇರುತ್ತಿದ್ದ ? ನವ ರಾತ್ರಿಯ ನೋಟ ನೋಡುವುದಕ್ಕೆ ಬಂದು, ಮನೆಯಲ್ಲೆ ಯಾರು ಇರುತ್ತಾರೆ?

ಅಂತೂ, ಊಟಕ್ಕೆ ಬರುತ್ತೀಯಲ್ಲ" ಎಂದು ಭಾವಮೈದುನನ ಮಾತನ್ನೇ ಸಮರ್ಥಿಸಿದ.

ಮೊದಲ ರಾತ್ರಿ ಕರಿಯಣ್ಣ ರಾಮುಸ್ವಾಮಿ ಇಬ್ಬರೂ ಹೊರಗೆ ಜಗಲಿಯ ಮೇಲೆ ಮಲಗಿದ್ದರು. ಮಾರನೆಯ ರಾತ್ರಿ ರಾಮುಸ್ವಾಮಿ ಒಳಗೆ ಮಲಗಿದ್ದ. ಮೂರನೆಯ ದಿನ ರಾತ್ರಿ ಊಟವಾದ ಮೇಲೆ, "ನಾನು ಕರಿಯಣ್ಣನ ಜೊತೆಯೇ ಮಲಗುತ್ತೇನೆ. ಬಾ ಅಂತ ಕರೆದ" ಎಂದು ತನ್ನ ಹಾಸಿಗೆಯ ಸುರುಳಿಯನ್ನು ತೆಗೆದೊಯ್ದ.

ಹೀಗೆ ನಾಲ್ಕು ದಿನ ಕಳೆಯಿತು. ರಾಮುಸ್ವಾಮಿ ಊಟಕ್ಕೆ ಮಾತ್ರ ಬರುತ್ತಾನೆ ಎಂದು ನಿಶ್ಚಯವಾಯಿತು. ಸೀತೆ ಅಕ್ಕನ ಜೊತೆ ಮನೆಯಲ್ಲಿಯೇ ಇರುತ್ತಿದ್ದಳು.

ಅಂದು ಸರಸ್ವತೀಪೂಜೆ. ರಂಗಸ್ವಾಮಿ ಒಂದು ಕಾಲುಮಣೆಯ ಮೇಲೆ ತನ್ನ ಪುಸ್ತಕಗಳನ್ನೆಲ್ಲ ಪೇರಿಸಿ ಇಟ್ಟ; ಸುಬ್ಬಲಕ್ಷ್ಮಿಯ ಸ್ಲೇಟು, 'ಬಾಲ ಬೋಧೆ'ಯನ್ನೂ ಮೇಲೆ ಇಟ್ಟ; ಅದರ ಮೇಲೆ ರವಿವರ್ಮನ ಸರಸ್ವತಿಯ ಚಿತ್ರವನ್ನು ಗೋಡೆಗೆ ಒರಗಿಸಿ ಇಟ್ಟ. ಆಗ, ಕಾವೇರಿ ನೆನಪು ಕೊಟ್ಟಳು :

"ಸೀತೆಯ ಪುಸ್ತಕಗಳನ್ನೂ ಕೇಳಿ ಇಸುಕೊಂಡು ಇರಿಸಿ" ಎಂದು.

"ನಾನು ಪುಸ್ತಕಗಿಸ್ತಕ ತಂದಿಲ್ಲ" ಎಂದು ಸೀತೆ ಸುಳ್ಳು ಹೇಳಿದಳು. ಹೇಳಿದ್ದು ಸುಳ್ಳು ಎಂದು ಅವಳ ಮುಗುಳುನಗೆ ಬಿಟ್ಟುಕೊಟ್ಟಿತ್ತು.

"ಗಿಸ್ತಕ ಬೇಡ, ಪುಸ್ತಕ ಮಾತ್ರ ತಂದು ಕೊಡಮ್ಮ" ಎಂದು ರಂಗಸ್ವಾಮಿ ನಗುತ್ತ ನುಡಿದ.

"ಮೇಷ್ಟ್ರು ಹೇಳಿದ ಹಾಗೆ ಕೇಳಬೇಕು, ಪುಸ್ತಕ ತಂದುಕೊಡು" ಎಂದು ಅಕ್ಕ ಆಜ್ಞಾಪಿಸಿದಳು.

ಸೀತೆ ವಿಧೇಯಳಾಗಿ ತನ್ನ ಪುಸ್ತಕಗಳನ್ನೆಲ್ಲ ತಂದುಕೊಟ್ಟಳು.

ಸಂಜೆ ಕಾವೇರಿ ಗಂಡನಿಗೆ ಹೇಳಿದಳು :

"ತಂಗಿಗೆ ನೋಟಗೀಟ ತೋರಿಸೋಣ ಅಂತ ರಾಮುಸ್ವಾಮಿಗೆ ಅನ್ನಿಸಿಯೇ ಇಲ್ಲ ಅಂತ ಕಾಣುತ್ತೆ. ಪಾಪ, ಅವಳು ಇನ್ನು ಯಾವಾಗಲೋ ಮೈಸೂರಿಗೆ ಬರುವುದು. ಇವತ್ತು ಅರಮನೆ ಮುಂದಕ್ಕೆ ಕರೆದುಕೊಂಡು ಹೋಗಿ ಒಂದಿಷ್ಟು ನೋಟ ತೋರಿಸಬಾರದೆ ?"

ಸೀತೆಗೇನೋ 'ನೋಟ' ...ಬೇಕೆಂದು ಆಸೆ. ತನ್ನ ಇಷ್ಟವನ್ನು ತೋರಿಸಲು ಇಷ್ಟವಿಲ್ಲ!

"ನಾನೇನು ನೋಟ ನೋಡುವುದಕ್ಕೆ ಬಂದಿಲ್ಲವಲ್ಲ" ಎಂದಳು ಬಿಗು ಮಾನದಿಂದ.

"ಹಾಗಾದರೆ ಯಾತಕ್ಕೆ ಬಂದೆ?" ರಂಗಸ್ವಾಮಿ ಹಾಸ್ಯದ ರಾಗ ಎಳೆದು ಕೇಳಿದ.

"ನಮ್ಮ ಅಕ್ಕನ್ನ ಕೇಳಿ" ಎಂದು ಬಿಗುಮಾನದಿಂದಲೇ ನುಡಿದಳು ಸೀತೆ.

"ಅವಳಿಗೆ ಇನ್ನೂ ಒಂಬತ್ತು ತಿಂಗಳು ತುಂಬಿಲ್ಲವಲ್ಲಮ್ಮಾ! ನಾವು ನೋಟ ನೋಡಿಕೊಂಡು ಬರುವಷ್ಟರಲ್ಲಿ ಏನೂ ಆತುರವಿಲ್ಲ, ಬಾ ಹೋಗೋಣ" ಎಂದ ರಂಗಸ್ವಾಮಿ.

"ಥೂ, ಹೋಗೀಂದ್ರೆ." ಕಾವೇರಿ ಹುಸಿಕೋಪದಿಂದ ಸಿಡಿಗುಟ್ಟಿದಳು.

ಸೀತೆ ಗೊಳ್ಳನೆ ನಕ್ಕಳು.

"ನೀನು ಬರ್‍ತೀಯಾ ಚಿಕ್ಕಮ್ಮ, ನೋಟ ನೋಡೋಕ್ಕೇ" ಎಂದು ಸುಬ್ಬಲಕ್ಷ್ಮಿ ಸೀತೆಯ ಸೀರೆಯ ನೆರಿಗೆ ಜೋತುಬಿದ್ದಳು.

"ನೀನು ಕರಕೊಂಡು ಹೋದ್ರೆ ಬರ್‍ತೀನಮ್ಮ" ಎಂದು ಸೀತೆ ಅಕ್ಕನ ಮಗಳ ತಲೆಯನ್ನು ನೇವರಿಸಿದಳು.

"ಕರಕೊಂಡು ಹೋದ್ರೆ ನನ್ನ ಎತ್ಕೊಂಡು ಮಹಾರಾಜರನ್ನ ತೋರಿಸ್ತೀಯಾ? ಅಪ್ಪ ರಾಮೂನ ಎತ್ಕೋತಾರೆ."

"ಹಾಗಾದರೆ ಇನ್ನು ಹೊರಡೋಣ, ಹೊತ್ತಾಗುತ್ತೆ. ಬೇಗ ಹೋದರೆ ಪಟ್ಟದಾನೆ, ಪಟ್ಟದ ಕುದುರೆ ಕೆರೆಗೆ ಹೋಗೋದನ್ನೂ ನೋಡಬಹುದು" ಎಂದು ರಂಗಸ್ವಾಮಿ ಸೂಚಿಸಿದ.

ಸೀತೆಯೇ ರಾಮಚಂದ್ರನಿಗೂ ಸುಬ್ಬಲಕ್ಷ್ಮಿಗೂ ತಲೆ ಬಾಚಿ ಜಡೆ ಹೆಣೆದಳು. ಸುಬ್ಬಲಕ್ಷ್ಮಿಗೆ ಕಟ್ಟಿದ ಜಾಜಿಯ ಹೂವನ್ನು ಮುಡಿಸಿದಳು. ತಾನೂ ಬೇಗ ಬೇಗನೆ ತಲೆ ಬಾಚಿಕೊಂಡಳು. ಸಣ್ಣ ಹಿತ್ತಾಳೆ ತಟ್ಟೆಯಲ್ಲಿ ಇನ್ನೂ ಹೂವಿತ್ತು; ಕಾವೇರಿಗೆಂದು ಉಳಿಸಿದ್ದಳು ಸೀತೆ. ಮುಖವನ್ನು ನೀರಿನಿಂದ ಸವರಿಕೊಂಡು, ಸೆರಗಿನಿಂದ ಒರಸಿಕೊಂಡಳು. ಅಷ್ಟು ಹೊತ್ತಿಗೆ ಮಕ್ಕಳು ಹೊಸ ಬಟ್ಟೆ ತೊಟ್ಟು ಸಿದ್ಧರಾಗಿ ನಿಂತಿದ್ದರು.

ಸೀತೆ ಮುಖ ಒರಸಿಕೊಂಡು, ಬಾಚಣಿಗೆ ಪೆಟ್ಟಿಗೆಯನ್ನು ಗೋಡೆ ಯೊತ್ತಿಗೆ ಸರಿಸಿ ಮೇಲಕ್ಕೆದ್ದಾಗ,

"ಹಣೇಗೆ ಕುಂಕ್ಮಾನೇ ಇಟ್ಕೊಂಡಿಲ್ಲವಲ್ಲೇ, ಚಿಕ್ಕಮ್ಮ?" ಎಂದು ನೆನಪು ಕೊಡುವಂತೆ ಹೇಳಿದಳು ಸುಬ್ಬಲಕ್ಷ್ಮಿ.

ಸೀತೆ ಮೌನವಾಗಿದ್ದಳು.

"ಅಮ್ಮನಿಗೆ ಯಾಕೆ ಅಷ್ಟು ಹೂವು? ನೀನೂ ಮುಡ್ಕೊ. ಸರಸ್ವತೀ ಪ್ರಸಾದ ಮುಡ್ಕೊಳ್ಳಿ ಎಲ್ಲರೂ ಅಂತ ಅಪ್ಪ ಹೇಳಿದಾನೆ" ಎಂದು ಹೂವನ್ನು ಕೈಗೆತ್ತಿಕೊಂಡು ಸುಬ್ಬಲಕ್ಷ್ಮಿ ಸೀತೆಗೆ ಕೊಡಬಂದಳು.

ರಂಗಸ್ವಾಮಿ ತನ್ನ ಕೋಣೆಯಲ್ಲಿ ಉಡುಪು ಹಾಕಿಕೊಳ್ಳುತ್ತ ನಿಂತಿದ್ದ; ಈ ಮಾತುಗಳೆಲ್ಲ ಅವನಿಗೆ ಕೇಳಿಸದೆ ಇರಲಿಲ್ಲ; ಮುಗ್ಧ ಹೃದಯದಿಂದ ಹೊರಟ ಮುಗುಳು ಮಾತು ಮುಳ್ಳಾಗಿ ಹೀಗೆ ಚುಚ್ಚಬಲ್ಲದೆಂದು ಅವನು ಎಣಿಸಿರಲಿಲ್ಲ. ಅವನೂ ಅದರ ಚುಚ್ಚುವೇದನೆಯನ್ನು ಅನುಭವಿಸುತ್ತಿದ್ದ. ಮಕ್ಕಳ ಮಾತಿಗೆ ತಾನು ಹೊಣೆಯಲ್ಲ. ತನ್ನ ಮನೆಯಲ್ಲಿ ಇರುವವರೆಗೂ ಸೀತೆಯ ಮನಸ್ಸಿಗೆ ನೋವಾಗದಂತೆ ತಾನು ನಡೆದುಕೊಳ್ಳುವುದಾಗಿ ನಿಶ್ಚಯಿಸಿ ಕೊಂಡ.

"ಹೊರಡೋಣ ಇನ್ನು, ಹೊತ್ತಾಯಿತು" ಎಂದು ರಂಗಸ್ವಾಮಿ ಗಂಭೀರ ಮೌನವನ್ನು ಮುರಿಯಲೆಂದೇ ಹೊರಕ್ಕೆ ಬಂದ; ಮಕ್ಕಳ ಮಾತು ಕಿವಿಗೆ ಬಿದ್ದಿಲ್ಲವೆಂಬಂತೆ ನಟಿಸಿದ.

ರಂಗಸ್ವಾಮಿ ಹೊರಕ್ಕೆ ಹೊರಟುನಿಂತ; ಮಕ್ಕಳೂ ಕುಣಿಕುಣಿಯುತ್ತ ಹೊರಕ್ಕೆ ಹೋಗಿ, ತಂದೆಯ ಕೈಹಿಡಿದು ನಿಂತರು.

"ಸೀತಾ, ಮಕ್ಕಳು ಏನೇನೋ ತಿಳಿಯದೆ ಆಡಿಬಿಡುತ್ತವೆ. ಅವನ್ನೆಲ್ಲಾ ಮನಸ್ಸಿಗೆ ಹಚ್ಚಿಕೋಬೇಡ. ಉಟ್ಟ ಸೀರೆಯಲ್ಲೇ ಹೊರಟಿದ್ದೀಯಲ್ಲ? ಹೊಸ ಸೀರೆ ತಂದಿಲ್ಲವೆ?" ಎಂದು ಮೃದುವಾಗಿ ಕೇಳಿದಳು ಕಾವೇರಿ.

"ಹೊಸದು ಯಾವುದು? ಎಲ್ಲಾ ಹಳೆಯದೇ" ಎಂದು ಕುಗ್ಗಿದ ದನಿಯಲ್ಲಿ ಸೀತೆ ಉತ್ತರ ಕೊಟ್ಟಳು.

"ಹಳೆಯದು ತಾನೆ. ಪೆಟ್ಟಿಗೆಯಲ್ಲಿ ಇಡೋ ಬದಲು ಉಟ್ಟು ಹರಿದ ರಾಯಿತು. ಇಲ್ಲಿರೋವಾಗಲೇ ಉಟ್ಟು ಹರಿದುಬಿಡು. ತಂದಿದೀಯೋ ಇಲ್ಲವೋ?"

ಸೀತೆ ಮೌನವಾಗಿದ್ದಳು.

"ಹಾಗಾದರೆ ಉಟ್ಟುಕೋ. ಈ ಊರಿನಲ್ಲಿ ಯಾರೂ ಆಡಿಕೊಳ್ಳುವುದಿಲ್ಲ" ಎಂದು ಕಾವೇರಿ ಭರವಸೆಯಿತ್ತಳು.

ಅಕ್ಕನ ಸಂತೋಷಾರ್ಥವಾಗಿ ಸೀತೆ ತನಗೆ ಮದುವೆಯಲ್ಲಿ ಧಾರೆಯೆರೆಯಲು ಉಡಿಸಿದ್ದ ಧರ್ಮಾವರದ ಸೀರೆಯನ್ನು ತನ್ನ ತಗಡಿನ ಪೆಟ್ಟಿಗೆಯಿಂದ ಹೊರತೆಗೆದು ಉಟ್ಟಳು.

ತಲೆಗೆ ಹೂವಿಲ್ಲದೆ, ಹಣೆಗೆ ಕುಂಕುಮವಿಲ್ಲದೆ, ಒಡವೆಯಿಲ್ಲದೆ, ಸಾಧಾರಣ ಸೀರೆಯಲ್ಲೇ ಸೀತೆ ಚೆಲುವಿನ ಬೊಂಬೆ; ಹೊಸ ಸೀರೆಯುಟ್ಟು ಅಕ್ಕನ ಎದುರು ನಿಂತ ಸೀತೆ ಒಂದು ಕ್ಷಣ ಅಕ್ಕನಮೇಲೆ ಅಚ್ಚರಿಯ ಮಾಯೆಯನ್ನು ಬೀಸಿಬಿಟ್ಟಳು. ಕ್ಷಣಕಾಲ ಮಾತ್ರ. ಮೆಚ್ಚುಗೆಯ ಅಚ್ಚರಿಯ ಹಿಂದೆಯೇ ದುಗುಡ, ಚಿಂತೆಗಳು ಕಾಲಿಟ್ಟುವು.

"ಹೊತ್ತಾಗುತ್ತೆ, ಹೋಗಿಬಾರಮ್ಮ. ಜೋಕೆ" ಎಂದು ತಂಗಿಯನ್ನು ಕಳಿಸಿಕೊಟ್ಟಳು ಅಕ್ಕ.

ಸೀತೆ ಭಾವನೊಂದಿಗೆ ಮೂರು ದಿನವೂ 'ನೋಟ' ನೋಡಿದಳು; ಮಕ್ಕಳೊಂದಿಗೆ ಮಗುವಾಗಿ ಸಂತಸದಲ್ಲಿ ತೇಲಿ ಮುಳುಗಿದಳು; ಈ ಮೂರು ದಿನಗಳಲ್ಲಿ, ಬದುಕಿರುವುದು ಚೆನ್ನ ಎನ್ನಿಸಿತವಳಿಗೆ. ಜಂಬೂಸವಾರಿಯ ಹಿಂದಿನ ದಿನ, "ನೀನೂ ಬಾ ಅಕ್ಕ, ಚೆನ್ನಾಗಿರುತ್ತೆ" ಎಂದು ಸೀತೆ ಕಾವೇರಿಯನ್ನು ಬಲವಂತಪಡಿಸಿದಳು. "ನಾನು ಹೋದ ವರ್ಷ ನಿತ್ಯ ನೋಡಿದೇನಮ್ಮ. ನಾನು ನಡೆಯಲಾರೆ. ನೀನು ಮತ್ತೆ ಇತ್ತ ಬರುತ್ತೀಯೋ ಇಲ್ಲವೋ. ನೀನು ಹೋಗು" ಎಂದಳು. ಜಂಬೂಸವಾರಿಯ ಮೆರವಣಿಗೆ ನೋಡಲು ಮಾತ್ರ ಕಾವೇರಿಯೂ ಜೊತೆಯಲ್ಲಿ ಹೊರಟಿದ್ದಳು.

ನವರಾತ್ರಿಯಾದಮೇಲೆ, ರಾಮಸ್ವಾಮಿ ಎರಡು-ಮೂರು ದಿನ ಮನೆಯ ಕಡೆ ಸುಳಿಯಲೇ ಇಲ್ಲ. "ಎಲ್ಲೋ ಚಿಕ್ಕಮ್ಮನ ಮನೆಗೆ ಹೋಗಿರಬಹುದು" ಎಂದುಕೊಂಡರು ಅಕ್ಕತಂಗಿ.

ಬೆಟ್ಟದ ಜಾತ್ರೆಯ ಹಿಂದಿನ ದಿನ, "ನಾಳೆ ಚಾಮುಂಡಿ ಬೆಟ್ಟಕ್ಕೆ ಹೋಗೋಣವೇ, ಸೀತಾ, ರಥೋತ್ಸವ?" ಎಂದು ರಂಗಸ್ವಾಮಿ ನಾದಿನಿಗೆ ಸಲಹೆಮಾಡಿದ. ದೂರ ನಡೆಯಲಾರದ ಅಕ್ಕ ಇನ್ನು ಬೆಟ್ಟ ಹತ್ತುವಳೆ?

ಮಕ್ಕಳಂತೂ ಹತ್ತಲಾರವು. ಹೋದರೆ, ತಾನು ಭಾವ ಇಬ್ಬರೇ ಹೋಗಬೇಕು. ರಥೋತ್ಸವ ನೋಡಬೇಕೆಂದೇನೋ ಸೀತೆಯ ಮನಸ್ಸಿನಲ್ಲಿ ಆಸೆ. ಮಹಾ ರಾಜರೂ ರಥ ಎಳೆಯುತ್ತಾರೆ ಎಂದು ಕೇಳಿದ್ದಳು. ಅದನ್ನು ತಾನು ನೋಡ ಬೇಡವೆ? ಆದರೆ ಭಾವನೊಂದಿಗೆ ಒಂಟಿಯಾಗಿ ಹೋಗಲು ಮನಸ್ಸೊಪ್ಪಲಿಲ್ಲ; ಸಂಕೋಚವೆನಿಸಿತು.

"ಮೆಟ್ಟಿಲಿದೆಯೇ?" ಎಂದು ಕೇಳಿದಳು ಸೀತೆ.

"ಮೆಟ್ಟಿಲಿಲ್ಲದೆ ಏನು. ಚೆನ್ನಾಗಿಯೂ ಇವೆ" ಎಂದು ಪ್ರೋತ್ಸಾಹ ಕೊಡುವ ರೀತಿಯಲ್ಲಿ ನುಡಿದ ರಂಗಸ್ವಾಮಿ.

"ಎಷ್ಟು ಮೆಟ್ಟಿಲು?"

"ಸಾವಿರ."

"ಅಬ್ಬಬ್ಬಾ! ನನ್ನ ಕೈಲಾಗುವುದಿಲ್ಲ" ಎಂದು ಸೀತೆ ಆಸೆಯನ್ನು ಅದುಮಿಕೊಂಡು ಜಾರಿಕೊಂಡಳು.

"ಕಾಲಿನಿಂದ ತಾನೆ ಮೆಟ್ಟಿಲು ಹತ್ತುವುದು?" ಎಂದು ರಂಗಸ್ವಾಮಿ ಹಾಸ್ಯಮಾಡಿದ.

"ನಿಮ್ಮ ಭಾವ ತಲೆಯಿಂದ ಹತ್ತುತ್ತಾರೆ ಕಣೇ" ಎಂದು ಕಾವೇರಿ ಪ್ರತಿಹಾಸ್ಯಮಾಡಿದಳು.

"ಹಾಗಾದರೆ ಅದನ್ನ ನೋಡೋಕೆ ಹೋಗ್ತೀನಿ" ಎಂದು ಸೀತೆಯೂ ನಕ್ಕಳು.

ಬೆಟ್ಟದ ಜಾತ್ರೆಗೆ ಯಾರೂ ಹೋಗಲಿಲ್ಲ.

ಜಾತ್ರೆಯಾದ ಎರಡು ದಿನ ಬಿಟ್ಟು ರಾಮಸ್ವಾಮಿ ಕರಿಯಣ್ಣನೊಂದಿಗೆ ಮನೆಗೆ ಬಂದ. ಅಂದು ಮಧ್ಯಾಹ್ನ ಊರಿಗೆ ಹೊರಡುವುದಾಗಿ ತಿಳಿಸಿದ. "ಅಪ್ಪ ಕೊಟ್ಟಿದ್ದ ಅಡ್ರೆಸ್ಸಿನ ಚೀಟಿ ಎಲ್ಲೋ ಕಳೆದುಹೋಯಿತು. ಶಾಮಣ್ಣ ನವರ ಮನೆಗೆ ಹೋಗುವುದಕ್ಕೆ ಆಗಲಿಲ್ಲ. ಚಿಕ್ಕಮ್ಮನ ಮನೆಗೆ ಒಪ್ಪೊತ್ತು ಹೋಗಿದ್ದೆ. ನೀನು ಬಂದಿದ್ದೀಯ, ಇಲ್ಲಿ ಇರುತ್ತೀ ಅಂತ ಹೇಳಿದೆ. ಯಾವ ತ್ತಾದರೂ ಪುರಸತ್ತು ಮಾಡಿಕೊಂಡು ಬರುವಹಾಗೆ ಹೇಳಿದಾರೆ" ಎಂದು ಸೀತೆಯ ಕಡೆ ತಿರುಗಿ ಹೇಳಿದ: "ಎಲೆ ಪಿಂಡಿಯನ್ನ ಅವರ ಮನೆಗೆ ಕಳಿಸಿ ಕೊಡುವ ಏರ್ಪಾಡು ಮಾಡಿಬಿಡು, ಅಕ್ಕ. ನನಗೆ ಮರೆತೇ ಹೋಯಿತು.

ಇಲ್ಲದೆ ಇದ್ದರೆ, ತೊಂದರೆ ಯಾಕೆ, ನಿಮ್ಮ ಮನೆಗೇ ಇದ್ದುಕೊಳ್ಳುತ್ತೆ" ಎಂದು ಉದಾಸೀನವಾಗಿ ಉಸುರಿದ.

ಆ ಮಧ್ಯಾಹ್ನ ರಾಮಸ್ವಾಮಿ ಕರಿಯಣ್ಣ ಅಲ್ಲಿಯೇ ಔತಣದ ಊಟ ಮಾಡಿದರು ; ಸಂಜೆಯ ರೈಲಿಗೆ ಪ್ರಯಾಣಮಾಡಿದರು.

೨

ಕೊಳಲೂರಿಗೆ ಹೋಗಿದ್ದಾಗ ರಂಗಸ್ವಾಮಿ ಸೀತೆಯೊಂದಿಗೆ ಒಂದು ಮಾತನ್ನೂ ಆಡಿರಲಿಲ್ಲ. ಸೀತೆ ವಿಧವೆಯಾದಮೇಲೆ ಅವಳ ಮುಖವನ್ನು ನೋಡಿದ್ದು ಅದೇ ಮೊದಲು. ಅವನ ದೃಷ್ಟಿಯಲ್ಲಿ ಸೀತೆ ಚಿಕ್ಕ ಹುಡುಗಿಯೇ ಆದರೂ, ಹೊಸ ಪರಿಸ್ಥಿತಿಯಲ್ಲಿ ಅವಳನ್ನು ಹೇಗೆ ಮಾತನಾಡಿಸುವುದು ಎಂಬುದೇ ರಂಗಸ್ವಾಮಿಯ ಸಮಸ್ಯೆಯಾಗಿತ್ತು. ನಾದಿನಿಯ ಬಗೆಗೆ ಉಕ್ಕಿದ ಮರುಕ, ದುಃಖ, ಮಾತಿಗೆ ಮೀರಿದ್ದಾಯಿತು ; ಎಂದೆಂದಿನ ಸರಸಕ್ಕೆ ಶತ್ರುವಾಯಿತು. ಭಾವನ ಮೌನದ ಅರ್ಥ ಸೀತೆಗೆ ಆಗಲಿಲ್ಲ. 'ಅಷ್ಟು ಸಲಿಗೆಯಾಗಿದ್ದ ಭಾವಯ್ಯ ಒಂದು ಮಾತೂ ಆಡಿಸದಿರಬೇಕಾದರೆ, ನಾನು ಯಾಕೆ ಮಾತನಾಡಿಸಹೋಗಲಿ' ಎಂದು ಒಂದು ಒಗೆಯ ಬಿಗುಮಾನದ ಭಾವವೂ ಅವಳಿಗೆ ಉಂಟಾಗದಿರಲಿಲ್ಲ. ಅಂತೂ ಕೊಳಲೂರಿನಲ್ಲಿ ಭಾವ-ನಾದಿನಿಯರ ಸಂಬಂಧ 'ಛಳಿತು' ಹೆಪ್ಪುಗಟ್ಟಿತು.

ಸೀತೆ ಮೈಸೂರಿಗೆ ಬಂದಮೇಲೆ ಬಾಂಧವ್ಯದ ಅರಿವಿನ ಕಾವು ಏರಿ, ಆ 'ಛಳಿ' ಮುರಿದು, ಹೆಪ್ಪು ಒಡೆಯಿತು ; ಇಬ್ಬರ ಹಿಂದಿನ ಸರಸ-ಸಂಬಂಧ ಸುಸ್ಥಾಪಿತವಾಗತೊಡಗಿತು ; ಆತ್ಮೀಯತೆಯ ಅಂತರ್ವಾಹಿನಿ ಹರಿಯತೊಡಗಿತು.

ನವರಾತ್ರಿಯ 'ನೋಟ' ನೋಡಹೋದ ಮೂರು ನಾಲ್ಕು ದಿನಗಳಲ್ಲಿ ಅವರಿಬ್ಬರ ನಡುವಣ ಸಾಮರಸ್ಯ ಕ್ರಮಕ್ರಮವಾಗಿ ಸಿದ್ಧಿಸಿತೆನ್ನಬೇಕು. ನೋಟದ ಮೊದಲ ದಿನವೇ, ನಗಾರಿಖಾನೆಯ ಮುಂದೆ ನಿಂತು ಮಹಾರಾಜರ ದರ್ಬಾರು ನೋಡುತ್ತಿದ್ದಾಗ, ಅಷ್ಟೇನೂ ಎತ್ತರವಲ್ಲದ ಸೀತೆಗೆ ಮುಂದೆ ಜನದ ಗೋಡೆ ಹೊರತು ಇನ್ನೇನೂ ಕಾಣುತ್ತಿರಲಿಲ್ಲ. ಯಾವ ಯಾವ ಎಡೆಗೆ ಕರೆದೊಯ್ದರೂ ಸೀತೆಗೆ ಮಹಾರಾಜರ ದರ್ಶನವಾಗದು. "ಹಿಂದಿನ ಸೀತೆ

ಯಾಗಿದ್ದರೆ ಎತ್ತಿಕೊಂಡು ತೋರಿಸಿಬಿಡುತ್ತಿದ್ದೆ. ಈಗ ಮುಟ್ಟಿದರೆ ಮುನಿಯುತ್ತೀಯೇನೋ" ಎಂದು ರಂಗಸ್ವಾಮಿ ನಕ್ಕು ನುಡಿದನು. "ಈಗಲೂ ಬೇಕಾದರೆ ಎತ್ಕೊಂಡೇ ತೋರಿಸು. ನಾನು ಬೇಕಾದರೆ ಇಳೀತೀನಿ. ಸೀತೇನ ಸ್ವಲ್ಪ ಹೊತ್ತು ಹೆಗಲಮೇಲೆ ಕೂರಿಸಿಕೋ" ಎಂದು ತಂದೆಯ ಹೆಗಲಡರಿದ್ದ ಸುಬ್ಬಲಕ್ಷ್ಮಿ ನುಡಿದಳು. ಸೀತೆಗೆ ನಗು ತಡೆಯಲಾಗಲಿಲ್ಲ. ನಕ್ಕು ನುಡಿದಳು: "ನಾನು ಭಾರ ಕಣಮ್ಮ. ನಾನು ಕುಳಿತುಕೊಂಡರೆ ಭಾವಯ್ಯನ ಹೆಗಲು ಮುರಿದುಹೋಗುತ್ತೆ." ಅಂತೂ ಅವೊತ್ತು ದೊರೆಯ ನೋಟವಾಗಲೇ ಇಲ್ಲ. ಮಾರನೆಯ ದಿನವೂ ಅದೇ ಕಥೆ. ಸೀತೆ ಮೆಟ್ಟುಂಗಾಲಿಕ್ಕುವಳು, ಕೊರಲು ನಿಮಿರಿಸುವಳು, ಕುಪ್ಪಳಿಸುವಳು, ಬೇಸರಗೊಂಡು ಸುಮ್ಮನಾಗುವಳು. ಜನವಂತೂ ಎಷ್ಟು ಕೇಳಿಕೊಂಡರೂ ತೆರಪುಗೊಡರು. ಹೆಂಗಸರಿಗಾಗಿಯೇ ಗೊತ್ತಾಗಿದ್ದ ಎಡೆಗೆ ಹೋಗಿದ್ದರೆ ಈ ನಿರಾಶೆಯುಂಟಾಗುತ್ತಿರಲಿಲ್ಲ. ಸೀತೆ ಸುಮ್ಮನೆ ನಿಂತಿದ್ದಾಗ ಒಮ್ಮೆ ರಂಗಸ್ವಾಮಿ ಹಿಂದಿನಿಂದ ತನ್ನ ಎರಡು ಕೈಗಳಿಂದಲೂ ಅವಳ ನಡುವನ್ನು ಹಿಡಿದು, ತನ್ನ ಮಕ್ಕಳನ್ನು ಎತ್ತುವಂತೆಯೇ ಅನಾಮತ್ತಾಗಿ ಮೇಲಕ್ಕೆ ಅವಳನ್ನು ಎತ್ತಿಬಿಟ್ಟು "ಈಗ ಕಂಡಿತೋ? ಅದೇ ಮಧ್ಯದಲ್ಲಿ ಸಿಂಹಾಸನ, ಅದರ ಮೇಲೆ ಕುಳಿತಿದ್ದಾರೆ—ಹಸುರು ಪೇಟ, ಕಂಡಿತೋ?" ಎಂದು ಸೀತೆಯನ್ನು ಕೇಳಿದನು. ಆಗ ಮುಖ್ಯವಾಗಿ ದೊರೆ ಕಾಣುವುದು ಬೇಕಾಗಿತ್ತು; ಕಂಡರು. "ಕಂಡಿತು. ಇಳಿಸಿ, ಭಾವಯ್ಯ" ಎಂದು ನ್ಯೈಕೊಡಹಿದಳು ಸೀತೆ. ಇಬ್ಬರ ಲಜ್ಜೆಯನ್ನೂ ಪೂರ್ವದ ಸಲಿಗೆ ಮೆಟ್ಟಿ ತುಳಿದುಬಿಟ್ಟಿತು.

ಹಿಂದಿನ ಸಲಿಗೆ ಕಸಿಮಾಡಿದ ಗಿಡ ಚಿಗುರುವಂತೆ ಅರಿವಿಗೆ ಬಾರದಂತೆಯೆ ನೆಲೆಗೊಂಡ ತರುಣದಲ್ಲಿಯೇ, ಒಂದು ಶುಭದಿನ, ಸೀತೆಯ ಪಾಠಪ್ರವಚನವನ್ನು ಪ್ರಾರಂಭ ಮಾಡುವುದೆಂದು ರಂಗಸ್ವಾಮಿ ನಿಶ್ಚಯಿಸಿದನು.

"ಸೀತಾ" ಎಂದು ಕರೆದ ರಂಗಸ್ವಾಮಿ. ಕಾವೇರಿಯೂ ಅಲ್ಲಿಯೇ ಇದ್ದಳು.

"ಏನು, ಭಾವಯ್ಯ?"

"ವಿಜಯದಶಮಿಯೇ ಪಾಠ ಶುರುಮಾಡಬೇಕಾಗಿತ್ತಲ್ಲಮ್ಮ. ಆಗಲೇ ಒಂದು ವಾರ ಓಡಿಹೋಯಿತು. ಆಮೇಲೆ ನನ್ನ ಪರೀಕ್ಷೆಗೆ ನಾನು ಓದಬೇಕಾ

ಗುತ್ತೆ. ಪುರಸೊತ್ತೇ ಆಗುವುದಿಲ್ಲ. ಇನ್ನು ಎರಡು ಮೂರು ತಿಂಗಳಲ್ಲಿ ನಿನ್ನನ್ನ ತಯಾರುಮಾಡಿಬಿಡಬೇಕು ಅಂತ ಮಾಡಿಕೊಂಡಿದ್ದೇನೆ. ಇವೊತ್ತು ಶುಕ್ರ ವಾರ. ದಿನ ಚೆನ್ನಾಗಿದೆ. ಪ್ರಾರಂಭಿಸಿಬಿಡೋಣ. ಎಲ್ಲಿ, ಪುಸ್ತಕಗಳನ್ನ ತೆಗೆದು ಕೊಂಡು ಬಾ. ಆಗಿರುವಷ್ಟರಲ್ಲಿ ಪರೀಕ್ಷೆಮಾಡಿ ನೋಡಿಬಿಡುತ್ತೇನೆ."

"ಬೇಡ, ಭಾವಯ್ಯ" ಎಂದು ಬೇಸರದ ದನಿಯಲ್ಲಿ ಅಕ್ಕನ ಮುಖದ ಕಡೆ ನೋಡಿ, ಅವಳಿಂದ ನೆರವು ಕೋರಿ, ನುಡಿದಳು ಸೀತೆ. ಅಕ್ಕನಿಂದ ನಿರೀಕ್ಷಿಸಿದ ನೆರವು ದೊರೆಯಲಿಲ್ಲ.

"ಹಾಗಾದರೆ ನೀನು ಬಂದದ್ದು ಯಾಕೆ ಅಂತ ತಿಳಿದಿದ್ದೀಯಾ?"
—ರಂಗಸ್ವಾಮಿಯ ಪ್ರಶ್ನೆ.

"ನಮ್ಮಕ್ಕನ ಬಾಣಂತನಕ್ಕೆ"—ಸೀತೆಯ ಬಿಗುಮಾನದ ಉತ್ತರ.

"ನಾದಿನಿಗೆ ಪಾಠ ಹೇಳಿಕೊಟ್ಟು ಈ ಸಲ ಲೋವರ್ ಸೆಕಂಡರಿ ಪರೀಕ್ಷೆ ಯಲ್ಲಿ ಪ್ಯಾಸುಮಾಡಿಸುವ ಕರಾರಿನಮೇಲೆ ನಿಮ್ಮಕ್ಕನ ಯಜಮಾನರು ನಿನ್ನನ್ನ ಕರಸಿಕೊಂಡಿರುವ ವಿಷಯ ನಿನಗೆ ಗೊತ್ತಿಲ್ಲವೆ?"

ಸೀತೆ ಮರಳಿ ಅಕ್ಕನ ಮುಖ ನೋಡಿದಳು.

"ಕರಸಿಕೊಂಡಿರೋರು ನಮ್ಮಕ್ಕ."

"ಕರಾರಿಗೆ ರುಜುಹಾಕಿರುವವರೂ ನಿಮ್ಮ ಅಕ್ಕ ಮಹಾಶಯರೇ!"

"ಅವರ ಹತ್ತಿರ ನೀನು ಮಾತಿನಲ್ಲಿ ಗೆಲ್ಲುವುದಕ್ಕಾಗುವುದಿಲ್ಲವಮ್ಮ. ಸ್ಕೂಲಿನಲ್ಲಿ ಹುಡುಗರನ್ನ ದಬಾಯಿಸಿ ಅವರಿಗೆ ಅದೇ ರೂಢಿ. ಹೋಗಲಿ, ಪುಸ್ತಕ ತಂದುಬಿಡು. ಶುರುಮಾಡಿಬಿಡಲಿ" ಎಂದು ಕಾವೇರಿ ತಂಗಿಯನ್ನು ಪ್ರೀತಿಯಿಂದ ಒತ್ತಾಯಮಾಡಿದಳು.

ಯತ್ನವಿಲ್ಲದೆ, ಸೀತೆ ಪುಸ್ತಕಗಳನ್ನು ತಂದು ಮುಂದಿಟ್ಟುಕೊಂಡು 'ಗುರು'ವಿಗೆ ಅಭಿಮುಖಳಾಗಿ ಚಾಪೆಯ ಮೇಲೆ ಕುಳಿತಳು.

ರಂಗಸ್ವಾಮಿ 'ಪದ್ಯಸಾರ'ವನ್ನು ಕೈಗೆ ತೆಗೆದುಕೊಂಡ. ಎರಡು ಮೂರು ಪದ್ಯಗಳನ್ನು ಬಾಯಿಪಾಠ ಒಪ್ಪಿಸುವಂತೆ ಕೇಳಿದ. ಒಂದು ಪದ್ಯವನ್ನು ತಡವರಿಸುತ್ತ ಒಪ್ಪಿಸಿದಳು; ಇನ್ನೊಂದು ತನಗೆ ಮರೆತುಹೋಗಿದೆಯೆಂದಳು; ಇನ್ನೊಂದು ತನಗೆ ಆಗಿಲ್ಲವೆಂದಳು.

"'ಬೂಕರ್ ಟಿ. ವಾಷಿಂಗ್‌ಟನ್'—ಬರೆದವರು ಯಾರು?"

"ವೆಂಕಟಕೃಷ್ಣಯ್ಯನವರು."

"ಅವರ ಸ್ಥಳ ಯಾವುದು?"

"ಅಮೇರಿಕಾ ದೇಶ."

ರಂಗಸ್ವಾಮಿ ಗೊಳ್ಳನೆ ನಕ್ಕ.

"ನಾನು ಕೇಳಿದ್ದು, ವೆಂಕಟಕೃಷ್ಣಯ್ಯನವರ ಸ್ಥಳ ಯಾವುದು ಅಂತ?"

"ನನಗೆ ಗೊತ್ತಿಲ್ಲ, ಭಾವಯ್ಯ. ಅದನ್ನ ಹೇಳಲೇ ಇಲ್ಲ, ನಮ್ಮ ಮೇಷ್ಟ್ರು."

"ಹಾಗಂದರೆ ಆಗೋದಿಲ್ಲವಮ್ಮ. ಕವಿಗಳ ವಿಷಯ ಎಲ್ಲ ಕೇಳುತ್ತಾರೆ ಪರೀಕ್ಷೆಯಲ್ಲಿ. ಇರಲಿ, ನಾನು ಹೇಳಿ ಬರಸುತ್ತೇನೆ. ಗಟ್ಟಿಮಾಡಿಕೊಳ್ಳುವಿಯಂತೆ."

"ಕನ್ನಡ ಸಾಕು. ಎಲ್ಲಿ, ಚರಿತ್ರೆ ಸ್ವಲ್ಪ ಕೇಳೋಣ. ಎಲ್ಲಿಯವರೆಗೆ ಆಗಿವೆ?"

"ಚಂದ್ರಗುಪ್ತಮೌರ್ಯನ ವರೆಗೆ."

"ಬುದ್ಧನು ಬೋಧಿಸಿದ ತತ್ವಗಳು ಯಾವವು?"

"............. .."

"ಅಶೋಕನು ಸೋಲಿಸಿದ್ದು ಯಾವ ರಾಜ್ಯ?"

"................"

"ಚಂದ್ರಗುಪ್ತನಿಗೆ ಮೌರ್ಯ ಎಂದು ಹೆಸರು ಬರಲು ಕಾರಣವೇನು?"

"................"

"ಸರಿ, ಚರಿತ್ರೆಯ ಅಣ್ಣ ತಾನೇ ಭೂಗೋಳು........ಉಷ್ಣೋದಕ ಪ್ರವಾಹ ಎಂದರೆ ಏನು?"

"ಬಿಸಿನೀರಿನ ಹೊಳೆ."

ರಂಗಸ್ವಾಮಿ ಗೊಳ್ಳನೆ ನಕ್ಕ.

"ಯಾಕೆ ನಗುತೀರಿ? ಅವಳು ಹೇಳಿದ್ದು ಸರಿಯಾಗಿಲ್ಲವೆ?" ಎಂದು ಾವೇರಿ ತಂಗಿಯ ವಕೀಲಿ ವಹಿಸಿ ನುಡಿದಳು.

"ನಿಮ್ಮಕ್ಕ ಹೇಳಿದಮೇಲೆ ಸರಿಯಾಗೇ ಇರಬೇಕು. ಇರಲಿ. ನಮ್ಮ ೇಶದಲ್ಲಿ ಅತ್ಯಂತ ಹೆಚ್ಚಾಗಿ ಮಳೆ ಬೀಳುವ ಸ್ಥಳ ಯಾವುದು?"

" ಉಚ್ಚಂಗಿ."

ಉಚ್ಚಂಗಿ ಪಾರ್ವತಮ್ಮನವರ ಹುಟ್ಟೂರು. ಅಲ್ಲಿ ವಿಪರೀತ ಮಳೆ ಅಂತ ಹೇಳಿದ್ದು ಸೀತೆಯ ನೆನಪಿಗೆ ಬಂತು.

" ಕೊಳಲೂರಲ್ಲವೋ ? " ಎಂದು ರಂಗಸ್ವಾಮಿ ನಕ್ಕ.

ಸ್ವಲ್ಪ ಹೊತ್ತು ಮೌನ ನೆಲಸಿತು. ಬಳಿಕ ರಂಗಸ್ವಾಮಿಯೆಂದ :

" ನಾಳೆಯಿಂದ ಕ್ರಮವಾಗಿ ಕನ್ನಡ ಪದ್ಯಕ್ಕೆ ಅರ್ಥ, ಲೆಕ್ಕ ಇಷ್ಟು ಹೇಳಿಕೊಡುತ್ತೇನೆ. ಚರಿತ್ರೆ, ಭೂಗೋಳ, ಆರೋಗ್ಯ ಇವಿಷ್ಟನ್ನ ನೀನು ಚೆನ್ನಾಗಿ ಉರುಹಚ್ಚಬೇಕು, ತಿಳಿಯಿತೆ. ನಿಮ್ಮಕ್ಕನ ಮುಂದೆ ಕುಳಿತು ಓದಬೇಡ ; ಮಾತಿಗೆ ಎಳೆಯುತ್ತಾಳೆ."

ಸೀತೆ ಒಪ್ಪಿಕೊಂಡಳು.

ರಂಗಸ್ವಾಮಿ ತಾನು ಒಪ್ಪಿಕೊಂಡಷ್ಟು ಕ್ರಮವಾಗಿ ಪಾಠ ಮಾಡಲು ಆಗುತ್ತಿರಲಿಲ್ಲ. ಅಂತೂ ತಕ್ಕಮಟ್ಟಿಗೆ ಹೇಳಿಕೊಡುತ್ತಿದ್ದ. ' ಪ್ಯಾಸಾಗಲು ಇಷ್ಟು ಸಾಕು ' ಎಂದು ಅವನ ಎಣಿಕೆ. ಚರಿತ್ರೆ ಭೂಗೋಳ ಮಾತ್ರ ಮುಟ್ಟು ತ್ತಿರಲಿಲ್ಲ ; ಅವುಗಳಲ್ಲಿ ಹೇಳಿಕೊಡುವುದು ಏನೂ ಇಲ್ಲ, ಎಲ್ಲಾ ಉರುಹಚ್ಚು ವುದೇ ಎಂದು ಅವನ ಸಿದ್ಧಾಂತ. ಬಾಯಿಪಾಠ ಮಾಡುವುದೆಂದರೆ ಸೀತೆಗೆ ತಲೆನೋವು.

ಓದುವುದರ ಜೊತೆಗೆ ಅಕ್ಕನ ಕೆಲಸ ಹಗುರ ಮಾಡಬೇಕೆಂದು ಸೀತೆಯ ಹಂಬಲ. ಬಂದ ಒಂದೆರಡು ದಿನಗಳಲ್ಲಿಯೇ ಮನೆ ಗುಡಿಸುವುದು, ಸಾರಿಸಿ ರಂಗೋಲಿಯಿಡುವುದು, ಉಪಕರಣೆ ತೊಳೆಯುವುದು ಮೊದಲಾದ ಸುತ್ತು ಕೆಲಸಗನ್ನೆಲ್ಲಾ ತಾನೇ ವಹಿಸಿಕೊಂಡಳು. ಮಕ್ಕಳ ತಲೆ ಬಾಚುವಳು ; ತನ್ನ ಬಟ್ಟೆಯ ಜೊತೆಗೆ ಮಕ್ಕಳ ಬಟ್ಟೆಯನ್ನೂ ಒಗೆಯುವಳು ; ಸಂಜೆಯ ಹೊತ್ತು ಅವರಿಗೆ ಪಾಠವನ್ನೂ ಹೇಳಿಕೊಡುವಳು. " ಭಾವನ ಹಂಗೇಕೆ ಎಂತ ಪೀಟಿಗೆ ಪೀಟಿ ಮಾಡುತ್ತೀಯೋ ? " ಎಂದು ರಂಗಸ್ವಾಮಿ ಇದನ್ನು ಕಂಡು ಹಾಸ್ಯ ಮಾಡಿದ್ದನು.

ಒಂದು ದಿನ ಸೀತೆ ಹಿತ್ತಲ ಕಡೆ ಉಪಕರಣೆ ತೊಳೆಯುತ್ತಿದ್ದಾಗ ರಂಗಸ್ವಾಮಿ ಹೆಂಡತಿಯನ್ನು ಆಕ್ಷೇಪಿಸಿದನು :

" ಅಲ್ಲ, ಸೀತೆ ಉಪಕರಣೆ ಪಾತ್ರೆ ತೊಳೆದಿಟ್ಟರೆ ನೀನೇಕೆ ಹುಳಿ ಹಾಕಿ ಕೊಳ್ಳುತ್ತೀಯೆ ? "

" ಹೇಗಿದ್ದರೂ ನಿಮಗೆ ಸಂಧ್ಯಾವಂದನೆಗೆ ಎರಡು ಪಾತ್ರೆ ಬೇಕು; ಎಲ್ಲಕ್ಕೂ ಒಟ್ಟಿಗೆ ಹಾಕಿಬಿಡುತ್ತೇನೆ, ಅಷ್ಟೆ."

" ಹಾಗೆಲ್ಲಾ ಮಾಡಬೇಡ. ಕಂಡರೆ, ಅವಳು ಮನಸ್ಸಿಗೆ ನೊಂದು ಕೊಂಡಾಳು."

" ಹಾಗಾದರೆ, ಅವಳು ಮಾಡಿದ ಅಡಿಗೆಯನ್ನ ನೀವು ಊಟ ಮಾಡುತ್ತೀರ ? "

" ಅವಳು ಕಾಸಿದ ಕಾಫಿಯನ್ನ ಕುಡಿಯುತ್ತಿಲ್ಲವೆ ? ಊಟ ಮಾಡಿದರೆ ತಾನೆ ಏನು ? "

" ಹಾಗಿದ್ದಮೇಲೆ ಸರಿ. ನಿಮಗೆ ಆಗುವುದಿಲ್ಲವೇನೋ ಅಂತ ನಾನು ಹಾಗೆ ಮಾಡುತಾ ಇದ್ದೆ."

ತಾನು ತೊಳೆದ ಪಾತ್ರೆಯನ್ನು ಅಕ್ಕ ಹುಳಿಯಿಕ್ಕಿಕೊಳ್ಳುತ್ತಾಳೆ ಎಂಬ ಅಂಶ ಸೀತೆಯ ಗಮನಕ್ಕೆ ಬಾರದೆ ಹೋಗಲಿಲ್ಲ. ಈ ಮನೆಯಲ್ಲಿ ತನ್ನ ಸ್ಥಾನ ವೇನೆಂಬುದನ್ನು ನಿರ್ಣಯಿಸಿಕೊಳ್ಳಲು ಈ ಸಣ್ಣ ಅಂಶ ಅವಳಿಗೆ ಸಹಾಯಕ ವಾಯಿತು. ತಾಯ ಮನೆಯಲ್ಲಿ ತಾನು ಮಾಡುತ್ತಿದ್ದ ಕೆಲಸಕ್ಕೂ ಇಲ್ಲಿನದಕ್ಕೂ ವ್ಯತ್ಯಾಸವೇನೂ ಇದ್ದಂತೆ ಕಂಡುಬರಲಿಲ್ಲ. ಆದ್ದರಿಂದ ಅವಳ ಮನಸ್ಸಿಗೆ ನೋವೇನೂ ಆಗಿರಲಿಲ್ಲ.

ಬರಬರುತ್ತ ಕೆಲಸ ಮಾಡುವುದು ಕಾವೇರಿಯ ಕೈಯಿಂದ ಆಗದೆ ಹೋಯಿತು. ಅವಳಿಗೆ ಎಂಟು ತಿಂಗಳೂ ತುಂಬಿತು. ಬೆಳಗ್ಗಿನ ಹೊತ್ತು ಅಡಿಗೆ ಮಾಡುವುದು ರಂಗಸ್ವಾಮಿಯ ಪಾಲಿಗೆ ಬಂದಿತು; ಸಂಜೆಯ ಹೊತ್ತು ಕಾವೇರಿ ಬರಿಯ ಅನ್ನವನ್ನು ಮಾಡುತ್ತಿದ್ದಳು.

ಒಂದು ಸಂಜೆ ರಂಗಸ್ವಾಮಿ ಷರಟು ಬಿಚ್ಚಿ ಕೈಕಾಲು ತೊಳೆದುಕೊಂಡು, " ಸೀತಾ, ಸ್ವಲ್ಪ ಸಂಧ್ಯಾವಂದನೆಗೆ ನೀರು ತಂದುಕೊಡುತ್ತೀಯಾ, ಅಮ್ಮ" ಎಂದು ಕೇಳಿದ.

ಕಾವೇರಿ ಚಾಪೆಯ ಮೇಲೆ ಮಲಗಿದ್ದಳು.

" ಅಕ್ಕಾ, ಭಾವಯ್ಯನಿಗೆ ಸಂಧ್ಯಾವಂದನೆಗೆ ನೀರು ಬೇಕಂತೆ " ಎಂದಳು ಸೀತೆ, ಅಡುಗೆಯಮನೆಯಿಂದ ಹೊರಕ್ಕೆ ಬಂದು.

" ನಾನು ಏಳಲಾರೆ, ಅವರನ್ನೇ ತೆಗೆದುಕೊಳ್ಳಿ ಅನ್ನಮ್ಮ" ಎಂದು

ಕಾವೇರಿ ಬಳಲಿ ನುಡಿದಳು.

ಈ ಮಾತು ರಂಗಸ್ವಾಮಿಗೆ ಕೇಳಿಸಿತು.

"ನನ್ನ ಮಡಿಗೆ ನೀನು ತಂದುಕೊಟ್ಟರೂ ಆಗುತ್ತದಮ್ಮ. ಪರವಾ ಇಲ್ಲ, ತಂದಿಡು" ಎಂದು ರಂಗಸ್ವಾಮಿ ಸೀತೆಗೇ ಹೇಳಿದ.

ನೀರು ತಂದಿಟ್ಟುಕೊಳ್ಳುವುದು ರಂಗಸ್ವಾಮಿಗೆ ಕಷ್ಟದ ಕೆಲಸವಾಗಿರಲಿಲ್ಲ. ಸೀತೆಯ ಕೈಲೇ ನೀರು ತರಿಸಬೇಕೆಂದು ಅವನ ಉದ್ದೇಶ.

ಸೀತೆ ಅಳುಕುತ್ತ ಅಳುಕುತ್ತಾ ನೀರು ತುಂಬಿದ ಪಂಚಪಾತ್ರೆಯನ್ನೂ, ಅರ್ಘ್ಯಪಾತ್ರೆಯನ್ನೂ ತಂದಿಟ್ಟಳು. ಸೀತೆಗೆ ಒಂದು ಕಡೆ ಹಿಗ್ಗು ; ಮತ್ತೊಂದು ಕಡೆ ಕುಗ್ಗು.

ಮಾರನೆಯ ದಿನದಿಂದ ಸಂಜೆಯ ಅಡಿಗೆಯ ಕೆಲಸವನ್ನೂ ಸೀತೆಯೇ ವಹಿಸಿಕೊಂಡಳು. ಅವಳಿಗೆ ಕೈತುಂಬ ಕೆಲಸವಾಯಿತು; ಉಳಿದ ಹೊತ್ತಿನಲ್ಲಿ ಓದು. ಕೊರಗಿಗೆ, ಚಿಂತೆಗೆ ಅವಕಾಶವೇ ಇಲ್ಲ.

'ಹವಾ ಬದಲಾವಣೆಗೋ ಏನೋ, ಸೀತೆ ಬಂದೀಚೆಗೆ ಮೈಕೈ ತುಂಬಿ ಕೊಂಡಿದ್ದಾಳೆ. ಹಿಂದಿರುಗಿ ಹೋದಾಗ, ಅಕ್ಕನ ಮನೆಯಲ್ಲಿ ದುಡಿದು ಒಡ ವಾದಳು ಎನ್ನುವ ದೂರು ಬರದೆ ಹೋದರೆ ಸರಿ' ಎಂದು ಕಾವೇರಿ ತನ್ನ ಲ್ಲಿಯೇ ತೃಪ್ತಿಗೊಂಡಳು.

ಸೀತೆಯ ಓದು ಎಷ್ಟರಮಟ್ಟಿಗೆ ಮುಂದುವರಿದಿದೆ ಎಂದು ತಿಳಿಯಲು ಒಂದು ಭಾನುವಾರ ಮಧ್ಯಾಹ್ನ ರಂಗಸ್ವಾಮಿ ಒಂದು ಪರೀಕ್ಷೆ ಇಟ್ಟುಕೊಂಡ. ಸೀತೆ ಇಷ್ಟವಿಲ್ಲದೆ ಭಾವನ ಮುಂದೆ ಬಂದು ಕುಳಿತಳು. "ನಾನು ಇಂದು ಪರೀಕ್ಷೆಗೆ ಸಿದ್ಧಳಾಗಿಲ್ಲ, ಇನ್ನೊಂದು ದಿನ" ಎಂದಳು. ಭಾವನ ಛಲವನ್ನು ಅವಳು ಕದಲಿಸಲಾಗಲಿಲ್ಲ. ಪರೀಕ್ಷೆಗೆ ಒಳಪಡಲೇಬೇಕಾಯಿತು.

"ಪ್ರತ್ಯುತ್ಪನ್ನಮತಿ—ಯಾವ ಸಂಧಿ ?"

ಸೀತೆ ಮೌನ.

"ಪ್ರಕೃತಿಭಾವ—ಎಂದರೇನು ?"

"ಬಿಡಿ, ಭಾವ."

"ಭಾವನಾಮ ಎಂದರೇನು ?"

"ರಂ-ಗ-ಸ್ವಾ-ಮಿ...." ಎಂದು ಸೀತೆ ನಕ್ಕಳು. ಎಲ್ಲರೂ ನಕ್ಕರು.

"ಸರಸವಾಡಿದರೆ ಸರಸ್ವತಿ ಒಲಿಯುವುದಿಲ್ಲ" ಎಂದು ರಂಗಸ್ವಾಮಿ ಗಂಭೀರವಾಗಿ ನುಡಿದು, 'ಭೂಗೋಳ'ದ ಪ್ರಶ್ನೆಗಳನ್ನು ಪ್ರಾರಂಭಿಸಿದ:

"ಬೇಲೂರು ಯಾತಕ್ಕೆ ಪ್ರಸಿದ್ಧಿ?"

"ಕೋಳಲೂರಿನ ಸಮೀಪದಲ್ಲಿದೆ. ಇಲ್ಲಿನ ದೇವಾಲಯ...."

"ಯಾವ ದೇವರದ್ದು?"

"ರಂಗನಾಥಸ್ವಾಮಿಯದು."

"ಸದ್ಯ, ರಂಗಸ್ವಾಮಿಯದಲ್ಲವಲ್ಲ....ಹೋಗಲಿ, ಪ್ರಪಂಚದಲ್ಲೆಲ್ಲಾ ಅತ್ಯಂತ ದೊಡ್ಡ ಸರೋವರ ಯಾವುದು?"

"..............."

"ಅತ್ಯಂತ ದೊಡ್ಡ ಮರುಭೂಮಿ ಯಾವುದು?"

"..............."

"ಏನು ಸೀತಾ, ಇದು! ಹೀಗಾದರೆ, ಮುಂದಿನ ತಿಂಗಳು ಪರೀಕ್ಷೆಗೆ ಯಾವ ಧೈರ್ಯದಿಂದ ಕಟ್ಟಿಸುವುದು? ನಿನ್ನ ತಂಗಿಗೆ ಸ್ವಲ್ಪ ಓದುವಹಾಗೆ ಹೇಳಬಾರದೆ?" ಎಂದು ರಂಗಸ್ವಾಮಿ ಹೆಂಡತಿಯ ಕಡೆ ತಿರುಗಿದ.

"ಇದೇನು ಹೀಗನ್ನುತ್ತೀರ? ಬಿಡುವಾದಾಗೆಲ್ಲ ನಿಮ್ಮ ರೂಮಿನಲ್ಲಿ ಓದುತ್ತಾನೇ ಕುಳಿತಿರುತ್ತಾಳೆ! ಹೀಗೆ ಓದಿದರೆ ಕಣ್ಣು ಇಂಗಿಹೋಗುತ್ತೆ, ಅಷ್ಟು ಓದಬೇಡ ಅಂತ ಹೇಳುತ್ತ ಇದ್ದೀನಿ. ಎಲ್ಲೋ, ನೀವೇ ಹೇಳಿ ಕೊಡೋದೇ ಸರಿಯಾಗಿಲ್ಲ. ಸುಮ್ಮನೆ ಅವಳ ಮೇಲೆ ತಪ್ಪುಹಾಕಬೇಡಿ" ಎಂದು ಕಾವೇರಿ ತಂಗಿಯ ಪರವಾಗಿ ವಾದಿಸಿದಳು.

ರಂಗಸ್ವಾಮಿಗೆ ಆಶ್ಚರ್ಯವಾಯಿತು. ತಾನು ಹೇಳಿಕೊಡುತ್ತಿದ್ದುದೇನೋ ಸ್ವಲ್ಪ, ದಿಟ; ಇನ್ನುಮೇಲೆ ಹೆಚ್ಚಾದ ಮುತುವರ್ಜಿ ವಹಿಸಬೇಕೆನ್ನಿಸಿತು ಅವನಿಗೆ. ಆದರೂ, ಕಾವೇರಿ ಹೇಳಿದಂತೆ ಸೀತೆ ಬಿಡುವಾದಾಗಲೆಲ್ಲ ಓದುತ್ತಿದ್ದಿರಬೇಕಾದರೆ, ಫಲ ಏಕೆ ಸೊನ್ನೆ? ಒಂದು ಪ್ರಶ್ನೆಗೂ ಸರಿಯಾಗಿ ಉತ್ತರ ಹೇಳಿಲ್ಲವಲ್ಲ? ಕೋಳಲೂರಿನಲ್ಲಿ ಓದಿದಷ್ಟನ್ನೂ ಮರೆತುಬಿಟ್ಟಿದ್ದಾಳೆ! ಮುಂದಕ್ಕೆ ಹೇಳಿಕೊಟ್ಟಷ್ಟನ್ನೂ ಓದಿಲ್ಲ. ಚರಿತ್ರೆ ಭೂಗೋಳವನ್ನಂತೂ ಮುಟ್ಟಿದಹಾಗೆಯೇ ಕಾಣುವುದಿಲ್ಲ! ಇದೇನಾಶ್ಚರ್ಯ? ಸೀತೆ ದಡ್ಡಿಯೆ? ಹಾಸ್ಯಮಾಡಬಲ್ಲವಳನ್ನು ದಡ್ಡಿಯೆನ್ನಲಾದೀತೆ? ಮಕ್ಕಳಿಗೆ ಅಷ್ಟು ಚೆನ್ನಾಗಿ

ಪಾಠ ಹೇಳಿಕೊಡುತ್ತಾಳೆ! ಜ್ಞಾಪಕಶಕ್ತಿ ಇಲ್ಲವೆ? ಇರಬಹುದು. ಆದರೆ ಇಷ್ಟೊಂದು ಮರವೆ? ಇರಲಾರದು. ಅವಳು ಓದುತ್ತಲೇ ಇಲ್ಲ. ಇದೇ ಖಂಡಿತ. ಆದರೆ ಕಾವೇರಿಯ ಸಾಕ್ಷ್ಯ ಎಲ್ಲಿಗೆ ಹೋಗಬೇಕು? ತಂಗಿಯ ಮಾನ ಕಾಪಾಡುವ ಪ್ರಯತ್ನ!

"ಪಾಠಗಳನ್ನ ಖಂಡಿತ ಓದುತ್ತಿದ್ದೀಯಾ, ಸೀತಾ!"

ಮುಗುಳುನಗೆಯ ಉತ್ತರ.

"ಪಾಪ, ಯಾಕೆ ಅವಳನ್ನ ಗೋಳುಹುಯ್ದುಕೊಳ್ಳುತ್ತೀರಿ ಹಾಗೆ? ಅದಕ್ಕೇ ಹುಡುಗರಿಗೆ ಮೇಷ್ಟ್ರು ಅಂದರೆ ಅಷ್ಟು ಭಯ. ಸೀತೆ ಹುಡುಗನಾಗಿದ್ದಿದ್ದರೆ ಇಷ್ಟುಹೊತ್ತಿಗೆ ಚೆಚ್ಚಿಹಾಕಿಬಿಡುತ್ತಿದ್ದಿರಿ ಅಂತ ಕಾಣುತ್ತೆ. ನೀವು ಕೂಡ ಅವಳಷ್ಟು ಓದುತ್ತಿಲ್ಲ." ಕಾವೇರಿಯ ಧ್ವನಿಯಲ್ಲಿ ತಂಗಿಯ ಬಗೆಗೆ ಅಭಿಮಾನದ ಆಗ್ರಹವಿದ್ದಿತು.

"ಹಾಗಿದ್ದರೆ ಸರಿ. ನನ್ನ ಕರ್ತವ್ಯ ಮುಗಿದಹಾಗಾಯಿತು" ಎಂದ ರಂಗಸ್ವಾಮಿ, ಬೇರೆ ಏನನ್ನೂ ಹೇಳಲು ತೋರದೆ.

'ಸಮ್ಮತ' ಹೊಡೆದ ರಂಗಸ್ವಾಮಿಯ ಕೈಗಳು ಸೀತೆಯ ಪುಸ್ತಕಗಳನ್ನು ಒಂದೊಂದಾಗಿ ಹಿಡಿದಾಡತೊಡಗಿದುವು. ಇದುವರೆಗೂ ಅವನು ಬಾಯಲ್ಲೇ ಪ್ರಶ್ನೆಗಳನ್ನು ಕೇಳಿದ್ದನು. ಇದ್ದಕ್ಕಿದ್ದಹಾಗೆ ಅವನಿಗೆ ಏನೋ ಹೊಳೆಯಿತು.

ಯಾವುವೋ ಎರಡು ಮೂರು ಸಣ್ಣಪುಟ್ಟ ಪ್ರಶ್ನೆಗಳನ್ನು ಕೇಳಿದಮೇಲೆ, ಹಠಾತ್ತನೆ—

"ದೇವಿ ಚೌಧುರಾಣಿಯ ನಿಜವಾದ ಹೆಸರೇನು?" ಎಂದು ರಂಗಸ್ವಾಮಿ ಪ್ರಶ್ನಿಸಿದನು.

"ಪ್ರಫುಲ್ಲೆ" ಎಂದು ಉತ್ತರ ಬಂದಿತು.

"ಸಿಕ್ಕಿಬಿದ್ದರು ಕಳ್ಳರು!" ಎಂದು ರಂಗಸ್ವಾಮಿ ಚಪ್ಪಾಳೆ ತಟ್ಟುತ್ತಾ ಎದ್ದುನಿಂತ. ಸೀತೆ ಬಾಯಿ ಮುಚ್ಚಿಕೊಂಡಳು, ನಗುವನ್ನು ತಡೆಯಲಾರದೆ.

"ಕಳ್ಳರು ಯಾರು? ಏನು ಕಳ್ಳತನ?" ಕಾವೇರಿ ಕಕ್ಕಾಬಿಕ್ಕಿಯಾಗಿ ಕೇಳಿದಳು.

"ಕಳ್ಳರು—ನಿನ್ನ ತಂಗಮ್ಮ, ಕಳ್ಳತನ—ಕದ್ದು ಓದುವುದು!"

"ಕದ್ದು ಓದುವುದು! ನನ್ನ ಎದುರಿಗೇನೇ ಓದುತ್ತಾ ಇರುತ್ತಾಳೆ!

ಅಷ್ಟೊಂದು ಓದಿದರೆ ಹೇಗೆ ಎಂತ ನಾನೇ ಹೇಳಲಿಲ್ಲವೆ ?"

"ಏನನ್ನು ಓದುತ್ತಿದ್ದಾಳೆ, ಗೊತ್ತೆ ?"

"ಪುಸ್ತಕ!"

ರಂಗಸ್ವಾಮಿ ಗೊಳ್ಳನೆ ನಕ್ಕನು. "ನೀನು ಕನ್ನಡ ಒಂದನೆಯ ಕ್ಲಾಸಿನ ವರೆಗೆ ಓದಿದಷ್ಟನ್ನೂ ಮರೆತುಬಿಟ್ಟದ್ದೀ, ಪಾಪ, ನಿನಗೆ ಹೇಗೆ ಗೊತ್ತಾಗಬೇಕು ?"

"ಹಾಗಾದರೆ ಕದ್ದು ಏನು ಓದುತ್ತಿದ್ದಾಳೆ, ಓದಬಾರದ್ದನ್ನ ?"

"ನಾನು ವಾರವಾರವೂ ಲೈಬ್ರರಿಯಿಂದ ತರುವ ಕನ್ನಡ ಕಾದಂಬರಿಗಳನ್ನ! ಆನಂದಮಠ, ದುರ್ಗೇಶನಂದಿನಿ, ಅಡವಿಯ ಹುಡುಗಿ, ಅಮೃತ ಪುಲಿನ, ವಿಷವೃಕ್ಷ, ಕಮಲಕುಮಾರಿ, ಈಶ್ವರೀಸೂತ್ರ, ಮಾಧವಕರುಣಾ ವಿಲಾಸ, ಕರ್ಮಕಥೆ, ಯದುರಾಜ, ಸುರತನಗರದ ಶ್ರೇಷ್ಠಿ....ನಾನು ಈಚೆಗೆ ತಂದ ಕಾದಂಬರಿಗಳನ್ನೆಲ್ಲಾ ಓದಿಬಿಟ್ಟಿದ್ದಾಳೆ, ಹೌದೋ ಅಲ್ಲವೋ" ಎಂದು ರಂಗಸ್ವಾಮಿ ಸೀತೆಯ ಕಡೆಗೆ ಮುಗುಳುನಗೆ ಬೀರಿದ.

ಮುಗುಳುನಗೆಗೆ ಮುಗುಳುನಗೆಯು ಉತ್ತರ.

೩

ಮನೆಯಲ್ಲಿ ಹಿರಿಯರು ಯಾರೂ ಇಲ್ಲವೆಂಬ ಕಾರಣ, ಕಾವೇರಿಗೆ ತುಸು ನೋವು ಕಾಣಿಸಿಕೊಂಡ ಕೂಡಲೆ, ಅವಳನ್ನು ವಾಣೀವಿಲಾಸ ಆಸ್ಪತ್ರೆಗೆ ಸೇರಿಸಲಾಯಿತು. ನೋವು ತಟ್ಟನೆ ನಿಂತಿತು; ತಟ್ಟನೆ ಮತ್ತೆ ಕಾಣಿಸಿ ಕೊಂಡಿತು. ಹೀಗೆಯೇ ಒಂದು ವಾರ ಎಳೆಯಿತು. ಮನೆಗಂತೂ ಕರೆತರುವ ಹಾಗಿರಲಿಲ್ಲ. ಇನ್ನೂ ಕೆಲವು ದಿನ ತಡೆಯಬಹುದೆಂದರು ವೈದ್ಯರು.

ಮನೆಯಲ್ಲಿ ಈಗ ಸೀತೆಯೇ ಒಡತಿ; ಮಕ್ಕಳಿಗೆ ತಾಯಿ. ಚಿಕ್ಕಮ್ಮನನ್ನು ಚೆನ್ನಾಗಿ ಹೊಂದಿಕೊಂಡು ತಾಯ ಹಂಬಲನ್ನೆ ಮರೆತಿದ್ದುವು ಮಕ್ಕಳು. ಈಗ ಎರಡು ಹೊತ್ತಿನ ಕಾಫಿ, ಎರಡು ಹೊತ್ತಿನ ಅಡಿಗೆ, ಸುತ್ತುಗೆಲಸ, ಕಸ ಮುಸುರೆ—ಎಲ್ಲವೂ ಸೀತೆಯ ಕೊರಳಿಗೆ ಸುತ್ತಿಕೊಂಡಿದ್ದುವು. ಎಲ್ಲ ಕೆಲಸವನ್ನೂ ನಗುಮುಖದಿಂದ ಮಾಡಿಕೊಂಡು ಹೋಗುತ್ತಿದ್ದ ನಾದಿನಿಯನ್ನು ಕಂಡು ರಂಗಸ್ವಾಮಿಗೆ ಮೆಚ್ಚುಗೆಯಾಯಿತು, ಹೆಮ್ಮೆಯೆನಿಸಿತು.

ರಂಗಸ್ವಾಮಿಗೂ ಬಿಡುವೇ ಇಲ್ಲ; ಬೆಳಗ್ಗೆ ಹೆಂಡತಿಗೆ ಕಾಫಿ ಒಯ್ಯಬೇಕು; ಬಂದು ಊಟ ಮಾಡಿಕೊಂಡು, ಅವಳಿಗೆ ಊಟ ಕೊಂಡೊಯ್ದು ಕೊಟ್ಟು, ಶಾಲೆಗೆ ಹೋಗಬೇಕು; ಮತ್ತೆ ಸಂಜೆಯ ಕಾಫಿ, ಊಟ. ಒಂದೊಂದು ದಿನ ಸಂಜೆ ರಂಗಸ್ವಾಮಿ ಸುಬ್ಬಲಕ್ಷ್ಮಿಯನ್ನೊ ರಾಮಚಂದ್ರನನ್ನೊ ಜೊತೆಯಲ್ಲಿ ಕರೆದೊಯ್ಯುವನು.

ಒಂದು ಸಂಜೆ—ಹೆರಿಗೆಯಾಗುವ ಮುನ್ನ—ಕಾವೇರಿ ಕೇಳಿದಳು:

"ಸೀತೆ ಬೇಸರಪಟ್ಕೊಳ್ಳುತ್ತಿಲ್ಲ ತಾನೆ?"

"ಹಾಗೇನೂ ಕಾಣಿಸಲಿಲ್ಲ."

"ಪಾಪ, ಅಡಿಗೆಯ ಕೆಲಸವೂ ಅವಳ ಮೇಲೇ ಬಿತ್ತು. ಊರಿನಲ್ಲಿ ಒಂದು ದಿನವೂ ಅಡಿಗೆ ಮಾಡಿ ಕಾಣಳು. ಅಲ್ಲ, ಎಷ್ಟು ಬೇಗ ಅಡಿಗೆ ಕಲಿತುಬಿಟ್ಟಳು!"

"ರುಚಿಯಾಗೂ ಮಾಡುತಾಳೆ."

"ನೀರು ಹಾಕುವುದಕ್ಕೆ ಮಡಿ ಹೆಂಗಸರನ್ನ ವಿಚಾರಿಸಿನೋಡಿ ಗೊತ್ತು ಮಾಡಿಕೊಡಿ ಅಂತ ನಂಜಮ್ಮನವರಿಗೆ ಹೇಳಿದ್ದೆ. ಸೀತೆಯ ಕೈಲಿ ಹೇಳಿಸಿ ಆಕೆಗೆ ಈಗಲೇ ಜ್ಞಾಪಿಸಬೇಕು. ಪಕ್ಕದ ಮನೇಲಿ ಕಸಮುಸುರೆ ಮಾಡುತಾಳಲ್ಲ, ನಾದಮ್ಮ, ಅವಳನ್ನ ಮೂರು ತಿಂಗಳಮಟ್ಟಿಗೆ ಈಗಿನಿಂದಲೇ ಗೊತ್ತುಮಾಡಿಸಿಬಿಡಿ: ಕಸಮುಸುರೆ, ಬಾಣಂತಿ ಬಟ್ಟೆ, ಮಗುವಿನ ಬಟ್ಟೆ, ಎರಡು ಹೊತ್ತೂ ಮನೆ ಕಸ ಗುಡಿಸುವುದು, ಬೆಳಗ್ಗೆ ಮನೆಬಾಗಿಲಿಗೆ ನೀರು ಹಾಕಿ ರಂಗೋಲಿ ಇಡೋದು—ಇಷ್ಟು ಕೆಲಸ ಅಂತ ಈಗಲೇ ಹೇಳಿಬಿಡಬೇಕು. ಬಟ್ಟೆಗೆ ಒಂದು ರೂಪಾಯಿ, ಉಳಿದ ಕೆಲಸಕ್ಕೆ ಒಂದು ರೂಪಾಯಿ. ಅಂತೂ, ಅಡಿಗೆಯ ಕೆಲಸ ಒಂದು ಹೊರತು ಇನ್ನೇನೂ ಅವಳಮೇಲೆ ಹೆಚ್ಚಿನ ಭಾರ ಹಾಕಕೂಡದು" ಎಂದು ಕಾವೇರಿ ನಿಧಾನವಾಗಿ, ಕುಗ್ಗಿದ ದನಿಯಲ್ಲಿ, ತಡೆತಡೆದು ಗಂಡನಿಗೆ ಸಲಹೆ ಸೂಚನೆ ಕೊಟ್ಟಳು.

"ನೀನು ಮನೆಗೆ ಬರುವ ವರೆಗೆ, ಅಷ್ಟೆ. ಆಮೇಲೆ ಸಾಧ್ಯವಾದರೆ ಬೆಳಗ್ಗಿನ ಹೊತ್ತು ನಾನೇ ಅಡಿಗೆ ಮಾಡಿಬಿಡುತ್ತೇನೆ. ಅವಳಿಗೆ ಅದನ್ನೂ ಬಿಡುವುದಿಲ್ಲ...."

"ನಿಮಗೆ ಪರೀಕ್ಷೆ ಹತ್ತಿರವಾಗುತ್ತಲ್ಲಾ...."

" ಏನು ಮಾಡುವುದು ? ಬೆಳಗಿನ ಜಾವ ಏಳಲೇಬೇಕು. ಅವಳಿಗೂ ಪರೀಕ್ಷೆಯಲ್ಲವೆ ?...."

" ಹೌದು, ಹೌದು. ಮರೆತುಹೋಯಿತು. ಅವಳನ್ನ ಇಲ್ಲಿಗೆ ದುಡಿಸಿಕೊಳ್ಳುವುದಕ್ಕೆ ಕರೆಸಿಕೊಂಡೆವು ಅನ್ನುವಹಾಗಾಗಬಾರದು. ಹೇಗಾದರೂ ಮಾಡಿ ಅವಳನ್ನ ಪ್ಯಾಸುಮಾಡಿಸಲೇಬೇಕು. ಅಂದಹಾಗೆ, ಈಗ ಹೇಗಿದೆ ಅವಳ ಓದು ? ಧೈರ್ಯವಾಗಿ ಪರೀಕ್ಷೆಗೆ ಕಟ್ಟಬಹುದೋ ? "

" ಅದೇನು ಪರವಾ ಇಲ್ಲಾ. ಮಹಾ ಬುದ್ಧಿವಂತೆ, ನಿನ್ನ ತಂಗಿ. ನಾನು ತರುತಾ ಇದ್ದ ಕಥೆ ಪುಸ್ತಕಗಳನ್ನೆಲ್ಲಾ ಓದುತಾ ಇದ್ದಳು...."

" ಅಷ್ಟೇ ಅಲ್ಲಾ ಅಂದ್ರೆ. ಅಕ್ಕಪಕ್ಕದ ಮನೆ ಹುಡುಗರನ್ನೆಲ್ಲಾ ಗುರುತು ಮಾಡಿಕೊಂಡು, ಅವರ ಮನೆಗಳಿಂದಲೂ ಪುಸ್ತಕ ತರಿಸಿಕೊಂಡು ಓದುತಾ ಇದ್ದಳು. ಮೂರು ಹೊತ್ತೂ ಓದು–ಓದು–ಓದು. ಅವಳಿಗೆ ಈಚೆಗೆ ಓದಿನ ಹುಚ್ಚು ಹಿಡಿದುಬಿಟ್ಟದೆ...."

" ನೋಡಿದೆಯಾ ? ಇನ್ನು ಉಳಿದ ಪಾಠವನ್ನ ಓದದೆಯೇ ಬರಬೇಕು ಅಂದರೆ ಹೇಗೆ ಬರುತ್ತೆ ? ಈಗ ನಾನು ನಮ್ಮ ಲೈಬ್ರರಿಯಿಂದ ಪುಸ್ತಕ ತರೋದನ್ನೇ ನಿಲ್ಲಿಸಿಬಿಟ್ಟದೀನಲ್ಲ, ಅದಕ್ಕೋಸ್ಕರವೇ. ಇನ್ನುಮೇಲೆ ಪಟ್ಟಾಗಿ ಪಾಠ ಓದಿಸುತೀನಿ, ಅವಳ ಕೈಲಿ."

" ಹಾಗಿದ್ದರೆ ಸರಿ " ಎಂದು ಕಾವೇರಿ ತೃಪ್ತಿಗೊಂಡಳು.

ಹಿಂದಿನ ದಿನ ತಾನೇ ರಂಗಸ್ವಾಮಿ ' ಖಜಾನೆ 'ಯಲ್ಲಿ ಸೀತೆಯ ಪರೀಕ್ಷೆ ಹಣ ಕಟ್ಟಿ, ಪರೀಕ್ಷೆಯ ಅಪೇಕ್ಷಾಪತ್ರಿಕೆಯನ್ನೂ ಹಣದ ' ಚಲನ್ನ 'ನ್ನೂ ವಿದ್ಯಾಭ್ಯಾಸದ ಇಲಾಖೆಗೆ ಕಳಿಸಿಕೊಟ್ಟಿದ್ದ. ಆ ಸುದ್ದಿಯನ್ನು ಸೀತೆಗೆ ತಿಳಿಸಿ, " ನಾಳೆಯಿಂದ ಸರಿಯಾಗಿ ಪಾಠ ಓದಬೇಕು. ನಾನು ಹೇಳಿದ ಹಾಗೆ ಕೇಳಬೇಕು " ಎಂದು ಸುಬ್ಬಲಕ್ಷ್ಮಿಗೆ ಹೇಳುವ ರೀತಿ, ಅದೇ ಧ್ವನಿಯಲ್ಲಿ, ಸೀತೆಗೆ ಬುದ್ಧಿ ಹೇಳಿದ.

ಅದರ ಮಾರನೆಯ ದಿನ ಭಾನುವಾರ. ರಂಗಸ್ವಾಮಿ ಅದೇ ತಾನೆ ಊಟ ಮಾಡಿ ತನ್ನ ಕೋಣೆಯಲ್ಲಿ ಸುತ್ತಿರಿಸಿದ್ದ ಹಾಸಿಗೆಯನ್ನು ಒರಗಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದ. ಸೀತೆ ಒಳಗೆ ಊಟ ಮಾಡುತ್ತಿದ್ದಳು.

ರಂಗಸ್ವಾಮಿಯ ಕಣ್ಣು ಅಲ್ಲೇ ಚಾಪೆಯ ಮೇಲೆ ಬಿದ್ದಿದ್ದ ಒಂದು

ಪುಸ್ತಕದ ಮೇಲೆ ಹರಿಯಿತು. ಹೆಸರು ದಪ್ಪಕ್ಷರಗಳಲ್ಲಿ ದೂರಕ್ಕೂ ಸ್ಪಷ್ಟವಾಗಿ ಕಾಣುತ್ತಿತ್ತು: 'ಮಾಡಿದ್ದುಣ್ಣೋ ಮಹಾರಾಯ'; ಮನೆಮನೆಯಲ್ಲೂ ಓಡಾಡುತ್ತಿದ್ದ ಪುಸ್ತಕ. 'ಸರಿ, ಪಕ್ಕದ ಮನೆಯಿಂದಲೋ ಎದುರು ಮನೆ ಯಿಂದಲೋ ಸಂಪಾದಿಸಿದ್ದಾಳೆ' ಎಂದುಕೊಂಡ ಮನಸ್ಸಿನಲ್ಲಿ. ತಾನು ಹಿಂದಿನ ವರ್ಷ ಓದಿದ್ದ ಪುಸ್ತಕ. ಕಥೆ ಮಸಕುಮಸಕಾಗಿ ನೆನಪಾಗತೊಡಗಿತು. ಆ ಕಥೆಯ ಸೀತೆ—ಮಹಾಪತಿವ್ರತೆ. ಪಾತಿವ್ರತ್ಯ ಸತಿಗೆ ಹೇಳಿದ್ದು. ಪತಿಯೇ ಇಲ್ಲದವಳಿಗೆ? ಸೀತೆಗೆ ಪತಿಯಿಲ್ಲ. ಇದ್ದಿದ್ದರೆ ಚೆನ್ನಾಗಿತ್ತು. ಆದರೆ ಇಲ್ಲ. ಎಂಥ ಚೆಲುವೆ ಸೀತೆ? ಆದರೆ ಆ ಚೆಲುವು ವ್ಯರ್ಥ; ಕಾಡಿನ ಬೆಳುದಿಂಗಳು.

ಎಷ್ಟು ಬೇಡವೆಂದರೂ ಕೇಳಲಿಲ್ಲ, ಹಾಳು ಮನಸ್ಸು; ಸೀತೆಯ ಚೆಲುವಿನ ಚಾರುಚಂದ್ರಿಕೆಯಲ್ಲಿ ವಿಹರಿಸತೊಡಗಿತು.

ಕಾಡಿನ ಬೆಳುದಿಂಗಳು: ವನಜ್ಯೋತ್ಸ್ನಾ. ಶಕುಂತಲೆ ಮಾಧವೀ ಲತೆಗೆ ಇಟ್ಟ ಹೆಸರು. ಶಕುಂತಲೆ–ದುಷ್ಯಂತ. ದುಷ್ಯಂತನಿಗೆ ಹೆಂಡಿರಿರಲಿಲ್ಲವೆ? ಶಕುಂತಲೆಯನ್ನೇಕೆ ಒಲಿದ? ಅವಳ ಚೆಲುವು ಅಷ್ಟು ಮೋಹಕ. ಎಷ್ಟು ಮೋಹಕ? ತಾನು ಕಾಣ.

ಸೀತೆಯ ಚೆಲುವು ತನಗೆ ಕಾಣುತ್ತಿದೆ; ಮೂರು ನಾಲ್ಕು ತಿಂಗಳಿಂದ ಕಾಣುತ್ತಿದೆ. ಮನಸ್ಸನ್ನೆಲ್ಲ ತುಂಬಿದೆ, ಕವರಿದೆ. ತನಗೇ ಅದರ ಅರಿವಿರಲಿಲ್ಲ.

ಕಾವೇರಿ ಕುರೂಪಿಯೇ? ಅಲ್ಲ. ಆದರೆ ಎಂದೂ ಅವಳು ಸೀತೆಯಷ್ಟು ಚೆಲುವೆಯಾಗಿರಲಿಲ್ಲ. ಎರಡು ಮಕ್ಕಳ ತಾಯಿ. ಸೀತೆ ಇನ್ನೂ ಯಾರೂ ಮುಟ್ಟದ ಹೂವು. ಮುಂದೆ ಯಾರೂ ಕೊಯ್ಯಬಹುದು: ವನಸುಮ, ವನಜ್ಯೋತ್ಸ್ನಾ: ಕಾಡಬೆಳುದಿಂಗಳು.

ಕಾಡಬೆಳುದಿಂಗಳು: ತಾನೇಕೆ ಅದರಲ್ಲಿ ನಲಿಯಬಾರದು? ಈಗ ನಲಿಯುತ್ತಿಲ್ಲವೆ? ಅಷ್ಟೇ ಸಾಕು.

ಬೆಳುದಿಂಗಳು ಅಮೂರ್ತ ಸೌಂದರ್ಯ; ಕೈಗೆ ಸಿಕ್ಕದ ಪದಾರ್ಥ. ಸೀತೆ ಹಾಗಲ್ಲ; ಸಾಕಾರ ಸೌಂದರ್ಯ. ನೋಡಬಹುದು; ಮುಟ್ಟಬಹುದು.

ನೋಡಿಯಾಗಿದೆ; ನೋಡುತ್ತಿದ್ದೇನೆ; ನೋಡಬಹುದು.

ಮುಟ್ಟಿಲ್ಲವೆ? ಮುಟ್ಟಿದ್ದೇನೆ—ಬಹು ಹಿಂದೆ; ಮತ್ತೆ ಮೊನ್ನೆ, ನವರಾತ್ರಿಯ ನೋಟ ನೋಡಿದಾಗ. ಎತ್ತಿದಾಗ ಅದು ಹೇಗೆ ಹೂವಿನಂತಿದ್ದಳು!

ಹೂವು—ಯಾರೂ ಮುಡಿಯದ ಹೂವು!

ಮುಡಿಯುವಂತಿಲ್ಲ: ಏಕೆ? ಹೆರರ ಹೆಣ್ಣೆ? ಇನ್ನೆಂದಿಗೂ ಅಲ್ಲ. ಹೆಂಡತಿಯ ತಂಗಿ; ನಾದಿನಿ. ತನ್ನವಳೆನ್ನಬಾರದೆ?

ಅಕ್ಕ—ತಂಗಿ: ಎಷ್ಟು ವ್ಯತ್ಯಾಸ!

ಅವಳು ತನ್ನವಳು; ಇವಳಲ್ಲ. ಎಂದಿಗೂ ಅಲ್ಲ.

ತನ್ನವಳೆಂದರೂ ತನ್ನವಳಲ್ಲ; ಮುಟ್ಟಿಯೂ ಮುಟ್ಟಿಲ್ಲ.

ಅರ್ಥವಿಲ್ಲದ ನೋಟ; ಅರ್ಥವಿಲ್ಲದ ಸ್ಪರ್ಶ; ಬಯಕೆಯಿಲ್ಲದ ಭಾವನೆ.

ಎಂದೂ ಇಲ್ಲದ್ದು ಇಂದೇಕೆ ಈ ಬಯಕೆ?

ತನ್ನ ಮನಸ್ಸು ತನಗೇ ಅರ್ಥವಾಗುವುದಿಲ್ಲ. ವಿಚಿತ್ರ!

ಹರಿಯುವ ಮನಸ್ಸಿಗೆ ಹಗ್ಗವಿಲ್ಲ. ತಾನು ಮಾಡುವುದೇನು?

"ಭಾವಯ್ಯಾ!" ಸೀತೆಯ ಮೆಲುದನಿ; ಆದರೂ ಎಚ್ಚರಿಸುವ ದನಿ.

"ಓ!" ಜಾಗ್ರತ ಸ್ವಪ್ನದ ಭಾವಸುಷುಪ್ತಿಯಲ್ಲಿದ್ದ ರಂಗಸ್ವಾಮಿ ಅರೆ ಮುಚ್ಚಿದ್ದ ಕಣ್ಣನ್ನು ತೆರೆದ.

ಸೀತೆ ಬಾಗಿಲಲ್ಲಿ ನಿಂತಿದ್ದಳು. ಕೈಯಲ್ಲಿ ತಾಂಬೂಲದ ತಟ್ಟೆ.

ಹಿಂದೆ, ತನ್ನ ಹೆಂಡತಿ—ಕಾವೇರಿ—ಸೀತೆಯ ಅಕ್ಕ—ಹೀಗೇ ಅಲ್ಲವೆ ಬಾಗಿಲ ಬಳಿ ಬಿಂಕದಿಂದ ತಾಂಬೂಲದ ತಟ್ಟೆ ಹಿಡಿದು ನಿಂತಿರುತ್ತಿದ್ದುದು? ಆದರೆ ಅಂದೂ ಅವಳು ಇಷ್ಟು ಚೆಲುವೆಯಲ್ಲ.

"ನಿದ್ದೆ ಬಂದಿತ್ತೇನೋ?"

"ಇಲ್ಲ, ಬಾ. ಪಾಠ ಮಾಡೋಣೋ?"

"ಬೇಡ ಭಾವ, ಆಮೇಲಾಗಲಿ. ಎಲೆ ಅಡಕೆ....ತಂದೆ."

"ಹಾಗೇ ಆಗಲಿ, ಅದಕ್ಕೇನು....ತಾ ಇಲ್ಲಿ."

ಸೀತೆ ಎರಡು ಹೆಜ್ಜೆ ಮುಂದೆ ಬಂದು, ತಾಂಬೂಲದ ತಟ್ಟೆಯನ್ನು ಚಾಪೆಯ ಮೇಲೆ ಇರಿಸಿದಳು. ಕೆಳಬಾಗಿದ್ದ ಸೀತೆಯ ಕೈಯನ್ನು ರಂಗಸ್ವಾಮಿ ಹಿಡಿದುಕೊಂಡ.

"ಛೂ, ಬಿಡಿ ಭಾವಯ್ಯ!" ಮುನಿಸು ಅವಳ ಮುಖವನ್ನು ಬಿಗಿಯಿತು; ಹುಬ್ಬು ಗಂಟಿಕ್ಕಿತು. ನೆಟ್ಟಗೆ ನಿಂತಿದ್ದಳು ಈಗ; ಭಾವನ ಬಿಗಿಹಿಡಿತಕ್ಕೆ ಸಿಲುಕಿತ್ತು ಅವಳ ಮುಂಗೈ ಮೊಗ್ಗು.

" ಬಿಡಿ ಭಾವಯ್ಯ ಅಂದ್ರೆ, ಅದೇ."

" ಬಿಡದೇ ಇದ್ರೆ ಏನು ಮಾಡುತ್ತೀ ? " ನಗುತ್ತ ಕೇಳಿದ ರಂಗಸ್ವಾಮಿ.

" ಮಕ್ಕಳು ಬಂದುಬಿಟ್ಟಾರು ಬಿಡಿ, ಭಾವಯ್ಯ."

" ಬಂದರೆ ಬರಲಿ. ಬಂದರೇನು ? "

" ಕಂಡರೆ ಅಕ್ಕನಿಗೆ ಹೇಳಿಬಿಟ್ಟರೆ, ನಿಮ್ಮ ಮಾನ ಹೋಗುತ್ತೆ."

" ನಿನ್ನನ್ನು ಅವತ್ತು ಎತ್ತಿಕೊಂಡೆ ಅಂತ ಬಂದು ಹೇಳಲಿಲ್ಲವೆ ? ಅವತ್ತು ನಕ್ಕಳು. ಎತ್ತಿಕೊಳ್ಳಬಹುದು, ಕೈ ಹಿಡಿದುಕೊಳ್ಳಕೂಡದೋ ? "

" ಬೇಡಿ, ಭಾವಯ್ಯ ಬೇಡಿ, ಬಿಡಿ."

ಬಂಧನದಿಂದ ಬಿಡಿಸಿಕೊಳ್ಳಲು ಸೀತೆ ತನ್ನ ಕೈಯನ್ನು ಹಾಗೂ ಹೀಗೂ ನುಲಿಯುತ್ತಿದ್ದಳು. ಆದರೆ ಬಿಡಿಸಿಕೊಳ್ಳಲು ಸಾಧ್ಯವಾಗಲಿಲ್ಲ.

" ಬಿಡಿ, ಭಾವಯ್ಯ. ಇನ್ನು ನಾನು ಕಿರಿಚಿಕೊಂಡು ಬಿಡುತ್ತೇನೆ."

" ಕಿರಿಚಿಕೋ ಮತ್ತೆ, ನೋಡೋಣ. ನಿನ್ನ ಭಾವನ ಮಾನ ಕಳೆಯುತ್ತೀಯೇನೂ ? "

" ಅಕ್ಕನಿಗೆ ತಿಳಿದರೆ ಅವಳ ಮನಸ್ಸು ನೋಯುತ್ತೆ, ಬಿಡಿ ಭಾವ, ಬೇಡಿ...." ಬೇಡಿಕೆಯ ದನಿಯಲ್ಲಿ ದೈನ್ಯವಿತ್ತು, ಭೀರುತ್ವವಿತ್ತು.

" ಅಕ್ಕನಿಗೋಸ್ಕರ ತಾನೇ ! ನಿನಗೇನು ಅಸಮಾಧಾನವಿಲ್ಲವಲ್ಲ."

ಏನು ಹೇಳುವುದಕ್ಕೂ ತೋರದೆ ಸುಮ್ಮನಿದ್ದಳು. ಮೌನ ಸಮ್ಮತಿಯೆಂಬ ಅರ್ಥಕಲ್ಪನೆ ಅವಳಿಗೆ ಆಗಿರಲಿಲ್ಲ.

ರಂಗಸ್ವಾಮಿ ಸೀತೆಯನ್ನು ಬರಸೆಳೆದು ಅಪ್ಪಿಕೊಂಡ ; ಪ್ರಥಮ ಚುಂಬನದ ಸ್ಪರ್ಶಕ್ಕೆ ಸೀತೆಯ ತುಟಿ ವಿಕಂಪಿಸಿತು.

ರಂಗಸ್ವಾಮಿಯ ತೋಳುಗಳು ತಾವಾಗಿ ಸಡಿಲಗೊಂಡಿದ್ದವು.

ಬಾಗಿಲು ಹಾಕಿದೆಯೆಂದು ಭ್ರಮಿಸಿ ಮುಂದಾಗಿದ್ದ ಭಾರವಾದ ಬಾಗಿಲನ್ನು ಸುಬ್ಬಲಕ್ಷ್ಮಿ ತನ್ನ ಪುಟ್ಟ ಕೈಗಳಿಂದ ದಬದಬನೆ ತಟ್ಟಿ,

" ಚಿಕ್ಕಮ್ಮಾ, ಚಿಕ್ಕಮ್ಮಾ, ಬಾಗಿಲು ತೆಗಿ, ಚಿಕ್ಕಮ್ಮಾ" ಎಂದು ಕೂಗಿದಳು.

ಸೀತೆ ತಟ್ಟನೆ ಎದ್ದು ಹೋದಳು.

೪

ತಡೆದು ತಡೆದು ಕಾವೇರಿಗೆ ಸುಖಪ್ರಸವವೇ ಆಯಿತು. ಗಂಡುಮಗು ಹುಟ್ಟಿತೆಂದು ಕೋಳಲೂರಿಗೂ ಕಾಗದ ಹೋಯಿತು. ಬಾಣಂತಿ ಮಗು ಆರೋಗ್ಯವಾಗಿಯೇ ಇದ್ದರು. "ಗಾಡಿ ಬಾಡಿಗೆ ತೆತ್ತರೂ ಚಿಂತೆಯಿಲ್ಲ. ಒಂದು ದಿನ ಸೀತೆಯನ್ನೂ ಮಕ್ಕಳನ್ನೂ ಕರೆದುಕೊಂಡು ಬನ್ನಿ" ಎಂದು ಕಾವೇರಿ ಕೊಟ್ಟ ಸೂಚನೆಯನ್ನು ರಂಗಸ್ವಾಮಿ ಮನ್ನಿಸಿದನು.

ಅಕ್ಕನಿಗೆ ಸುಖಪ್ರಸವವಾದ ಸುದ್ದಿ ಕೇಳಿಯೇ ಸೀತೆಯ ಮನಸ್ಸಿಗೆ ಹೇಗೆ ಹೇಗೋ ಅನ್ನಿಸಿತ್ತು; ಚಿಗುರಿನಂತಿದ್ದ ಹಸುಳೆಯನ್ನು ಕಂಡು, ಅಕ್ಕನಿಗಾಗಿ ಹಿಗ್ಗಿದಳು; ತನಗಾಗಿ ಕೊರಗೆನ್ನಿಸಿತು. ಅಕ್ಕನ ಸೋತ ಮೈಯ ಗೆಲವಿನ ಮುಖ ಕಂಡು, ಎರಡು ಮಕ್ಕಳಿದ್ದೂ ಮೂರನೆಯ ಕುಡಿಯನ್ನು ಮುದ್ದಿಸುವುದನ್ನು ಕಂಡು, ಮಗು ಹಡೆಯುವ ನೋವಿನಲ್ಲಿ ಎಂಥ ನಲಿವು ಇದೆ ಎಂಬುದನ್ನು ಕಲ್ಪಿಸಿಕೊಳ್ಳತೊಡಗಿದಳು.

ಮಗು, ಮಗು....ಮುದ್ದು ಮಗು....ತಾನು ಎಷ್ಟು ದಿನ ಬದುಕಿದ್ದರೂ ತನ್ನ ಪಾಲಿಗೆ ಮಗುವಿಲ್ಲ.

ತನಗೆ ಗಂಡನಿಲ್ಲ; ಮನೆಯಿಲ್ಲ; ಆದ್ದರಿಂದ ಮಗುವಿಲ್ಲ.

ತನಗೆ ಚೆಲುವಿದೆ; ಹೆಣ್ಣುತನವಿದೆ; ತನ್ನನ್ನು ಬಯಸುವವರೂ ಇದ್ದಾರೆ; ಆದರೂ ಮಗು ಹಡೆಯುವ ಹಾಗಿಲ್ಲ; ಹಡೆಯಕೂಡದು.

ಸುಬ್ಬಾಭಟ್ಟ, ಪುಟ್ಟಣ್ಣಯ್ಯ, ಗೋಪಾಲಯ್ಯ,....ಥೂ ಥೂ....ಭಾವಯ್ಯ ಕೂಡ....ಗಂಡು ಜಾತಿಯೇ ತನಗಾಗಿ ತೋಳುತೆರೆದು ನಿಂತಿದೆ....

ಕಣ್ಣಿನ ನೋಟ, ತುಟಿಮುತ್ತು, ತೋಳತೆಕ್ಕೆ—ಎಲ್ಲದರಲ್ಲಿಯೂ ಗಂಡು ಬಯಕೆ ಹೊಂಚುಹಾಕಿದೆ, ಸಂಚು ನಡಸಿದೆ; ತನಗಾಗಿ ಅಲ್ಲ, ಸ್ವಾರ್ಥದ ಕೇಳಿಗಾಗಿ!

ಆ ಬಯಕೆಯೊಂದಿಗೆ ತನ್ನದೂ ಕೂಡಿದಾಗ....ಆದರೆ, ಕೂಡದು; ತಾನು ಹಾಗೆ ಬಯಸಬಾರದು; ಸಲ್ಲದ ಬಯಕೆ.

ಕೂಡದು; ಕೂಡದು; ಎಂದಿಗೂ ಕೂಡದು.

ತನಗೆ ಮಗುವಿಲ್ಲವೆ? ಕಾವೇರಿಯ ಮಗು ತನ್ನದಲ್ಲವೆ? ತಾನು ಇಲ್ಲಿ ಇರುವವರೆಗಾದರೂ ಆ ಮಗು ತನ್ನದು. ಅದರ ಆರೈಕೆಯಲ್ಲಿ ತನ್ನ ಅಕ್ಕನಿಗೆ

ತಾನು ಸಂಪೂರ್ಣವಾಗಿ ನೆರವಾಗಬೇಕು.

ಜೊತೆಗೆ, ಓದು; ಓದಬೇಕು; ಚೆನ್ನಾಗಿ ಓದಬೇಕು; ಓದಿ ಪ್ಯಾಸು ಮಾಡಬೇಕು.

ಕಾವೇರಿ ಆಸ್ಪತ್ರೆಯಿಂದ ಹಿಂದಿರುಗುವವರೆಗೂ ಅವಳ ಮನಸ್ಸಿನಲ್ಲಿ ಭಾವಗಳ ತುಮುಲ; ಬಯಕೆ–ಜಿಗುಪ್ಸೆಗಳ ದ್ವಂದ್ವಯುದ್ಧ. ತನ್ನ ಮೈಗೆ ಕಾವಲಿಲ್ಲವೆಂಬುದನ್ನು ಅವಳು ಬಲ್ಲಳು; ಅವಳ ಹೃದಯಕ್ಕೆ ಮಾತ್ರ ಮನಸ್ಸು ಕಾವಲು ನಿಂತಿತು: ಅದು 'ಹೃದಯೇಶ್ವರ'ನಿಗೆ ಸೇರಿದ್ದು.

ಎಚ್ಚರಗೊಳ್ಳುತ್ತಿರುವ ಮನಸ್ಸು; ಅರಳುತ್ತಿರುವ ಹೃದಯ. ಮೈಯ ಬಳವಿಯನ್ನು ಮೀರಿ ತಾನು ಕ್ಷಣಕ್ಷಣಕ್ಕೆ ಬೆಳೆಯುತ್ತಿರುವುದಾಗಿ ಅವಳಿಗೆ ಭಾಸವಾಗುತ್ತಿತ್ತು.

ತಾಯಿಯ ಸ್ಥಾನದಲ್ಲಿ ನಿಂತು ಬಾಣಂತಿ ತಾಯಿ–ಮಗುವಿಗಾಗಿ ಸೀತೆ ಮನೆಯಲ್ಲಿ ಸರ್ವಸಿದ್ಧತೆಗಳನ್ನೂ ಮಾಡುತ್ತಿದ್ದಳು.

ಆದರೆ, ತಾನು ತಾಯಿಯಾಗುವ ಹಾಗಿಲ್ಲ.

ತಂದೆಯ ಮನೆ.... ಅಣ್ಣನ ಮನೆ.... ಅಕ್ಕನ ಮನೆ....

ತನ್ನದೆನ್ನುವ ಮನೆಯಿಲ್ಲ.

ನಾಳೆ ತೊಟ್ಟಿಲಿಕ್ಕಬೇಕು; ನಾಳೆಯಲ್ಲದಿದ್ದರೂ, ಆಮೇಲಾದರೂ ತಾನು ತೊಟ್ಟಿಲು ತೂಗಬೇಕು. ಮುಂದೆ ಎಷ್ಟು ತೊಟ್ಟಿಲು ತೂಗಬೇಕೋ! ತನ್ನ ತೊಟ್ಟಿಲು ತೂಗುವಂತಿಲ್ಲ.

ಯಾಕೆ?

ತನಗೆ ಮನೆಯಿದ್ದೂ ಇಲ್ಲ; ಅಮ್ಮ ಎಷ್ಟು ಸಲ ಹೇಳಿಲ್ಲ, ತಾನು 'ಮನೆತಪ್ಪಿದವಳು' ಎಂದು. ಗಂಡನಿದ್ದರೆ ಮನೆ; ಗಂಡನಿಲ್ಲ, ಮನೆಯೂ ಇಲ್ಲ. ಗೃಹವಿಲ್ಲ; ಗೃಹಿಣಿಯಾಗುವಂತಿಲ್ಲ. ಮನೆ–ಮಡದಿ; ಮಗು–ತೊಟ್ಟಿಲು.... ತೊಟ್ಟಿಲು........

ಏನೋ ಕೆಲಸ ಮಾಡುತ್ತಿದ್ದ ಸೀತೆ—

"ಇವತ್ತು ಸಂಜೆ ಬರುವಾಗ ಮರೆಯದೆ ತೊಟ್ಟಿಲು ತನ್ನಿ, ಭಾವಯ್ಯ. ನಂಜಮ್ಮನವರು ಕೊಟ್ಟ ಹಳೆಯ ತೊಟ್ಟಿಲು ಹರುಕುಮುರುಕು. ನಾಳೆ ಶಾಸ್ತ್ರಕ್ಕೆ ಕಟ್ಟುವುದಷ್ಟೆ" ಎಂದು ನೆನಪುಕೊಟ್ಟಳು. "ಚಿಕ್ಕಮ್ಮನ್ನ ಕರೆಯು

ವುದಾದರೆ, ಸುಬ್ಬಲಕ್ಷ್ಮೀನೂ ಕರೆದುಕೊಂಡುಹೋಗಿ" ಎಂದೂ ಜ್ಞಾಪಿಸಿದಳು.

೫

ತೊಟ್ಟಿಲಿಕ್ಕಿದ ಶಾಸ್ತ್ರ ಮುಗಿಯಿತು. ಕರೆದಿದ್ದ ಕೆಲವರು ಮುತ್ತೈದೆಯರಿಗೆ ಕಾವೇರಿಯ ಚಿಕ್ಕಮ್ಮನೇ ಅರಿಶಿನ ಕುಂಕುಮ, ಫಲ ತಾಂಬೂಲ ಕೊಟ್ಟರು. ಚಿಕ್ಕಮ್ಮನನ್ನು ಕರೆಯುವುದೇ ಬಿಡುವುದೇ ಎಂದು ಮೀನ-ಮೇಷ ಮಾಡಿ, ಕಡೆಗೆ ಕರೆದಿದ್ದರ ಔಚಿತ್ಯ ಸೀತೆಗೆ ತೃಪ್ತಿಯುಂಟುಮಾಡಿತು; ಚಿಕ್ಕಮ್ಮ ಬಂದದ್ದು ಹೆಚ್ಚು ಎಂದುಕೊಂಡಳು.

ಮುತ್ತೈದೆಯರೆಲ್ಲ ತೆರಳಿದ ಮೇಲೆ ಸೀತೆಯ ಚಿಕ್ಕಮ್ಮ ಲಕ್ಷ್ಮೀದೇವಮ್ಮ ಹೇಳಿದರು:

"ನೀನು ಇನ್ನು ಕೋಣೆಗೆ ನಡಿಯಮ್ಮ. ಇಲ್ಲಿ ಗಾಳಿ, ಶೀತಗೀತವಾದೀತು."

ಕಾವೇರಿಯ ತೊಡೆಯ ಮೇಲಿದ್ದ ಮಗುವನ್ನು ಸೀತೆ ಬಹು ಮೆಲ್ಲನೆ, ಎಷ್ಟೋ ಬಾಣಂತಿತನಗಳನ್ನು ಮಾಡಿದವಳ ಹಾಗೆ, ಎತ್ತಿಕೊಂಡಳು. ಕಾವೇರಿ ಕೋಣೆಗೆ ಹೋಗಿ ಹಾಸಿಗೆಯ ಮೇಲೆ ಕುಳಿತಳು. ಮತ್ತೆ ಮಗು ತಾಯ ಮಡಿಲಿಗೆ ಹೋಯಿತು. ಸೀತೆ ಹೊರಕ್ಕೆ ಬಂದು ಹಸೆಯ ಮಣೆಯ ಬಳಿಯ ತಟ್ಟೆ ಬಟ್ಟಲುಗಳನ್ನು ತೆಗೆದಿರಿಸತೊಡಗಿದಳು. ಅಷ್ಟು ಹೊತ್ತಿಗೆ ಜಗಲಿಯ ಮೇಲೆ ಕುಳಿತಿದ್ದ ರಂಗಸ್ವಾಮಿ ಒಳಕ್ಕೆ ಬಂದು ಕುಳಿತ.

"ಏನಪ್ಪಾ ರಂಗಸ್ವಾಮೀ, ಒಂದು ಎರಡು ದಿನ ಮುಂಚಿತವಾಗಿ ನನಗೆ ತಿಳಿಸಬಾರದಾಗಿತ್ತೆ? ಮಾಡುವುದಕ್ಕೆ ನಾವು ಬಾಧ್ಯಸ್ಥರಲ್ಲವೆ?...."

ರಂಗಸ್ವಾಮಿ ಮೌನವಾಗಿದ್ದ.

"ಅದಕ್ಕೇ ತಾನೇ ಸೀತೆಯನ್ನ ಕರಸಿಕೊಂಡದ್ದು........" ಎಂದು ಬಾಣಂತಿಯ ತಗ್ಗು ದನಿ ಕೋಣೆಯಿಂದ ಕೇಳಿಬಂತು.

"ಅರಿಯದ ಮಗು, ಅದು ಏನು ಮಾಡೀತಮ್ಮಾ....ಹ್ಞಂ....ಮಾಡದಿದ್ದರೆ ಆಗುತ್ತೆಯೇ....ಇನ್ನು ಅದರ ಜನ್ಮ ಹೀಗೆಯೇ ಸವೆಯಬೇಕಲ್ಲಾ...." ಎಂದು ಚಿಕ್ಕಮ್ಮ ನಿಟ್ಟುಸಿರುಗರೆದರು. ಅವರ ಕಣ್ಣು ತೇವಗೊಂಡಿತು.

"ಅಲ್ಲಾ, ಕಾವೇರೀ....ಇದೇನ್ರೆ ನೀವು? ಸೀತಾ ಬಂದದ್ದೇ ನನಗೆ

ಗೊತ್ತಿಲ್ಲವಲ್ಲೆ? ಇವತ್ತು ನಾನು ಬರೋದಿಲ್ಲ ಅಂತಲೇ ಮಾಡಿಕೊಂಡಿದ್ದೆ. ನೀನು ಏನಾದರೂ ತಿಳಿದುಕೊಳ್ಳುತ್ತೀ ಅಂತ ಬಂದೆನಮ್ಮ. ಸೀತೆಯನ್ನ ನೋಡಿದಹಾಗಾಯಿತು. ಯಾವುದೋ ರಾಯನ ಕಾಲವಾಗಿತ್ತು ಅವಳನ್ನ ನೋಡಿ...."

ಆಮೇಲೆ ಚಿಕ್ಕಮ್ಮ ಊರಿನಲ್ಲಿ 'ಪಾತಕ್ಕ', 'ಭಾವಯ್ಯ' ಇವರ ಯೋಗಕ್ಷೇಮ ವಿಚಾರಿಸಿದಳು.

"ರಾಮುಸ್ವಾಮಿಗೆ ಯಾವುದೂ ಹೆಣ್ಣು ಗೊತ್ತಾಗಿಲ್ಲವೇನೇ, ಸೀತಾ."

"ಇನ್ನೂ ಯಾವುದೂ ಇಲ್ಲ" ಎಂದು ಉತ್ತರ ಕೊಟ್ಟಳು ಸೀತೆ.

"ಮೊನ್ನೆ ನವರಾತ್ರಿಯಲ್ಲಿ ಹೊಳೇನರಸೀಪುರದ ತಮ್ಮಯ್ಯ ಬಂದಿದ್ದರು. ಸದ್ಯದಲ್ಲೇ ಯಾವುದೋ ಗೊತ್ತಾಗುವಹಾಗಿದೆ ಅಂದಿದ್ದರು...."

"ಅದೇನೋ ಅಮ್ಮ, ನನಗೆ ತಿಳಿಯದು."

"ನಿನ್ನ ವಾರಗಿತ್ತಿಯ ಮನೆಯವರೂ ಇಲ್ಲೇ ಎಲ್ಲೋ ಹಳೇ ಅಗ್ರಹಾರ ದಲ್ಲೇ ಇದಾರಂತಲ್ಲಮ್ಮ.... ಇಲ್ಲಿಗೇ ವರ್ಗವಾಗಿ ಬಂದಿದಾರಂತೆ ಶಾಮಣ್ಣೋರು. ಹಾಗಂತ ತಮ್ಮಯ್ಯನೇ ಹೇಳಿದರು...."

"ವರ್ಗವಾಗಿದೆ ಅಂತ ಗೊತ್ತು. ಆದರೆ ಅವರ ಮನೆ ಇಲ್ಲೇ ಇದೇ ಅಗ್ರಹಾರದಲ್ಲಿ ಅಂತ ಗೊತ್ತಿರಲಿಲ್ಲ" ಎಂದು ರಂಗಸ್ವಾಮಿ ಹೇಳಿದ.

ರಂಗಸ್ವಾಮಿಗೆ ಆಗ ಹೊರಗೆ ಕುಳಿತಿದ್ದ ತರುಣನ ನೆನಪಾಯಿತು.

"ಬಾರಯ್ಯ ಒಳಕ್ಕೆ, ಕೃಷ್ಣಮೂರ್ತೀ" ಎಂದು ಕೂಗಿದ.

ಆ ತರುಣ—ಕೃಷ್ಣಮೂರ್ತಿ—ಒಳಕ್ಕೆ ಬಂದು ನಿಂತೇ ಇದ್ದ.

ಇನ್ನೂ ಉರಿಯುತ್ತಿದ್ದ ಎರಡು ದೀಪದ ಕಂಬಗಳು; ಒಂದು ಗೋಡೆಯ ಲ್ಯಾಂಪು; ಒಂದು ಪಕ್ಕದ ಮನೆಯ 'ಹ್ಯಾಂಗಿಂಗ್' (ತೂಗು) ಲ್ಯಾಂಪು —ಇವುಗಳ ಒಟ್ಟು ಪ್ರಕಾಶ ತಕ್ಕಮಟ್ಟಿಗೆ ಹೆಚ್ಚಾಗಿಯೇ ಇತ್ತು.

ಸೀತೆ ಕೃಷ್ಣಮೂರ್ತಿಯನ್ನು ದೃಷ್ಟಿಸಿ ನೋಡಿದಳು; ಹೊಸ ಮುಖ. ಚಿಕ್ಕಮ್ಮನ ಬೆಳೆದ ಗಂಡುಮಕ್ಕಳನ್ನೆಲ್ಲ ಒಮ್ಮೆ ನೋಡಿದ್ದ ನೆನಪು. ಈ ಕೃಷ್ಣಮೂರ್ತಿ ಯಾರು?

ಲಕ್ಷ್ಮೀದೇವಮ್ಮನವರ ಬಳಿ ಸೀತೆ ಕುಳಿತಿದ್ದಳು. ಅವರು ಸೀತೆಯ ವಿಚಾರ ಮಾತಾಡಿದ್ದ ನುಡಿಗಳು ಅವನ ಕಿವಿ ಮುಟ್ಟಿದ್ದವು. ಆ ಸೀತೆಯೇ

ಇರಬೇಕು ಇವಳು ಎಂದುಕೊಂಡನು.

ಹೌದು, ಇವಳೇ ಅವಳು. ಹಣೆಗೆ ಕುಂಕುಮವಿಲ್ಲ; ತುರುಬಿಗೆ ಹೂವಿಲ್ಲ; ವಿಧವೆ. ವಿಧವೆಯೆ? ಹೌದು.

ಎರಡು ಸುಂದರ ವದನಗಳು ಒಂದನ್ನೊಂದು ನೋಡಿದುವು; ಯಾವ ಉದ್ದೇಶವೂ ಇಲ್ಲದೆ ನೋಡಿದುವು; ಕುತೂಹಲದಿಂದ ನೋಡಿದವು.

"ಇನ್ನು ಬರ್ತೀನಮ್ಮ, ಕಾವೇರಿ. ಹೊತ್ತಾಗುತ್ತೆ. ಪಾಪ, ಕೃಷ್ಣ ಮೂರ್ತೀನೂ ಪರೀಕ್ಷೆ ಹುಡುಗ, ಓದಿಕೊಳ್ಳಬೇಕೋ ಬೇಡವೊ? ಏನಾದರೂ ನನ್ನಿಂದ ಸಹಾಯುಗಿಹಾಯ ಆಗಬೇಕಾದರೆ ಸಂಕೋಚಪಟ್ಟುಕೊಳ್ಳಬೇಡ ವಮ್ಮ, ಹೇಳಿ ಕಳಿಸು. ಕೈಲಾದ್ದು ಮಾಡೋಣ...."

"ಯಾವಾಗಲಾದರೂ ಪುರಸೊತ್ತಾದಾಗ ಮನೆಯ ಕಡೆ ಬಾ, ಸೀತಾ. ಈಗಂತೂ ಕೈ ಬಿಡುವಿಲ್ಲ; ಯಜಮಾನಿತಿಯಾಗಿ ಬಾಣಂತನಕ್ಕೆ ಬೇರೆ ನಿಂತಿದ್ದೀಯೆ....ಆಮೇಲಾದರೂ ಬಂದು ನಮ್ಮ ಮನೇಲಿ ಒಂದು ಮೂರು ದಿನ ಇರೇ, ತಾಯಿ...."

ತಮ್ಮಿಬ್ಬರ ಪರವಾಗಿಯೂ ಕಾವೇರಿಯೇ ಕೋಣೆಯಿಂದ ಉತ್ತರ ಕೊಟ್ಟಳು:

"ಚಿಕ್ಕಮ್ಮ, ಕೆಲಸದ ಮಾತು ಇರಲಿ. ಪರೀಕ್ಷೆಗೆ ಬೇರೆ ಕಟ್ಟಿದಾಳೆ, ಐದು ರೂಪಾಯಿನ ಪರೀಕ್ಷೆಗೆ....ಈಗೆಲ್ಲಿ ಬರೋಕಾಗುತ್ತೆ, ಪಾಪ. ಇನ್ನು ನಿನ್ನ ಸಹಾಯ ನಮಗೆ ಯಾವಾಗ ತಪ್ಪಿದೆ? ಇವೊತ್ತು ಕರೆದ ಕೂಡಲೆ ಬರಲಿಲ್ಲವೆ? ಮನೆ ಚಿಕ್ಕದು, ನಮ್ಮ ಅನುಕೂಲವೂ ಅಷ್ಟರಲ್ಲಿಯೇ ಇದೆ. ಯಾರನ್ನೂ ಊಟಕ್ಕೆ ಕರೆಯಲಿಲ್ಲ. ಮನಸ್ಸಿಗೆ ಸಂಕೋಚವಾಗುತ್ತೆ...."

"ಸಂಕೋಚವ್ಯಾಕಮ್ಮ? ವಾಂಛಲ್ಯ ಇಟ್ಟುಕೊಂಡು ತೊಟ್ಟಿಲಿಕ್ಕುವು ದಕ್ಕೆ ಕರೆಯಲಿಲ್ಲವೆ? ಇನ್ನೇನಾಗಬೇಕೇ ತಾಯಿ....ಇನ್ನು ಮಾತಾಡುತ್ತಾ ನಿಂತರೆ ಹೊತ್ತಾಗುತ್ತಮ್ಮ. ಬರ್ತೀನಿ ಕಾವೇರಿ, ಬರ್ತೀನಿ ಸೀತಾ...."

"ಒಳ್ಳೆಯದು, ಚಿಕ್ಕಮ್ಮಾ."

ದಾರಿಯಲ್ಲಿ ಕೃಷ್ಣಮೂರ್ತಿ ಅವರನ್ನು ಕೇಳಿದ: "ಆ ಹುಡುಗಿ, ಸೀತೆ, ಯಾರು ಅತ್ತೆ?"

"ನಮ್ಮಕ್ಕನ ಮಗಳಪ್ಪ. ಸಣ್ಣ ವಯಸ್ಸಿನಲ್ಲಿಯೇ ದೇವರು ಅಂಶಿನ

ಕುಂಕುಮ ಕಿತ್ತುಕೊಂಡ" ಎಂದು ಭಾರವಾದ ಹೃದಯದಿಂದ ನುಡಿದರು.

"ನನಗೂ ಮೊದಲು ಹಾಗೇ ಅನ್ನಿಸಿತು. ಬರಿಯ ಹಣೆ—ಬಿಕೋ ಅನ್ನುತ್ತಿತ್ತು."

ಚಿಕ್ಕಮ್ಮ ಕೃಷ್ಣಮೂರ್ತಿ ಇಬ್ಬರೂ ಹೊರಕ್ಕೆ ಹೊರಟಮೇಲೆ ಸೀತೆ ಕಾವೇರಿಯನ್ನು ಪ್ರಶ್ನಿಸಿದಳು :

"ಆ ಹುಡುಗ ಯಾರು? ಚಿಕ್ಕಮ್ಮನ ಮಗನೆ?"

"ಅಲ್ಲ, ಯಾರೋ ದೂರದ ಸಂಬಂಧ. ಈಗ ಎರಡು ಮೂರು ವರ್ಷದಿಂದ ಅವರ ಮನೆಯಲ್ಲಿಯೇ ಓದಿಕೊಂಡಿದ್ದಾನೆ. ಅವರ ಮನೆ ಒಂದು ಛತ್ರ. ಯಾರಾದರೂ ಹೊರಗಿನವರು ಒಬ್ಬರು ಓದೋರು ಇದ್ದೇ ಇರುತ್ತಾರೆ" —ಎಂದಳು ಕಾವೇರಿ.

## ಪ್ರಕರಣ ಎಂಟು

### ೧

ರಾಮಸ್ವಾಮಿ ಒಳ್ಳೆಯ ಹುರುಪಿನ ಕುದುರೆಯೇರಿ ಮೈಸೂರಿನಿಂದ ಊರಿಗೆ ಮರಳಿದ. "ಕಾವೇರಿಯ ಮನೆಯಲ್ಲಿ, ಚಿಕ್ಕಮ್ಮನ ಮನೆಯಲ್ಲಿ ಎಲ್ಲರೂ ಕ್ಷೇಮವೇನೋ?" ಎಂದು ತಾಯಿ ಕೇಳಿದ್ದಕ್ಕೆ, "ಹ್ಞು" ಎಂದ. "ಶಾಮಣ್ಣನವರ ಮನೆಗೆ ಹೋಗಿದ್ದೆಯೇನೋ, ನಾನು ಹೇಳಿದ್ದನ್ನ ಹೇಳಿದೆಯೇನೋ?" ಎಂಬ ತಂದೆಯ ಪ್ರಶ್ನೆಗೆ, "ಎಷ್ಟು ಹುಡುಕಿದರೂ ಅವರ ಮನೆ ಸಿಕ್ಕಲೇ ಇಲ್ಲ. ಮೈಸೂರಿನಲ್ಲಿ ಯಾವ ಮೂಲೆ ತಿರುಗಿದರೂ ಒಂದು ಅಗ್ರಹಾರ" ಎಂದು, ಮಾಡದ ಕರ್ತವ್ಯಕ್ಕೆ ತೋರಿದ ಕಾರಣವೊಂದನ್ನು ಹೇಳಿದ. "ಹ್ಞು, ಹೋಗಲಿ ಬಿಡು. ಸೀತೆ ಹೇಗಿದ್ದರೂ ಅಲ್ಲೆ ಇದಾಳಲ್ಲ. ಅವಳನ್ನೂ ಕರೆದುಕೊಂಡುಹೋಗಿ, ಶಾಮಣ್ಣನವರನ್ನು ವಿಚಾರಮಾಡು ಅಂತ ರಂಗಸ್ವಾಮಿಗೆ ಬರೆದರಾಯಿತು" ಎಂದು ಸಮಾಧಾನಗೊಂಡರು. ಅನಾಢ್ಯ ರಾಮಸ್ವಾಮಿಯ ವಿಚಾರದಲ್ಲಿ ಅಸಮಾಧಾನಗೊಂಡು ಪ್ರಯೋಜನವಿಲ್ಲವೆಂಬ ತೀರ್ಮಾನಕ್ಕೆ ಅವರು ಎಂದೋ ಬಂದಿದ್ದರು. ಅವನಿಂದ ಆಗದೆ ಇದ್ದದ್ದಕ್ಕೆಲ್ಲ 'ಹೋಗಲಿಬಿಡು' ಎಂಬ ಮುದ್ರೆ ಬಿದ್ದುಬಿಡುತ್ತಿತ್ತು!

ಗೆಳೆಯರ ಗೋಷ್ಠಿಯಲ್ಲಿ ರಾಮಸ್ವಾಮಿಯೂ ಕರಿಯಣ್ಣನೂ ಹಂಚಿಕೊಳ್ಳಬೇಕಾದ ಹರುಷದ ಸುದ್ದಿ ಬೇಕಾದಷ್ಟಿದ್ದಿತು. ಬರಿಗೈಯವರಾಗಿ ಹಿಂದಿರುಗಿದ್ದ ಗೆಳೆಯರ ಸವಿಯ ಅನುಭವದ ಕೇಳ್ಮೆಯಲ್ಲಿ ರಾಮಯ್ಯಂಗಾರಿಗೆ ಬೇಗನೆ ಆಸಕ್ತಿ ಕುಗ್ಗಿತು. "ನಮ್ಮ ಜೊತೆಗೆ ನೀನು ಲಾಯಕ್ಕಲ್ಲ ಕಣೋ. ಕೇಳಿಯಾದರೂ ಸುಖಪಡೋ" ಎಂದು ರಾಮಸ್ವಾಮಿ ಅವನನ್ನು ಹಂಗಿಸಿದನು.

ರಾಮಸ್ವಾಮಿ, ಕರಿಯಣ್ಣ ಊರಿನಲ್ಲಿ ಇಲ್ಲದಿದ್ದಾಗ, ಅಗಸರ ರಾಮಿಯಲ್ಲಾಗಿದ್ದ ಮಾರ್ಪಾಟನ್ನು ಹುಸೇನಿ ಸೂಕ್ಷ್ಮವಾಗಿ ವಿವರಿಸಿದ. ತಿಮ್ಮಯ್ಯ ಅವಳನ್ನು 'ಕೂಡಾವಳಿ ಮಾಡಿಕೊಂಡು, ಜಾತಿಯವರಿಗೆಲ್ಲ ಮಾನೋಮಿ ದಿನ ಪಾಯಸದ ಊಟ ಹಾಕನ್ನೆ' ಎಂಬ ಸಂಗತಿಯನ್ನು ನೊಂದ ಹೃದಯದಿಂದ ತಿಳಿಸಿದಾಗ, ರಾಮಸ್ವಾಮಿಯ ಮತ್ತು ಕರಿಯಣ್ಣನ ಮೈಸೂರಿನ ಸವಿ

ನೆನಪಿನ ಕಡಲೆಲ್ಲಾ ಇಂಗಿಹೋದಂತಾಯಿತು. ಮೈಸೂರಿನದು ಮೂರು ದಿನದ ಸುಖ; ಶಾಶ್ವತ ಸುಖದ ಒರತೆಯೇ ಬತ್ತಿಹೋದರೆ, ನಿರಾಶೆಯಾಗದೆ ಇದ್ದೀತೆ?

"ರಾಮಿಯ ಎರಡನೇ ಗಂಡಸಿಗೆ ಏನಾದರೂ 'ಮಿಸ್ಕಿಲ್ಲಾ' ಮಾಡಬೇಕು, ಹುಸೇನಿ" ಎಂದು ಕರಿಯಣ್ಣ ಗಂಭೀರವಾಗಿ ನುಡಿದ.

"ಕೈಹಿಡಿದೋಳಗಿಂತ ಹೆಚ್ಚಾಗಿ ಹಚ್ಚೆ ಬೇರೆ ಹಾಕಿಸಿಕೊಂಡೆವಲ್ಲೋ, ಕರಿಯಣ್ಣಾ. ಇಂಥ 'ಚಕ್ಕರ್' ಕೊಡೋದೇ, ಆ ಬೊಡ್ಡೀಮಗಳು!" ಎಂದು ರಾಮುಸ್ವಾಮಿ, ತನ್ನ ಕೈಮೇಲಿನ 'ರಾಮಿ' ಎಂಬೆರಡು ಅಕ್ಷರಗಳನ್ನು ನೋಡನೋಡುತ್ತ ಹೇಳಿದ.

"ನಮ್ಮನ್ನ ಬಿಟ್ಟು ಅದೆಲ್ಲಿಗೆ ಹೋದಾಳು, ಆ ಸೈತಾನ್ ಕಿ ಬಚ್ಚಿ ರಾಮಿ? ಆ ಹರಾಮಿಾನ ನಾನು ನೋಡಿಕೋತೀನಿ" ಎಂದು ಹುಸೇನಿ ತನ್ನ ಬೋಳುತಲೆಯನ್ನು 'ಮಾಲೀಸು' ಮಾಡಿಕೊಳ್ಳುತ್ತ, ಶಪಥಮಾಡಿದ.

ರಾಮಯ್ಯಂಗಾರಿ ತನ್ನ ಮೂವರು ಗೆಳೆಯರ ಮಾತನ್ನು ಮನದಲ್ಲೆ ಮೆಲುಕುಹಾಕತೊಡಗಿದ. ಮೊತ್ತಮೊದಲ ಬಾರಿಗೆ, ಇವರ ಸಹವಾಸದಲ್ಲಿ ಅವನಿಗೆ ಜಿಗುಪ್ಸೆಯೆನಿಸಿತ್ತು. ಇತ್ತೀಚೆಗೆ, ಆಟಕ್ಕಿಂತಲೂ ಹರಟೆ ಕೊಚ್ಚುವುದೇ ಹೆಚ್ಚಾಗಿತ್ತು. ರಾಮಯ್ಯಂಗಾರಿಗೆ ಇದರಿಂದ ಪ್ರಯೋಜನ ಕಡಮೆಯಾಗುತ್ತ ಬರುತ್ತಿತ್ತು. ದ್ರವ್ಯಲಾಭವಿಲ್ಲದ ದುರ್ವ್ಯಸನದಲ್ಲಿ ಎಂದೂ ಅವನಿಗೆ ಆಸಕ್ತಿ ಕಡಮೆ.

ರಾಮಯ್ಯಂಗಾರಿಯ ಆಸಕ್ತಿ ಕುಗ್ಗುವ ವೇಳೆಗೆ ಸರಿಯಾಗಿ, ಎಂಟು ದಿನ ಹಿಂದುಮುಂದಾಗಿ ರಾಮುಸ್ವಾಮಿ ಕರಿಯಣ್ಣ ಇಬ್ಬರೂ ಅಸ್ವಸ್ಥರಾದರು.

ರಾಮುಸ್ವಾಮಿ ಮೊದಲ ಕೆಲವು ದಿನ ತನ್ನ ಅಸ್ವಸ್ಥತೆಯನ್ನು ಲಕ್ಷಿಸಲೇ ಇಲ್ಲ. 'ರೋಗಕ್ಕೆ ಮಣೆ ಹಾಕಬಾರದು. ಅಪಥ್ಯವೇ ಔಷಧ' ಎಂಬುದು ರಾಮುಸ್ವಾಮಿಯ ಸಿದ್ಧಾಂತ. ಈ ಸಲವೂ ಅದನ್ನು ಅನುಷ್ಠಾನಕ್ಕೆ ತಂದನು. ಅಲ್ಲದೆ, ರೋಗದ ಸ್ವರೂಪವೇನೆಂಬುದು ಮೊದಲು ಅವನ ಅರಿವಿಗೂ ಬರಲಿಲ್ಲ. ಜ್ವರವಿಲ್ಲ, ಛಳಿಯಿಲ್ಲ—ತಡೆಯಲಾರದ ತಲೆನೋವು ಇದ್ದರೂ, ಅದು ಅವನ ಪರಿಚಯದ ನಿತ್ಯ ಅಭ್ಯಾಗತ. ಹೊಸ ವೇದನೆಯೆಂದರೆ, ಕೀಲುಗಳ ನೋವು, ತೊಡೆಯ ಸೆಳೆತ; ಎದೆಯ ಬಡಿತ; ಮೇಲುಸಿರು. ಅಂತೂ ಹೇಳಿಕೊಳ್ಳಲಾಗದ ಮೂಕವೇದನೆ. ಮದ್ದು ಬೀಳದ ರೋಗ ಮುದ್ದಿಸುತ್ತದೆಯೆ? ಪ್ರಬಲ

ವಾಯಿತು; ಉಲ್ಬಣಗೊಂಡಿತು. ನಾಲ್ಕು ಹೆಜ್ಜೆ ನಡೆಯುವುದು ನಾಲ್ಕು ಮೈಲಿ ನಡೆದಂತೆ ಭಾಸವಾಗತೊಡಗಿತು. ಈಗ ರಾಮಯ್ಯಂಗಾರಿಯ ಮುಖ ದರ್ಶನವೇ ಇಲ್ಲ. ಹುಸೇನಿ ರಾಮಿಯನ್ನು ಒಲಿಸಿಕೊಳ್ಳಲು 'ಮಾಟ' ಮಾಡಿಸುತ್ತಿದೇನೆ ಎಂದಾಗ, 'ಮಾಟವಾದರೂ ಮಾಡಿಸು ಚಟ್ಟವಾದರೂ ಕಟ್ಟಿಸು' ಎಂದು ರೇಗಿ ನುಡಿದ. ಬಾಳು ಬರಿದಾಗಿ ಕಾಣತೊಡಗಿತ್ತವನಿಗೆ. ಕರಿಯಣ್ಣ ಮಾತ್ರ ತಿಂಗಳೊಳಗಾಗಿ ಚೇತರಿಸಿಕೊಳ್ಳುತ್ತಿರುವಂತೆ ಕಂಡಿತು.

ರಾಮಸ್ವಾಮಿ ತನ್ನ ಮರಣಸಮವಾದ ನಿತ್ರಾಣವನ್ನು ತಂದೆತಾಯಿಗಳಿಂದ ಮುಚ್ಚಿಡಲು ಬಹು ಸಾಹಸಪಟ್ಟ. ಹೊರಗೆ ಸುತ್ತಾಡುವ ತಂದೆಯ ಗಮನಕ್ಕೆ ಮಗನ ಸ್ಥಿತಿ ಅಷ್ಟಾಗಿ ಗೋಚರವಾಗಲಿಲ್ಲ. ಆದರೆ ಒಂದೊಂದು ಸಣ್ಣ ವಿವರದಲ್ಲಿಯೂ ತಾಯಿಯ ಕಣ್ಣು ಮಗನ ಬೀಳನ್ನು ಗುರುತಿಸತೊಡಗಿತು. "ಯಾಕೋ, ದಿನದಿನಕ್ಕೆ ತುತ್ತು ಕಡಮೆಯಾಗುತ್ತಿದೆಯಲ್ಲೋ? ತುತ್ತಿಗೆ ತುತ್ತು ಕಡಮೆಯಾದರೆ ಮುದ್ದಿಕ್ಕಬೇಡವೇ" ಎಂದು ಒಂದು ದಿನ; "ಸುಮ್ಮನೆ ಮಲಗಿರುತ್ತೀಯಲ್ಲೋ, ಏನಾಗಿದೆಯೋ?" ಎಂದು ಇನ್ನೊಂದು ದಿನ; "ನಿನ್ನೆ ರಾತ್ರಿ ಅದೇನೋ ನರಳುತ್ತಿದ್ದೆಯಲ್ಲೋ" ಎಂದು ಮತ್ತೊಂದು ದಿನ. "ಸಂಸಾರ ಗುಟ್ಟು ವ್ಯಾಧಿ ರಟ್ಟು, ಕಣೋ. ಮುಚ್ಚಿಕೊಳ್ಳಬೇಡವೋ, ಏನಾಗುತ್ತೆ ಹೇಳೋ" ಎಂದು ಅಲವತ್ತುಕೊಳ್ಳುವರು, ಕರುಳ ನೋವು ಸಹಿಸದ ತಾಯಿ.

ಕಡೆಗೊಂದು ದಿನ ಅವನ ಸ್ಥಿತಿ ವಿಷಮಿಸಿತು. ಅವನ ಮೂತ್ರ ಕಟ್ಟಿತು. ವೇದನೆ ಸಹಿಸಲಸಾಧ್ಯವಾಯಿತು. ವೆಂಕಟಸುಬ್ಬಯ್ಯನವರು ಮನೆಗೆ ಮರಳಿದಾಗ ಹೆಚ್ಚುಕಡಮೆ ಮೃತ್ಯುಶಯ್ಯೆಯಲ್ಲಿದ್ದ ಮಗನನ್ನು ಕಂಡು 'ಇದೇನಿದು!' ಎಂದು ದಿಗ್ಭ್ರಾಂತರಾದರು. ಆಗ ಅವನು 'ಅಪಾಪೋಲಿ'ಯಲ್ಲ; ಕೇವಲ ತಮ್ಮ ಮಗ. ಆಸ್ಪತ್ರೆಗೆ ಧಾವಿಸಿ ಡಾಕ್ಟರ್ ಪಿಳ್ಳೆಯವರನ್ನು ಕರೆತಂದರು. ರೋಗನಿದಾನಕ್ಕೆ ಹೆಚ್ಚು ಹೊತ್ತು ಹಿಡಿಯಲಿಲ್ಲ ವೈದ್ಯರಿಗೆ.

"ಈಗ ನನ್ನ ಜೊತೆ ಆಸ್ಪತ್ರೆಗೆ ಬನ್ನಿ. ಕೆಲವು ಮಾತ್ರೆಗಳನ್ನು ಕೊಡುತ್ತೇನೆ. ಗಂಟೆಗೊಂದು ಕೊಡಬೇಕು. ಈ ರೋಗಕ್ಕೆ ಇಂಜೆಕ್ಷನ್ನೇ ಆಗಬೇಕು. ಅದರ 'ಟ್ಯೂಬು' ನನ್ನಲ್ಲಿಲ್ಲ. ಹಾಸನದಲ್ಲಿಯೂ ಸಿಕ್ಕಲಾರದು. ಮೈಸೂರಿನಿಂದಲೋ ಬೆಂಗಳೂರಿನಿಂದಲೋ ತರಿಸಬೇಕು. ನಾಳೆಯ ಒಳಗೆ

ಆ ಔಷಧಿ ತರಿಸಲು ಸಾಧ್ಯವಿಲ್ಲದೆ ಹೋದರೆ ಕಷ್ಟ. ಸಂಜೆಯೊಳಗೆ ಹಾಸನ ಆಸ್ಪತ್ರೆಗೇ ಕರೆದೊಯ್ದರೂ ಒಳ್ಳೆಯದೆ...."

"ಔಷಧದ ಬೆಲೆ ಏನಾಗುತ್ತೆ, ಸುಮಾರು ?"

ವೈದ್ಯರು ಮನಸ್ಸಿನಲ್ಲಿಯೇ ಲೆಕ್ಕ ಹಾಕಿದರು ; "ಎಲ್ಲ ಸೇರಿ, ನೂರು ನೂರೈವತ್ತು ಆಗಬಹುದು"ಎಂದರು, ಆ ಹಣ ಬಹಳ ಅಲ್ಪವೆಂಬಂತೆ. "ಆ್ಞ, ಅಷ್ಟಾಗುತ್ತೆಯೆ ?" ಎಂದು ವೆಂಕಟಸುಬ್ಬಯ್ಯನವರು ಬೆರಗಾದರು. "ಏನು ಮಾಡುವುದು ಹೇಳಿ, ರೋಗ ಅಂಥಾದ್ದು" ಎಂದರು ಡಾಕ್ಟರು.

"ಎಂಥ ರೋಗ ?" ಎಂದು ವೆಂಕಟಸುಬ್ಬಯ್ಯನವರು ಬಿಡಿಸಿ ಕೇಳಿದರು.

ರಾಮಸ್ವಾಮಿ ಡಾಕ್ಟರ ಮುಖವನ್ನು ದೀನದೃಷ್ಟಿಯಿಂದ ಒಮ್ಮೆ ನೋಡಿದನು. 'ಹೇಳಬೇಡಿ, ಡಾಕ್ಟರೇ' ಎಂದು ಬೇಡಿಕೊಳ್ಳುವಂತಿತ್ತು ಆ ದೃಷ್ಟಿ.

"ಇಂಗ್ಲಿಷಿನಲ್ಲಿ ಏನೋ ಹೇಳ್ತಾರೆ. ನಿಮಗೆ ಅರ್ಥವಾಗುವುದಿಲ್ಲ. ಅದಿರಲಿ, ಮೊದಲು ಔಷಧ ತರಿಸಿಕೊಡುವ ಆಲೋಚನೆ ಮಾಡಿ."

ಡಾಕ್ಟರು ಎದ್ದು ಹೊರಟುಹೋದರು. ವೆಂಕಟಸುಬ್ಬಯ್ಯನವರು ಅವರ ಜೊತೆ ಹೋಗಿ, ಅವರು ಕೊಟ್ಟ ಮಾತ್ರೆಗಳನ್ನು ತಂದು, ಗಂಟೆಗೊಂದರಂತೆ ಕೊಡುವಂತೆ ಹೆಂಡತಿಗೆ ಹೇಳಿ, ಸಾಹುಕಾರ ರಾಮಪ್ಪನವರ ಮನೆಗೆ ದ್ರವ್ಯ ಯಾಚನೆಗಾಗಿ ಹೊರಟರು.

ರಾಮಪ್ಪನವರಿಗೆ ತಮ್ಮ ಹಣದ ಅಗತ್ಯವನ್ನು ವೆಂಕಟಸುಬ್ಬಯ್ಯನವರಿಗೆ ವಿವರಿಸಿದಾಗ, ಅವರು ಅಚ್ಚರಿಗೊಂಡವರಂತೆ ನುಡಿದರು :

"ಇದೇನಿದು ! ನಮ್ಮ ಕರಿಯಣ್ಣನಿಗೂ ಹಿಂಗೇ ಆಗಿತ್ತಲ್ಲ !" ಎಂದು ತಮ್ಮ ಮಗನಿಗೆ ಆದುದನ್ನೂ, ಇವೇ ಡಾಕ್ಟರಿಂದ ನಡೆದ ಚಿಕಿತ್ಸೆಯನ್ನೂ ಸಾಹುಕಾರರು ವಿವರಿಸಿದರು. "ನಮ್ಮ ಕರಿಯಣ್ಣನಿಗೆ ದಿನ ಬಿಟ್ಟು ದಿನ ಎಂಟು ಹತ್ತು ದಫ ಮದ್ದು ಚುಚ್ಚಿದರು. ಮೈಸೂರಿಗೆ 'ಟೆಲಿಗ್ರಾಂ' ಕೊಡಿಸಿ ಔಷಧ ತರಿಸಿದ್ದೆ. ಆರು ಸಲ ಚುಚ್ಚೋ ಹೊತ್ತಿಗೇನೇ ಚೆನ್ನಾಗಿ ಹುಷಾರಾಗಿ ಬಿಟ್ಟ. ತಡೀರಿ, ನೋಡ್ತೀನಿ, ಒಂದೆರಡು ಕೊಳವಿ ಅವನಿಗೆ ಅಂತ ತಂದಿದ್ದದ್ದು ಉಳಿದವೋ ಏನೋ" ಎಂದು ಒಳಕ್ಕೆ ಹೋಗಿ ಎರಡು 'ಟ್ಯೂಬು'ಗಳನ್ನು ತಂದುಕೊಟ್ಟರು ; "ನಿಮ್ಮ ಪುಣ್ಯ ! ಇದನ್ನ ತಗೊಂಡು ಹೋಗಿ ಡಾಕ್ಟರಿಗೆ ಕೊಡಿ" ಎಂದರು. ಸದ್ಯಕ್ಕೆ ಹಣ ಮಾತ್ರ ತಮ್ಮಿಂದ ಏನೂ ದೊರೆಯುವ

ಹಾಗಿಲ್ಲವೆಂದು ಖಂಡಿತ ಹೇಳಿಬಿಟ್ಟರು.

ಔಷಧವೇನೋ ಅದೇ, ಆದರೆ ಇನ್ನೂ ಹತ್ತು ಟ್ಯೂಬು ಬೇಕು. ಹಣ ಕೊಟ್ಟರೆ ತಾವೇ ಔಷಧ ತರಿಸಿ ರೋಗವನ್ನು ಖಂಡಿತ ಗುಣಪಡಿಸುವುದಾಗಿ ಡಾಕ್ಟರು ಭರವಸೆಯಿತ್ತರು.

ಚಿಕಿತ್ಸೆ ಪ್ರಾರಂಭವಾಯಿತು. ಶೀಘ್ರದಲ್ಲಿ ಹಣ ಹೊಂದಿಸುವ ಹೊಣೆ ವೆಂಕಟಸುಬ್ಬಯ್ಯನವರನ್ನು ಹೆಂಡತಿಯ ಬಳಿಗೆ ಅಟ್ಟಿತು.

"ಸೀತೆಯ ಚಿನ್ನದ ಗುಂಡುಕಾಸು ಇತ್ತಲ್ಲ. ಸದ್ಯಕ್ಕೆ ಅವನ್ನ ಸುಬ್ಬಯ್ಯ ಶೆಟ್ಟರಲ್ಲಿ ಅಡವಿಟ್ಟರೋದು. ಆಮೇಲೆ ಬಿಡಿಸಿಕೊಂಡರಾಯಿತು. ನೀನೇನು ಹೇಳುತ್ತೀಯಾ ?" ಎಂದು ಹೆಂಡತಿಯನ್ನು ಕೇಳಿದರು.

ಪಾರ್ವತಮ್ಮನವರು ಏನು ಹೇಳಿಯಾರು ? ಒಪ್ಪಿಕೊಂಡರು. ಅದನ್ನು ತರಹೋದರು. ಆದರೆ ಪೆಟ್ಟಿಗೆಯಲ್ಲಿ ಆ ಒಡವೆ ಇರಲಿಲ್ಲ ! ಅದು ಕಾಣದೆ ಹೋದ ಬಗ್ಗೆ ಗಂಡಹೆಂಡಿರಿಗೆ ಮಾತುಕತೆಯಾಯಿತು, ಮನಸ್ತಾಪವಾಯಿತು ; ಪ್ರಯೋಜನವೇನಾಗಲಿಲ್ಲ. "ಬಂದಿಯನ್ನೇ ಕೊಟ್ಟರು. ಪ್ರಾಣ ಹೆಚ್ಚೋ, ಚಿನ್ನ ಹೆಚ್ಚೋ !" ಎಂದು ವೆಂಕಟಸುಬ್ಬಯ್ಯನವರು ಸಿಡಿದು ನುಡಿದಾಗ, "ನಾನು ಚಿನ್ನ ಹೆಚ್ಚು ಅಂತ ತಿಳಿದಿಲ್ಲ. ಚಿನ್ನದ ಗುಂಡು ಕಾಸು ನೀವೇ ಯಾವಾಗಲೋ ತೆಗೆದುಕೊಂಡಿದ್ದೀರಿ ಅಂದೆ. ನಿಮಗೆ ಅಷ್ಟಕ್ಕೆ ಕೋಪ. ಚಿನ್ನದ ಸಮೇತ ನನ್ನನ್ನೇನು ಸುಡುವುದಿಲ್ಲವಲ್ಲಾ ! ಎಂದಿದ್ದರೂ ನಿಮ್ಮದು, ನಿಮ್ಮ ಮಕ್ಕಳದು" ಎಂದು ಕೋಪ ಬೆರೆತ ದುಃಖದಿಂದ ಬಂದಿಯನ್ನು ತೆಗೆದು ಗಂಡನ ಕೈಗೆ ಕೊಟ್ಟರು.

ವೆಂಕಟಸುಬ್ಬಯ್ಯನವರಿಗೂ ಹಣದ ಆವಶ್ಯಕತೆ ಬಹಳವಾಗಿತ್ತು. ಬಂದಿಯನ್ನು ಅಡವಿಟ್ಟು ಮುನ್ನೂರು ರೂಪಾಯಿ ಪಡೆದರು. ಡಾಕ್ಟರಿಗೆ ನೂರೈವತ್ತನ್ನು ತೆತ್ತು, ಚಿಕಿತ್ಸೆಯ ಸಂಪೂರ್ಣ ಭಾರವನ್ನು ಅವರಿಗೇ ವಹಿಸಿದರು.

ಮನೆಯಲ್ಲಿಯೇ ನಾಲ್ಕೈದು ಇಂಜೆಕ್ಷನ್‌ಗಳನ್ನು ಕೊಟ್ಟ ಮೇಲೆ, ರಾಮಸ್ವಾಮಿ ಆಸ್ಪತ್ರೆಗೆ ತಾನೇ ಹೋಗುವಮಟ್ಟಿಗಾದ. ಅವನು ಹಾಗೆ ಹೋದಾಗ, "ಎಲ್ಲಿ ಸಂಪಾದಿಸಿದೆಯಯ್ಯಾ ಈ ರೋಗವನ್ನ ?" ಎಂದು ಡಾಕ್ಟರು ಗೇಲಿಮಾಡಿದರು. ರಾಮಸ್ವಾಮಿ ಬಾಯಿ ಕಿಸಿದ; ರೋಗದ

ಮರ್ಮವನ್ನು ತನ್ನ ತಂದೆಗೆ ಬಯಲುಮಾಡದಿದ್ದುದಕ್ಕಾಗಿ ತನ್ನ 'ಮರ್ಯಾದೆ' ಯನ್ನೂ ಮಾಡುವುದಾಗಿ ಡಾಕ್ಟರಿಗೆ ಮಾತುಕೊಟ್ಟ.

೨

ರಾಮಸ್ವಾಮಿ ಸಂಪೂರ್ಣವಾಗಿ ಚೇತರಿಸಿಕೊಳ್ಳಲು ಎರಡು ತಿಂಗಳ ಮೇಲೆ ಹಿಡಿಯಿತು. ಮಗ ಸತ್ತು ಬದುಕಿದ ಎಂದು ಹೆತ್ತ ಬಸಿರಿಗೆ ಹಿಗ್ಗು. ಮಗನಿಗೆ ಅಂಟಿಕೊಂಡಿದ್ದ ಖಾಯಿಲೆ ಎಂಥದು ಎಂದು ಅವರಿವರ ಬಾಯಿಂದ ಒಡಕುಸುದ್ದಿ ಕೇಳಿದಾಗ ವೆಂಕಟಸುಬ್ಬಯ್ಯನವರು ತೀರ ನೊಂದರು. ಊರಿನಲ್ಲಿ ತಮಗಿದ್ದ ಘನತೆ ದಿನದಿನಕ್ಕೆ ಕುಗ್ಗುತ್ತಿದೆಯೆಂದು ಅವರಿಗೆ ಭಾಸವಾಗ ತೊಡಗಿತು. ಅವರು ಅವನ ಕುರಿತು ಹೆಂಡತಿಯೊಂದಿಗೆ ಒಮ್ಮೊಮ್ಮೆ ರೋಸಿ ನುಡಿಯುವರು; ಆಡಬಾರದ್ದನ್ನು ಆಡುವರು. ಆಗ ಪಾರ್ವತಮ್ಮನವರು, "ಕಾಯಿ ಬಳ್ಳಿಗೆ ಭಾರವಾದರೆ ಹೇಗೆ?" ಎಂದು ತಮಗೆ ತಿಳಿದ ಸಾಮತಿಯ ವೇದಾಂತ ಹೇಳುವರು. "ಕಾಯಿ ಕೊಳೆತರೋ?" ಎಂದು ವೆಂಕಟಸುಬ್ಬಯ್ಯನವರ ಪ್ರಶ್ನೆ. "ಪೂರ್ತಿ ಕೊಳೆತು ಬೀಳುವವರೆಗೂ ತೊಟ್ಟು ಹಿಡಿದುಕೊಂಡೇ ಇರುವುದಿಲ್ಲವೆ? ನಾವೇ ತೊರೆದರೆ ಹೇಗೆ? ದಂಡಿಸಿದಾಗಲೇ ದಡ ಹತ್ತಲಿಲ್ಲ. ಬುದ್ಧಿ ಹೇಳಿ ತಿದ್ದಿಕೊಳ್ಳಲಿಲ್ಲ. ಆಯುಸ್ಸಿದ್ದರೆ ಎಂದೋ ಅವನಿಗೇ ಬುದ್ಧಿ ಬರುತ್ತೆ. ಬಿದ್ದ ಅಂತ ಬೀದಿಯವರು ಕಲ್ಲೆಸೆದರೆ, ನಮ್ಮದೂ ಎರಡು ಇರಲಿ ಎನ್ನೋಣವೇ?" ಎಂದು ಪಾರ್ವತಮ್ಮನವರು ಸಮಾಧಾನದ ವಾಕ್ಯಗಳನ್ನು ಆಡುವರು. "ಒಂದು ಮದುವೆಯಾಗಿದ್ದರೆ ದಾರಿಗೆ ಬರುತ್ತಿದ್ದ ಅಂತ ಕಾಣುತ್ತೆ. ನಮ್ಮ ದುರದೃಷ್ಟ. ಎತ್ತಲಾಗಾದರೂ ಹಾಳಾಗಿ ಹೋಗಲಿ" ಎಂದು ಕೋಪದ ಕಿಚ್ಚನ್ನೆಲ್ಲಾ ಹೆಂಡತಿಯ ಮುಂದೆ ಉರಿಸಿಬಿಟ್ಟು, ಶಾಂತರಾಗುವರು.

ಮಗನ ವಿಚಾರದಲ್ಲಿ ಮರುಗುತ್ತಿದ್ದ ವೃದ್ಧ ದಂಪತಿಗೆ ಮಗಳ ಸುಖ ಪ್ರಸವದ ಶುಭವರ್ತಮಾನದ ಕಾಗದ ಬಂದು, ದುಗುಡದ ಗಾಯಕ್ಕೆ ಲೇಪ ಹಚ್ಚಿತು. ಎಲ್ಲಿ ಕುಡಿಯೊಡೆದರೂ ವಂಶದ ಬಳ್ಳಿಗೆ ನಲಿವು.

ಗಂಡಹೆಂಡಿರು ಸೀತೆ ಮನೆಯಲ್ಲಿದ್ದಾಗ ಅವಳನ್ನು ನೋಡಿ ನೋಡಿ ಕೊರಗುತ್ತಿದ್ದರು; ಈಗ ಸೀತೆಯಿಲ್ಲವೆಂದು ಕೊರಗು. 'ಕುಂಕುಮ ಭಾಗ್ಯ ಕಳೆದುಕೊಂಡ ಹೆಣ್ಣುಮಗುವಿನಿಂದಲೇ ಮನೆ ಅಷ್ಟು ಬೆಳಗುತ್ತಿದ್ದಿರಬೇಕಾದರೆ,

ಅವಳು ಮಕ್ಕಳುಮರಿ ಹಡೆದು ಬಂದುಹೋಗುತ್ತಿದ್ದರೆ ಮನೆ ಇನ್ನೆಷ್ಟು ಬೆಳಗು ತ್ತಿತ್ತೋ' ಎಂದು ಪಾರ್ವತಮ್ಮನವರು ಆಗಾಗ್ಗೆ ಕುದ್ದುಕೊಳ್ಳುವರು; "ಮನೆಯೆಲ್ಲ ಬಿಕೋ ಅಂತಿದೆ. ಪರೀಕ್ಷೆ ಆದಕೂಡಲೆ ಕರಸಿಕೊಂಡುಬಿಡಿ" ಎಂದು ಗಂಡನಿಗೆ ಪದೇ ಪದೇ ಸೂಚನೆ ಕೊಡುವರು.

ಮಗಳ ಕುರಿತ ಆಲೋಚನೆ ಅವಳ ಭವಿಷ್ಯದ ಬಗೆಗೆ ಆಗಾಗ್ಗೆ ವೆಂಕಟ ಸುಬ್ಬಯ್ಯನವರನ್ನು ಚಿಂತೆಗೀಡುಮಾಡುವುದು. ಆಗ ಅವರು ಸಹಜವಾಗಿ, "ಬಸವಾಪಟ್ಟಣದಿಂದ ಮೊನ್ನೆ ಹಾಕಿದ ಕಾಗದಕ್ಕೆ ಉತ್ತರವೇ ಇಲ್ಲ. ನಾನೇ ಒಂದು ಹೆಜ್ಜೆ ಹೋಗಿಬಂದರೆ ಒಳ್ಳೆಯದಲ್ಲವೆ?" ಎಂದುಕೊಳ್ಳುವರು. ಕಡೆಗೆ ಒಮ್ಮೆ ನಿರ್ಧಾರಮಾಡಿ, ಬಸವಾಪಟ್ಟಣಕ್ಕೆ ಹೋಗಿಯೇ ಬಂದರು. ಅಲ್ಲಿ ಶಾಮಣ್ಣನವರ ಪರವಾಗಿಯೂ ಮಾತನಾಡಿದರು.

ಬಸವಾಪಟ್ಟಣಕ್ಕೆ ಹೋದದ್ದರಿಂದ ಪ್ರಯೋಜನವೂ ಆಯಿತು; ನಿರಾಶೆಯೂ ಆಯಿತು. ಹಿಂದೆ ವಾಗ್ದಾನವಾಗಿದ್ದ ಸಾವಿರ ರೂಪಾಯಿ ಈಗ ಅರ್ಧಕ್ಕೆ ಇಳಿಯಿತು—

"........ನೋಡಿದೆಯಾ, ಜನದ ಮಾತನ್ನ ಹೇಗೆ ನಂಬುವುದು ಈಗಿನ ಕಾಲದಲ್ಲಿ? ಮೈಲಾರಯ್ಯನವರು ಕೊಟ್ಟ ಮಾತನ್ನ ಹೀಗೆ ಹಿಂದಕ್ಕೆ ತೆಗೆದು ಕೊಳ್ಳುತಾರೆ ಅಂತ ನಾನೆಣಿಸಿರಲಿಲ್ಲ. ಅವರ ಮಗಳು ನಾಗರತ್ನ, ಮಗ ನಾಗರಾಜ ಇವರ ಮದುವೆ ಮುಂಜಿ ಒಟ್ಟಿಗೆ ಮಾಡಬೇಕು ಅಂತ ಇದಾರಂತೆ, ಬರುವ ವೈಶಾಖದಲ್ಲೋ ಜ್ಯೇಷ್ಠದಲ್ಲೋ. ಅವರಿಗೂ ತುಂಬಾ ತಾಪತ್ರಯ ವಾಗಿದೆಯಂತೆ. ಹೇಗಿದ್ದರೂ ಮದುವೆ ಮುಂಜಿಗೆ ದುಡ್ಡು ಹೊಂದಿಸಬೇಕು, ಯಾವಾಗಾದರೂ ಹೊಲ-ಗದ್ದೆ ಮಾರಬೇಕು, ಅದೇ ಸಂದರ್ಭದಲ್ಲಿ ಹೇಗಾ ದರೂ ಮಾಡಿ ಹಣ ಕೂಡಿಸಿ ಇಬ್ಬರು ಸೊಸೆಯರಿಗೂ ತಲಾ ಐನೂರು ಕೊಟ್ಟು ಬಿಡುತಾರಂತೆ. ಈ ವಿಷಯ ಶಾಮಣ್ಣನವರೊಂದಿಗೆ ಆಲೋಚಿಸಿ, ಇತ್ಯರ್ಥ ಮಾಡಿ ಕಾಗದ ಪತ್ರ ಮಾಡಿಕೊಟ್ಟರೆ ಹಣ ಕೊಡುವುದಾಗಿ ತಿಳಿಸಿದರು. ಅದಕ್ಕೆ ಇಷ್ಟವಿಲ್ಲದೆಹೋದರೆ, 'ಕೋರ್ಟಿನಲ್ಲಿ ದಾವಾಹಾಕಿ ತೆಗೆದುಕೊಳ್ಳಿ' ಎಂದರು. ನಾನು ಕೋರ್ಟಿನ ಮಾತು ಎತ್ತೇ ಇಲ್ಲ. ಕೋರ್ಟಿಗೆ ಹೋಗುವ ಹಾಗಿದ್ದರೆ ಈ ತನಕ ಸುಮ್ಮನಿರುತ್ತಿದ್ದೆನೆ? ನೋಡಿದೆಯಾ, ಅವರ ಮಾತು ಹೇಗಿದೆ?" ಎಂದು ತಮ್ಮ ಬಸವಾಪಟ್ಟಣದ ಪ್ರಯಾಣದ ಫಲಿತಾಂಶವನ್ನು

ಪಾರ್ವತಮ್ಮನವರಿಗೆ ಒಕ್ಕಣಿಸಿದರು.

"ಪಾಪ, ಅವರೂ ಒಬ್ಬನಲ್ಲ ಅಂತ ಇಬ್ಬರು ಮಕ್ಕಳನ್ನ ಕಳೆದು ಕೊಂಡಿದಾರೆ. ಆ ದುಃಖ ಎಂದಿಗೆ ಆರೀತು? ಸುಮ್ನೆ ಕೋರ್ಟು ಕಚೇರಿ ಅಂತ ನಾವೂ ತಿರುಗಿ, ಅವರನ್ನೂ ತಿರುಗಿಸಿ, ಮೊದಲೇ ನೊಂದ ಕರುಳನ್ನ ಕುಯ್ಯೋದೇಕೆ? ಅವರೀಗ ಐನೂರು ಅಂದಿದಾರೋ ಇಲ್ವೋ, ಬೇಗ ಅದನ್ನ ಬರಮಾಡಿಕೊಂಡು ಬಿಡೋದು ಒಳ್ಳೇದು. ತಡವಾಗಿ, ಅವರು ಮನಸ್ಸು ಬದಲಾಯಿಸಿದರೆ, ಅದಕ್ಕೂ ಸೊನ್ನೆಯಾದರೆ ಕೋರ್ಟು ಕಚೇರಿ ಅಂತ ಅಲೆಯ ಬೇಕಾಗುತ್ತೆ. ಇಲ್ಲದ ಕಾಷ್ಟಾವ್ಯಸನ...."

"ನಿತ್ಯ ಕೋರ್ಟು ಅಲೆಯುವವನಿಗೆ ಅದೊಂದು ಅಲೆತವೆ?....ದುಃಖ ದಲ್ಲಿದ್ದರೂ ಅವರ 'ಪರಾರತ್ತು' ನೋಡಿದೆಯಾ ಅನ್ನೋಕೆ ಹೇಳಿದೆ....ನೀನು ಹೇಳಿದ ಹಾಗೆ ಮಾಡೋದೇ ವಾಸಿ ಅಂತ ಇಟ್ಕೊ...." ಎಂದು ವೆಂಕಟ ಸುಬ್ಬಯ್ಯನವರು ಈ ವಿಚಾರದಲ್ಲಿ ತೀರ್ಮಾನದ ನಿಲವಿಗೆ ಬಂದರು.

ರಾಮಸ್ವಾಮಿ ವೈದ್ಯರ ಎಚ್ಚರಿಕೆಯನ್ನು ಕಟ್ಟುನಿಟ್ಟಾಗಿ ಪಾಲಿಸುತ್ತ ಬಂದ. ಆದರೂ ಮತ್ತೆ ಎಂದಿನಂತೆ ಹಂಟಿಗಾಗಿಯಾದರೂ ಹಳೆಯ ಗೆಳೆಯ ರೊಂದಿಗೆ ಕಲೆಯದೆ ಇರುತ್ತಿರಲಿಲ್ಲ. ಕರಿಯಣ್ಣನನ್ನು ಕಾಡಿ ಬೇಡಿ ಅವನಿಂದ ಹತ್ತು ರೂಪಾಯನ್ನು ಕಸಿದುಕೊಂಡು, ವೈದ್ಯರಿಗೆ 'ಮರ್ಯಾದೆ' ಮಾಡಿ, ತನ್ನ ಮರ್ಯಾದೆಯನ್ನು ಕಾದಿಟ್ಟುಕೊಂಡೆನೆಂದು ತಿಳಿದಿದ್ದ.

ವಿಶೇಷ ಘಟನೆಗಳಿಲ್ಲದೆ ದಿನಗಳುರುಳಿದುವು. ರಂಗಸ್ವಾಮಿಯ ಹಾಗೂ ಸೀತೆಯ ಪರೀಕ್ಷೆಗಳು ಮುಗಿದುವೆಂಬ ಸುದ್ದಿಯ ಕಾಗದವೂ ಬಂದಿತು. ಕಾವೇರಿಯ ಬಾಣಂತಿತನವೂ ಮೂರು ತಿಂಗಳ ಕಾಲ ನಡೆದಂತಾಗಿತ್ತು. ಸೀತೆಯನ್ನು ಕರಸಿಕೊಳ್ಳುವುದು ಸೂಕ್ತವೆಂದು ವೆಂಕಟಸುಬ್ಬಯ್ಯನವರು ಭಾವಿಸಿದರು. "ರಂಗಸ್ವಾಮಿಗೆ ಕಾಗದ ಹಾಕಲೇ?" ಎಂದು ಅವರು ಹೆಂಡತಿ ಯನ್ನು ಕೇಳಿದರು. "ಅವನು ಬಂದರೆ ಮನೆಯ ಕಡೆ ನೋಡಿಕೊಳ್ಳುವವರು ಯಾರು? ನೀವೇ ಒಂದು ಹೆಜ್ಜೆ ಹೋಗಿಬಂದರಾಗದೆ? ಹಾಗೇ ಶಾಮಣ್ಣ ನವರನ್ನ ಕಂಡು ಮಾತನಾಡಿ ಬರಬಹುದು" ಎಂದು ಪಾರ್ವತಮ್ಮನವರು ಸಲಹೆಮಾಡಿದರು. "ಅದು ಸರಿ. ಮೊನ್ನೆ ಹೊಳೇನರಸೀಪುರಕ್ಕೆ ಹೋಗಿ ದ್ದಾಗ ತಮ್ಮಯ್ಯ ಸಿಕ್ಕಿ ಹೇಳಿದ. ಯಾವುದೋ ಹೆಣ್ಣಿದೆಯಂತೆ. ಕೂಡಲೆ

ಬಂದು ನೋಡಿಕೊಂಡು ಹೋಗಿ ಅಂತ. ಅಲ್ಲಿಗೆ ಬೇರೆ ಹೋಗಬೇಕು...." ಎಂದು ವೆಂಕಟಸುಬ್ಬಯ್ಯನವರು ಅನುಮಾನಿಸುತ್ತಾ ಹೇಳಿದರು. "ಸರಿ, ಹಾಗಿದ್ದ ಮೇಲೆ ರಾಮುಸ್ವಾಮಿಯನ್ನೇ ಕಳಿಸಿ. ಹೇಗೂ ಹುಷಾರಾಗಿದ್ದಾನಲ್ಲ ಈಗ" ಎಂದರು ಪಾರ್ವತಮ್ಮ.

ಮೈಸೂರಿಗೆ ರಾಮುಸ್ವಾಮಿಯೇ ಹೋಗುವುದೆಂದು ತೀರ್ಮಾನ ವಾಯಿತು. ವೆಂಕಟಸುಬ್ಬಯ್ಯನವರು ಬಸವಾಪಟ್ಟಣದ ವಿಚಾರವನ್ನೆಲ್ಲ ವಿಶದ ವಾಗಿ ಬರೆದು, ಶಾಮಣ್ಣನವರಿಗೆ ಕೊಡುವಂತೆ ಒಂದು ಕಾಗದವನ್ನು ರಾಮು ಸ್ವಾಮಿಗೆ ಕೊಟ್ಟರು; "ಅವರಿಗೆ ಕಾಗದ ಕೊಡುವುದು ಮರೆಯಬೇಡ...." ಎಂದು ಅವನು ಪಯಣಹೊರಟಾಗ ಎಚ್ಚರಿಸಿದರು.

೩

ಊರಿಗೆ ಹೋಗುವ ಮುನ್ನ ಚಿಕ್ಕಮ್ಮನ ಮನೆಗೆ ಒಮ್ಮೆ ಹೋಗಿಬರ ಬೇಕೆಂದು ಸೀತೆ ಬಯಸಿದಳು. "ಇನ್ನೂ ತೊಟ್ಟಿಲ ಬೊಮ್ಮಟೆ. ನಾನು ಬರುವುದಿಲ್ಲ. ನೀನು ಹೋಗಿಬಾರಮ್ಮ" ಎಂದು ಕಾವೇರಿ ತಂಗಿಗೆ ಹೇಳಿ ದಳು. ರಾಮುಸ್ವಾಮಿ–ಸೀತೆ ಚಿಕ್ಕಮ್ಮನ ಮನೆಗೆ ಹೋದರು.

ಅಂದೇನೋ ಇಬ್ಬರಿಗೂ ಚಿಕ್ಕಮ್ಮನ ಮನೆಯಲ್ಲೇ ಊಟ.

"ಹೋಗಿಬರುತ್ತೇನೆ ಅಂತ ಹೇಳಿಬರುವುದಕ್ಕೆ ಬಂದೆಯಾ, ಸೀತೆ?" ಎಂದು ಚಿಕ್ಕಮ್ಮ ಹಂಗಿಸುವ ದನಿಯಲ್ಲಿ ಸೀತೆಯನ್ನು ಕೇಳಿದರು.

"ಬರಬೇಕು ಅಂದರೂ, ನೀನು ಕಂಡಹಾಗೇ ಬಿಡುವೆಲ್ಲಿ, ಚಿಕ್ಕಮ್ಮ? ಮೊನ್ನೆ ತಾನೇ ಗಂಗೆಪೂಜೆ ಮಾಡಿದಳು, ಕಾವೇರಿ. ಇವತ್ತು ಬಂದಿದೀನಿ" ಎಂದು ಸೀತೆ ಉತ್ತರ ಕೊಟ್ಟಳು.

"ನಾಳೆಯೇ ಹೊರಟುಬಿಡಬೇಕೇನಪ್ಪ, ರಾಮುಸ್ವಾಮಿ?" ಎಂದು ರಾಮುಸ್ವಾಮಿಯ ಕಡೆ ತಿರುಗಿ ಪ್ರಶ್ನಿಸಿದರು.

"ಇಲ್ಲ, ಅಂಥಾದ್ದೇನೂ ಆತುರವಿಲ್ಲ. ಇನ್ನೂ ಸೀತೆಯ ವಾರಗಿತ್ತಿಯ ಮನೆಗೆ ಒಂದು ದಿನ ಅವಳನ್ನೂ ಕರೆದುಕೊಂಡು ಹೋಗಬೇಕು. ಶಾಮಣ್ಣ ನವರಿಗೆ ಅಪ್ಪ ಒಂದು ಕಾಗದಾನೂ ಕೊಟ್ಟಿದಾನೆ...."

"ಏನು ಸಮಾಚಾರ? ಗಂಡನ ಕಡೆಯಿಂದ ಇಬ್ಬರಿಗೂ ಏನಾದರೂ

ಕೇಳೋಣ ಅಂತ ಮಾಡಿಕೊಂಡಿದ್ದಾರೆಯೋ, ಹೇಗೆ ?"

"ಅದೇ ವಿಷಯ" ಎಂದು ರಾಮಸ್ವಾಮಿ ಊರಿನಲ್ಲಿ ತನ್ನ ಎದುರಿಗೆ ಆಗಿದ್ದ ಮಾತುಕತೆಯನ್ನು ಸಂಗ್ರಹವಾಗಿ ತಿಳಿಸಿದ. ಲಕ್ಷ್ಮೀದೇವಮ್ಮನವರು ಅದನ್ನೆಲ್ಲ ಕೇಳಿ—

"ನೋಡಿದೆಯಪ್ಪ, ಸೀತೆ ಹೇಗೂ ಇನ್ನೊಂದು ಸಲ ಬರಬೇಕಾಗುತ್ತೆ. ಸುಮ್ಮನೆ ಶ್ರಮ, ಅನಾವಶ್ಯಕವಾಗಿ ಖರ್ಚು. ಏನೋ ದೇವರ ದಯದಿಂದ ಸೀತೆಗೆ ಪ್ಯಾಸಾದರೆ, ಇಂಗ್ಲಿಷು ಲವರು ಸೆಕಂಡರಿ ಪರೀಕ್ಷೆಗೂ ಕಟ್ಟಿಬಿಡಲಿ. ರಂಗಸ್ವಾಮಿ ಇಲ್ಲೇ ಇದ್ದರೆ, ಅಕ್ಕನ ಮನೆಯಲ್ಲಿ ಬೇಕಾದರೂ ಇರಲಿ. ಇಲ್ಲ, ನಮ್ಮ ಮನೆಯಲ್ಲಿಯೇ ಬೇಕಾದರೂ ಇರಲಿ...."

ಈ ಮಾತುಕತೆಯನ್ನೆಲ್ಲಾ ಆಲಿಸುತ್ತ, ಊರಿಗೆ ಮರಳುವುದರಲ್ಲಿದ್ದ ಸೀತೆಯ ಸೌಂದರ್ಯದ ಹೊಂಬಿಸಿಲಿನಲ್ಲಿ ಚಿಟ್ಟೆಯಾಗಿ ನಲಿಯುತ್ತ ಅಲ್ಲಿಯೇ ತುಸು ದೂರದಲ್ಲಿ ನಿಂತಿದ್ದ ಕೃಷ್ಣಮೂರ್ತಿ ಸಮೀಪಿಸಿ, ಅವರ ಮಾತು ಮುಗಿಯುವಷ್ಟರಲ್ಲಿಯೇ ಬಾಯಿಹಾಕಿದ: "ಸ್ಕೂಲಿಗೆ ಸೇರಲೇಬೇಕಾಗಿಲ್ಲ, ಅತ್ತೆ. ನಾನು ಮನೆಯಲ್ಲೆ ಪಾಠ ಹೇಳಿಕೊಟ್ಟು ಪ್ಯಾಸುಮಾಡಿಸುತ್ತೇನೆ, ಬೇಕಾದರೆ." ಹೇಳಿದಾಗ, ಮುಗುಳುನಗೆಯೊಂದು ಸಹಜಸುಂದರವಾದ ಅವನ ಮುಖಕ್ಕೆ ಹೆಚ್ಚಿನ ಕಳೆಕೊಟ್ಟಿತು; ದೃಷ್ಟಿ ಸೀತೆಯ ದೃಷ್ಟಿಯನ್ನು ಹುಡುಕುತ್ತಿತ್ತು.

ಈ ಮಾತು ಕೇಳಿ, ಸೀತೆ ಸಹಜವಾಗಿಯೇ ಅತ್ತ ತಿರುಗಿದಳು: ಕ್ಷಣಕಾಲ ಮಾತ್ರ. ಕ್ಷಣಾರ್ಧದಲ್ಲಿಯೇ ದೃಷ್ಟಿ ದೃಷ್ಟಿಯನ್ನು ಅರ್ಥಮಾಡಿಕೊಂಡಿತು; ಮುಗುಳುನಗೆಯ ಉತ್ತರ ಹೋಯಿತು.

"ಕೇಳಿದೆಯಪ್ಪ, ಇಲ್ಲಿದ್ದರೆ ಇವನು ಪಾಠ ಹೇಳಿಕೊಡುತ್ತಾನೆ. ಅಲ್ಲಿ ಭಾವ ಇಷ್ಟೇ ಇದಾರೆ. ಊರಿಗೆ ಬಂದು ಸುಮ್ಮನೆ ಏನು ಮಾಡಬೇಕು ?" ಎಂದರು ಚಿಕ್ಕಮ್ಮ.

"ಅಕ್ಕನನ್ನೂ ಭಾವನನ್ನೂ ಕೇಳ್ತೇನೆ. ಅವರು ಹೇಗೆ ಹೇಳಿದರೆ ಹಾಗೆ" ಎಂದು ರಾಮಸ್ವಾಮಿ ತನ್ನ ಮೇಲಿನ ಹೊಣೆಯನ್ನು ಕಳಚಿಕೊಂಡ.

"ಅದೂ ನ್ಯಾಯ. ಕರಸಿಕೊಂಡವರು ಅವರು. ಹಾಗೇ ಮಾಡಪ್ಪ. ಅಂತೂ ಇಲ್ಲಿ ಕೆಲವು ಕಾಲ ಇದ್ದು ಹೋಗಲಿ ಅಂತ ನನ್ನ ಮನಸ್ಸು."

ಅಂದೇನೋ ಇಬ್ಬರೂ ತಾತ್ಕಾಲಿಕವಾಗಿ ಚಿಕ್ಕಮ್ಮನನ್ನು ಬೀಳ್ಕೊಂಡರು.

ಮಾರನೆಯ ದಿನವೇ ರಾಮಸ್ವಾಮಿ ಸೀತೆಯನ್ನೂ ಕರೆದುಕೊಂಡು ಶಾಮಣ್ಣನವರ ಮನೆಗೆ ಹೋದ. ವೆಂಕಟಸುಬ್ಬಯ್ಯನವರ ಕಾಗದವನ್ನು ಅವರು ಓದಿಕೊಂಡರು.

ಸೀತೆಯನ್ನು ಗೌರಿಯ ತಾಯಿ ಒಳಕ್ಕೆ ಬರಮಾಡಿಕೊಂಡು, ಮಾತ ನಾಡಿಸುತ್ತ ಕುಳ್ಳಿರಿಸಿಕೊಂಡರು. ಗೌರಮ್ಮ ತನ್ನ ಪುಟ್ಟತಂಗಿಯನ್ನು ತೊಡೆಯ ಮೇಲೆ ಮಲಗಿಸಿಕೊಂಡು, ತೊಡೆ ಕುಲುಕುತ್ತ ನಿದ್ದೆಹೋಗಿಸಲು ಯತ್ನಿಸು ತ್ತಿದ್ದಳು; ಅವಳು ಕುಳಿತ ಭಂಗಿಯಲ್ಲಿ ತಾಯ ಠೀವಿಯಿತ್ತು; ಮುಖದಲ್ಲಿ ತಾಯ್ತನದ ಸುಖಾನುಭವದ ಸಂತೃಪ್ತಿಯಿತ್ತು, ಗೆಲವಿತ್ತು.

ಸೀತೆಗೆನ್ನಿಸಿತು: ತಾನೂ ತನ್ನ ಅಕ್ಕನ ಮಗುವನ್ನು ಹೀಗೆಯೆ ಮಲಗಿಸಿಕೊಳ್ಳುತ್ತಿರಲಿಲ್ಲವೆ? ತನಗೆ ಮನಸ್ಸಿನಲ್ಲಿ ಏನೋ ಕೊರತೆಯೆನ್ನಿಸು ತ್ತಿತ್ತಲ್ಲಾ—ಅದೇಕೆ?

ಮೊದಲ ಸಲ ಗೌರಮ್ಮನನ್ನು ತನ್ನ ಮದುವೆಯಲ್ಲಿ ನೋಡಿದ್ದು. ಆಗ ಅವಳು ಸುಮಂಗಲಿ–ಸುಂದರಿ. ಈಗ ವಿಧವೆ, ವಿಕಾರಗೊಂಡವಳು: ಆದರೂ, ಎಂಥ ಚೆಲುವೆ! ತನಗಿಂತಲೂ ಚೆಲುವೆಯೆನ್ನುವಂತೆ ಇದ್ದಾಳೆ. ಮೈಯ ಹೊಂಬಣ್ಣ ಎಷ್ಟು ಮೋಹಕವಾಗಿದೆ! ಕೆಂಪು ಸೀರೆಯ ಮುಂಡಮುಸುಕು, ಹಣೆಯ ವಿಭೂತಿ—ಹೆಣ್ಣುತನದ ಸೊಬಗನ್ನೇ ಅಪಹರಿಸಿಬಿಟ್ಟಿವೆ! ಆದರೂ ಎಂಥ ಚೆಲುವೆ! ತನ್ನಂತೆ ಸಕೇಶಿಯಾಗಿದ್ದರೆ ಇನ್ನೆಷ್ಟು ಚೆಲುವಾಗಿರುತ್ತಿದ್ದಳು!

ಕೆನ್ನೆಗಳು ಹೇಗೆ ತುಂಬಿಕೊಂಡಿವೆ! ಮೈ ಎಷ್ಟು ರಸರಸವಾಗಿದೆ! ಕೊರತೆ ಕೊರಗು ಏನೂ ಇಲ್ಲವೆಂಬಂತೆ ಇದಾಳೆಯಲ್ಲ! ತನ್ನಂತೆ ಒಡವಾಗಿಲ್ಲ.

ಸೀತೆಯ ಮನಸ್ಸು ಯಾವ ಯಾವುದೋ ಭಾವನೆಯಲ್ಲಿ ಮುಳುಗಿ ತೇಲುತ್ತಿತ್ತು; ನರಸಮ್ಮನವರು ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಡುವುದರಲ್ಲಿ ಬಾಯಿಗೆ ನೆರವಾಗುತ್ತಿತ್ತು: ಎರಡು ಕಂಬಿಯ ಮೇಲೆ ಉರುಳುವ ರೈಲು ಬಂಡಿಯಂತೆ.

"ನಮ್ಮ ಮನೆಯಲ್ಲಿ ಒಂದು ಮೂರು ದಿನ ಇರೇ, ತಾಯಿ."

"ಅದಕ್ಕೇನು, ನೀವು ಕೇಳುವುದು ಹೆಚ್ಚೊ ನಾನು ಇರುವುದು ಹೆಚ್ಚೊ. ನಮ್ಮ ಅಕ್ಕನ ಮನೆಗೆ ನಿಮ್ಮ ಮನೆ ಇಷ್ಟು ಹತ್ತಿರ ಅಂತ ನನಗೆ ಗೊತ್ತೇ ಇರಲಿಲ್ಲ. ಗೊತ್ತಿದ್ದಿದ್ದರೆ, ಆಗಲೇ ಬರುತ್ತಿದ್ದೆ. ಈಗಲೂ ಏನು, ಇದ್ದರೆ ಬರುತ್ತೇನಿ."

"ನಿಮ್ಮ ತಂದೆ ನಮ್ಮ ಮನೆಯವರ ಹಾಗೇ ಇದ್ದುಬಿಟ್ಟಿದ್ದಾರಮ್ಮ. ನೀನೇನೂ ಸಂಕೋಚಪಟ್ಟುಕೋಬೇಡ. ಊರಿಗೆ ಹೊರಟು ಹೋಗುವ ಹಾಗಿದ್ದರೆ, ನಾಳೆ ಇಲ್ಲಿಗೇ ಬನ್ನಿ ಊಟಕ್ಕೆ."

ಇಷ್ಟು ಹೊತ್ತಿನಮೇಲೆ ಗೌರಮ್ಮ ಬಾಯಿಬಿಟ್ಟಳು :

"ಊರಿಗೆ ಹೋಗದೆ ಇದ್ದರೂ ನಾಳೆಯೇ ಬರಬಹುದು. ಎರಡು ದಿನ ಇರಬಹುದಲ್ಲ ಇಲ್ಲಿ."

ತಾಯಿಮಗಳಿಗೆ ತನ್ನಲ್ಲಿ ಎಷ್ಟು ವಿಶ್ವಾಸ ಎಂದುಕೊಂಡಳು ಸೀತೆ. ಗೌರಮ್ಮನಲ್ಲಿ ಸೋದರೀ ಭಾವ ಹೊನಲಿಟ್ಟಿತು. ಅವಳೊಂದಿಗೆ ತುಂಬ ಮಾತ ನಾಡಿ ತನ್ನ ಹೃದಯವನ್ನು ತೋಡಿಕೊಳ್ಳಬೇಕೆನ್ನಿಸಿತು.

ಅದಕ್ಕೆ, ಆ ಏಕಾಂತ ದೊರಕುವುದು ಹೇಗೆ?

"ಅಗತ್ಯವಾಗಿ ಆಗಲಿ, ಅದಕ್ಕೇನು" ಎಂದಳು ಸೀತೆ.

ಅತ್ತ, ಶಾಮಣ್ಣನವರೂ ಸೀತೆ ಮೈಸೂರಿನಲ್ಲಿ ಉಳಿಯುವುದೇ ಮೇಲೆಂದು ಸಲಹೆಮಾಡಿದರು. ಅವರು ಮಾಡಿದ ಸಲಹೆ ವ್ಯವಹಾರದೃಷ್ಟಿಯಿಂದ. ಜೀವ ನಾಂಶದ ಸಂಬಂಧದಲ್ಲಿ ಕಾಗದಪತ್ರ ಮಾಡುವುದಾದರೆ, ಸೀತೆ ಇಲ್ಲಿಯೇ ಇದ್ದರೆ ಅನುಕೂಲ. ಒಬ್ಬರೇ ಲಾಯರ ಮೂಲಕ ವಾರಗಿತ್ತಿಯರ ವ್ಯವಹಾರವನ್ನು ವನ್ನು ಒಟ್ಟಿಗೆ ಪೂರೈಸಿಬಿಡಬಹುದು. ರಾಮಸ್ವಾಮಿ ತನ್ನ ತಂದೆಗೆ ಈ ವಿಚಾರ ಬರೆಯುವುದಾಗಿ ಹೇಳಿದ.

ಅದರ ಮಾರನೆಯ ದಿನ ರಾಮಸ್ವಾಮಿ–ಸೀತೆ ಇಬ್ಬರೂ ಶಾಮಣ್ಣನವರ ಮನೆಗೇ ಊಟಕ್ಕೆ ಹೋಗಿದ್ದರು.

"ಇವತ್ತು ಔತಣ ಮಾಡಿದರೆ ಇನ್ನೊಂದು ದಿನ ಬರುವುದಿಲ್ಲ ಅಂತ ಸಾಧಾರಣ ಊಟ" ಎಂದು ಗೌರಮ್ಮ ಬಡಿಸುತ್ತ ಹೇಳಿದಳು.

"ನೀವು ಔತಣ ಮಾಡಿದ ದಿನವೇ ನಿಮ್ಮ ಮನೆಗೆ ಬರುವುದು ಕಡೆಯ ದಿನ, ಗೌರಕ್ಕ" ಎಂದಳು ಸೀತೆ ನಗುತ್ತ.

'ಅಕ್ಕ' ಎಂಬ ಸಂಬೋಧನೆ ಗೌರಮ್ಮನಿಗೆ ತುಂಬ ಆತ್ಮೀಯವೆನಿಸಿತು.

ರಾಮಸ್ವಾಮಿ ಹೇಳಿದಂತೆ ರಂಗಸ್ವಾಮಿಯೇ ಶಾಮಣ್ಣನವರು ಹೇಳಿದ ವಿಚಾರವೆಲ್ಲವನ್ನೂ ತಿಳಿಸಿ, ಮಾವನವರಿಗೆ ಪತ್ರ ಬರೆದನು. ಸೀತೆ ಮೈಸೂರಿ ನಲ್ಲಿಯೇ ಉಳಿಯಲು ತಮ್ಮ ಅಭ್ಯಂತರವಿಲ್ಲವೆಂದು ವೆಂಕಟಸುಬ್ಬಯ್ಯನವರು

ಉತ್ತರ ಬರೆದರು.

ಎರಡು ಮೂರು ದಿನ ಬಿಟ್ಟುಕೊಂಡು, ರಾಮಸ್ವಾಮಿಯೊಬ್ಬನೇ ಊರಿಗೆ ಹಿಂದಿರುಗಿದನು; ಹಿಂದಿರುಗುವಾಗ, ಹಿಂದಿನ ಸಲದ ತನ್ನ ಮೈಸೂರಿನ ಪ್ರವಾಸಕ್ಕೂ ಈ ಸಲದ್ದಕ್ಕೂ ಇದ್ದ ವ್ಯತ್ಯಾಸ ಅವನ ಗಮನಕ್ಕೆ ಬಾರದೆ ಹೋಗಲಿಲ್ಲ.

೪

ತನ್ನ ತಂಗಿ ಇನ್ನೆರಡು ಮೂರು ತಿಂಗಳಾದರೂ ತನ್ನ ಮನೆಯಲ್ಲಿಯೆ ಉಳಿಯುವಂತಾದುದು ಕಾವೇರಿಗೆ ತುಂಬ ಹಿಗ್ಗು. ಇದುವರೆಗೂ ಅವಳು ತನ್ನ ಬಾಣಂತಿತನ ಮಾಡಿದುದಾಯಿತು, ತಾನಿನ್ನು ಅವಳ ಕೈಲಿ ದುಡಿಸಬಾರ ದೆಂದು ಬಗೆದಳವಳು. ಅಂತೆಯೆ, ಮೆಲ್ಲಮೆಲ್ಲನೆ ಕೆಲಸಕ್ಕೆ ತೊಡಗಿದಳು. "ಎಳೆಯ ಮಗುವಿನ ತಾಯಿ, ಶೀತ ಮಾಡಿಕೊಳ್ಳಬೇಡ" ಎಂದು ಸೀತೆ ಅಕ್ಕನಿಗೆ ಉಪಚಾರ ಹೇಳಿ, ಎಲ್ಲ ಕೆಲಸವನ್ನೂ ಇನ್ನೂ ಪೂರ್ತಿಯಾಗಿ ಬಿಟ್ಟು ಕೊಡಲು ಒಪ್ಪಲಿಲ್ಲ. "ನೀನು ಊರಿಗೆ ಹೊರಟುಹೋಗಿದ್ದರೆ ನಾನೇ ಮಾಡಿ ಕೊಳ್ಳುತ್ತ ಇರಲಿಲ್ಲವೆ? ಒಂದು ಮೂರು ದಿನ ಹಾಯಾಗಿ ಇರಬಾರದೆ? ಒಲೆಯ ಮುಂದೆ ಕುಳಿತರೆ ಶೀತವೇನಾಗುವುದಿಲ್ಲ" ಎಂದು ಅಕ್ಕ ತನ್ನ ಹಿರಿಯ ತನದ ಅಧಿಕಾರ ಚಲಾಯಿಸಿ, ಎರಡೂ ಹೊತ್ತಿನ ಅಡುಗೆಯ ಕೆಲಸವನ್ನು ವಹಿಸಿಕೊಂಡೇಬಿಟ್ಟಳು. ಸೀತೆಗೆ ಸುತ್ತುಗೆಲಸ ಮಾತ್ರ ಉಳಿಯಿತು.

ಬಿಡುವು ಹೊತ್ತನ್ನು ಹೇಗೆ ಕಳೆಯಬೇಕು? ಓದಲು ಪುಸ್ತಕ ತಂದು ಕೊಡಿ ಎಂದು ಭಾವನಿಗೆ ಒತ್ತಾಯಹಾಕಲು ಮೊದಲುಮಾಡಿದಳು. ಬೇಸಗೆ ರಜವಾದ್ದರಿಂದ ಶಾಲೆಯ ಭಂಡಾರದಿಂದ ಪುಸ್ತಕ ತರುವಹಾಗಿರಲಿಲ್ಲ. ಮೈಸೂರಿನಲ್ಲಿ ರಂಗಸ್ವಾಮಿಯ ಪರಿಚಯದವರು ಕಡಮೆ. ನಾದಿನಿಗೋಸ್ಕರ ಪುಸ್ತಕ ಶೇಖರಣೆ ಮಾಡುವುದು ಭಾವನಿಗೆ ಪ್ರಯಾಸದ ಕೆಲಸವಾಯಿತು. ಹಾಗೂ, ಎಲ್ಲಿಯೋ ಜೋಡಿ ಅಳಸಿಂಗರಾಚಾರ್ಯರ ರಾಮಾಯಾಣ ಸಂಪುಟ ಗಳು, ವಾಣೀವಿಲಾಸ ಭಾರತದ ಕೆಲವು ಸಂಪುಟಗಳು, ಕೆಲವು ಪತ್ತೇದಾರಿ ಕಾದಂಬರಿಗಳು ಇವನ್ನು ದೊರಕಿಸಿ ತಂದುಕೊಟ್ಟ. 'ಸೀತೆ ಇರುವ ವರೆಗೂ ಆಗುತ್ತೆ, ಪರವಾ ಇಲ್ಲ' ಎಂದು ಅವನ ಎಣಿಕೆ. ಹೆಣ್ಣುಮಕ್ಕಳು ಓದುವ

ವೇಗ ಗಂಡಸರ ವೇಗದ ಮುಮ್ಮಡಿ ನಾಲ್ಕಡಿ ಎಂಬುದನ್ನು ಅವನು ಕಾಣ
ನಾದಿನಿಗೆ ಪುಸ್ತಕ ಒದಗಿಸುವ ಉದ್ಯಮ ತನ್ನಿಂದ ಸಾಧ್ಯವಿಲ್ಲ ಎಂದು ನಿಟ
ಸಿರುಗರೆದ; ಅವಳಿಗೆ ಹೇಳಿಯೂ ಹೇಳಿದ.

"ಹೇಗಿದ್ದರೂ ಬಿಡುವಿದೆ, ಮುಂದಕ್ಕೆ ಅನುಕೂಲವಾಗುತ್ತೆ, ಸ್ವ
ಇಂಗ್ಲೀಷು ಹೇಳಿಕೊಡುತ್ತೇನೆ" ಎಂದು ರಂಗಸ್ವಾಮಿ ಒಂದು ದಿನ ಸೂಚಿಸಿ

"ಹಾಗೆ ಮಾಡು, ಸೀತಾ" ಎಂದು ಕಾವೇರಿಯೂ ಅನುಮೋದಿಸಿದಳ

A, B, C, D ತಿದ್ದಹಾಕಿಕೊಟ್ಟು, ಹಳೆಯ ಕ್ರಮದಲ್ಲಿ ಇಂಗ್ಲಿಷ
ಭಾಷೆಯ ಪಾಠವನ್ನು ರಂಗಸ್ವಾಮಿ ಪ್ರಾರಂಭ ಮಾಡಿದ. ಅನಂತರ, ಪಾ
ಪುಸ್ತಕವಿಲ್ಲದೆ ಇಂಗ್ಲಿಷನ್ನು ಕಲಿಸುವ ತನ್ನದೇ ಆದ ಒಂದು ಕ್ರಮವನ್ನು ರಂ
ಸ್ವಾಮಿ ಪ್ರಯೋಗಕ್ಕೆ ತಂದಾಗ, ಸೀತೆಗೂ ಇಂಗ್ಲಿಷಿನ ಕಲಿಕೆಯಲ್ಲಿ ಉತ್ಸಾ
ಹುಟ್ಟಿತು. 'ಮನಸ್ಸುಮಾಡಿದರೆ, ಇವಳು ಎರಡು ತಿಂಗಳಲ್ಲಿ ಲೋವ
ಸೆಕಂಡರಿ ಮಟ್ಟದ ಇಂಗ್ಲಿಷ್ ಕಲಿಯಬಲ್ಲಳು' ಎಂದು ರಂಗಸ್ವಾಮಿ ಅಚ್ಚ
ಗೊಂಡ. ಆದರೆ ಉತ್ಸಾಹಕ್ಕೆ ಸಮನಾದ ಸಂಕಲ್ಪವಾಗಲಿ, ಶ್ರಮಪಡು
ಇಚ್ಛೆಯಾಗಲಿ ಅವಳಲ್ಲಿ ಮೂಡಿರಲಿಲ್ಲ. ಓದಲು ಕಥೆ ಕಾದಂಬರಿ ಪುಸ್ತ
ಗಳಿಲ್ಲವಲ್ಲಾ ಎಂಬುದೇ ಅವಳ ನಿರಾಶೆ.

'ಆ ಕೃಷ್ಣಮೂರ್ತಿಯಾದರೂ ನಮ್ಮ ಮನೆಗೆ ಬರಬಾರದೆ? ಬಂದ
ಅವನಿಂದಲಾದರೂ ಒಂದೆರಡು ಪುಸ್ತಕ ತರಿಸಿಕೊಳ್ಳಬಹುದು' ಎಂ
ತೋರಿತು ಅವಳಿಗೆ. ಹಾಗೆ ತೋರಿದ ಬೆನ್ನಿನಲ್ಲೇ, 'ಅವನು ತಾನೆ ಯಾ
ಬರುತ್ತಾನೆ ಇಲ್ಲಿಗೆ, ಕಾರಣವಿಲ್ಲದೆ' ಎಂಬ ಸಂದೇಹವೂ ಸುಳಿಯಿತ.
'ಅವನು ಇಲ್ಲಿಗೆ ಬರಬೇಕಾದರೆ, ತಾನೇ ಯಾಕೆ ಕಾರಣವಾಗಬಾರದು?
ಎಂದುಕೊಳ್ಳುವಷ್ಟರಮಟ್ಟಿಗೆ ಅವಳ ಹೃದಯದಲ್ಲಿ ಅವನ ಬಗೆಗೆ ರಾಗಭಾವ
ಅಂಕುರವಾಗಿರಲಿಲ್ಲ.

ಅಂತೂ ಹೆಚ್ಚು ಪುಸ್ತಕಗಳಿಲ್ಲ: ಸದ್ಯಕ್ಕೆ ಅದೇ ಅವಳ ಕೊರತೆ, ಅದ
ಅವಳ ಬೇಸರ.

"ಬೇಸರವಾಗುತ್ತೆ, ಭಾವಯ್ಯ. ಬರೀ ಕ್ಯಾಟ್, ಮ್ಯಾಟ್, ಡಾಗ್
ಡೋರ್, ಸಿಟ್ಟು ಸ್ಟ್ಯಾಂಡು, ಐ ಯು ಹಿ ಷಿ ಇಟ್ಟು, ಒಟ್ಟು ಪಟ್ಟು...."

"ಬಟ್ ಸರಿ, ಪಟ್ ಅಲ್ಲ, ಪುಟ್. ಹೋಗಲಿ, K-N-O-V
ಏನು?"

ಮಾತಾಡಿದರೆ ಇಂಗ್ಲಿಷ್ ಪಾಠ ಮೊದಲುಮಾಡಿಬಿಡುತ್ತಿದ್ದ ರಂಗಸ್ವಾಮಿ. ಈ ವಿದ್ಯಾಭ್ಯಾಸದ ವೈಖರಿಯನ್ನು ಕಂಡು ನಿತ್ಯವೂ ಕಾವೇರಿಗೆ ನಗು.

"ಕ್ನೋ" ಎಂದು ಮೂಗಿನಲ್ಲಿ ಉಸುರಿದಳು ಸೀತೆ.

"ಅಲ್ಲ, ನೋ."

"ನೋ ಎಂದರೆ ಇಲ್ಲ ಎಂದಿರಲ್ಲ, ನಿನ್ನೆ ?"

"ಅದು ಎನ್ ಓ (N, O) ನೋ."

"ಓ–ೕ–ೕ" ಎಂದಳು ಸೀತೆ, ಸಾವಿರದ ಒಂದನೆಯ ಸಲ.

"ನಿಮ್ಮ ಪಾಠದಿಂದ ನನಗೂ ಒಂದಿಷ್ಟು ಟೋಸ್‌ಪಸ್ ಅನ್ನುವುದಕ್ಕೆ ಬರುತ್ತೆ, ಪರವಾ ಇಲ್ಲ. ಸಿಸ್ಟರ್ ಸೀತೆ, ಹಜ್ಬೆಂಡ್ ನೀವು, ವೈಫ್ ನಾನು. ನಮ್ಮ ಈ 'ಪುಟ್ಟ'...."—ಕಾವೇರಿಗೆ ಆ ಮಾತು ನೆನಪಿರಲಿಲ್ಲ.

"ಚೈಲ್ಡ್ ಅಲ್ಲವೆ, ಭಾವ ?"

"ಸರಿ. ಅದರ ಬಹುವಚನ ?"

"ಚೈಲ್ಡ್ಸ್...."

ರಂಗಸ್ವಾಮಿ ಗೊಳ್ಳನೆ ಬಿದ್ದು ಬಿದ್ದು ನಗತೊಡಗಿದ.

ಹೀಗೆಯೇ ನಿತ್ಯ ನಡೆಯುತ್ತಿತ್ತು ಆಂಗ್ಲ ಭಾಷಾ ಶಿಕ್ಷಣದ ರಸಪಾಕ. ಅದಕ್ಕೆ ಕಾವೇರಿಯ ಒಗ್ಗರಣೆಯೂ ಸೇರುತ್ತಿತ್ತು.

ಆದರೂ ಸೀತೆಗೆ ಬೇಸರ.

ಪುಸ್ತಕ ತಂದುಕೊಡಲಾರದೆ, ನಾದಿನಿಯ ಬೇಸರ ಕಳೆಯಲೆಂದು, ರಂಗಸ್ವಾಮಿ ಪಗಡೆಯ ಹಾಸನ್ನೂ ದಾಳಕಾಯಿಗಳನ್ನೂ ಕೊಂಡುತಂದನು. ಸೀತೆ ಎಂದೂ ಪಗಡೆ ಆಡಿದವಳಲ್ಲ. ಆಟದ ಪರಿಯನ್ನು ಒಂದೆರಡು ದಿನ ರಂಗಸ್ವಾಮಿಯೇ ಹೇಳಿಕೊಡಬೇಕಾಯಿತು.

ಈ ನಡುವೆಯಲ್ಲೆ, 'ಶಾಮಣ್ಣನವರ ಮನೆ ಇಷ್ಟು ಹತ್ತಿರ ಇದೆ; ಇದ್ದರೆ ಬರುತ್ತೇನೆ ಎಂದು ಹೇಳಿದ್ದೆ. ಹೋದರಾಗದೆ ?' ಎಂದು ಸೀತೆಗೆ ನೆನಪಾಯಿತು. ದಿನ ಬಿಟ್ಟು ದಿನ, ಮೂರು ನಾಲ್ಕು ದಿನಕ್ಕೆ ಒಮ್ಮೆ, ಸಂಜೆಯ ವೇಳೆ ಸೀತೆ ಸುಬ್ಬಲಕ್ಷ್ಮಿಯನ್ನು ಜೊತೆಮಾಡಿಕೊಂಡು ಶಾಮಣ್ಣನವರ ಮನೆಗೆ ಹೋಗಿ ಬರತೊಡಗಿದಳು. ಎರಡು ಮೂರು ದಿನ ಹಾಗೆ ಹೋದಮೇಲೆ, ಧೈರ್ಯವಾಗಿ ಒಬ್ಬಳೇ ಹೋಗತೊಡಗಿದಳು.

ನರಸಮ್ಮನವರು ಮತ್ತು ಗೌರಮ್ಮನೊಂದಿಗೆ ಅರ್ಧ ಗಂಟೆ ಒಂದು ಗಂಟೆ ಸೀತೆ ಮಾತನಾಡಿಕೊಂಡು ಬರುತ್ತಿದ್ದಳು. ದಿನದಿನದ ಅಡುಗೆ, ಹಿತ್ತಿಲಲ್ಲಿ ಬೆಳೆಯುವ ತರಕಾರಿ, ಯಾವ ತರಕಾರಿಯಲ್ಲಿ ಯಾವ ಅಡುಗೆ ಚೆನ್ನು, ತಮ್ಮ ಮನೆಯಲ್ಲಿ ಯಾರು ಯಾರಿಗೆ ಯಾವ ಯಾವ ತರಕಾರಿ ಇಷ್ಟ, ಮಕ್ಕಳ ಬೇನೆಗೆ ಮದ್ದು, ತನ್ನ ತಮ್ಮಂದಿರ ಸ್ವಭಾವ, ಅವರ ಓದು, ಅವರ ಮುಖ ಗಳ ಮಾಟದ ಹೋಲಿಕೆ, ಹಾಸನಕ್ಕಿಂತ ಮೈಸೂರಿನಲ್ಲಿ ಮಳೆ ಕಡಮೆ—ಇಷ್ಟಕ್ಕೆ ಗೌರಮ್ಮನ ಪ್ರಪಂಚ ಪರಿಮಿತವೆಂಬ ಭಾವನೆ ಕೆಲವು ದಿನಗಳ ಮಾತು ಕತೆಯಿಂದ ಸೀತೆಗೆ ಉಂಟಾಯಿತು. ಅವಳ ಮನೋಧರ್ಮಕ್ಕೂ ತನ್ನ ಮನೋಧರ್ಮಕ್ಕೂ ಏನೋ ವ್ಯತ್ಯಾಸವಿರುವುದು ಅವಳಿಗೆ ಸ್ಪಷ್ಟವಾಗಿ ಕಾಣ ತೊಡಗಿತು. ಈ ವ್ಯತ್ಯಾಸಕ್ಕೆ ಏನು ಕಾರಣ ? ಎಲ್ಲ ರೀತಿಯಲ್ಲಿ ಅಲ್ಲದಿದ್ದರೂ ಅನೇಕ ವಿಧಗಳಲ್ಲಿ ತಮ್ಮಿಬ್ಬರ ಬಾಳು ಒಂದೇ: ಗಂಡನಿಲ್ಲದ ಬಾಳು. ವ್ಯತ್ಯಾಸಕ್ಕೆ ಏನು ಕಾರಣ ? ಭಿನ್ನ ವೇಷವೆ ? ಇರಬಹುದು.

ಸೀತೆ ಒಂದು ದಿನ ಕೇಳಿದಳು: "ಇಲ್ಲೇ ಗೋಪಾಲಕೃಷ್ಣಸ್ವಾಮಿ ಗುಡಿಯ ಬಳಿ ಸೋಸಲೆ ರಾಮದಾಸರ ಹರಿಕಥೆಯಂತೆ ? ಹೋಗಿಬಿಟ್ಟು ಬರೋಣ, ಬರುತ್ತೀಯ ಗೌರಮ್ಮ ?"—ನರಸಮ್ಮನವರು ಬಚ್ಚಲಮನೆಗೆಂದು ಹೋಗಿದ್ದಾಗ.

"ಎಲ್ಲಮ್ಮಾ ಆಗುತ್ತೆ ? ಇನ್ನೇನು, ಅಡಿಗೆಗೆ ಒಲೆ ಹೊತ್ತಿಸಬೇಕು...." ಗೌರಮ್ಮ ಹೇಳಿದಳು.

"ಇನ್ನೂ ನೀನೇ ಅಡಿಗೆ ಮಾಡುತ್ತೀಯಾ ? ಮಗುವಿಗೆ ಆಗಲೇ ವರ್ಷ ?"

"ಅಮ್ಮನಿಗೆ ಈ ಸಲದ ಬಾಣಂತಿತನದಲ್ಲಿ ಹಿಡಿದ ಸೊಂಟನೋವು ಹೋಗೇ ಇಲ್ಲ, ಈಗ ತಾನೇ ಏಳುವಾಗ ಎಷ್ಟು ಫಜೀತಿಪಟ್ಟರು ನೀನೇ ನೋಡಿದೆಯೋ ಇಲ್ಲವೋ ?"

"ಹೌದು, ಹೌದು. ಅಯ್ಯೋ ಪಾಪ."

ತಾಯಿ ಎಂದರೆ ಎಷ್ಟು ಕುದ್ದುಕೊಳ್ಳುತ್ತಾಳೆ ! ತಮ್ಮಂದಿರಲ್ಲಿ ಎಷ್ಟು ಮಮತೆ ! ಹಿತ್ತಿಲ ಗಿಡಗಳಲ್ಲಿ ಕೂಡ ಅದೆಷ್ಟು ಪ್ರೀತಿ ! ತಾಯಿ ತಮ್ಮಂದಿರು ಇರಲಿ, ತನ್ನಲ್ಲಿಯೇ ಎಷ್ಟು ಪ್ರೀತಿ ಗೌರಮ್ಮನಿಗೆ ! ಗಂಡನಲ್ಲಿ ಮಕ್ಕಳಲ್ಲಿ

ಇಡಬೇಕಾಗಿದ್ದ ಪ್ರೀತಿಯೆಲ್ಲವನ್ನೂ ಎಲ್ಲರಿಗೂ ಹಂಚಿಕೊಟ್ಟುಬಿಟ್ಟಿದ್ದಾಳೆ! ತನ್ನ ವಿಚಾರದ ಮಾತೇ ಇಲ್ಲ ಅವಳಲ್ಲಿ; ಎಲ್ಲ ಇತರರ ವಿಚಾರವೆ. ಒಳಗೆ ತೃಪ್ತಿ ಇಲ್ಲದೆ ಹೊರಗೆ ಹೇಗೆ ಕಂಡೀತು? ಸದಾ ಮುಗುಳುನಗೆ; ಸದಾ ತೃಪ್ತಿಯ ಭಾವ. ತನ್ನ ಹಾಗೆಯೇ ಅವಳಿಗೂ ಗಂಡನ ನೆನಪೇ ಇಲ್ಲವೋ? ಗಂಡನಿಲ್ಲದ ಬಾಳು ಅವಳಿಗೆ ತೃಪ್ತಿಕರವಾದಮೇಲೆ ತನಗೂ ಆಗಬೇಕಲ್ಲವೆ? ಆದರೇಕೆ ತನಗೆ ಆ ತೃಪ್ತಿಯಿಲ್ಲ? ಊರಿನಲ್ಲಂತೂ ಕೆಲಸವಿರಲಿಲ್ಲ. ಆಗ ತೃಪ್ತಿ–ಅತೃಪ್ತಿ ಎರಡೂ ಗೊತ್ತಾಗುತ್ತಿರಲಿಲ್ಲ. ಇದೇನು, ಎಂಟು ಹತ್ತು ತಿಂಗಳಲ್ಲಿ ಈ ವ್ಯತ್ಯಾಸ? ಮನಸ್ಸಿಗೆ ಏನೋ ಕೊರತೆ? ಗೌರಿಯಂತೆ ತಾನೂ ಮನೆಯಲ್ಲಿ ಕೆಲಸ ಮಾಡುತ್ತಿರಲಿಲ್ಲವೆ? ಈಗಲೂ ತಕ್ಕಮಟ್ಟಿಗೆ ಮಾಡುತ್ತಿಲ್ಲವೆ? ತನ್ನ ಹಾಗೆ ಗೌರಿ ಓದುವಹಾಗೂ ಕಾಣಲಿಲ್ಲ. ಓದಿನ ಜೊತೆಗೆ ಈಗ ಪಗಡೆ, ಗೌರಮ್ಮನ ಮನೆಗೆ ಬೇರೆ ಒಂದು 'ಟ್ರಿಪ್'. ಇಷ್ಟಾದರೂ ಏನೋ ಅರಕೆ, ಏನೋ ಬೇಸರ, ಏನೋ ಅತೃಪ್ತಿ—ಯಾಕೆ?

ಗೌರಿಯಂತೆ—ತನ್ನನ್ನೂ ಎಲ್ಲರೂ ಪ್ರೀತಿಸುತ್ತಾರೆ. ಭಾವಯ್ಯನಿಗಂತೂ ತನ್ನನ್ನು ಕಂಡರೆ ಪ್ರಾಣ. 'ಕಾವೇರಿಗಿಂತ ಸೀನೇ ನನಗೆ ಒಂದು ತೂಕ ಹೆಚ್ಚು' ಎಂದರಲ್ಲ ಒಂದು ದಿನ, ಕಾವೇರಿಯ ಎದುರಿಗೆಯೇ! ಮೊದಲಿನ ಹಾಗೆ ಈಗ ಲಜ್ಜೆಯೂ ಇಲ್ಲ; ಅಕ್ಕನ ಎದುರಿಗೆಯೆ ತನ್ನನ್ನು ಒಂದು ದಿನ ಮುದ್ದಾಡಲಿಲ್ಲವೆ? ಅಕ್ಕನೂ ಕೋಪಿಸಿಕೊಳ್ಳಲಿಲ್ಲ. ತಂಗಿ ಅಂತ ಸುಮ್ಮನಾದಳು. ಇನ್ನು ಯಾರಾದರೂ ಆಗಿದ್ದರೆ ಸುಮ್ಮನಿರುತ್ತಿದ್ದಳೆ? ಗಂಡನಾದರೇನು, ಕೆನ್ನೆಗೆ ಬಿಗಿಯುತ್ತಿದ್ದಳು. ಭಾವಯ್ಯನದು ಪ್ರೀತಿಯೇ ಅಥವಾ.... ಪುಟ್ಟಣ್ಣಯ್ಯ....ಗೋಪಾಲಯ್ಯ....ಥೂ ಥೂ, ಛೆ ಛೆ....ಹಾಗೆ ಇರಲಾರದು....

ಇನ್ನೇನು ಬಹುಶಃ ತಿಂಗಳೆರಡಾದರೆ ಭಾವಯ್ಯನಿಗೆ ಬೇರೆಲ್ಲಿಗಾದರೂ ವರ್ಗವಾಗುತ್ತೆ....ಮೊನ್ನೆ ಹೇಳಿದರಲ್ಲ, ಬಹುಶಃ ಸಕಲೇಶಪುರಕ್ಕೆ ಆಗುತ್ತೆ ಅಂತ ಯಾರೋ ಹಾಸನದಿಂದ ಬಂದವರು ಹೇಳಿದರಂತಲ್ಲ....ಆಗ ತಾನು ಊರಿಗೆ ಹೋಗಬೇಕಾಗುತ್ತೆ....ಭಾವನ್ನ ಅಕ್ಕನ್ನ ಬಿಟ್ಟುಹೋಗಬೇಕು ಅಂತ ತನಗೆ ದುಃಖವೆ? ಕೆಲವು ದಿನ ಬಿಕೋ ಅನ್ನಿಸುತ್ತೆ, ದಿಟ. ಆದರೆ ತಡೆಯಲಾಗದಷ್ಟು ದುಃಖವಾಗುತ್ತೆಯೇ? ಆಗಲಾರದು.

ಊರನ್ನು ಬಿಟ್ಟುಬಂದಾಗಲೂ ಮಹಾ ದುಃಖವೇನೂ ಆಗಲಿಲ್ಲ.

ಹಾಗಾದರೆ, ಅಪ್ಪನಿಗೆ ಅಮ್ಮನಿಗೆ ತನ್ನಲ್ಲಿ ಪ್ರೀತಿಯಿಲ್ಲವೆ? ಇಲ್ಲದೆ ಉಂಟೆ? ತನಗಾಗಿ ಎಷ್ಟು ಒದ್ದುಕೊಳ್ಳುತ್ತಾ ಇದಾರೆ, ಪಾಪ. ಗೋಪಾಳದ ಐನೂರು ರೂಪಾಯಿಗೆ ಎಷ್ಟು ಪ್ರಯತ್ನಪಡುತಾ ಇದಾರೆ! ಅವರನ್ನ ಕಂಡರೆ ತನಗೆ ಪ್ರೀತಿಯಿಲ್ಲವೆ? ಇದೆ; ಖಂಡಿತವಾಗಿ ಇದೆ.

ಆದರೂ, ತನ್ನ ಪ್ರೀತಿ ಯಾರಿಗೂ ಬೇಡವೇನೋ ಅನ್ನಿಸುತ್ತಿದೆ ಯಲ್ಲಾ? ಯಾಕೆ?

ತನ್ನನ್ನು ನಿಜವಾಗಿ ಯಾರೂ ಪ್ರೀತಿಸುತ್ತಿಲ್ಲ ಅನ್ನಿಸುತ್ತಿದೆಯಲ್ಲಾ? ಯಾಕೆ?

ಗಂಡ ಇಲ್ಲದಮೇಲೆ, ನಿಜವಾದ ಪ್ರೀತಿಯನ್ನು ಕೊಡುವವರೂ ಇಲ್ಲ ಕೊಳ್ಳುವವರೂ ಇಲ್ಲ. ತಂದೆ ತಾಯಿ ನಿಜವಾಗಿ ಪ್ರೀತಿಸುವುದಿಲ್ಲ ಎನ್ನ ಬಹುದೆ? ಆದರೆ ಅವರ ಬಾಳು ಎಷ್ಟು ದಿನ?....ಅಯ್ಯೋ [illegible] ಇತರರು ತೋರುವ ಪ್ರೀತಿಯಲ್ಲಿ ಸ್ವಾರ್ಥಕ್ಕೆ ಕೊಡುವ ದಿನಗಳು [illegible] ಆದಕ್ಕೆ ತನಗೆ ಅತೃಪ್ತಿ, ಬೇಸರ ಗೌರಮ್ಮನಿಗೂ ಹೀಗೇ ಅನ್ನಿಸದೆ [illegible] ದಿಲ್ಲ. ಇಷ್ಟರಮೇಲೆ ಹೇಗೋ. ಅವಳನ್ನೇ ಕೇಳಿ ನೋಡಬೇಕು.

ಯಾಕೋ ಇಂಗ್ಲಿಷು ಪಾಠದಲ್ಲೂ ಬೇಸರವಾಗುತ್ತಿದೆ....ಈಚೆಗೆ ಕಾವೇರಿ ಕೆಲಸಕ್ಕೂ ಬಿಡುವುದಿಲ್ಲ. ಮೂರು ಆಟ ಆಡುವಹೊತ್ತಿಗೆ ಪಗಡೆಯೂ ಬೇಸರವಾಗುತ್ತೆ....ಕಥೆ ಪುಸ್ತಕ ಬೇಸರವಾಗುವುದಿಲ್ಲ. ಆದರೆ ಭಾವಯ್ಯನಿಗೆ ಈಚೆಗೆ ಪುಸ್ತಕವೇ ಸಿಕ್ಕುತ್ತಿಲ್ಲ....

ಆ ಕೃಷ್ಣಮೂರ್ತಿ ಬಂದರೆ, ಅವನ ಕೈಲಿ ಎಲ್ಲಿಂದಾದರೂ ತರಿಸಿಕೊಳ್ಳ ಬಹುದು. ಅಲ್ಲ, ಎಲ್ಲಾ ಬಿಟ್ಟು ಅವನು ಯಾಕೆ ಇಲ್ಲಿಗೆ ಬರುತ್ತಾನೆ. ತಾನೇ ಒಂದು ದಿನದ ಮಟ್ಟಿಗೆ ಚಿಕ್ಕಮ್ಮನ ಮನೆಗೆ ಹೋಗಿ, ಕೇಳಬೇಕು.

ಗೌರಮ್ಮ ಬೇರೆ ತಮ್ಮ ಮನೆಯಲ್ಲಿ ಎರಡು ದಿನ ಇರಬೇಕು ಅಂತ ಬಲವಂತ ಮಾಡುತ್ತ ಇದಾಳೆ. ಅಲ್ಲಿ ಎರಡು ದಿನ; ಚಿಕ್ಕಮ್ಮನ ಮನೆ ಯಲ್ಲಿ ಎರಡು ದಿನ....

ಗೌರಮ್ಮನ ಮನೆಯಿಂದ ಹಿಂದಿರುಗಿ ಬರುವಾಗ, ಈ ಆಲೋಚನೆಯಲ್ಲಿ ದಾರಿ ಸವೆಯಿತು. ಎರಡು ಮೂರು ದಿನ, ಮನಸ್ಸಿನಲ್ಲಿ ಇದೇ ಭಾವನೆ ಬೇರೆ ಬೇರೆ ಬಣ್ಣದಲ್ಲಿ ಮತ್ತೆ ಮತ್ತೆ ಮಗುಚಿ ಕಾಣುತ್ತಿತ್ತು.

೫

ಸೀತೆ ನರಸಮ್ಮನವರ ಮನೆಯಲ್ಲಿ ಇದ್ದ ಎರಡು ಮೂರು ದಿನ ಗೌರಮ್ಮನೊಂದಿಗೆ ಅತ್ಯಂತ ನಿಕಟವಾದ ಬಾಳನ್ನು ಬಾಳಿದಳು. ಆದರೆ ಆ ಮೂರು ದಿನ ದೈಹಿಕವಾಗಿ ತಾನು ಅವಳಿಂದ ಎಷ್ಟು ದೂರ! ಬೆಳಗ್ಗೆ, ಸೊಂಟ ಮುರಿದ ನರಸಮ್ಮನವರು ಹೇಗೊ ಕಷ್ಟಪಟ್ಟುಕೊಂಡು ಕಾಫಿ ಕಾಸಿ ಎಲ್ಲರಿಗೂ ಹಂಚುತ್ತಿದ್ದರು. ಆದರೆ ಗೌರಿ ಆ ಕಾಫಿ ಕುಡಿಯುತ್ತಿರಲಿಲ್ಲ! ಸೀತೆ 'ಮಡಿ ಹೆಂಗಸು' ಎಂಬ ಮಾತನ್ನು ಕೇಳಿದ್ದಳು; ಮಡಿ ಹೆಂಗಸಿನ 'ಮಡಿ' ಏನೆಂಬುದನ್ನು ಅವಳು ಕಂಡಿರಲಿಲ್ಲ. ಗೌರಮ್ಮ ತಲೆಗೆ ಸ್ನಾನಮಾಡಿ, ಮಡಿಯಲ್ಲಿ ಅಡುಗೆಯ ಒಲೆ ಹೊತ್ತಿಸುವಳು; ತಂದೆ ಶಾಮಣ್ಣನವರ ಪೂಜೆ ಮುಗಿಯುವ ವೇಳೆಗೆ ನೈವೇದ್ಯಕ್ಕೆ ಅನ್ನ; ಅನಂತರ ತನಗೆ ಮತ್ತು ತನ್ನ ತಂದೆಗೆ ಮಾತ್ರ ತಾನು ಕಾಸಿದ ಕಾಫಿ.

"ನನ್ನ ತಾಯಿ ಕಾಸಿದ ಕಾಫಿ ಕುಡಿದೆಯಲ್ಲ. ನಾನು ಮಡಿಯಲ್ಲಿ ಮಾಡುವ ಈ ಕಲಗಚ್ಚಿನ ಕಾಫಿ ಕೊಂಚ ರುಚಿ ನೋಡು" ಎಂದು ಒಂದು ಸಣ್ಣ ಬಟ್ಟಲ ಕಾಫಿಯನ್ನು ಮೊದಲ ಬೆಳಗ್ಗೆಯೇ ಸೀತೆಯ ಮುಂದೆ ಇಟ್ಟಳು. ಇದನ್ನು ಪ್ರೀತಿ ಅಲ್ಲ ಎನ್ನುವಂತಿಲ್ಲ. ಪ್ರೀತಿಯಿಂದ ಕೊಟ್ಟ ಕಾಫಿಯನ್ನು ಸೀತೆ ಕುಡಿದಳು. ನರಸಮ್ಮನವರು ಕಾಸಿದ್ದ ಕಾಫಿಯಷ್ಟು ಚೆನ್ನಾಗಿರಲಿಲ್ಲ, ನಿಜ; ಆದರೆ ಕೆಟ್ಟಿರಲಿಲ್ಲ. ಆತುರದಲ್ಲಿ ಕಾಸಿದ ಕಾಫಿ. ಹತ್ತು ಗಂಟೆಯ ಹೊತ್ತಿಗೆ ಕಚೇರಿಗೆ ಶಾಲೆಗಳಿಗೆ ಹೋಗುವವರಿಗೆ ಅಡುಗೆಯಾಗಬೇಕು.

ಸೀತೆ ಬಚ್ಚಲಮನೆಯ ಹಂಡೆಯನ್ನು ಮುಟ್ಟದಂತೆ ಗೌರಮ್ಮ ಅದು ಹೇಗೆ ಎಚ್ಚರಿಕೆ ವಹಿಸಿದ್ದಳು! "ಸ್ನಾನಕ್ಕೆ ನೀರು ತೋಡಿಟ್ಟಿದ್ದೇನೆ. ಸ್ನಾನ ಮಾಡಿಬಿಡು, ಸೀತಮ್ಮ" ಎಂದು ಉಪಚರಿಸಿದ್ದಳು ಗೌರಮ್ಮ. ಭಾವಯ್ಯ ತನಗಾಗಿ ಮಡಿಯನ್ನೇ ಬಿಟ್ಟುಬಿಟ್ಟಿದ್ದರು. ಮಡಿ ನಡಸುವವರ ಮನೆಯಲ್ಲಿ —ಬಹುಶಃ ಚಿಕ್ಕಮ್ಮನ ಮನೆಯಲ್ಲಿ ತಾನಿದ್ದರೆ, ಅಲ್ಲಿ—ತನ್ನ ಸ್ಥಾನ ಏನಿರಬಹುದು ಎಂಬುದರ ಪ್ರಭಾವಶಾಲಿಯಾದ ಮುನ್ಸೂಚನೆ ದೊರೆಯಿತು.

"ಬಾ, ಸೀತೆ. ಪೂಜೆ ಆಯಿತು. ಇಲ್ಲೇ ಕುಳಿತುಕೋ ಬಾ. ಮಾತಾಡೋಣ. ಇನ್ನು ಯಾವಾಗಲೋ ನೀನು ನಮ್ಮ ಮನೆಗೆ ಬರುವುದು" ಎಂದು

ಗೌರಮ್ಮ ಕರೆದಾಗ, ತಾನು ಎಲ್ಲಿ ಕುಳಿತು ಮಾತಾಡಬೇಕೆಂದು ಸೀತೆಗೆ ತೋರದೆ ಹೋಗಲಿಲ್ಲ. ಅಡುಗೆಯ ಮನೆಯ ಬಾಗಿಲ ಬಳಿ ಕುಳಿತು ಮಾತಾಡತೊಡಗಿದಳು.

ಏನು ಮಾತಾಡಬಹುದು? ಮನ ಬಿಚ್ಚಿ, ಹೃದಯ ತೆರೆದು, ಏನೂ ಮಾತಾಡುವಂತಿಲ್ಲ. ಆದರೆ ಮಾತು ನಿಲ್ಲದೆ ನಡೆಯಿತು—ಮಗ್ಗದ ನೆಯ್ಗೆಯಂತೆ. ಎಂಥ ಅಚ್ಚರಿ! ಅಷ್ಟರಿಂದಲೇ ಗೌರಿಗೆ ತೃಪ್ತಿ. ತನಗೆ ಆ ತೃಪ್ತಿ ಇಲ್ಲ—ಯಾಕೆ?

ಸುಬ್ಬರಾಮು ಕೊಲಿಜಿಯೇಟ್ ಹೈಸ್ಕೂಲಿಗೆ ಸೇರಿದ್ದ; ಅವನ ತಮ್ಮ ಸೀತಾರಾಮು ದಳವಾಯಿ ಸ್ಕೂಲು; ಇವರಿಬ್ಬರು ಸ್ಕೂಲಿಗೆ ಹೋಗುವವರು, ಕಚೇರಿಗೆ ಹೋಗುವ ತಂದೆ—ಈ ಮೂವರದ್ದು ಒಂದು ಊಟದ ಪಂಕ್ತಿ;. ಇವರು ಊಟ ಮಾಡಿಕೊಂಡು ಅತ್ತ ಹೋದರೆಂದರೆ, ವೆಂಕಟರಾಮು ಹತ್ತಿರದ 'ಚಾವಡಿ' ಸ್ಕೂಲಿನಿಂದ ಬರುತ್ತಲೇ ಹೊಟ್ಟೆ ಹಸಿವು ಎಂದು ಅಳುತ್ತ ಬರುವನು; ಅವನೊಬ್ಬನದೇ ಒಂದು ಪಂಕ್ತಿ, ನಡುಮನೆಯಲ್ಲಿ. ಅನಂತರ ಸಾವಿತ್ರಿಯನ್ನು ಎತ್ತಿಕೊಂಡು ಆಡಿಸುತ್ತ, ಉಪ್ಪು-ತುಪ್ಪ ಹಾಕಿದ ಅನ್ನದ ತುತ್ತನ್ನು ಅವಳಿಗೆ ನಿಧಾನವಾಗಿ ತಿನ್ನಿಸಬೇಕು. ಸಾವಿತ್ರಿಗೆ ಅನ್ನ ಬೇಕು—ಬೇಡ. "ಗುಬ್ಬಚ್ಚಿಗಳಿರಾ! ನೀವು ಕೊಳ್ಳಿರೇ ಅನ್ನಾನ! ಚೆಕ್ ಚೆಕ್ ಚೆಕ್, ಮಿಯಾಂವ್ ಮಿಯಾಂವ್, ತಕ್ಕೊ, ನಮ್ಮ ಸಾವಿತ್ರೀಗೆ ಅನ್ನ ಬೇಡವಂತೆ! ....ಹ್ಞೂ, ನಮ್ಮ ಸಾವಿತ್ರಿಯ ಸೀ ತುತ್ತನ್ನ ನಿಮಗೆ ಕೊಡೋದಿಲ್ಲ, ಹೋಗಿ, ಹುಷ್!" ಎಂದು ಸಾವಿತ್ರಿಯ ಮನವೊಲಿಸಿಕೊಂಡು, ಅನ್ನದಲ್ಲಿ ರುಚಿ ಹುಟ್ಟಿಸಿ, ಅವಳಿಗೆ ಅನ್ನ ತಿನ್ನಿಸುವ ಬಗೆಯನ್ನು ಕಂಡು ಸೀತೆ ಮುಗ್ಧಳಾದಳು. ಅದೇನು ಅವಳ ತಾಳ್ಮೆ, ಅಕ್ಕರೆ!

ಹೆತ್ತ ತಾಯಿ ಹೀಗೆ ಮಾಡುವುದಿಲ್ಲ ಎನ್ನಿಸಿತು ಸೀತೆಗೆ!

ಹೆತ್ತ ತಾಯಾಗುವ ಭಾಗ್ಯ—ಗೌರಿಗೂ ಇಲ್ಲ, ತನಗೂ ಇಲ್ಲ. ಯಾರ ಗಮನಕ್ಕೂ ಬಾರದ ನಿಟ್ಟುಸಿರೊಂದು ಸೀತೆಯ ಮುಖದಿಂದ ಹೊರಟಿತು.

ಹೆತ್ತ ತಾಯಾಗದೆಯೇ ತಾಯ್ತನದ ಸುಖವನ್ನು ಅನುಭವಿಸುವುದು ಸಾಧ್ಯವಲ್ಲವೆ? ಗೌರಮ್ಮನಲ್ಲಿ ಅದು ನಿದರ್ಶನಗೊಂಡಿದೆಯಲ್ಲವೆ?

ಕಾವೇರಿಯ ಮಗುವನ್ನು ತಾನು ಹೀಗೇ ನೋಡಿಕೊಳ್ಳಲಿಲ್ಲವೆ?

ತನಗೇಕೆ ಹಾಗೆ ಅನ್ನಿಸಲಿಲ್ಲ? ಬಾರಿಬಾರಿಗೂ, ಮಗುವನ್ನು ಮುಟ್ಟಿದಾಗ ಲೆಲ್ಲ, 'ನಾನು ತಾಯಾಗುವ ಪುಣ್ಯ ಇಲ್ಲ' ಎಂದೇಕೆ ದುಃಖವಾಗುತ್ತಿತ್ತು?

ತನಗೂ ಗೌರಿಗೂ ಇದೇನು ಈ ವ್ಯತ್ಯಾಸ?

ಅಥವಾ ಅವಳಿಗೂ ತನ್ನ ಹಾಗೆಯೇ ಅನ್ನಿಸುತ್ತದೆಯೇ? ಅವಳನ್ನೇ ಕೇಳಿ ನೋಡಬೇಕು. ಯಾವಾಗ ಕೇಳುವುದು? ಅವಕಾಶವೇ ದೊರೆಯುವು ದಿಲ್ಲವಲ್ಲ?

ಮಗುವಿಗೆ ಅನ್ನ ತಿನ್ನಿಸಿಯಾದಮೇಲೆ ನರಸಮ್ಮನವರಿಗೂ ಸೀತೆಗೂ ಎಲೆ ಹಾಕಿದಳು ಗೌರಿ. "ಸಂಕೋಚಮಾಡಿಕೊಳ್ಳಬೇಡ ತಾಯಿ, ನಿಧಾನ ವಾಗಿ ಊಟಮಾಡು. ಇದೂ ನಿಮ್ಮ ಮನೆಯೇ" ಎಂದು ನರಸಮ್ಮನವರು ಉಪಚಾರ ಹೇಳಿದರೆ, ಅದಕ್ಕೆ ಅವಕಾಶವೇ ಇಲ್ಲದಂತೆ ಗೌರಿ ಬಡಿಸುತ್ತಿದ್ದಳು.

ಎಲ್ಲರ ಊಟವಾದಮೇಲೆ, ಒಂದು ಗಂಟೆಯ ಹೊತ್ತಿಗೆ ಗೌರಮ್ಮನ ಊಟ—ತನ್ನ ಕೈಲಿ ತಾನೇ ಬಡಿಸಿಕೊಂಡು.

ಅಷ್ಟುಹೊತ್ತಿಗೆ, 'ಮೂರು ಜಾವ'ದ ಊಟಕ್ಕೆ ಸ್ಕೂಲಿನಿಂದ ಸೀತಾ ರಾಮು ಹಾಜರ್. ಅವನು, ವೆಂಕಟರಾಮು ಸ್ಕೂಲಿಗೆ ಹೋದಮೇಲೆ, ವೈಲಿಗೆ ಮುಟ್ಟಿಕೊಂಡು, ಮುಸುರೆ ಪಾತ್ರೆಗಳನ್ನು ಹೊರಕ್ಕೆ ಹಾಕಿ, ಮಲಗಿದ್ದು ಎದ್ದ ಸಾವಿತ್ರಿಗೆ ಹಾಲು ಕೊಡಬೇಕು.

ಬರಿಯ ನೆಲದ ಮೇಲೋ ಚಾಪೆಯ ಮೇಲೋ ಗೌರಮ್ಮ ಮಲಗಿದಂತೆ ಮಾಡುವ ಹೊತ್ತಿಗೆ, ನಾಲ್ಕಾಗುತ್ತಿತ್ತು. ಸರಿ, ಕಾಫಿ–ತಿಂಡಿಗೆ ಸಿದ್ಧತೆ. ಸಂಜೆ ಆರರ ಹೊತ್ತಿಗೆ ಬಿಡುವು. ಮತ್ತೆ ಏಳು ಗಂಟೆಗೆ ತಂದೆಗೋಸ್ಕರ ಮಡಿಯಲ್ಲಿ ಅಡುಗೆ. ತನಗೆ 'ಫಲಾರ.'

ಗೌರಮ್ಮನ ಈ ದಿನಚರಿಯನ್ನು ಕಂಡು, ಇದು ಗಾಣದೆತ್ತಿನ ದುಡಿತ ಎನ್ನಿಸಿತು ಸೀತೆಗೆ. ತನ್ನ ತಾಯಿ, ಅಷ್ಟೇಕೆ, ಪ್ರತಿ ಮನೆಯ ಒಡತಿ, ಎಲ್ಲ ಹೀಗೇ ದುಡಿಯುತ್ತಾರೆ. ಅದು ತನ್ನ ಮನೆಯ ದುಡಿತ: ತನ್ನ ಗಂಡನಿಗಾಗಿ, ತನ್ನ ಮಕ್ಕಳಿಗಾಗಿ. ಇಲ್ಲಿ ಗೌರಿ ಯಾರಿಗಾಗಿ ದುಡಿಯಬೇಕು? ಯಾರೂ ತನ್ನವರಲ್ಲ; ಎಲ್ಲರೂ ತನ್ನವರೆ! ಗಂಡನಿರುವವರೆಗೂ ಹುಟ್ಟಿ ಬೆಳೆದ ಮನೆ ತವರುಮನೆ; ಗಂಡ ಹೋದಂದು ಅದು ಬೆವರುಮನೆ! ದುಡಿದರೆ ಹಿಡಿ ಕೂಳು; ಇಲ್ಲವೋ ಬೀದಿಪಾಲು!

ವೊತ್ತಮೊದಲಿಗೆ, ಭವಿಷ್ಯದ ಭೂತ ಸೀತೆಯ ಎದುರು ನಿಂತು ಹಲ್ಲು ಕಿರಿಯಿತು ; ಅಣಕಿಸಿತು.

ತನ್ನ ಗತಿಯೂ ಇಷ್ಟೆ : ಮುಂದೆ ಯಾರ ಮನೆಯಲ್ಲಾದರೂ ಗಾಣದ ಎತ್ತಿನ ದುಡಿತ. ತಾನಿರುವ ಸ್ಥಿತಿಯಲ್ಲಿ, ದುಡಿಸಿಕೊಳ್ಳುವುದೂ ಇಲ್ಲ; ತಾನೂ ಗೌರಮ್ಮನ ಹಾಗೇ ಆಗಬೇಕಾದೀತು.

ದುಡಿಯೋಣ—ಆದರೆ ಗೌರಮ್ಮನ ಹಾಗೆ ದುಡಿಯಲು ಸಾಧ್ಯವೆ? ಗಾಣದೆತ್ತಿನ ಕಣ್ಣಿನಲ್ಲಾದರೂ ನೀರು ಸುರಿಯುತ್ತದೆ. ಗೌರಮ್ಮನ ಮುಖದಲ್ಲಿ —ಕಂಬನಿಯ ಮಾತಿರಲಿ—ಸೋಲಿನ ಸುಕ್ಕಿಲ್ಲ, ಬಳಲಿಕೆಯ ನಿಟ್ಟುಸಿರಿಲ್ಲ, ಒಳಬೇಗೆಯ ಸುಯಿಲಿಲ್ಲ, ಕೋಪದ ಕೆನ್ನೋಟವಿಲ್ಲ; ಸದಾ ಮುಗುಳು ನಗೆಯ ಮಲ್ಲಿಗೆಯರಳಿಸುವ ಮುಖ. ಕೂದಲೊಂದಿದ್ದರೆ—ಎಂಥ ಮಾಟ ವಾದ, ಚೆಲುವಾದ ಮುಖ! ತನಗಿಂತ ಚೆಲುವೆ; ನಿಸ್ಸಂಶಯವಾಗಿ. ಆದರೆ ಇತರರು ಬಯಸುವಂಥ ಚೆಲುವೆ?—ತನ್ನದರ ಹಾಗೆ?

ಒಂದರಲ್ಲಿಯಲ್ಲ—ಎಲ್ಲದರಲ್ಲೂ ತನಗೂ ಗೌರಿಗೂ ಎಷ್ಟು ವ್ಯತ್ಯಾಸ!

ರಾತ್ರಿ ಗೌರಮ್ಮ—ತಂದೆ ಮತ್ತು ಸುಬ್ಬರಾಮು ಬಿಟ್ಟು—ಎಲ್ಲರಿಗೂ ಹಾಸಿ, ಸೀತೆಗೂ ಒಂದು ಹಾಸಿಗೆಯನ್ನು ಹೊಂದಿಸಿ ಹಾಸಿದ್ದಳು. ಸೀತೆ ಮಲಗಿದಾಗ, ಅವಳಿಗೆ ಬೇಗ ನಿದ್ದೆ ಹತ್ತಲಿಲ್ಲ. ಹಗಲಿನಲ್ಲಿ ಕಾಡಿದ ಬಗೆ ಬಗೆಯ ಯೋಚನೆಗಳು ಇರುಳಿನಲ್ಲಿಯೂ ಮನಸ್ಸನ್ನು ಮುತ್ತಿದುವು.

೬

'ಇನ್ನೂ ಒಂದೆರಡು ದಿನ ಇರು' ಎಂದು ಎಲ್ಲರೂ ಎಷ್ಟೇ ಬಲವಂತ ಮಾಡಿದರೂ ಕೇಳದೆ, ಸೀತೆ ಮಾರನೆಯ ದಿನ ಸಂಜೆಯೇ ಅಕ್ಕನ ಮನೆಗೆ ಹಿಂದಿರುಗಿದಳು. ಹೊರಡುವಾಗ ನರಸಮ್ಮನವರು, ಹಿಂತೆಗೆದು ಹಿಂತೆಗೆದು ಫಲತಾಂಬೂಲ ಕೊಟ್ಟು, "ಊರಲ್ಲಿ ಇದ್ದರೆ ಮತ್ತೆ ಯಾವಾಗಲಾದರೂ ಬಾರಮ್ಮ" ಎಂದು ಆಹ್ವಾನವಿತ್ತು ಬೀಳ್ಕೊಂಡರು.

"ಹಾಗೇ ಮನೆಯವರೆಗೆ ಬಂದುಹೋಗು, ಗೌರಕ್ಕ" ಎಂದು ಸೀತೆ ಗೌರಮ್ಮನನ್ನು ಕರೆದಳು. "ಒಂದು ಮೂರು ಹೆಜ್ಜೆ ಹೋಗಿಬರುತ್ತೇನೆ" ಎಂದು ಗೌರಮ್ಮ ತಾಯಿಗೆ ಹೇಳಿ ಹೊರಟಾಗ, ಸಾವಿತ್ರಿ ಅತ್ತಳು. ಗೌರಮ್ಮ

ಮಗುವನ್ನೂ ಎತ್ತಿಕೊಂಡು ಸೀತೆಯ ಜೊತೆಗೂಡಿದಳು.

ನಾಲ್ಕಾರು ಹೆಜ್ಜೆ ಇಬ್ಬರೂ ಮೌನವಾಗಿಯೇ ಸಾಗಿದರು. ಸೀತೆಯೇ ನೇರವಾಗಿ ಮಾತೆತ್ತಿದಳು :

" ಗೌರಕ್ಕ, ನಿನಗೆ...."

" ಯಾಕೆ ಸಂಕೋಚ ? ಕೇಳಬಾರದ್ದು ಏನಾದರೂ ಇದೆಯೇನು ?

" ಕೇಳಬಾರದ್ದೇ ಏನೋ. ಆದರೂ ಕೇಳಬೇಕು ಅನ್ನಿಸುತ್ತೆ...."

" ಕೇಳಿಬಿಡು ಮತ್ತೆ."

" ನೀನೇನಾದರೂ ತಿಳಿದುಕೊಳ್ಳುತ್ತೀಯೇನೋ...."

" ಏನೂ ಇಲ್ಲ. ಮನಸ್ಸಿನಲ್ಲಿರುವುದನ್ನ ಮುಚ್ಚಿಕೊಳ್ಳೋದಕ್ಕಿಂತ ಹೇಳಿಬಿಡೋದೇ ಮೇಲು, ಅಲ್ಲವೆ ? "

" ಹೌದು. ಅದಕ್ಕೇ ನನಗೂ ಕೇಳಬೇಕು ಅಂತ ಅನ್ನಿಸಿದ್ದು. ನಿನಗೆ ....ನಿನ್ನ ಯಜಮಾನರು ಹೇಗಿದ್ದರೂ ಅಂತ ನೆನಪಿದೆ ಅಲ್ಲವೆ, ಗೌರಕ್ಕಾ ? "

" ಜ್ಞಾಪಕವಿಲ್ಲದೆ ಏನು ? ಇನ್ನೂ ಮೊನ್ನೆ ಅನ್ನುವ ಹಾಗಿದೆ...."

" ನನಗೊಂದೂ ಜ್ಞಾಪಕ ಇಲ್ಲ. ನೀನು ಅತ್ತೆಯ ಮನೆಯಲ್ಲಿ ಒಂದು ಆರು ತಿಂಗಳಿದ್ದೆ, ಅಲ್ಲವೆ ? "

" ಅಷ್ಟೇ ಅಂತ ಕಾಣುತ್ತೆ."

" ನಿಮ್ಮ ಯಜಮಾನರು ಚೆನ್ನಾಗಿದ್ರೆ ? "

"......................."

" ನಿನಗೆ ದುಃಖವಾಗುವ ಹಾಗಿದ್ದರೆ ಕೇಳೋದಿಲ್ಲ, ಗೌರಕ್ಕ."

" ನಿನಗಿಲ್ಲದ ದುಃಖ ನನಗೇ ? ಅದಕ್ಕೇನು ಕೇಳು, ಪರವಾ ಇಲ್ಲ."

" ಹಾಗಾದರೆ, ನಾನು ಕೇಳಿದ್ದಕ್ಕೆ ಏನೂ ಹೇಳದೆ ಇದ್ದಮೇಲೆ, ನಾನು ಕೇಳಿ ಪ್ರಯೋಜನ ಏನು ? ನಿನಗೆ ಬೇಡವಾದರೆ ಬೇಡ."

" ಅದಕ್ಕಲ್ಲ. ಅವರು ಹೇಗಿದ್ದರೇನು, ಹೇಳು ? ಕೈಹಿಡಿದಮೇಲೆ ಪತಿ ದೇವರು. ಅವರನ್ನ ಉಳಿಸಿಕೊಳ್ಳುವ ಭಾಗ್ಯ ನನಗಿಲ್ಲ........"

" ಅವರ ಜೊತೆ ನೀನು ಇರುವಷ್ಟು ದಿನ ಸುಖವಾಗಿದ್ದೆ ಅಲ್ಲವೆ ? "

" ಇಲ್ಲ ಅನ್ನೋದಕ್ಕಾಗುತ್ತೆಯೆ ? ಹಾಗಂದರೆ ನನ್ನ ನಾಲಗೆಯಲ್ಲಿ ಹುಳು ಸುರಿದೀತು."

"ಅವರು ನಿನ್ನನ್ನ ಪ್ರೀತಿಸುತ್ತಾ ಇದ್ದರು, ಅಲ್ಲವೆ ?"

"ಒಳ್ಳೆ ಚೆನ್ನಾಗಿ ಕೇಳ್ತಿ, ಸೀತಮ್ಮ! ಗಂಡ–ಹೆಂಡತಿ ಅಂದಮೇಲೆ ಒಬ್ಬರನ್ನೊಬ್ಬರು ಪ್ರೀತಿಸದೆ ಇರುತ್ತಾರೆಯೇ ?"

"ಇದನ್ನೆಲ್ಲ ನೆನಸಿಕೊಂಡರೆ ನಿನಗೆ ದುಃಖವಾಗುವುದಿಲ್ಲವೆ ?"

"ಆಗುವುದಿಲ್ಲ ಅಂತ ಹೇಳುವುದಿಲ್ಲ. ಆದರೂ....ಹಬ್ಬದ ದಿನ ಒಬ್ಬಟ್ಟು ತಿಂದು ಏಕಾದಶೀ ದಿವಸ ಉಪವಾಸ ಅಂತ ವ್ಯಥೆಪಟ್ಟರಾಗುತ್ತದೆಯೇ ? ಅವೊತ್ತಿಗೆ ಅಷ್ಟು ಲಭ್ಯ, ಇವೊತ್ತಿಗೆ ಇಷ್ಟು. ಇಲ್ಲದ್ದಕ್ಕೆ ಅಲವತ್ತು ಉಪಯೋಗ ಏನು ? ಇಲ್ಲದ್ದನ್ನ ನೆನಸಿಕೊಂಡರೆ ಸಲ್ಲದ ಚಪಲ ಹುಟ್ಟಬಹುದು."

"ಅದಕ್ಕೇ ನಾನು ಕೇಳಿದ್ದು. ನಿನಗೆ ಏನೂ ಚಪಲವೇ ಆಗುವುದಿಲ್ಲವೆ ?"

"ನಾನೂ ಮನುಷ್ಯಳೇ. ಆಗೋದಿಲ್ಲ ಅಂತ ಹೇಗೆ ಹೇಳಲಿ ? ಚಪಲವನ್ನ ತಡೆದುಕೊಳ್ಳಬೇಕು. ನಮ್ಮಮ್ಮ ಒಳ್ಳೆ ಸೀರೆ ಉಟ್ಕೋತಾಳೆ ಅಂತ ನಾನು ಬಯಸಬಹುದೆ ? ಅವಳು ಪಡಕೊಂಡು ಬಂದದ್ದು ಅವಳಿಗೆ, ನಾನು ಪಡಕೊಂಡು ಬಂದದ್ದು ನನಗೆ. ಹೌದೋ—ಅಲ್ಲವೊ ?"

ಸೀತೆ ಮೌನವಾಗಿದ್ದಳು—ತುಸು ಹೊತ್ತು. ಸ್ಪಷ್ಟವಾದ ಉತ್ತರ ಕೊಡಲು ಅವಳಿಗೆ ಇಷ್ಟವಾಗಲಿಲ್ಲ. ಮತ್ತೆ ಕೇಳಿದಳು :

"ಹಾಗಾದರೆ, ಸಾಯುವತನಕ ನಾವು ದುಃಖಪಡುತ್ತಲೇ ಇರಬೇಕೆ ?"

"ಇನ್ನು ನಮಗೆ ಸುಖವೂ ಇಲ್ಲ, ದುಃಖವೂ ಇಲ್ಲ."

"ಏನು ಗೌರಕ್ಕ, ನೀನು ಹೇಳುವುದು ! ದುಃಖ ಇಲ್ಲವೆ ?"

"ಸುಖದ ಹಾಗೆಯೇ ದುಃಖಾನೂ ಒಂದು ಅನುಭವ. ಇರುವುದನ್ನ ಕಳೆದುಕೋಡಾಗ ದುಃಖವಾಗುತ್ತೆ. ನಮ್ಮ ಸೌಭಾಗ್ಯದ ಸುಖವನ್ನೆಲ್ಲ ಕಳೆದುಕೊಂಡು ದುಃಖ ಆಗಲೇ ಅನುಭವಿಸಿಯಾಯ್ತು. ಮತ್ತೆ ಸುಖಪಡೋ ಹಾಗಿಲ್ಲ; ನಮಗೆ ಕಳೆದುಕೊಳ್ಳುವುದಕ್ಕೆ ಏನಾದರೂ ಇದ್ದರಲ್ಲವೆ ಇನ್ನು ದುಃಖ? ಅದಕ್ಕೇ ನಾನು ಹೇಳಿದ್ದು : ಸುಖವೂ ಇಲ್ಲ ದುಃಖವೂ ಇಲ್ಲ ಅಂತ."

"ಒಳ್ಳೇ ಮೇಷ್ಟ್ರು ಮಾತನಾಡುವ ಹಾಗೆ ಮಾತನಾಡುತ್ತಿ ಗೌರಕ್ಕ, ನೀನು !....ಅದು ಸರಿ, ನಮಗೆ ಎಲ್ಲರ ಹಾಗೇನೇ ಸುಖಪಡುವುದಕ್ಕೆ ಹಕ್ಕು ಇಲ್ಲವೆ ?"

" ಸುಖ ಅಂದರೆ ಏನು ಅಂತ ತಿಳಿದುಕೊಂಡಿದ್ದೀಯೆ, ನೀನು ? "

" ಉಡೋದು ತೊಡೋದು........ನಮ್ಮ ವಯಸ್ಸಿನ ಎಲ್ಲ ಹೆಂಗಸರೂ ಹೇಗಿರುತ್ತಾರೋ ಹಾಗೆ ಇರೋದು...."

" ಇತಿಮಿತಿ ಇಟ್ಟುಕೊಂಡು ಸುಖಪಡಬಹುದು, ಯಾರು ಬೇಡ ಅಂತಾರೆ ? "

" ನಿನಗೆ ಅರ್ಥವಾಗಲಿಲ್ಲ ಗೌರಕ್ಕ, ನಾನು ಹೇಳಿದ್ದು...."

ಆಗಲೇ ಮುಕ್ಕಾಲು ದಾರಿ ಸವೆದಿತ್ತು. ದಾರಿಯಲ್ಲಿ ಹೋಗುವವರು ಬರುವವರು ಕಂಡಾಗ ಮಾತು ನಿಂತು ನಿಂತೇ ಸಾಗಿತ್ತು. ಯಾರೋ ಗೌರಿಯನ್ನು ಕಂಡು ಮಾತನಾಡಿಸುತ್ತ ನಿಂತರು. " ಇವರು ಯಾರು ? " ಎಂದು ಸೀತೆಯನ್ನು ಕುರಿತು ವಿಚಾರಿಸಿ, ಕೇಳಿ ತಿಳಿದುಕೊಂಡು, " ಓ, ನಿನ್ನ ನಾರಗಿತ್ತಿಯೇ ! ಪಾಪ, ಏನೋ ಏಕಾಂತ ಮಾತಾಡಿಕೊಂಡು ಹೋಗುತ್ತಾ ಇದ್ದಿರಿ, ನಾನು ಅಡ್ಡ ಸಿಕ್ಕಿದೆ " ಎಂದು ಕ್ಷಮೆ ಕೇಳುವ ರೀತಿ ಹೇಳಿ, ಮುಂದೆ ನಡೆದರು. ಸೀತೆ ಮುಂದುವರಿಸಿದಳು :

"....ಅದೇನೋ ಹೇಳುತ್ತ ಇದ್ದೆ, ಮರೆತುಹೋಯ್ತು....ಸರಿ, ಸರಿ.... ಜ್ಞಾಪಕ ಬಂತು. ಈಗ ನಾನು ಎಲ್ಲರ ಹಾಗೇ ಇದೀನಿ. ಹೂವು ಮುಡಿಯೋದಿಲ್ಲ, ಕುಂಕುಮ ಇಡೋದಿಲ್ಲ, ಅಷ್ಟೆ. ಅವಕ್ಕೆ ನಾನು ಆಸೆಪಟ್ಟರೆ ತಪ್ಪೇನು ? "

" ಅದೇನೋ ಅಮ್ಮ, ಕೂಡವೋ ಬಾರದೋ ಆ ಶಾಸ್ತ್ರಗೀಸ್ತ್ರ ನನಗೆ ತಿಳಿಯದು. ಬಾರದು ಅಂತಾರೆ, ಬಾರದು; ಕೂಡದು ಅಂದರೆ ಕೂಡದು. ಇವತ್ತು ಹೂವು ಮುಡಿಯಬೇಕು ಅನ್ನಿಸುತ್ತೆ........ಹಾಗೇ........ಏರುತ್ತಾ ಹೋಗುತ್ತೆ ಆಸೆ. ಅದಕ್ಕೆ ಪಾರವೆಲ್ಲಿ ? "

" ಆ ಪಾರ ಏನೂ ಅನ್ನುವುದನ್ನ ನೀನು ಸ್ವಲ್ಪ ಕಂಡಿದ್ದೀಯ, ಗೌರಕ್ಕ. ನಾನು ಕಂಡಿಲ್ಲ. ಕಂಡರೆ ತಪ್ಪೆ ? "

ಸೀತೆಯ ಇಂಗಿತ ಗೌರಕ್ಕನಿಗೆ ಸ್ಪಷ್ಟವಾಯಿತು.

" ಈ ವಿಚಾರ ಮಾತನಾಡುವುದೂ ತಪ್ಪು ಅಂತ ನನಗೆ ತೋರುತ್ತೆ. ಆದರೆ ಪಾಪ, ನಿನ್ನ ಮನಸ್ಸೂ ನನಗೆ ಅರ್ಥವಾಗದೆ ಇಲ್ಲ. ಹಾಗೆ ಆಸೆಯಾಗುವುದೂ ಉಂಟು. ನಾನು ಮೊದಲೇ ಹೇಳಿದೆನಲ್ಲ, ನಾನು ನೀನು ಎಲ್ಲ ಮನುಷ್ಯರೇ; ಮರಗಳಲ್ಲ. ಆದರೆ ನಮ್ಮಂಥವರು ಆಸೆಯನ್ನ

ಹರಿಯಬಿಡಬಾರದು, ಅಷ್ಟೆ. ನಮಗೂ ಕ್ಷೇಮವಲ್ಲ, ನಾವಿರುವ ಮನೆಗೂ ಒಳ್ಳೆಯದಲ್ಲ. ಈಗ ಎತ್ತುಗಳ ಹಾಗೆ ಇದೇವೆ, ಆಗ ನಾಯಿಗಳಾಗುತ್ತೇವೆ. ಪಥ್ಯ ಯಾವುದು, ಅಪಥ್ಯ ಯಾವುದು ಅಂತ ಹಿರಿಯರು ಅನುಭವದಿಂದ ವಿಧಿಸಿದಾರೆ. ರೋಗಿ ಅಪಥ್ಯ ಸೇವಿಸಿದರೆ, ಆ-ರ ಹಿಂದೆ ಕಷ್ಟ ಅನುಭವಿಸಲೇ ಬೇಕು. ಒಬ್ಬರಿಗೆ ಪಥ್ಯವಾದದ್ದು ಇನ್ನೊಬ್ಬರಿಗೆ ಅಪಥ್ಯವಾಗಬಹುದು. ನಮ್ಮ ತಂದೆ ಆಗಾಗ್ಗೆ ಹೇಳುತಾನೇ ಇರುತಾರೆ, 'ಸತ್ಯಕ್ಕೂ ಪಥ್ಯಕ್ಕೂ ಭಯ ಇಲ್ಲ' ಅಂತ. ನಾನು ನಿರ್ಭಯಳಾಗಿದೇನಮ್ಮ; ಅಷ್ಟರಮಟ್ಟಿಗೆ, ಸುಖ ವಾಗಿಯೂ ಇದೀನಿ.... ನೀನು ಅಪಥ್ಯ ಮಾಡಬೇಕು ಅಂದರೆ, ನಾನು ಬೇಡ ಅಂದರೆ ಬಿಡುತ್ತೀಯಾ, ಅಮ್ಮ" ಎಂದು ಗೌರಮ್ಮ ಮೆಲ್ಲನೆ ನಕ್ಕಳು.

"ನಿನ್ನಾಣೆಗೂ ಇಲ್ಲ, ಗೌರಕ್ಕ. ಮನಃಪೂರ್ವಕವಾಗಿ, ಇದುವರೆಗೆ, ....ಅಂಥಾದ್ದೇನೂ ಇಲ್ಲ. ಒಂದೊಂದು ಸಲ ಅನ್ನಿಸುತ್ತೆ: ನನ್ನನ್ನು ಕೈಹಿಡಿದ ಗಂಡನ ಹಾಗೇ ಪ್ರೀತಿಸುವವರು ಇದ್ದಿದ್ದರೆ ಅಂತ....ಆಗ ಮನಸ್ಸಿಗೆ ಏನೇನೋ ಅನ್ನಿಸುತ್ತೆ....ಆದಿರಲಿ ಗೌರಕ್ಕ, ನಿನ್ನದು ಅಂತ ಒಂದು ಮಗು ಇದ್ದಿದ್ದರೆ, ನಿನಗೆ ಸಂತೋಷವಾಗುತ್ತಾ ಇರಲಿಲ್ಲವೆ?

"ಇಲ್ಲ ಅಂತ ಹೇಗೆ ಹೇಳಲಿ? ಆ ಭಾಗ್ಯ ಇಲ್ಲದೆ ಇರೋವಾಗ, ಎತ್ತಿಕೊಂಡೋವೆಲ್ಲ ನನ್ನ ಮಕ್ಕಳೆ. ಒಂದು ಒಗಟು ಇದೆ ನೋಡು, ಹಾಗೆ: 'ತಿನ್ನಬಾರದ ಹಣ್ಣು ಬಲು ಸವಿ.' ನೀನು ಹೇಳೋದೆಲ್ಲ, ತಿನ್ನಬಾರದ ಹಣ್ಣಿನ ವಿಚಾರ. ಅಪಥ್ಯ."

"ನಿನಗೂ ನನಗೂ ವ್ಯತ್ಯಾಸವೇ ಇಲ್ಲವೆ, ಗೌರಕ್ಕ?"

"ನಿನ್ನ ಮಾತಿನಿಂದ, ಇದೆ ಅಂತ ತೋರುತ್ತೆ."

"ನಾನೂ ನಿನ್ನ ಹಾಗೇ ಆಗಬೇಕು ಅಂತೀಯಾ, ಹಾಗಾದರೆ?"

"ನಿನ್ನ ಇಷ್ಟ. ಅಲ್ಲವೆ, ವೇಷ ಹೇಗಿದ್ದರೆ ಏನು, ಹೇಳು. ಮನಸ್ಸು ಮುಖ್ಯ. ನನ್ನಂಥೋರೆ ಕೆಟ್ಟಿರೋರು ಈ ಊರಿನಲ್ಲೆ, ನಮ್ಮ ಬೀದೀಲೇ, ಇದಾರೆ. ನೀನು ಇದ್ದಹಾಗೇ ಇರು, ಬಾಧಕವಿಲ್ಲ. ಮನಸ್ಸು ನಿರ್ಮಲ ವಾಗಿದ್ದರೆ ಸರಿ. ಸಾವಿರ ಜನ ಸಾವಿರ ಹೇಳಿಕೊಳ್ಳಲಿ. ನಮ್ಮ ತಂದೆ ಹೇಳೋದೇ ನಾನು ಹೇಳೋದು: ಸತ್ಯಕ್ಕೂ ಪಥ್ಯಕ್ಕೂ ಭಯವಿಲ್ಲ ಅಂತ."

ಸೀತೆ ಮೌನವಾಗಿದ್ದಳು. ಕಾವೇರಿಯ ಮನೆಯೂ ಸಮೀಪಿಸುತ್ತಿತ್ತು.

" ಏನೇನೋ ಕೇಳಿದಳು ಎಂಥೋಳು ಅಂದುಕೊಳ್ಳಬೇಡ, ಗೌರಕ್ಕ. ನನ್ನ ಮನಸ್ಸು ಇವತ್ತು ಎಷ್ಟೋ ಹಗುರವಾದಹಾಗಾಯಿತು. ನಮ್ಮ ಅಕ್ಕನ ಕೈಲಿ ಕೂಡ ಇವನ್ನೆಲ್ಲ ಮಾತಾಡೋಕೆ ಏನೋ ಮನಸ್ಸಿಗೆ ಮುಜಗರವಾಗುತ್ತಾ ಇತ್ತು. ಧೈರ್ಯಮಾಡಿ, ನಿನ್ನ ಕೈಲಿ ಬಾಯಿಬಿಟ್ಟುಬಿಟ್ಟೆ. ನೀನು ಅಕ್ಕನಿಗಿಂತ ಹೆಚ್ಚಾಗಿ ನನಗೆ ಹೇಳೋದನ್ನೆಲ್ಲ ಹೇಳಿದ್ದೀಯ....ಆದರೆ...."

" ನೀನೇನೂ ಹೆದರಿಕೋಬೇಡ, ಸೀತಾ. ದೇವರಿದಾನೆ, ಕಾಪಾಡು ತಾನೆ. ಸುಖಪಡೋದು ನಮ್ಮ ಹಣೆಯಲ್ಲಿ ಬರೆದಿಲ್ಲ. ನಾನು ಮೊದಲೇ ಹೇಳಿದಹಾಗೆ, ಸುಖ ಬೇಕು ಅಂತ ಒದ್ದಾಡೋದು ಬೇಡ. ಆವಾಗ ಸುಖ ವಾಗೇ ಇರುತೀವೆ....ಇನ್ನು ಬರ್ತೀನಮ್ಮ, ಹೊತ್ತಾಯ್ತು. ಹೋಗಿ ಒಲೆ ಹೊತ್ತಿಸಿ ರಾತ್ರಿಯ ಅಡಿಗೆಗೆ ಇಡಬೇಕೋ ಇಲ್ಲವೋ...."

" ಸ್ವಲ್ಪ ಹೊತ್ತು ಕೂತಿದ್ದು ಹೋಗು, ಗೌರಕ್ಕ...."

" ಹಾಗೇ ಆಗಲಮ್ಮ, ನಿನ್ನ ಮನಸ್ಸು ಯಾಕೆ ನೋಯಿಸಲಿ ? "

ಇಬ್ಬರೂ ಜಗಲಿಯ ಮೇಲೆ ಕುಳಿತರು. ಕಾವೇರಿಯೂ ಒಳಗಿನಿಂದ ಬಂದು ಜೊತೆಯಲ್ಲಿ ಕುಳಿತಳು. ಮೂವರೂ ತುಸು ಹೊತ್ತು ಮಾತುಕತೆ ಆಡಿದ ಮೇಲೆ, ಗೌರಮ್ಮ ಅಕ್ಕತಂಗಿಯರನ್ನು ಬೀಳ್ಕೊಂಡು ಹಿಂದಿರುಗಿದಳು.

ಹಿಂದಿರುಗುವಾಗ ಅವಳ ಮನಸ್ಸಿಗೆ ಅನ್ನಿಸಿತು :

'ಎಷ್ಟು ಸುಲಭವಾಗಿ ಉಪದೇಶ ಮಾಡಿಬಿಟ್ಟೆ ! ನಮ್ಮ ಹಾಗೇ ಎಲ್ಲರೂ ಇರಬೇಕು ಅಂತ ಬಯಸುವುದು ಯಾವ ನ್ಯಾಯ ? ನಮ್ಮ ಅಪ್ಪ ಅಮ್ಮ ನನ್ನನ್ನ ನಡಸಿಕೊಂಡ ರೀತಿ ಬೇರೆ, ಅವಳ ಅಪ್ಪ ಅಮ್ಮ ಅವಳನ್ನ ನಡಸಿಕೊಳ್ಳುತ್ತಾ ಇರುವ ರೀತಿಯೇ ಬೇರೆ....ಆದರೆ, ಕೆಡೋಳಲ್ಲ ಸೀತೆ. ಕೆಡೋರು ಹೀಗೆ ಬಾಯಿಬಿಡುವುದಿಲ್ಲ. ಮಗುವಿನ ಕೈಗೆ ಮಿಠಾಯಿ ಕೊಟ್ಟು ತಿನ್ನಬೇಡ ಅಂದಹಾಗೆ, ದೇವರು ಅವಳನ್ನ ಪರೀಕ್ಷೆ ಮಾಡುತಾ ಇರುವ ಹಾಗೆ ಕಾಣುತ್ತೆ....'

ಗೌರಮ್ಮ ಸಾವಿತ್ರಿಯನ್ನು ಹೆಗಲ ಮೇಲೆ ಬೋರಲಾಗಿ ಮಲಗಿಸಿಕೊಂಡು ತಟ್ಟುತ್ತಾ ನಡೆದಳು ; ಬಂದ ದಾರಿಯಲ್ಲೆ ಹಿಂದಿರುಗಿದಳು. ಮಾತನಾಡಿದ ವಿಷಯವೇ ಮತ್ತೆ ಮತ್ತೆ ಅವಳ ಮನಸ್ಸಿನಲ್ಲಿ ಮಥನವಾಗುತ್ತಿತ್ತು.

೭

ಗೌರಮ್ಮ ಬೀಳ್ಕೊಂಡು ಹೊರಟ ಸ್ವಲ್ಪ ಹೊತ್ತಿನ ಮೇಲೆ ಕಾವೇರಿ ತಂಗಿಗೆ ಹೇಳಿದಳು :

" ಅವೊತ್ತು ಚಿಕ್ಕಮ್ಮನ ಜೊತೆ ಬಂದಿದ್ದ ನೋಡು, ಅದೇನದು ಅವನ ಹೆಸರು ? ಮರೆತೇಹೋಯ್ತು...."

ಕಾವೇರಿ ಆ ಹೆಸರು ಮರೆತದ್ದು ಸಹಜ. ಸೀತೆ ಹೇಗೆ ಮರೆತಾಳು ?

" ಕೃಷ್ಣಮೂರ್ತಿ ಅಂತ ಕಾಣುತ್ತೆ " ಎಂದಳು.

" ಹ್ಞಾ, ಅವನು ಬಂದಿದ್ದ...."

ಯಾಕೆ ಬಂದಿದ್ದ ? ತನ್ನನ್ನು ಹುಡುಕಿಕೊಂಡು ಬಂದಿರಬಹುದೆ ? ಅಥವಾ ಚಿಕ್ಕಮ್ಮ ಏನಾದರೂ ಹೇಳಿಕಳಿಸಿದ್ದಳೋ ?

" ಚಿಕ್ಕಮ್ಮ ಹೇಳಿಕಳಿಸಿದ್ದಳು. ನೀನು ಅವರ ಮನೆಯಲ್ಲಿ ಒಂದೆರಡು ದಿನ ಇರಬೇಕಂತೆ."

ಹಿಂದೆ ಚಿಕ್ಕಮ್ಮ ಆಡಿದ್ದ ಮಾತಿನ ಆಧಾರದ ಮೇಲೆ ಕೃಷ್ಣಮೂರ್ತಿ ಸ್ವಾತಂತ್ರ್ಯ ವಹಿಸಿ ನೀಡಿದ್ದ ಆಹ್ವಾನ ಇದು ಎಂಬುದನ್ನು ಅಕ್ಕತಂಗಿಯರು ಅರಿಯರು.

" ಅದಕ್ಕೇನಂತೆ, ಹೋದರಾಯಿತು ಒಂದು ದಿನ " ಎಂದು ಉದಾಸೀನಳಾಗಿ ನುಡಿದಳು ಸೀತೆ.

" ನಾಳೆಯೋ ನಾಡಿದ್ದೋ ಅವನೇ ಬರುತ್ತಾನಂತೆ, ನಿನ್ನನ್ನ ಕರೆದು ಕೊಂಡು ಹೋಗೋದಕ್ಕೆ."

" ಹೋಗೋಣ ಅದಕ್ಕೇನು " ಎಂದಳು ಮತ್ತೆ. ಅದೇ ಧ್ವನಿ; ಆದರೆ ಒಳಗೆ ಹಿಗ್ಗು.

ಕಾವೇರಿಯ ಮನೆಗೆ ಪ್ರತಿನಿತ್ಯವೂ ಬೆಳಗ್ಗೆ ಒಬ್ಬರು ದಾಸರು ಉಪಾದಾನಕ್ಕೆ ಬರುತ್ತಿದ್ದರು. ಅವರು ಕಪ್ಪಗಿದ್ದುದರಿಂದ ಅವರಿಗೆ ' ಕರೀದಾಸ ' ಎಂದೇ ಬೀದಿಯಲ್ಲಿ ಅಡ್ಡಹೆಸರಾಗಿದ್ದಿತು. ಅವರು ಕಾವೇರಿಯ ಮನೆಗೆ ಬರುವ ಹೊತ್ತಿಗೆ ಸರಿಯಾಗಿ ' ಕೃಷ್ಣಮೂರ್ತಿ ಕಣ್ಣಮುಂದೆ ನಿಂತಿದಂತಿದೆ ' ಎಂದು ಹಾಡತೊಡಗುತ್ತಿದ್ದರು. ನಿಜವಾಗಿ ದಾಸರು ಚೆನ್ನಾಗಿಯೇ ಹಾಡುತ್ತಿದ್ದರೂ, ' ನಿತ್ಯ ಅದೇ ಹಾಡು, ಅದೇ ರಾಗ ' ಎಂದು ಬೇಸರಗೊಂಡು ಸೀತೆ

ಬೇಗನೆ ಒಂದು ಹಿಡಿ ಅಕ್ಕಿಯನ್ನು ನೀಡಿದ ಜೋಳಿಗೆಗೆ ಹಾಕಿ ಕಳುಹಿಬಿಡು ತ್ತಿದ್ದಳು. ಅಂದು ಚಿಕ್ಕಮ್ಮನ ಮನೆಗೆ ಹೋಗಿ ಹಿಂದಿರುಗಿದಮೇಲೆ, ಆ ಹಾಡಿನಲ್ಲಿ ಅವಳಿಗೆ ಒಂದು ಹೊಸ ಸೊಬಗು ಕಾಣತೊಡಗಿತ್ತು.

ಈಗ ಕಾವೇರಿ ಮತ್ತೆ ಕೃಷ್ಣಮೂರ್ತಿಯ ಪ್ರಸ್ತಾಪವೆತ್ತಿದ ಮಾರನೆಯ ಬೆಳಗ್ಗೆ ಎಂದಿನಂತೆ ದಾಸರು ಬಂದರು; ಅದೇ ಹಾಡನ್ನು ಮೊದಲುಮಾಡಿ ದರು: "ಕೃಷ್ಣಮೂರ್ತಿ ಕಣ್ಣಮುಂದೆ ಬಂದು ನಿಂತಿದಂತಿದೆ...."

ಇಂದು ಹಾಡಿನಲ್ಲಿ ಅವಳಿಗೆ ಹೆಚ್ಚಿನ ಆಸಕ್ತಿ. ಕಿವಿತುಂಬ ಕೇಳಿಯಾದ ಮೇಲೆ, ಹಿಡಿ ಅಕ್ಕಿಯ ಬದಲು ಬೊಗಸೆ ತುಂಬ ಅಕ್ಕಿ ಹಾಕಿದಳು. ಮನಸ್ಸಿನ ತುಂಬ ಕೃಷ್ಣಮೂರ್ತಿಯ ನೆನಹು ಬಂದು ತುಂಬಿಕೊಂಡಿತು.

ಕೃಷ್ಣಮೂರ್ತಿ ಕಣ್ಣಮುಂದೆ ಬಂದು ನಿಂತಂತಾಗಿತ್ತು!

ಅವನು ಬರಬಾರದೆ, ಅವನು ಬರಬಾರದೇ ಎಂದು ಹೃದಯ ಹಾತೊರೆ ಯುತ್ತಿತ್ತು. ಗೌರಮ್ಮನೊಂದಿಗೆ ಆಡಿದ ಮಾತುಕತೆಯೆಲ್ಲ ಮರೆತುಹೋಗಿತ್ತು.

ಅಂದು ಮಧ್ಯಾಹ್ನ, ಸೀತೆಯ ಬಯಕೆಯ ಬಿಂಬವಾಗಿ ಕೃಷ್ಣಮೂರ್ತಿ ಬಂದು ಎದುರು ನಿಂತೇ ನಿಂತ. ಸೀತೆಯ ಕಣ್ಮನಗಳಿಗೆ ಹಬ್ಬವೆನಿಸಿತು.

ಆಗ, ಭಾವ-ನಾದಿನಿ ಪಗಡೆಯಾಡುತ್ತ ಕುಳಿತಿದ್ದರು. ಕಾವೇರಿ ನೋಟಕಳಾಗಿದ್ದಳು.

"ಏನು, ಚಿಕ್ಕಮ್ಮ ಸೀತೆಯನ್ನು ಕರೆದುಕೊಂಡು ಬರುವ ಹಾಗೆ ಹೇಳಿ ಕಳಿಸಿದರೋ?" ಎಂದು ಕಾವೇರಿ ಪ್ರಶ್ನಿಸಿದಳು.

"ಇಲ್ಲ, ಇವೊತ್ತು ಅದಕ್ಕೆ ಬರಲಿಲ್ಲ. ಯಾವತ್ತು ಬಾ ಅಂದರೆ ಅವತ್ತು ಬಂದು ಕರೆದುಕೊಂಡು ಹೋಗುವುದಕ್ಕೆ ಸಿದ್ಧ" ಎಂದ ಕೃಷ್ಣಮೂರ್ತಿ.

"ಹಾಗಿದ್ದರೆ ಸರಿ. ನಿಂತೇ ಇದ್ದೀಯಲ್ಲಪ್ಪ, ಕುಳಿತುಕೊ" ಎಂದು ಕಾವೇರಿಯೇ ಹೇಳಿದಳು.

ಕೃಷ್ಣಮೂರ್ತಿ ತುಸು ದೂರದಲ್ಲಿ ಆಟ ನೋಡುತ್ತ ಕುಳಿತ. ಸ್ವಲ್ಪ ಹೊತ್ತಾದಮೇಲೆ ಇನ್ನೂ ಪಕ್ಕಕ್ಕೆ ಸರಿದ.

"ಈಗ ಆ ಹಸುರು ಒಂಟಿ ನಡಸು...ಎಲ್ಲಿ, ಒಂದು ಜೋಡಿಗರ ಹಾಕಿ ನಿಮ್ಮ ಭಾವನ ಕಪ್ಪು ಜೋಡಿಯನ್ನ ಮನೆಗೆ ಕಳಿಸು, ನೋಡೋಣ....ಹ್ನ್ಞಾ, ಹಾಗೆ, ಭೇಷ್...." ಎಂದು ಮೊದಲಾಗಿ ಸೀತೆಯ ಪಕ್ಷ ವಹಿಸಿ, ಕಾಯಿ

ನಡಸುವುದರಲ್ಲಿ ಕೃಷ್ಣಮೂರ್ತಿ ಅವಳ ಸಚಿವನಾದ. ಸೀತೆಯ ತುಟಿ ಅಲುಗದಿದ್ದರೂ, ಅವಳ ಕಣ್ಣುಗಳೂ ಕೈಗಳೂ ಉತ್ತರ ಕೊಡುತ್ತಿದ್ದುವು; ಮಾತನಾಡುತ್ತಿದ್ದುವು.

ಈ ಸನ್ನಿವೇಶದಲ್ಲಿ, ಕೃಷ್ಣಮೂರ್ತಿಯ ಕೈ ಆಗೊಮ್ಮೆ ಈಗೊಮ್ಮೆ ಸೀತೆಯ ಕೈಗಳನ್ನು ಸೋಕುತ್ತಿದ್ದುವು. ಆ ಸೋಂಕು ಮೊದಲ ಸಲ ಸೀತೆಗೆ ಯಾವ ಯಾವುದೋ ಹಳೆಯ ನೆನಪುಗಳನ್ನು ತಂದಿತು. ತನ್ನ ಇಷ್ಟಕ್ಕೆ ವಿರುದ್ಧವಾದ ಬಲಾತ್ಕಾರದ ಸ್ಪರ್ಶದ—ಜೇಡದ ನೆನಪುಗಳು. ಈಗ ಮಾತ್ರ ತಾನು ತನಗರಿಯದಂತೆಯೇ ಬಹುದಿನದಿಂದ ಬಯಸುತ್ತಿದ್ದ ವಸ್ತುವನ್ನು ಪಡೆದಂತೆ ಭಾವಿಸಿದಳು, ಭಾವಿಸಿ ಹಿಗ್ಗಿದಳು, ಹಿಗ್ಗಿ ಹೊಂಪುಳಿವೋದಳು. ಮೈಮರೆತಳು; ಕಾಯಿ ನಡಸುವುದರಲ್ಲಿ ಕೈ ಮಾತ್ರ ತೊಡಗಿತ್ತು, ಮನವೆಲ್ಲೋ ಇತ್ತು. ಕೃಷ್ಣಮೂರ್ತಿಯ ಸಲಹೆಗಳು ಮುಗ್ಗರಿಸುತ್ತಿದ್ದುವು. ಮೂರು ಆಟಗಳಲ್ಲಿಯೂ ಭಾವನೇ ಗೆದ್ದ. ಸೀತೆ ಆಟದಲ್ಲಿ ಎದುರಾಳಿ ಭಾವನಿಗೆ ಎಷ್ಟೋ ಕಾಯಿ ಸೋತಿದ್ದಳು; ಕೃಷ್ಣಮೂರ್ತಿಗೆ ತನ್ನನ್ನೇ ತಾನು ಸೋತಳು.

ಕೃಷ್ಣಮೂರ್ತಿ ಕಾಫಿ ಕುಡಿದಾದಮೇಲೆ, ಹೊರಡಲು ಅನುವಾಗಿ ನಿಂತ.

"ಪಗಡೆ ಆಡಿ ಆಡಿ ಬೇಸರವಾಗಿದೆ. ಓದುವುದಕ್ಕೆ ಯಾವುದಾದರೂ ಕತೆ ಪುಸ್ತಕ ತಂದುಕೊಡಪ್ಪ. ನಮ್ಮ ಭಾವನಿಗೆ ಹೇಳಿ ಹೇಳಿ ಸಾಕಾಯಿತು" ಎಂದು ಸೀತೆ ಭಾವನ ಮುಖವನ್ನು ನೋಡಿ, ಆಕ್ಷೇಪಣೆಯ ನಗೆ ನಕ್ಕಳು.

"ಆಗಲಿ" ಎಂದು ಕೃಷ್ಣಮೂರ್ತಿ ಒಪ್ಪಿಕೊಂಡು ತೆರಳಿದ. ಸಕಾರಣವಾಗಿ ರಂಗಸ್ವಾಮಿಯ ಮನೆಗೆ ಆಗಾಗ್ಗೆ ಬಂದು ಹೋಗುವ ಅವಕಾಶವನ್ನು ಕೃಷ್ಣಮೂರ್ತಿ ಸಂಪೂರ್ಣವಾಗಿ ಉಪಯೋಗಿಸಿಕೊಳ್ಳತೊಡಗಿದ.

ಇರುಳಿನ ಮೌನದಲ್ಲಿ ಸೀತೆಯ ಮನಸ್ಸು ತನ್ನ ನಡತೆಯನ್ನು ಟೀಕೆಗೆ ಗುರಿಪಡಿಸದೆ ಇರಲಿಲ್ಲ. ಗೌರಿಯ ಉಪದೇಶ ತಾತ್ಕಾಲಿಕವಾಗಿ ಮರೆತು ಹೋಗಿದ್ದರೂ ಅವಳನ್ನು ಈಗ ಕೆಣಕಿ ನಿಂತಿತ್ತು.

'ನೋಡುವುದು ನುಡಿಯುವುದು.... ಇದರಲ್ಲೇನು ತಪ್ಪಿದೆ?'

ಸೀತೆಗೆ ತಾನು ವಿಧವೆಯೆಂಬ ಅರಿವು ಈಗ ಸಂಪೂರ್ಣವಾಗಿತ್ತು; ಆದರೂ ತಾನು 'ನವವಧು' ಎಂಬ ಭಾವನೆ ಅವಳನ್ನು ಎಲ್ಲಿಗೋ ಸೆಳೆದೊಯ್ಯುತ್ತಿದ್ದಿತು.

## ಪ್ರಕರಣ ಒಂಬತ್ತು

೧

ಸೀತೆ ಮತ್ತು ಗೌರಮ್ಮ ತಮ್ಮ ' ಖುದ್ದು ರಾಜಿ 'ಯಿಂದ ಐನೂರು ರೂಪಾಯಿ ಜೀವನಾಂಶ ಪಡೆದು, ಗಂಡನ ಕಡೆ ತಮಗೆ ಇನ್ನೇನೂ ಹಕ್ಕಿಲ್ಲ ವೆಂದು ಬರೆದುಕೊಡುವ ವಿಷಯದಲ್ಲಿ ಶಾಮಣ್ಣನವರು ವಕೀಲರ ಸಲಹೆಪಡೆದು, ಛಾಪಾ ಕಾಗದದ ಮೇಲೆ ಅವಶ್ಯವಾದ ಪತ್ರಗಳನ್ನು ಬರೆಯಿಸಿ, ಸೀತೆಯ ಮತ್ತು ಗೌರಿಯ ರುಜುವನ್ನೂ ಹಾಕಿಸಿ, ವೆಂಕಟಸುಬ್ಬಯ್ಯನವರಿಗೆ ಕಾಗದ ಬರೆದಿದ್ದರು. ಅವರು ಬಸವಾಪಟ್ಟಣಕ್ಕೆ ಹೋಗಿ ಮೈಲಾರಯ್ಯನವರಿಗೆ ಈ ಸಂಗತಿ ತಿಳಿಸಿದರು. ಮೊದಲು, ಮದುವೆ-ಮುಂಜಿ ಆಗಲಿ ನೋಡೋಣ ಎಂದರು. ಶುಭಕಾರ್ಯ ಮುಗಿದಮೇಲೆ, ಹೊಂದಿಸಿದ್ದ ಹಣವೆಲ್ಲ ವೆಚ್ಚವಾಗಿ ಹೋಯಿತು, ಇನ್ನೊಂದು ತಿಂಗಳಾಗಲಿ, ಎಂದರು. ವೆಂಕಟಸುಬ್ಬಯ್ಯ ನವರು ಬಹು ಸೂಕ್ಷ್ಮವಾಗಿ ಕೋರ್ಟಿನ ಬೆದರಿಕೆ ಹಾಕಿದರು. " ಇಬ್ಬರು ಹೆಣ್ಣುಮಕ್ಕಳನ್ನೂ ಹಾಸನಕ್ಕೆ ಕರೆದುಕೊಂಡು ಬನ್ನಿ. ಅಲ್ಲಿ ಪತ್ರ ರಿಜಿಷ್ಟರು ಮಾಡಿಸಿ. ಸಬ್‌ರಿಜಿಸ್ಟ್ರಾರರ ರೂಬರೂ ಹಣ ಪಾವತಿ ಮಾಡಿಬಿಡುತ್ತೇನೆ " ಎಂದು ಮೈಲಾರಯ್ಯನವರು ಕಡೆಗೆ ಸೂಚಿಸಿದರು. ಈ ನೆವದಲ್ಲಿ ಸ್ವಲ್ಪ ಕಾಲ ಹರಣವಾಗಲಿ ಎಂದು ಅವರ ಎಣಿಕೆ. ವಾಸ್ತವವಾಗಿ ಅವರ ಬಳಿ ಇದ್ದ ನಗದು ಹಣ ವೆಚ್ಚವಾಗಿ ಹೋಗಿತ್ತು. ಇಬ್ಬರು ಹೆಣ್ಣುಮಕ್ಕಳ ' ಮದುವೆ ಮಾಡಿ ನೋಡಿ ' ನೊಂದಿದ್ದ ಅವರು, ಮತ್ತೆ ಮದುವೆ-ಮುಂಜಿ ಎರಡನ್ನೂ ಮಾಡಿ ದ್ದರು. ಹಣ ಕೈಗೆ ಬರುವವರೆಗೂ ಬೀಗರಾಗಿದ್ದವರ ಮನಸ್ಸನ್ನು ಪ್ರಸನ್ನ ವಾಗಿಟ್ಟುಕೊಳ್ಳಬೇಕೆಂದು, ಕೋರ್ಟಿನ ಬೆದರಿಕೆಯ ಮಾತನ್ನು ಮರೆಸಿ ಸೌಹಾರ್ದವನ್ನು ಸ್ಥಾಪಿಸಲು, ವೆಂಕಟಸುಬ್ಬಯ್ಯನವರು ಮದುವೆಗೂ ಹೋಗಿ ದ್ದರು. ಮದುವೆಗೆ ಮುನ್ನವೂ ಆಮೇಲೂ ಕೊಳಲೂರು—ಬಸವಾಪಟ್ಟಣ —ಮೈಸೂರಿಗೆ ಈ ವ್ಯವಹಾರ ಸಂಬಂಧವಾಗಿ ಕಾಗದಗಳು ಓಡಿಯಾಡು ತ್ತಿದ್ದವು.

'.... ನಿನಗೆ ಸದ್ಯದಲ್ಲಿಯೇ ವರ್ಗವಾಗುವ ವಿಷಯ ತಿಳಿಯಿತು. ಸೀತೆಯ

'ಜೀವನಾಂಶ' ವ್ಯವಹಾರದ ಸಂಬಂಧದಲ್ಲಿ ಅವಳು ಮೈಸೂರಿನಲ್ಲಿಯೇ ಇರಲಿ ಎಂದು ಶಾಮಣ್ಣನವರು ಅಭಿಪ್ರಾಯಪಟ್ಟಿರುತ್ತಾರೆ. ನಿನಗೆ ವರ್ಗವಾದಾಗ ಸೀತೆಯನ್ನು ತಮ್ಮ ಮನೆಯಲ್ಲೇ ಬಿಟ್ಟಿರಬಹುದೆಂದು ಬರೆದಿದ್ದಾರೆ. ಅಲ್ಲಿ ಇರಲು ಅವಳು ಸಂಕೋಚಪಟ್ಟಲ್ಲಿ, ಅವಳ ಚಿಕ್ಕಮ್ಮನ ಮನೆಯಲ್ಲಿ ಇದ್ದು ಕೊಳ್ಳಲಿ. ನಾನೇ ಹೋಗಿ ಕರೆದುಕೊಂಡು ಬರುತ್ತೇನೆ....' ಎಂದು ವೆಂಕಟ ಸುಬ್ಬಯ್ಯನವರು ತಮ್ಮ ಅಳಿಯನಿಗೆ ಕಾಗದ ಬರೆದಿದ್ದರು.

ಈ ಕಾಗದ ಬಂದದ್ದು, ಸೀತೆ ಶಾಮಣ್ಣನವರ ಮನೆಯಲ್ಲಿ ಮೂರು ದಿನ ಇದ್ದು ಬಂದಮೇಲೆ. ಕೃಷ್ಣಮೂರ್ತಿ ಈಗ ಸೀತೆಯ ಸಂದರ್ಶನಕ್ಕಾಗಿ ರಂಗಸ್ವಾಮಿಯ ಮನೆಗೆ ಪ್ರತಿನಿತ್ಯವೂ ಬರುವುದಕ್ಕೆ ತೊಡಗಿದ್ದ. ಮಾತು ಕತೆಯಿಂದ ಮೇಲಿನ ಪತ್ರದ ಸಂಗತಿಯ ಸುಳಿವು ಹತ್ತಿತ್ತು ಅವನಿಗೆ. ರಂಗ ಸ್ವಾಮಿಗೆ ವರ್ಗದ ಆಜ್ಞೆ ಬಂದದ್ದೂ ಅವನಿಗೆ ತಿಳಿಯಿತು. ಕೃಷ್ಣಮೂರ್ತಿಯ ಮುಖಾಂತರ ಈ ಎಲ್ಲ ಸಂಗತಿ ಲಕ್ಷ್ಮೀದೇವಮ್ಮನವರಿಗೂ ತಿಳಿಯಿತು.

ಲಕ್ಷ್ಮೀದೇವಮ್ಮನವರು ರಂಗಸ್ವಾಮಿಯನ್ನೂ ಕಾವೇರಿಯನ್ನೂ ಒಂದು ದಿನ ತಮ್ಮ ಮನೆಗೆ ಔತಣದೂಟಕ್ಕೆ ಆಹ್ವಾನಿಸಿದರು. ಸೀತೆಯೂ ಅಕ್ಕನ ಜೊತೆ ಹೋಗಿದ್ದಳಷ್ಟೆ.

"ನಿಮ್ಮ ಅಕ್ಕನಿಗೆ ಮಾತ್ರ ಔತಣ, ನಿನಗೆ ಇಲ್ಲಮ್ಮ" ಎಂದರು ಚಿಕ್ಕಮ್ಮ ಹಾಸ್ಯವಾಗಿ.

ಸಂದರ್ಭವನ್ನು ಬಲ್ಲ ಸೀತೆ ತೃಪ್ತಿಯ ಮುಗುಳುನಗೆ ಬೀರಿದಳು.

"ಅದಕ್ಕೇ ನಮ್ಮ ಅಕ್ಕ ನನಗೆ ನಿನ್ನೆ ತಮ್ಮ ಮನೆಯಲ್ಲಿ ಔತಣ ಮಾಡಿಬಿಟ್ಟಳು" ಎಂದು ಸೀತೆ ನಕ್ಕಳು.

"ತಂಗಿಗೆ ಬಾಣಂತನ ಮಾಡಿದ್ದಕ್ಕೆ ಸೀರೆ ಉಡಿಸಿದೆಯೋ?" ಎಂದು ಚಿಕ್ಕಮ್ಮ ಕಾವೇರಿಯನ್ನು ಪ್ರಶ್ನಿಸಿದರು.

ಸೀತೆ ತನ್ನ ಭಾವ ತೆಗೆದುಕೊಟ್ಟಿದ್ದ ಹೊಸ 'ಟ್ರಂಕಿ'ನಿಂದ, ಅಕ್ಕ ತರಿಸಿಕೊಟ್ಟಿದ್ದ ಕಪ್ಪು ಬಣ್ಣದ ಬೊಂಬಾಯಿ ಚೀಟಿಯ ಸೀರೆಗಳೆರಡನ್ನು ತೆಗೆದು, ಹಿಗ್ಗಿನಿಂದ ತೋರಿಸಿದಳು. "ಕಪ್ಪು ನಿನಗೆ ಚೆನ್ನಾಗಿ ಒಪ್ಪುತ್ತೆ, ಸೀತಾ" ಎಂದರು ಚಿಕ್ಕಮ್ಮ. ಆಮೇಲೆ, ಹಾಗೆ ಅನ್ನಬಾರದಾಗಿತ್ತು ಎಂದು ಅವರು ತಮ್ಮಲ್ಲಿಯೇ ಅಸಮಾಧಾನಗೊಂಡರು. ಆದರೆ ಬಳಿಯಲ್ಲಿಯೆ ಇದ್ದ

ಕೃಷ್ಣಮೂರ್ತಿಗೆ ಈ ಮಾತಿನಿಂದ ಸಮಾಧಾನವಾಯಿತು.

ರಂಗಸ್ವಾಮಿ ಮತ್ತು ಕಾವೇರಿ ಮೈಸೂರನ್ನು ಬಿಟ್ಟಮೇಲೆ, ಸೀತೆ ತನ್ನ ಚಿಕ್ಕಮ್ಮನ ಮನೆಯಲ್ಲಿಯೇ ಉಳಿಯುವಂತಾಯಿತು.

೨

ರಾಮಕೃಷ್ಣಯ್ಯನವರು ಅರಮನೆಯ ಕಚೇರಿಯಲ್ಲಿ ಉದ್ಯೋಗಸ್ಥರು. ಜೀವನ ನಿರ್ವಹಣಕ್ಕಾಗಿ ಅವರು ತಮ್ಮ ಅಲ್ಪ ವೇತನವನ್ನು ನಂಬಿಕೊಂಡಿರ ಬೇಕಾಗಿರಲಿಲ್ಲ. ಅವರು ತುಮಕೂರು ಜಿಲ್ಲೆಯಲ್ಲಿ ತಮ್ಮ ಪಾಲಿಗೆ ಬಂದಿದ್ದ ಪಿತ್ರಾರ್ಜಿತ ಸ್ವತ್ತನ್ನು ಮಾರಿ, ಶ್ರೀರಂಗಪಟ್ಟಣ ಮತ್ತು ನಂಜನಗೂಡಿನ ಬಳಿ ಬಹು ಅಲ್ಪ ಬೆಲೆಗೆ ಇಪ್ಪತ್ತು ಮೂವತ್ತು ಎಕರೆ ಹೊಲಗಳನ್ನು ಯಾವುದೋ ದೂರದ ಆಸೆಯಿಂದ ಕೊಂಡಿದ್ದರು. ಬೇಗನೆ ಅವರ ಆಸೆ ಹಣ್ಣಾಯಿತು. ನಾಲೆಗಳ ವಿಸ್ತರಣ ಯೋಜನೆಯಲ್ಲಿ ಇವರ ಜಮೀನಿನ ಬಳಿಗೆ ಹೊಸ ನಾಲೆ ಗಳು ಬಂದು, ಎಲ್ಲವೂ ಗದ್ದೆಗಳಾದುವು. ರಾಮಕೃಷ್ಣಯ್ಯನವರ ಒಳ್ಳೆಯ ದಶೆ ಪ್ರಾರಂಭವಾಯಿತು. ಅನುಕೂಲಸ್ಥರೆನಿಸಿ, ಬಂಧುಬಳಗದ ಕಡೆಯವರಿಗೆ ಯಾವಾಗಲೂ ಆಶ್ರಯದಾತರಾಗಿದ್ದರು. ಅವರೇ ಏಳು ಮಕ್ಕಳ ತಂದೆ; ಐದು ಹೆಣ್ಣುಮಕ್ಕಳು; ಹಿರಿಯ ಮಗಳು ಜಯಲಕ್ಷ್ಮಿಗೆ ಮದುವೆಯಾಗಿ, ಎರಡನೆಯ ಮಗಳು—ಸೀತೆಗಿಂತ ಒಂದೆರಡು ವರ್ಷ ಚಿಕ್ಕವಳು—ಶಾರದೆ ಮದುವೆಗೆ ನೆರೆದಿದ್ದಳು. ಉಳಿದವರು ಇನ್ನೂ ಚಿಕ್ಕವರು.

ಒಳ್ಳೆಯ ಗಳಿಗೆಯಲ್ಲಿ ತಮ್ಮ ತಂದೆ ಈ ಮನೆ ಕೊಂಡಿದ್ದರೆಂಬ ಭಾವನೆ ಯಿಂದ ರಾಮಕೃಷ್ಣಯ್ಯನವರು ಶಿವರಾಮಪೇಟೆಯಲ್ಲಿನ ಮನೆಯನ್ನು ಮಾರಿರ ಲಿಲ್ಲ. ಕೃಷ್ಣಮೂರ್ತಿ ರಾಮಕೃಷ್ಣಯ್ಯನವರ ದೂರದ ಸಂಬಂಧಿಕ; ಸದ್ಯದಲ್ಲಿ ಅವರ ಮನೆಯಲ್ಲಿ ಓದಿಕೊಂಡಿದ್ದವನು ಇವನೊಬ್ಬನೆ. ಆದರೂ, ಇರುವಷ್ಟು ಜನಕ್ಕೆ ಮನೆ ಸಾಲದು. ಈಗ, ತಾತ್ಕಾಲಿಕವಾಗಿ, ಸೀತೆಯೂ ಈ ಸಂಸಾರಕ್ಕೆ ಬಂದು ಸೇರಿಕೊಂಡಳು.

ಪರೀಕ್ಷೆಯ ಫಲಿತಾಂಶಗಳು ಒಂದೊಂದಾಗಿ ಬರತೊಡಗಿದ್ದವು. ಕೃಷ್ಣ ಮೂರ್ತಿಗೆ 'ಎಂಟ್ರೆನ್ಸ್' ಪರೀಕ್ಷೆಯಲ್ಲಿ ತೇರ್ಗಡೆಯಾಗಿತ್ತು. 'ತಬ್ಬಲಿ ಹುಡುಗ'ನಿಗೆ ಪ್ಯಾಸಾದದ್ದು ರಾಮಕೃಷ್ಣಯ್ಯನವರಿಗೆ ವಿಶೇಷ ಸಂತೋಷ.

ತಾವು ಅವನನ್ನು ಕಾಪಾಡಿದ್ದು ಸಾರ್ಥಕವಾಯಿತೆಂದುಕೊಂಡರು. ಆಮೇಲೆ ರಂಗಸ್ವಾಮಿಯ ಯು.ಜಿ.ಟಿ. ಫಲಿತಾಂಶ; ಅವನಿಗೂ ತೇರ್ಗಡೆಯಾಯಿತು. ಕೊನೆಯಲ್ಲಿ ಸೀತೆಯ ಫಲಿತಾಂಶ: ತೇರ್ಗಡೆಯಾಗಿರಲಿಲ್ಲ. ಸೀತೆಗೇನೋ ತುಸು ಖಿನ್ನತೆಯಾಯಿತು.

"ಈ ಸಲ ನಮ್ಮ ಗೋವಿಂದನ ಜೊತೆ ಕಟ್ಟಿ ಪ್ಯಾಸುಮಾಡುವೆಯಂತೆ, ಸುಮ್ಮನಿರು, ಯಾಕೆ ಮನಸ್ಸಿಗೆ ಹಚ್ಚಿಕೊಳ್ಳುತ್ತಿ. ಇಷ್ಟರಮೇಲೆ, ಓದದೆ ಇದ್ದರೂ ಆಯಿತು" ಎಂದು ಲಕ್ಷ್ಮೀದೇವಮ್ಮನವರು ಸಮಾಧಾನಮಾಡಿದರು. ಸದ್ಯದಮಟ್ಟಿಗೆ, ಸೀತೆಗೂ ಹಾಗೆಯೇ ಅನ್ನಿಸಿತು.

"ಈ ಸಲ ನಾನು ಹೇಳಿಕೊಟ್ಟು ಖಂಡಿತ ಪ್ಯಾಸು ಮಾಡಿಸುತ್ತೇನೆ, ನೀನು ಓದು, ಸೀತಮ್ಮ" ಎಂದು ಕೃಷ್ಣಮೂರ್ತಿ ಪ್ರೋತ್ಸಾಹದ ಮಾತುಗಳನ್ನಾಡಿದನು.

"ಅವಳ ಭಾವ ಸ್ಕೂಲುಮೇಷ್ಟ್ರು. ಅವರು ಹೇಳಿಕೊಟ್ಟೇ ಪ್ಯಾಸಾಗಲಿಲ್ಲ. ಇನ್ನು ನೀನು ಹೇಳಿಕೊಟ್ಟರೆ ಪ್ಯಾಸಾಗುತ್ತೆಯೇ" ಎಂದು ಶಾರದೆ ಲೇವಡಿಮಾಡಿದಳು.

"ಭಾವನ ಕೈಲಿ ಹೇಳಿಸಿಕೊಂಡರೆ ಪ್ಯಾಸಾಗುವುದಿಲ್ಲ ಕಣೇ, ಗಂಡನ ಕೈಲಿ ಹೇಳಿಸಿಕೊಂಡರೆ ಆಗುತ್ತೆ. ಮುಂದಿನ ವರ್ಷ ಕೃಷ್ಣಮೂರ್ತಿ ನಿನಗೆ ಪಾಠಹೇಳಿಕೊಟ್ಟು ಪ್ಯಾಸುಮಾಡಿಸಿಯೇ ಮಾಡಿಸುತ್ತಾನೆ" ಎಂದು ಗೋವಿಂದ ಅಕ್ಕನನ್ನು ಗೇಲಿಮಾಡಿದ.

ಶಾರದೆ ಮುಖ ಉರುಗಿಸಿಕೊಂಡಳು.

ಸೀತೆಯೇನೋ ಗೋವಿಂದನ ಬಳಿಯಿದ್ದ ಹೊಸ ಪುಸ್ತಕಗಳನ್ನು ಓದಲು ಪ್ರಾರಂಭಿಸಿದ್ದಳು. "ಇಂಗ್ಲಿಷು-ಕನ್ನಡ ಎರಡಕ್ಕೂ ಒಟ್ಟಿಗೆ ಕಟ್ಟಿಬಿಟ್ಟರೂ ಒಳ್ಳೆಯದೆ" ಎಂದು ಕೃಷ್ಣಮೂರ್ತಿ ಹೆಚ್ಚಿನ ಇಂಗ್ಲಿಷ್ ಶಿಕ್ಷಣವನ್ನು ಕೊಡ ತೊಡಗಿದ್ದ. ಸನ್ನಿವೇಶ ಇಬ್ಬರನ್ನೂ ಈಗ ಶೀಘ್ರ ಹತ್ತಿರಕ್ಕೆ ತಂದಿತ್ತು; ಹೃದಯಗಳು ಸಮತಾನದಲ್ಲಿ ಮಿಡಿಯುತ್ತಿದ್ದುವು; ನಿರಂತರವೂ ಕಣ್ಣಾಟ ನಡೆದೇ ಇತ್ತು. ಕಾಣುವಂತೆ ಹೆಚ್ಚಿನ ಸಲಿಗೆ ಇಬ್ಬರಲ್ಲಿಯೂ ಇರಲಿಲ್ಲ; ಅದಕ್ಕೆ ಅವಕಾಶವೂ ಇರಲಿಲ್ಲ. ಇಬ್ಬರಿಗೂ ಇದು 'ಹೊರಗಿನ' ಮನೆ; ನಡೆವಳಿಯಲ್ಲಿ, ಸಲುವಳಿಯಲ್ಲಿ, ಇಬ್ಬರೂ ಇತಿಮಿತಿಯನ್ನು ಗ್ರಹಿಸಿದ್ದರು. ನೆರೆ

ಯೇನೋ ತುಂಬಿ ಬಂದಿತ್ತು ; ಅದಕ್ಕೆ ಬಲವಾದ ಅಣೆಕಟ್ಟೊ ಇತ್ತು.

ಇವರಿಬ್ಬರೂ ರಂಗಸ್ವಾಮಿಯ ಮನೆಯಲ್ಲಿ ಯಾವ ಸಲಿಗೆಯಿಂದ ನಡೆದುಕೊಳ್ಳುತ್ತಿದ್ದರೋ ಅದಕ್ಕೆ ಇಲ್ಲಿ ಅವಕಾಶವೇ ಇರಲಿಲ್ಲ. ಬಹು 'ಗಂಭೀರ' ವಾಗಿ ಮಾರ್ಪಟ್ಟಿತ್ತು ಪರಸ್ಪರ ವರ್ತನೆ.

ಸೀತೆಯೋ ಒಮ್ಮೊಮ್ಮೆ ಹಾಸ್ಯಮಾಡುತ್ತಿದ್ದಳು :

"ನನಗೆ ಈ ವರ್ಷವೂ ಫೇಲಾಗಿಬಿಟ್ಟರೆ, ನೀನು ಮುಂದಿನ ವರ್ಷ ನನಗೆ ಪಾಠ ಹೇಳಿಕೊಡುವುದಕ್ಕೆ ಆಗುತ್ತದೆಯೋ ಇಲ್ಲವೋ? ಹೆಂಡತಿಯನ್ನು ಬಿಟ್ಟು ನನಗೆ ಹೇಳಿಕೊಡುತ್ತೀಯಾ, ಅಪ್ಪ ?"

ರಾಮಕೃಷ್ಣಯ್ಯನವರು ಮತ್ತು ಚಿಕ್ಕಮ್ಮನವರ ಮನಸ್ಸಿನಲ್ಲಿ ಹೇಗೇ ಇರಲಿ, ಮನೆಮಕ್ಕಳಂತೂ ಕೃಷ್ಣಮೂರ್ತಿಯನ್ನೂ ಶಾರದೆಯನ್ನೂ ಗಂಡ-ಹೆಂಡತಿ ಮಾಡಿಬಿಟ್ಟಿದ್ದರು. ಶಾರದೆಯೇನೋ ಮುನಿಸು ಬೆರೆತ ಲಜ್ಜೆಯನ್ನು ನಟಿಸಿ, ಸೋದರ ಸೋದರಿಯರ ಭವಿಷ್ಯವಾಣಿಗೆ ಸಮ್ಮತಿ ಕೊಡುತ್ತಿದ್ದಳು. ಈ ಅಂಶ ಸೀತೆಯ ಗಮನಕ್ಕೆ ಬಾರದೆಹೋಗಿರಲಿಲ್ಲ. ಶಾರದೆಗೆ ಪ್ರಿಯವೆಂದು ತಾನೂ ಅವರ ಹಾಸ್ಯೋಕ್ತಿಗಳಲ್ಲಿ ಬೆರೆಯುತ್ತಿದ್ದಳು. ಕೃಷ್ಣಮೂರ್ತಿಯ ಗಂಭೀರ ಮುದ್ರೆ ಮಾತ್ರ ಅವಳಿಗೆ ಅರ್ಥವಾಗುತ್ತಿರಲಿಲ್ಲ. ಶಾರದೆಯನ್ನು ಮದುವೆಯಾಗುವುದು ಅವನಿಗೆ ಇಷ್ಟವಿರಲಿಲ್ಲವೆ? ಮದುವೆಯ ಮಾತೇ ಇಲ್ಲದಿರುವಾಗ ಇಷ್ಟ-ಅನಿಷ್ಟ ಎಲ್ಲಿ ಬಂತು? ಎಲ್ಲೋ ಮಕ್ಕಳ ಮಾತು ಎಂದು ಸುಮ್ಮನಿದ್ದಾನೆ—ಎಂದುಕೊಳ್ಳುತ್ತಿದ್ದಳು.

ಚಿಕ್ಕಮ್ಮನ ಮನೆಯಲ್ಲೇನೋ ಓದುವ ಪುಸ್ತಕಗಳಿಗೆ ಕೊರತೆ ಇರಲಿಲ್ಲ. ಮಕ್ಕಳ ಪಠ್ಯಪುಸ್ತಕಗಳಿಂದ ಹಿಡಿದು ಕೃಷ್ಣಮೂರ್ತಿ ತಂದುಕೊಡುತ್ತಿದ್ದ ಪುಸ್ತಕಗಳವರೆಗೆ ಎಲ್ಲವನ್ನೂ ಸೀತೆ ಸರಸರನೆ ಓದಿಬಿಡುತ್ತಿದ್ದಳು. ಒಮ್ಮೊಮ್ಮೆ, ಚೆನ್ನೆಂದು ಕಂಡ ಕಥೆಯನ್ನು ಚಿಕ್ಕಮ್ಮನಿಗೂ ಓದಿಹೇಳುವಳು. ಚಿಕ್ಕಮ್ಮನ ಮನೆಯಲ್ಲಿ ದಿನಗಳು ನಿಮಿಷಗಳಂತೆ ಸಾಗಿದುವು; ಹಬ್ಬಗಳು ಓಡಿಬಂದು, ಹೆಣ್ಣುಮಕ್ಕಳನ್ನು ನಲಿಸಿ ಹರಸಿ, ಕುಣಿಸಿ ತಣಿಸಿ, ಹಾರಿಹೋದುವು. ಸೀತೆಯೂ ಯಾವ ಭಾಗದಲ್ಲಿಯೂ ಮುಖ ಚಿಕ್ಕದು ಮಾಡಿಕೊಳ್ಳದೆ ಹಬ್ಬಗಳಲ್ಲಿ ತಾನು ಎಷ್ಟರಮಟ್ಟಿಗೆ ಸಡಗರಪಡಬಹುದೋ ಅಷ್ಟನ್ನೂ ಪಟ್ಟಳು. ಪೂಜೆಪುರಸ್ಕಾರಗಳಲ್ಲಿ ಭಾಗಿಯಾಗದ ಸೀತೆಯ ವಿಚಿತ್ರ ಒಂಟಿತನವನ್ನು ಕಂಡು

ಕೃಷ್ಣಮೂರ್ತಿಗೆ ಅದೇನೋ ಕೊರತೆಯೆನ್ನಿಸುತ್ತಿತ್ತು.

ಆಡುತ್ತಆಡುತ್ತ ನವರಾತ್ರಿ ಬಂದಿತು. ಸೀತೆಗೆ ಇದು ಎರಡನೆಯ ಸಲದ ನವರಾತ್ರಿ. ಮನೆಮಕ್ಕಳಿಗೆ ನೋಟ ತೋರಿಸಲು ಕೃಷ್ಣಮೂರ್ತಿಯೇ ಮುಂದಾಳು, ಸಂಗಡಿಗ. ಸೀತೆಯ ಭಾಗಕ್ಕೆ ಭಾವನ ಸ್ಥಾನದಲ್ಲಿ ಈ ಸಲ ಕೃಷ್ಣಮೂರ್ತಿಯಿದ್ದ. ಆದರೆ ಭಾವಯ್ಯ ನಿರಾತಂಕವಾಗಿ ವಹಿಸುತ್ತಿದ್ದ ಸಲಿಗೆಯನ್ನು ಮಾತ್ರ ಇವನು ವಹಿಸಲಾಗುತ್ತಿರಲಿಲ್ಲ; ವಹಿಸುತ್ತಲೂ ಇರಲಿಲ್ಲ. ರಾಮಕೃಷ್ಣಯ್ಯನವರು ಅರಮನೆಯ ನೌಕರರಾದ್ದರಿಂದ, ಅರಮನೆಯ ಮುಂದಿನ ನೋಟ ನೋಡಲು ಅವರ ಮನೆಯವರಿಗೆ ವಿಶೇಷ ಸೌಕರ್ಯಗಳಿದ್ದುವು. ಈ ಸಲ ನವರಾತ್ರಿಯ ನೋಟವನ್ನು ಸೀತೆ ಮಕ್ಕಳೊಂದಿಗೆ ಮಗುವಾಗಿ ನಲಿದಳು. ಜಂಬೂಸವಾರಿಯನ್ನು ದೊಡ್ಡಪೇಟೆಯ ವರ್ತಕರ ಅಂಗಡಿಯ ಬಿಸಿಲುಮಾಳಿಗೆಯ ಮೇಲೆ ನಿಂತು ಕಣ್ತುಂಬ ನೋಡಿದಳು. ಅಂಬಾರಿಯಲ್ಲಿ ಕುಳಿತಿದ್ದ ಮಹಾರಾಜರು ಆ ಕಡೆ ಈ ಕಡೆ ತಿರುಗುತ್ತ, ಮಂದಹಾಸವನ್ನು ಸೂಸುತ್ತ, ಎಲ್ಲರಿಗೂ ಕೈಮುಗಿಯುತ್ತ ಇದ್ದರೆ ತನಗೂ ಕೈಮುಗಿದರೆಂದು ಮುಗ್ಧ ಸೀತೆ ಭಾವಿಸಿದಳು.

" ಈ ಸಲ ನಾನು ಊರಿಗೆ ಹೋಗದೆ ನಿಮ್ಮ ಮನೆಯಲ್ಲಿ ಉಳಿದುಕೊಂಡದ್ದು ತುಂಬ ಒಳ್ಳೆಯದಾಯಿತು. ಹೋದ ವರ್ಷ ಇಷ್ಟು ಚೆನ್ನಾಗಿ ಯಾವುದೂ ಕಾಣಿಸಲಿಲ್ಲ" ಎಂದು ಸೀತೆ ತನ್ನ ಸಂತೋಷವನ್ನು ಚಿಕ್ಕಮ್ಮನಿಗೆ ವ್ಯಕ್ತಪಡಿಸಿದಳು.

" ಹೋದ ಸಲ ಬೆಟ್ಟದ ಜಾತ್ರೆಗೆ ಹೋಗಿದ್ದೆಯೋ ಇಲ್ಲವೋ ? "

" ಇಲ್ಲ " ಎಂದಳು ಸೀತೆ.

" ಈ ಸಲ ಹೋಗುವಿಯಂತೆ. ಹೇಗಿದ್ದರೂ ಅವರು ಹೋಗಬೇಕು. ಗೋವಿಂದ, ಶಾರದೆ ಎಲ್ಲರೂ ಜೊತೆಗೆ ಬರುತ್ತಾರೆ, ಬೇಕಾದರೆ."

'ಕೃಷ್ಣಮೂರ್ತಿ ?' ಎಂದು ಕೇಳಬೇಕೆನ್ನಿಸಿತು. ಅನುಚಿತ ಪ್ರಶ್ನೆಯನ್ನು ಮನಸ್ಸು ನುಂಗಿಕೊಂಡಿತು. ಏನೂ ಕೇಳದೆ, ಮನಸ್ಸಿಗೆ ಮುಜಗರವೆನಿಸಿತು : " ನೀನು ಬರುವುದಿಲ್ಲವೆ ? " ಎಂದು ಕೇಳಿದಳು.

" ನನ್ನ ಕೈಲಿ ಸಾವಿರ ಮೆಟ್ಟಲು ಹತ್ತುವುದಕ್ಕಾಗುತ್ತದೆಯೇ, ಅಮ್ಮ. ಬೆಟ್ಟಕ್ಕೆ ಹೋಗಿ ಎಂಟು ಹತ್ತು ವರ್ಷವಾಯ್ತು. ಈಚೆಗೆ ತೆಪ್ಪೋತ್ಸವ

ಸಿಂಹವಾಹನ ತುಂಬ ಚೆನ್ನಾಗಿ ಮಾಡುತ್ತಾರಂತೆ. ಅದನ್ನ ನೋಡುವ ಪುಣ್ಯ ನನಗಿಲ್ಲ."

" ಅಷ್ಟು ಚೆನ್ನಾಗಿರುತ್ತೆಯೆ ? "

" ದಿವ್ಯವಾಗಿರುತ್ತೆ. ಬೆಳಗ್ಗೆ ರಥೋತ್ಸವವೂ ಅಷ್ಟೆ. ಮೊದಲು ಮಹಾ ರಾಜರೇ ಹಗ್ಗ ಹಿಡಿದು ಸ್ವಲ್ಪ ದೂರ ರಥ ಎಳೆಯುತ್ತಾರೆ...."

" ಒಬ್ಬರೇ ! "

ಚಿಕ್ಕಮ್ಮನವರು ನಕ್ಕು ನುಡಿದರು : " ಜನವೆಲ್ಲಾ ಎಳೀತಾರೆ. ಅವರೂ ಹಗ್ಗ ಹಿಡಿದುಕೊಂಡಿರುತ್ತಾರೆ, ಅಷ್ಟೆ."

" ಹಾಗಾದರೆ ಈ ಸಲ ಶಾರದೆಯನ್ನೂ ಜೊತೆಗೆ ಕಳಿಸು ಚಿಕ್ಕಮ್ಮ, ಹೋಗಿಬಿಟ್ಟು ಬರುತ್ತೇನೆ. ಚಿಕ್ಕಪ್ಪನೂ ಬರುತಾರೆ ತಾನೆ ? "

" ಸರಿ, ಅವರು ಬಂದರೂ ಒಂದೆ, ಬರದಿದ್ದರೂ ಒಂದೆ. ಅವರ ಕೆಲಸ ಅವರಿಗೆ...."

" ಹಾಗಾದರೆ ಜೊತೆಗೆ ? "

" ಅದಕ್ಕೇನು, ಕೃಷ್ಣಮೂರ್ತಿ ಬರುತ್ತಾನೆ."

ಸೀತೆ ಬೆಟ್ಟದ ಜಾತ್ರೆಯ ದಿನವನ್ನು ಕಾತುರಳಾಗಿ ಎದುರುನೋಡು ತ್ತಿದ್ದಳು.

೩

ಆ ದಿನವೂ ಬಂದಿತು. ಆಶ್ವಯುಜ ಶುದ್ಧ ಪೂರ್ಣಿಮೆ.

ಮೈಸೂರಿನ ಎಲ್ಲ ಮಾರ್ಗಗಳೂ ಅಂದು ಚಾಮುಂಡಿ ಬೆಟ್ಟದ ಕಡೆಗೇ ಬೆಟ್ಟು ತೋರಿಸುತ್ತಿದ್ದುವು.

ರಾಮಕೃಷ್ಣಯ್ಯನವರು ಬೆಳಗಿನ ಜಾವ ನಾಲ್ಕು ಗಂಟೆಗೇ ಎದ್ದು, ಸ್ನಾನ-ಸಂಧ್ಯಾವಂದನೆ ಮಾಡಿ, ' ದರ್ಬಾರು ' ಪೋಷಾಕು ಧರಿಸಿ, ಒಬ್ಬರೇ ಹೊರಟುಬಿಟ್ಟರು.

ಬೆಳಗ್ಗೆ ಆರು ಗಂಟೆಯ ಹೊತ್ತಿಗೆ ಉಳಿದವರೆಲ್ಲ ಸ್ನಾನಮಾಡಿ, ಕಾಫಿ ತಿಂಡಿ ಸೇವಿಸಿ, ಹೊರಡಲು ಸಿದ್ಧರಾದರು. ಪಕ್ಕದ ಮನೆಯ ಹಿರಿಯ ಗಂಡಸರೊಬ್ಬರೂ, ಅವರ ಮಕ್ಕಳೂ ಬಂದು ಜೊತೆಗೂಡಿದರು. ಎಲ್ಲರೂ

ಹೊರಟುನಿಂತಾಗ, "ಒಂದು ಒಳ್ಳೆಯ ಸೀರೆ ತಂದಿಲ್ಲವೆ, ಸೀತಾ?" ಎಂದು ಚಿಕ್ಕಮ್ಮನವರು ಅವಳನ್ನು ಕೇಳಿದರು. 'ಒಳ್ಳೆಯ ಸೀರೆ' ಎಂದರೆ ಅವಳ ಮದುವೆಯಲ್ಲಿ ಉಡಿಸಿದ ಸೀರೆ. ಹಾಗೆಂದು ಹೇಳಲು ಚಿಕ್ಕಮ್ಮನಿಗೆ ಬಾಯಿ ಬರಲಿಲ್ಲ. "ತಂದಿದ್ದೇನೆ...." ಎಂದು ಸೀತೆ ಅನುಮಾನಿಸಿ ಹೇಳುತ್ತಿದ್ದಾಗ ಕೃಷ್ಣಮೂರ್ತಿ "ಈ ಕಪ್ಪು ಸೀರೆಯೇ ಅವಳಿಗೆ ಚೆನ್ನಾಗಿ ಒಪ್ಪುತ್ತೆ, ಬಿಡಿ ಅತ್ತೆ" ಎಂದುಬಿಟ್ಟ. "ಇನ್ನು ಅವಳಿಗೆ ಯಾವುದು ಒಪ್ಪಿದರೆಷ್ಟು ಬಿಟ್ಟ ರೆಷ್ಟು" ಎನ್ನದೆ ಇರಲಾಗಲಿಲ್ಲ ಅವರು. ಆಗ ಸೀತೆಯ ಮುಖ ತಗ್ಗಿತ್ತು; ಅವರ ದನಿ ಕುಗ್ಗಿತ್ತು.

ಶಿವರಾಮಪೇಟೆಯಿಂದ ಬೆಟ್ಟದ ಬುಡಕ್ಕೇ ಸುಮಾರು ಎರಡು ಮೈಲಿಗಳ ಮೇಲಿನ ನಡಗೆ. ಶಾರದೆ ಗೋವಿಂದ ಮೊದಲಾದವರಿಗೆ ಬೆಟ್ಟದ ಪ್ರವಾಸ ಹೊಸದೇನಲ್ಲ. ಎಲ್ಲರೂ ಬೇಗ ಬೇಗನೆ ಹೆಜ್ಜೆಯಿಡುತ್ತಿದ್ದರು. ಸೀತೆ ಮಾತ್ರ ಸಹಜವಾಗಿಯೇ ಹಿಂದುಳಿದಳು. ಹಳ್ಳಿಯಲ್ಲೇ ಹುಟ್ಟಿ ಬೆಳೆದವಳಾದರೂ ಈಚೆಗೆ ನಡೆಯುವ ಅಭ್ಯಾಸವೇ ತಪ್ಪಿತ್ತು ಅವಳಿಗೆ. ಕೃಷ್ಣಮೂರ್ತಿ ಅವಳ ಮೈಗಾವಲೆಂಬಂತೆ ಜೊತೆಗೂಡಿ ನಡೆಯುತ್ತಿದ್ದ. "ನೀವು ಮುಂದೆ ಮುಂದೆ ನಡೆಯಿರಿ, ಸೀತೆಯ ಕೈಲಾಗುವುದಿಲ್ಲ, ಪಾಪ" ಎಂದು ಅವನು ಹೇಳುತ್ತಲೇ ಇದ್ದ. ಉಳಿದವರು ಹತ್ತು ಮಾರು ಮುಂದೆ ಹೋಗಿ, ಹಿಂದುಳಿದವರಿಗಾಗಿ ಕಾದು ನಿಲ್ಲುತ್ತಿದ್ದರು.

ಕೃಷ್ಣಮೂರ್ತಿ ದಾರಿಯುದ್ದಕ್ಕೂ, 'ಇದೇ ಹಾರ್ಡಿಂಗ್ ಸರ್ಕಲ್'; 'ಇದೇ ದೊಡ್ಡಕೆರೆ'; 'ಆ ಕಡೆ ಖಾಸ್‌ಬಂಗಲಿ ಇದೆ'; 'ಅಲ್ಲಿಗೆ ಹೋಗಿಲ್ಲ ಅಲ್ಲವೆ?'; 'ಅದೇ ರೇಸ್‌ಕೋರ್ಸ್'; 'ನೋಡು, ಈ ಕಡೆ ಮಧುವನ' ....'ಕಾರಂಜಿಕೆರೆ'—ತೋರಿಸಬೇಕಾದ್ದನ್ನೆಲ್ಲ ತೋರಿಸಿಕೊಂಡು ಹೋಗುತ್ತಿದ್ದ. ಅವನು ತೋರಿದ್ದನ್ನೆಲ್ಲ ಆಗತಾನೆ ಮೂಡುತ್ತಿದ್ದ ಸೂರ್ಯ ತನ್ನ ಹೊಂಬೆಳಕಿನಿಂದ ಬೆಳಗಿ, ಸೀತೆಗಾಗಿ ಎಂಬಂತೆ ಅಣಿಗೊಳಿಸುತ್ತಿದ್ದ. ಸುತ್ತೆಲ್ಲ ಚೆಲುವು ತುಂಬಿತ್ತು; ಸೀತೆಯ ಹೃದಯದಲ್ಲಿ ನಲವು ತುಂಬಿತ್ತು.

ಕೃಷ್ಣಮೂರ್ತಿ ಮತ್ತು ಸೀತೆ ಬೆಟ್ಟದ ಬುಡವನ್ನು ಸೇರುವ ಹೊತ್ತಿಗೆ ಉಳಿದವರೆಲ್ಲಾ ಬಂಡೆಗಳ ಮೇಲೆ ಕಾದು ಕುಳಿತಿದ್ದರು. ಇವರನ್ನು ಕಂಡ ಕೂಡಲೆ, ಅವರು ಮೆಟ್ಟಲು ಹತ್ತಲು ಮೊದಲುಮಾಡಿದರು. ಕೃಷ್ಣಮೂರ್ತಿ,

ತಡೆಯಿರಿ ಎನ್ನುವಂತೆ ತುಸು ದೂರ ಇದ್ದವನು ಕೈಯಿಂದ ಸಂಜ್ಞೆಮಾಡಿದ. ಎಲ್ಲರೂ ಮತ್ತೆ ಇವರಿಗಾಗಿ ಕಾದು ನಿಂತರು. ಎಲ್ಲರೂ ಸಂಧಿಸಿದಾಗ, ಪಕ್ಕದ ಮನೆಯ ಶ್ರೀನಿವಾಸರಾಯರನ್ನು ಕುರಿತು ಕೃಷ್ಣಮೂರ್ತಿ ಹೇಳಿದ: "ಸೀನಪ್ಪನವರೆ, ನೀವು ದಯವಿಟ್ಟು ಹುಡುಗರನ್ನ ನಿಮ್ಮ ಜೊತೆ ಕರೆದೊಯ್ಯಬೇಕು. ದಾರಿ ನಡೆದೇ ಸೋತಿದ್ದಾಳೆ ಸೀತಮ್ಮ. ಅವಳಂತೆ ಎಲ್ಲರೂ ಹತ್ತುತ್ತ ಹೋದರೆ, ರಥೋತ್ಸವ ನೋಡುವಹಾಗೇ ಇಲ್ಲ. ನೀವು ಮುಂದೆ ಮುಂದೆ ಹತ್ತಿಹೋಗಿ. ನಾನು ಸೀತಮ್ಮನ ಜೊತೆ ಬರುತ್ತೇನೆ." "ನೀನು ನಮ್ಮ ಜೊತೆಗೇ ಇರಮ್ಮ" ಎಂದು ಸೀತೆ ಶಾರದೆಯನ್ನು ಬೇಡಿಕೊಂಡಳು, ಮನಃಪೂರ್ವಕವಾಗಿ. "ಹಾಗೇ ಮಾಡೇ, ಗಂಡ ಹೆಂಡತಿ ಒಟ್ಟಿಗೇ ಬನ್ನಿ" ಎಂದು ಗೋವಿಂದ ಕೀಟಲೆ ಮಾಡಿದ. ಸೀತೆ ನಕ್ಕಳು. ಹುಸಿ ಲಜ್ಜೆಯ ಬಿಂಕದಿಂದ, ಶಾರದೆ ಎಲ್ಲರಿಗಿಂತ ಮೊದಲು ಮೆಟ್ಟಿಲು ಹತ್ತತೊಡಗಿ, ಮಾಡಿದ ಸಲಹೆಗೆ ತನ್ನ ಅಸಮ್ಮತಿಯನ್ನು ಸೂಚಿಸಿದಳು.

ಎಲ್ಲರಿಗೂ ಬೆಟ್ಟ ಹತ್ತಿ ಅಭ್ಯಾಸವಾಗಿತ್ತು. ಗೋವಿಂದನಂತೂ ಓಡಿ ಓಡಿ ಹತ್ತಿ, ಎಲ್ಲರಿಗಿಂತ ಐವತ್ತು ನೂರು ಮೆಟ್ಟಿಲು ಮುಂದಾಗಿ, ಏದುಸಿರು ಬಿಡುತ್ತ ಇತರರಿಗಾಗಿ ಕಾಯುತ್ತ ಕುಳಿತಿರುತ್ತಿದ್ದನು. ಸೀತೆ ಹತ್ತಿಪ್ಪತ್ತು ಮೆಟ್ಟಿಲುಗಳಿಗೊಮ್ಮೆ ನಿಂತು ನಿಂತು ವಿಶ್ರಾಂತಿ ಪಡೆಯುತ್ತಿದ್ದಳು. ಶ್ರೀನಿವಾಸರಾಯರ ಸಂಗಡ ಉಳಿದವರೆಲ್ಲಾ ಮೇಲೆ ಮೇಲೆ ಏರಿಹೋಗಿ ಕಣ್ಮರೆಯಾದರು. ಕೃಷ್ಣಮೂರ್ತಿಯೂ ಸೀತೆಯೂ ಸಹಜವಾಗಿ ಹಿಂದುಳಿದರು.

ಬೆಟ್ಟವೇರುವ ಭಕ್ತರ ನೂಕುನುಗ್ಗಲಿನಲ್ಲಿ ಸೀತೆ ಮೆಟ್ಟಿಲು ಹತ್ತುವುದು ಇನ್ನೂ ನಿಧಾನವಾಯಿತು. ಒಟ್ಟಿಗೆ ಐವತ್ತು ಮೆಟ್ಟಿಲು ಹತ್ತಿದ ಕೂಡಲೆ, ಸಲಸಲವೂ, "ಒಂದು ನಿಮಿಷ ಕುಳಿತು ಸುಧಾರಿಸಿಕೋ, ಸೀತೆ" ಎನ್ನುತ್ತಿದ್ದ ಕೃಷ್ಣಮೂರ್ತಿ. ಸೀತೆಯ ಕೆನ್ನೆ ಕೊರಳುಗಳು ಬೆವರಿನಿಂದ ತೊಯ್ದು ಹೋಗಿದ್ದುವು; ಅಲ್ಲಲ್ಲೆ ಕುರುಳ ಸುರುಳಿ ಮೆತ್ತಿಕೊಂಡು, ಕೃಷ್ಣಮೂರ್ತಿಗೆ ಸೀತೆಯ ಬಳಲಿದ ಮುಖದಲ್ಲಿ ಹೆಚ್ಚಿನ ಚೆಲುವು ಕಂಡಿತ್ತು.

ಸುಮಾರು ಮುನ್ನೂರು ಮೆಟ್ಟಿಲು ಹತ್ತಿದಮೇಲೆ—

"ಸೀತಾ, ಕೆಳಗೆ ನೋಡು, ಮೈಸೂರು ಹೇಗೆ ಕಾಣುತ್ತೆ!" ಎಂದು ಹರ್ಷದ ಉದ್ಗಾರ ತೆಗೆದ ಕೃಷ್ಣಮೂರ್ತಿ.

ಸೀತೆ ಹಿಂದಿರುಗಿ ನಿಂತಳು; ನಿಂತು ಕ್ಷಣಕಾಲ ದಿಟ್ಟಿಸಿದಳು. ಕೆಳಗಿನ ಆಳದ ದೂರದಲ್ಲಿ ಮಾದರಿ ಮೈಸೂರಿನ ಕೃತಕ ಮಾದರಿಯನ್ನು ಮಾಡಿಟ್ಟಿದ್ದಾರೆಯೋ ಏನೋ ಎನ್ನುವಂತೆ, ಮೈಸೂರು ನಗರಸರ್ವಸ್ವದ ಸುಂದರವಾದ ವಿಹಂಗಮ ದೃಶ್ಯ ಅವಳ ದೃಷ್ಟಿವ್ಯಾಪ್ತಿಯಲ್ಲಿ ಅಳವಟ್ಟಿತ್ತು, "ಎಷ್ಟು ಚೆನ್ನಾಗಿದೆ!" ಎನ್ನುವುದಕ್ಕಿಲ್ಲ, ಅವಳಿಗೆ ಕಣ್ಣುಕತ್ತಲೆ ಬಂದಂತಾಯಿತು. ಎರಡು ಕೈಗಳಿಂದಲೂ ಕಣ್ಣುಮುಚ್ಚಿಕೊಂಡಳು; ನಿಂತ ನಿಲುವಿನ ಆಯ ತಪ್ಪಿದಂತಾಯಿತು. ಬವಳಿ ಬಂದಂತಾಗಿ ಕುಸಿದಳು; ಎಚ್ಚರ ತಪ್ಪಿದಳು.

ಅವಳಿಗೆ ಎಚ್ಚರವಾದಾಗ, ಮೆಟ್ಟಿಲುಸಾಲಿನ ಪಕ್ಕದಲ್ಲಿ ಕುಳಿತಿದ್ದ ಕೃಷ್ಣಮೂರ್ತಿಯ ತೊಡೆಗಳ ಮೇಲೆ ಅವಳ ತಲೆಯಿತ್ತು. ಕೃಷ್ಣಮೂರ್ತಿ ತಲೆಗೆ ನೀರು ತಟ್ಟುತ್ತಿದ್ದುದು ಅವಳಿಗೆ ಅರಿವಾಯಿತು; "ಇನ್ನು ಗಾಬರಿಯಿಲ್ಲ. ಬೆಟ್ಟ ಹತ್ತಿ ಅಭ್ಯಾಸವಿಲ್ಲ, ಕೆಳಕ್ಕೆ ನೋಡಿದಾಗ ತಲೆಸುತ್ತು ಬಂತು ಅಷ್ಟೆ. ನೀವು ಹತ್ತಿಹೋಗಿ. ಇನ್ನು ಪರವಾಯಿಲ್ಲ, ಹೊತ್ತಾಗುತ್ತೆ" ಎಂದು ಕೃಷ್ಣಮೂರ್ತಿ ಹೇಳಿದ್ದು ಅವಳ ಕಿವಿಗೆ ಬಿದ್ದಿತು; ತಿರುಪಿನ ತಂಬಿಗೆಯೊಂದರ ತಿರುಪುಹಾಕಿ ಯಾರ ಕೈಗೋ ಕೊಟ್ಟಿದ್ದನ್ನು ಕಂಡಳು.

ಸೀತೆ ಏಳುವುದಕ್ಕೆ ಹೋದಳು. "ಬೇಡ, ಇನ್ನು ಸ್ವಲ್ಪ ಹೊತ್ತು ಸುಧಾರಿಸಿಕೋ" ಎಂದು ಕೃಷ್ಣಮೂರ್ತಿ ಅವಳ ಒದ್ದೆಯಾಗಿದ್ದ ತಲೆಯನ್ನು ತನ್ನ ಹೆಗಲಮೇಲಿನ ವಲ್ಲಿಯಿಂದ ಒರಸಿ, ಕೆದರಿದ್ದ ಕುರುಳನ್ನು ನೇವರಿಸುತ್ತಿದ್ದ.

ದಾರಿಯಲ್ಲಿ ಹೋಗುತ್ತಿದ್ದವರೆಲ್ಲ, 'ಗಂಡಹೆಂಡತಿ ಇರಬಹುದು, ಎಷ್ಟು ಚೆನ್ನಾಗಿದೆ ಜೋಡಿ!' ಎಂದುಕೊಂಡಿದ್ದರೆ ಆಶ್ಚರ್ಯವಿರಲಿಲ್ಲ.

ಬೆಟ್ಟ ಹತ್ತುತ್ತಿದ್ದ ಮುತ್ತೈದೆಯೊಬ್ಬರು, ಸುಧಾರಿಸಿಕೊಳ್ಳಲು ಇವರ ಬಳಿಯೇ ನಿಂತರು; ಏನೆಂದು ವಿಚಾರಿಸಿ, ಸಂಗತಿ ತಿಳಿದು, "ಅಯ್ಯೋ ಪಾಪ" ಎಂದರು; "ಪಿತ್ತಸುತ್ತಿಕ್ಕೆ ಒಳ್ಳೇದು, ಕೊಳ್ಳಮ್ಮ" ಎಂದು ಪೂಜಾಸಾಮಗ್ರಿಗಳಿದ್ದ ಕೈಬುಟ್ಟಿಯಿಂದ ಎರಡು ಕಲ್ಲುಸಕ್ಕರೆ ಚೂರುಗಳನ್ನು ಕೊಟ್ಟರು. "ನೀರು ಬಿದ್ದು ಹಣೇ ಕುಂಕುಮ ಅಳಿಸಿಹೋಗಿದೆಯಲ್ಲೇ, ತಾಯೀ. ಕುಂಕುಮ ಇಟ್ಟುಕೋ, ತಗೋ" ಎಂದು ಮತ್ತೆ ಕೈಬುಟ್ಟಿಯಿಂದ ಒಂದು ಕಾಗದದ ಪೊಟ್ಟಣ ತೆಗೆದು, ಕುಂಕುಮ ನೀಡಿದರು.

ತೆಗೆದುಕೊಳ್ಳಬೇಕೋ, ಬಿಡಬೇಕೋ? ಕೃಷ್ಣಮೂರ್ತಿಯ ಮುಖ

ನೋಡಿದಳು. 'ತೆಗೆದುಕೋ' ಎಂದು ಸಂಜ್ಞೆಮಾಡಿದ್ದು ಕಂಡಿತು. ತೆಗೆದು ಕೊಂಡು ಹಣೆಗಿಟ್ಟುಕೊಂಡಳು.

ಬರಿಯ ಹಣೆ ಎಂದು ಕಂಡ ಆ ಮುತ್ತೈದೆಗೆ ಕೊರಳಿನಲ್ಲಿ ಕರಿಮಣಿ ಸರ ಇಲ್ಲದ್ದು ಕಾಣದೆ ಇರಲಿಲ್ಲ.

"ನಿನ್ನ ತಂಗಿಯೇನಪ್ಪಾ?" ಎಂದು ಮೆಲುದನಿಯಲ್ಲಿ ಕೇಳಿದರು ಆಕೆ.

'ಹೌದು' ಎನ್ನುವಂತೆ ತಲೆಯಲ್ಲಾಡಿಸಿದ ಕೃಷ್ಣಮೂರ್ತಿ.

"ಇನ್ನೂ ಮದುವೆ ಇಲ್ಲ ಅಂತ ಕಾಣುತ್ತೆ" ಎಂದು ಆಕೆ ಸಂದೇಹಿಸಿದರು.

'ಇಲ್ಲ' ಎನ್ನುವಂತೆ ಮತ್ತೆ ತಲೆಯಲ್ಲಾಡಿಸಿದ.

"ಇನ್ನು ಸ್ವಲ್ಪ ಸುಧಾರಿಸಿಕೊಳ್ಳಲಿ, ಪಾಪ. ಮೆತ್ತಗೆ ಕರೆದುಕೊಂಡು ಹೋಗಪ್ಪ, ಜೋಕೆ" ಎಂದು ಆಕೆ ಮೆಟ್ಟಿಲು ಹತ್ತತೊಡಗಿದರು.

ಮೆಟ್ಟಿಲ ಸಾಲು ಪಕ್ಕದಲ್ಲಿಯೇ ಇದ್ದರೆ ಎಲ್ಲರೂ ಹಾಗೆಯೇ ವಿಚಾರಿಸ ಬಹುದು. "ಸ್ವಲ್ಪ ಆ ಕಡೆ ಹೋಗೋಣ ಬಾ" ಎಂದು ಕೃಷ್ಣಮೂರ್ತಿ ಸೀತೆಯನ್ನು ಎಬ್ಬಿಸಿ, ತಬ್ಬಿಕೊಂಡು ಕರೆದುಕೊಂಡು ಹೋದ. ಅವಳು ಈಗ ಪೂರ್ತಿ ಚೇತರಿಸಿಕೊಂಡಿದ್ದರೂ, ಆ ಆಲಿಂಗನ ಅವಳಿಗೆ ಬೇಡವೆನ್ನಿಸಲಿಲ್ಲ. ಮೂರು ನಾಲ್ಕು ಮಾರಾಚೆ ಒಂದು ಚಪ್ಪಟೆಯಾದ ಬಂಡೆಯ ಮೇಲೆ ಇಬ್ಬರೂ ಕುಳಿತರು.

"ಅಭ್ಯಾಸವಿಲ್ಲದೆ ಎತ್ತರಕ್ಕೆ ಬಂದರೆ ಕೆಲವರಿಗೆ ಹೀಗೆ ಆಗುತ್ತೆ. ಏನೂ ಗಾಬರಿಪಟ್ಟುಕೊಳ್ಳಬೇಡ" ಎಂದು ಕೃಷ್ಣಮೂರ್ತಿ ಸೀತೆಗೆ ಧೈರ್ಯ ಹೇಳಿದ.

"ಈಗ ಕೆಳಗೆ ನೋಡು. ಇಳಿಯುವಾಗಲಾದರೂ ನೋಡದೆ ಇರುವು ದಕ್ಕಾಗುವುದಿಲ್ಲ. ಅಲ್ಲಿ ನೋಡು ಅಲ್ಲಿ, ಗಾಜಿನ ಹಾಗೆ ಹೊಳೆಯುತ್ತ ಇದೆ ಯಲ್ಲ, ಅದೇ ದೊಡ್ಡ ಕೆರೆ...."

ಸೀತೆ ಅತ್ತ ದೃಷ್ಟಿ ಹರಿಸಿದಳು; ತಲೆ ತಿರುಗಲಿಲ್ಲ; ನೋಡುತ್ತಲೇ ಇದ್ದಳು, ಕೃಷ್ಣಮೂರ್ತಿಯ ಮಾತುಗಳನ್ನು ಆಲಿಸುತ್ತ.

"....ಕೆರೆಯಿಂದ ಆಚೆಗೆ, ಚಿನ್ನದ ಕಳಶ ಕಾಣುತ್ತ ಇದೆಯಲ್ಲ, ಅದೇ ಅರಮನೆ. ಅರಮನೆಯ ನೇರದಲ್ಲೇ ಎಡಕ್ಕೆ ನೋಡಿಕೊಂಡು ಬಾ, ಅದೇ ನೋಡು, ಅಲ್ಲಿ, ಪಶ್ಚಿಮದ ಕಡೆಯಲ್ಲಿ, ಅದೇ ಡಿಸ್ಟ್ರಿಕ್ಟ್ ಕಚೇರಿ....ಅದರ ಈಚೇ ಕಡೆಯದೆ ನಮ್ಮ ಕಾಲೇಜು, ಮಹಾರಾಜಾ ಕಾಲೇಜು...." ಈ

ಮಾತು ಹೇಳುತ್ತ ಹೆಮ್ಮೆಯಿಂದ ತುಸು ಹೊತ್ತು ಮೌನವಾಗಿದ್ದ. ಅವನ ಅರಿವಿಲ್ಲದೆಯೇ ಅವನ ಬಲಗೈ ಅವಳ ಬಲಭುಜದ ಮೇಲಿತ್ತು.

ಕೆಲಕಾಲ ಮಧುರ ಮೌನ ಇಬ್ಬರನ್ನೂ ಆವರಿಸಿತ್ತು.

"ನಮ್ಮ ನೋಡಲ್ಲೇ ಬಿಳಿಯ ಮೋಡ ಹೇಗೆ ತೇಲಿಹೋಗುತ್ತಿದೆ!" ಎಂದು ಮೆಚ್ಚಿ ನುಡಿದಳು ಸೀತೆ.

"ಯಾರಿಗಾದರೂ ಏನಾದರೂ ಹೇಳಿಕಳಿಸುವುದಿದ್ದರೆ ಅದಕ್ಕೆ ಹೇಳು. ಹೋಗಿ ತಿಳಿಸುತ್ತೆ" ಎಂದು ನಕ್ಕು ನುಡಿದ ಕೃಷ್ಣಮೂರ್ತಿ. ಅವನಿಗೆ ಕಾಳಿದಾಸನ 'ಮೇಘಸಂದೇಶ'ದ ನೆನಪಾಗಿತ್ತು.

"ಇನ್ನು ಹೊತ್ತಾಗುತ್ತೆ ಹೋಗೋಣ, ಬಾ, ಕೃಷ್ಣಮೂರ್ತಿ."

"ಕೆಳಗಿಳಿದೋ ಮೇಲಕ್ಕೋ?" ಎಂದು ಕೃಷ್ಣಮೂರ್ತಿ ನಕ್ಕ.

"ಹಾಸ್ಯ ಮಾಡಬೇಡವಪ್ಪ" ಎಂದು ಮೆಟ್ಟಿಲ ಸಾಲಿಗೆ ಬಂದು, ಎರಡು ಮೆಟ್ಟಿಲು ಹತ್ತಿದಳು.

ಇಬ್ಬರೂ ಬಹು ಮೆಲ್ಲನೆ, ನಿಧಾನವಾಗಿ ಹತ್ತಿಹೋದರು.

* * * *

ರಥೋತ್ಸವ ಮುಗಿದಮೇಲೆ ಬೆಟ್ಟಕ್ಕೆ ಹೋಗಿದ್ದ ಸಾವಿರಾರು ಭಕ್ತರಲ್ಲಿ ಬಹುಮಂದಿ ಆಗಲೇ ಊರಿಗೆ ಹಿಂದಿರುಗಿಬಿಟ್ಟರು. ಅನೇಕ ಮಂದಿ ದೇವೀಕೆರೆಯ ಬಳಿ ನಡೆಯುತ್ತಿದ್ದ ಸಮಾರಾಧನೆಯಲ್ಲಿ ಭೋಜನಮಾಡಿಕೊಂಡು ಹಿಂದಿರುಗುವುದೆಂದು ಉಳಿದುಕೊಂಡಿದ್ದರು. ಅರಮನೆಯ ನೌಕರರಿಗೆಲ್ಲಾ ಪ್ರತ್ಯೇಕವಾದ ಭೋಜನಕೂಟ ನಡೆಯುವುದಾಗಿತ್ತು. ತಮ್ಮ ಮನೆಯವರೂ ಶ್ರೀನಿವಾಸರಾಯರ ಮನೆಯವರೂ ಅಲ್ಲಿಗೆ ಬರತಕ್ಕದ್ದೆಂದು ರಾಮಕೃಷ್ಣಯ್ಯನವರು ಮೊದಲೇ ಹೇಳಿದ್ದರು. ಕೃಷ್ಣಮೂರ್ತಿಗೆ ಆ ಸ್ಥಳ ಗೊತ್ತಿದ್ದರೂ ಸೀತೆಯನ್ನು ಬೇಕೆಂದೇ ದೇವೀಕೆರೆಯ ಬಳಿಯ ಭೋಜನ ಸಮಾರಂಭಕ್ಕೆ ಕರೆದೊಯ್ದ. ಅಲ್ಲಿ ಎಲೆ ಹಾಕುವ ಹೊತ್ತಿಗೇ ಮಧ್ಯಾಹ್ನದಮೇಲೆ ಒಂದು ಗಂಟೆಯಾಗಿತ್ತು. ಕೃಷ್ಣಮೂರ್ತಿ–ಸೀತೆ ಪಕ್ಕಪಕ್ಕದಲ್ಲಿ ತೋಪಿನ ಮರಗಳ ನೆರಳಡಿಯಲ್ಲಿ, ಹುಲ್ಲಹಾಸಿನ ಮೇಲೆ, ಊಟಕ್ಕೆ ಕುಳಿತರು. "ಮಧ್ಯಾಹ್ನದ ಕಾಫಿಯೂ ಇಲ್ಲ. ಸಂಜೆ ಮನೆಗೆ ಹೋಗುವುದು ಹೊತ್ತಾಗುತ್ತೆ. ಚೆನ್ನಾಗಿ ಗಡದ್ದಾಗಿ ಊಟ ಮಾಡಿಬಿಡು" ಎಂದು ಕೃಷ್ಣಮೂರ್ತಿ ನಗುತ್ತ ಸಲಹೆ

ಕೊಟ್ಟಿದ್ದ. ಯಾರ ಸಲಹೆ ಸೂಚನೆಯೂ ಇಲ್ಲದೆಯೆ ಹಾಗೆ ಊಟ ಮಾಡು ವಷ್ಟು ಹಸಿದಿತ್ತು ಸೀತೆಗೆ. ಸುಂದರ ಸನ್ನಿವೇಶದಲ್ಲಿ, ಕೃಷ್ಣಮೂರ್ತಿಯ ಜೊತೆ ಕುಳಿತು, ತೃಪ್ತಿಯಾಗುವಂತೆ ಊಟಮಾಡಿದಳು. ತನ್ನ ಜೀವಮಾನ ದಲ್ಲಿ ಊಟ ಇಂದಿನಷ್ಟು ಎಂದೂ ಸವಿಯಾಗಿರಲಿಲ್ಲವೆನ್ನಿಸಿತು ಅವಳಿಗೆ.

ಸಂಜೆ ಸಿಂಹವಾಹನವನ್ನು ನೋಡಬೇಕೆಂದು ಬಯಸಿದ್ದವರು ಬೆಟ್ಟ ದಲ್ಲಿಯೇ ಉಳಿದರು. ಕೃಷ್ಣಮೂರ್ತಿಯೂ ಸೀತೆಯೂ ದೇವೀಕೆರೆಯ ತೋಪಿ ನಲ್ಲೆ ಒಂದು ಮರದ ಕೆಳಗೆ ಹುಲ್ಲುಹಾಸಿನ ಮೇಲೆ ಮಲಗಿ ವಿಶ್ರಾಂತಿ ತೆಗೆದು ಕೊಳ್ಳುತ್ತಿದ್ದರು. ಸುತ್ತಮುತ್ತ ಇತರರೂ ಅಲ್ಲಲ್ಲೆ ಕುಳಿತೋ ಮಲಗಿಯೋ ದಣಿವಾರಿಸಿಕೊಳ್ಳುತ್ತಿದ್ದರು.

" ಸಿಂಹವಾಹನ ಎಷ್ಟು ಹೊತ್ತಿಗೆ ಆಗಬಹುದು, ಕೃಷ್ಣಮೂರ್ತಿ ? "

" ಆರು ಗಂಟೆ ಮೇಲೆ. ಅದನ್ನ ನೋಡುವುದಕ್ಕಾಗುತ್ತೆಯೋ ಇಲ್ಲವೊ. ಮನೆಗೆ ಹೋಗುವ ಹೊತ್ತಿಗೆ ರಾತ್ರಿ ಎಂಟೋ ಒಂಬತ್ತೋ ಆಗುತ್ತೆ."

" ಹೇಗಿದ್ದರೂ ನಾವು ಜೋರಿಯಾದೆವು. ಸಿಂಹವಾಹನ ನೋಡಿಕೊಂಡು ಹೊರಟುಬಿಡೋಣ. ಅಂತೂ ಬೆಳಗ್ಗೆ ಮಹಾರಾಜರು ರಥ ಎಳೆದದ್ದನ್ನ ನೋಡೋಕೆ ಆಗಲೇ ಇಲ್ಲ...."

" ಹೋಗಲಿ ರಥೋತ್ಸವ ನೋಡಿದಹಾಗಾಯಿತು. ಅಮ್ಮನವರ ದರ್ಶನ ವಾಯಿತು. ನಿನಗೆ ಅಷ್ಟು ಇಷ್ಟವಾದರೆ, ಸಿಂಹವಾಹನ ನೋಡಿಕೊಂಡು ಹೊರಟುಬಿಡೋಣ...."

" ಬೆಳಗ್ಗಿನಷ್ಟೆ ನೂಕುನುಗ್ಗಲಿರುತ್ತೇನು ? "

" ಅಷ್ಟಿರುವುದಿಲ್ಲ ಎಷ್ಟೋ ಮಂದಿ ಹಿಂದಿರುಗಿಬಿಟ್ಟಿರುತ್ತಾರೆ. ಈ ಉತ್ಸವಕ್ಕೆಂದೇ ಸಂಜೆ ಬರುವವರೂ ಇರುತ್ತಾರೆ...."

ಬಿಸಿಲಿನ ತಾಪ ಜೋರಾಗಿದ್ದರೂ, ಮರದ ನೆರಳಿನಲ್ಲಿ ತಂಪಾಗಿಯೆ ಇತ್ತು. ಬಳಲಿಕೆ; ಹೊಟ್ಟೆಯ ತುಂಬ ಊಟ; ಸೀತೆಯ ಕಣ್ಣು ನಿದ್ದೆಯಿಂದ ಬಿಗಿಯತೊಡಗಿತು.

ಕೃಷ್ಣಮೂರ್ತಿ ಸಿಂಹವಾಹನದ ಸೊಗಸು, ಎರಡು ದಿನ ಬಿಟ್ಟು ನಡೆಯ ಲಿದ್ದ ತೆಪ್ಪೋತ್ಸವದ ವೈಭವ ಇವನ್ನು ಬಣ್ಣಿಸುತ್ತಿದ್ದಂತೆ ಸೀತೆಗೆ ನಿದ್ದೆ ಹತ್ತಿ ಬಿಟ್ಟಿತು. ಕೃಷ್ಣಮೂರ್ತಿಗೂ ಆಕಳಿಕೆ ಬರಲು ಮೊದಲಾಯಿತು. ಜಾತ್ರೆ

ಎಂದಮೇಲೆ ಪುಂಡರ ಕಾಟ ತಪ್ಪಿದ್ದಲ್ಲ. ಕೃಷ್ಣಮೂರ್ತಿ ನಿದ್ದೆಯನ್ನು ತಡೆದುಕೊಂಡು, ಸೀತೆಗೆ ಕಾವಲು ಕುಳಿತಿದ್ದ; ಬೇಸರವಾಗಿ ಅವನೂ ಅಡ್ಡನಾದ; ಸ್ವಲ್ಪ ಹೊತ್ತಿನಲ್ಲಿ ನಿದ್ದೆ ಅವನ ಮೇಲೂ ಮುಸುಕೆಳೆಯಿತು.

ಕೃಷ್ಣಮೂರ್ತಿಗೆ ಎಚ್ಚರವಾದಾಗ, ಸೀತೆ ಪಕ್ಕದಲ್ಲಿ ಎದ್ದು ಕುಳಿತಿದ್ದಳು. ಇಬ್ಬರ ನಿದ್ದೆ ಮುಗಿಯುವ ಹೊತ್ತಿಗೆ ನಾಲ್ಕು ಗಂಟೆಯ ಮೇಲಾಗಿತ್ತು

"ಶಾರದೆ ಗೋವಿಂದ ಎಲ್ಲ ಸಿಂಹವಾಹನ ನೋಡೋದಕ್ಕೆ ಇರುವುದಿಲ್ಲವೆ, ಕೃಷ್ಣಮೂರ್ತಿ ?"

"ಇರುತಾರೆ ಅಂತ ಕಾಣುತ್ತೆ."

"ಹಾಗಾದರೆ, ದೇವಸ್ಥಾನದ ಹತ್ತಿರಕ್ಕೆ ಹೋದರೆ ಅವರು ಸಿಕ್ಕಿದರೂ ಸಿಕ್ಕಬಹುದು. ಹೋಗೋಣೇನು ?"

"ನೀನು ಸಿಂಹವಾಹನ ನೋಡಲೇಬೇಕೇನು ?"

"ನೀನು ವರ್ಣಿಸಿಬಿಟ್ಟಿದ್ದೀಯಲ್ಲ! ಹೊತ್ತಾಗಿ ಹೋದರೆ ಚಿಕ್ಕಮ್ಮ ಏನಾದರೂ ತಿಳಿದುಕೊಂಡಾರು, ಮನೆಗೇ ಹೊರಟುಬಿಡೋಣ."

"ಈಗಲೇ? ಇನ್ನು ಸ್ವಲ್ಪ ತಂಪಾಗಲಿ."

"ನಾನು ಸಾವಿರ ಮೆಟ್ಟಿಲನ್ನ ಇಳಿಯಬೇಕಲ್ಲ."

"ಹೌದು, ಹೌದು. ಅಭ್ಯಾಸ ಇಲ್ಲದವರಿಗೆ ಹತ್ತುವಾಗ್ಗಿಂತ ಇಳಿಯುವಾಗ ಅಪಾಯಕರ. ಹಾಗಾದರೆ, ಹೊರಟೇಬಿಡೋಣ."

ಇಬ್ಬರೂ ಕೆರೆಯಲ್ಲಿ ಮುಖ ತೊಳೆದುಕೊಂಡು, ಮೆಟ್ಟಿಲ ಸಾಲಿಗೆ ಬಂದು ಬೆಟ್ಟವಿಳಿಯತೊಡಗಿದರು. ಸೀತೆಯ ಬಳಲಿಕೆಯೆಲ್ಲ ಪರಿಹಾರವಾಗಿತ್ತು. ಮನಸ್ಸು ಉಲ್ಲಾಸಗೊಂಡಿತ್ತು.

"ಹತ್ತುವಷ್ಟು ಕಷ್ಟವಿಲ್ಲವಪ್ಪ ಇಳಿಯುವುದು" ಎಂದು ಸೀತೆ ಗೆಲವಿನ ಭಾವನೆಯಲ್ಲೆ ಇಳಿಯುತ್ತಿದ್ದಳು. ಆದರೂ ಅವಳು ಬಹು ಎಚ್ಚರಿಕೆಯಿಂದ ಇಳಿಯುತ್ತಿದ್ದುದನ್ನು ಕಂಡು ಕೃಷ್ಣಮೂರ್ತಿಗೆ ಒಳಗೊಳಗೇ ನಗು.

ಬಸವಣ್ಣನ ಸಮೀಪಕ್ಕೆ ಬಂದಾಗ ಇಬ್ಬರೂ ವಿಶ್ರಾಂತಿಗೆಂದು ಒಕ್ಕಡೆ ಕುಳಿತರು. ಕೃಷ್ಣಮೂರ್ತಿ ತನ್ನ ಉತ್ತರೀಯದಲ್ಲಿ ಗಂಟುಕಟ್ಟಿದ್ದ ದೇವರ ಪ್ರಸಾದದ ತೆಂಗಿನಕಾಯ ಹೋಳನ್ನೂ ಬಾಳೆಯ ಹಣ್ಣನ್ನೂ ಬಿಚ್ಚಿ ತೆಗೆದ.

"ಇವತ್ತು ಇದೇ ತಿಂಡಿ" ಎಂದು ಕಾಯಹೋಳನ್ನು ಚೆಚ್ಚತೊಡಗಿದ.

ಕಾಯಿ ಬಾಳೆಯ ಹಣ್ಣು ತಿಂದಾದಮೇಲೆ ಇಬ್ಬರೂ ಮತ್ತೆ ಮೆಟ್ಟಲು ಇಳಿಯ ತೊಡಗಿದರು.

ಬಿಸಿಲಿನ ತಾಪ ಈಗ ಸಂಪೂರ್ಣವಾಗಿ ಅಡಗಿಹೋಗಿತ್ತು. ಗಾಳಿ ಹಿತ ಕರವಾಗಿ ಬೀಸುತ್ತಿತ್ತು. ಸೀತೆಯ ಮುಂಗುರುಳು ಗಾಳಿಯ ಗೆಳೆತನ ಬೆಳಸಿ ನಲಿವಂತೆ ಅತ್ತ ಇತ್ತ ಒಲೆದಾಡುತ್ತಿತ್ತು.

" ಮೆಟ್ಟಲು ಬಿಟ್ಟು ಅಡ್ಡದಾರಿ ಹಿಡಿದು ಇಳಿದರೆ ಇಷ್ಟು ಆಯಾಸವೂ ಆಗುವುದಿಲ್ಲ, ಚೆನ್ನಾಗಿರುತ್ತೆ ಬಾ " ಎಂದು ಕೃಷ್ಣಮೂರ್ತಿ ಸೂಚಿಸಿದ.

" ಒಲ್ಲೆ, ಅಪ್ಪ. ಹೆದರಿಕೆಯಾಗುತ್ತೆ. ಹಾವುಗೀವು ಇರಬಹುದು. ಏನಿಲ್ಲದಿದ್ದರೂ ಕಲ್ಲು, ಮುಳ್ಳು...."

" ಇನ್ನು ಸ್ವಲ್ಪ ಹೊತ್ತಾಗಲಿ, ಪಶ್ಚಿಮದ ಕಡೆ ಆಕಾಶ ಹೇಗೆ ಕೆಂಪು ತಿರುಗುತ್ತೆ ಅಂತ! ಸ್ವಲ್ಪದೂರ ಆ ಕಡೆ ಹೋಗಿ ಬಂಡೆಯ ಮೇಲೆ ಕುಳಿತು ನೋಡಿದರೇ ಚೆಂದ. ಇಲ್ಲಿಂದ ಆ ನೋಟ ಸಿಕ್ಕುವುದೇ ಇಲ್ಲ...." ಕೃಷ್ಣ ಮೂರ್ತಿ ಹೊರಡಲನುವಾಗಿ ಮೆಟ್ಟಲ ಸಾಲು ಬಿಟ್ಟು ಆ ಕಡೆ ಹೊರಳಿದ್ದ. ಸೀತೆ ಮೆಟ್ಟಲ ಮೇಲೆ ನಿಂತಲ್ಲಿ ನಿಂತಿದ್ದಳು.

" ರಥೋತ್ಸವ ನೋಡಬೇಕಾದರೆ ಸಾವಿರ ಮೆಟ್ಟಲು ಹತ್ತಿ ಕಷ್ಟಪಡ ಬೇಕಾಯಿತು. ಈಗ ಚೆಲುವಿನ ನೋಟ ನೋಡಬೇಕಾದರೂ ಹಾಗೆ, ಕಲ್ಲು ಮುಳ್ಳು ತುಳಿಯಲೇಬೇಕು. ಜೀವನವೇ ಹಾಗೆ ಸೀತಾ, ಸುಖ ಬೇಕಾದರೆ ಅದರೊಂದಿಗೆ ಕಷ್ಟ ದುಃಖ ಅನುಭವಿಸುವುದಕ್ಕೆ ಸಿದ್ಧವಾಗಿರಲೇಬೇಕು. ಈಗೇನು, ಬರುತ್ತೀಯೋ ಇಲ್ಲವೋ ?"

ಸೀತೆ ಅಚಲಳಾಗಿ ನಿಂತಿದ್ದಳು. ಒಂದು ಮೆಟ್ಟಲು ಇಳಿದಳು, ಎರಡು ಮೆಟ್ಟಲು ಇಳಿದಳು. ಅವಳ ಮನಸ್ಸು ಜೇನುತುಪ್ಪದ ಮೇಲೆ ಕುಳಿತ ನೊಣ ವಾಗಿತ್ತು.

ಕೃಷ್ಣಮೂರ್ತಿ ಸುತ್ತಮುತ್ತ ನೋಡಿದ. ಕೆಲ ಮಂದಿ ಇಳಿದುಹೋಗು ತ್ತಿದ್ದರು ; ಮೂರು ನಾಲ್ಕು ಮಂದಿ ಹತ್ತಿಹೋಗುತ್ತಿದ್ದರು. ಇವರ ಕಡೆಗಿದ್ದುದು ಎಲ್ಲರ ಬೆನ್ನು. ಹೋಗುವಾಗಲೇ ಇವರ ಪರಿಯನ್ನು ಅವರು ಗಮನಿಸಿ, ಪ್ರೇಮಕಲಹ ಎಂದುಕೊಂಡು, ಕಂಡೂ ಕಾಣದಂತೆ ಸಾಗಿದ್ದರು.

ಕೃಷ್ಣಮೂರ್ತಿ ಸೀತೆಯ ಬಳಿಸಾರಿ ಅವಳ ಕೈ ಹಿಡಿದು ಎಳೆದು ಬೆಟ್ಟದ

ಪಡುಗಡೆಗೆ ನಡೆದ; ಮಂತ್ರಮುಗ್ಧಳಾದವಳಂತೆ ಸೀತೆ ಅವನನ್ನು ಹಿಂಬಾಲಿಸಿದಳು.

೪

"ಕೃಷ್ಣಮೂರ್ತೀ...."

"ಮೂರ್ತಿ ಎನ್ನು, ಸಾಕು."

"ಹ್ಞಾ, ಹಾಗೇ ಆಗಲಿ. ಇಲ್ಲಿಗೆ ನಿಜವಾಗಿ ಬಂದದ್ದು ಯಾಕೆ ಹೇಳು ?"

"ಅದು ನಿನಗೂ ಗೊತ್ತು."

"ಇಲ್ಲ, ನನಗೆ ಗೊತ್ತಿಲ್ಲ."

"ಹಾಗಾದರೆ ಕುಳಿತುಕೋ, ಹೇಳುತ್ತೇನೆ."

ಇಬ್ಬರೂ ಪಡುವಣ ಕಡೆ ತೆರಪಾಗಿದ್ದ ಮೂರು ನಾಲ್ಕು ಹೆಬ್ಬಂಡೆಗಳ ಗುಹೆಯಂತಿದ್ದ ತಾವಿನಲ್ಲಿ ನಿಂತಿದ್ದರು; ಅಲ್ಲಿಯೇ ಕಾಲು ನೀಡಿ ಕುಳಿತರು. ಅವರ ನಡೆ-ನುಡಿಗೆ ಮುಳುಗುವ ಸೂರ್ಯನಲ್ಲದೆ ಬೇರೆ ಯಾರೂ ಸಾಕ್ಷಿಯಿರಲಿಲ್ಲ.

"ನಾನು ಹೇಳಿದ್ದು ಸುಳ್ಳೆ, ನೋಡು! ಇಲ್ಲಿಂದಲ್ಲದೆ ಮುಳುಗುವ ಸೂರ್ಯನ ನೋಟ ಇಷ್ಟು ಚೆನ್ನಾಗಿ ಬೇರೆ ಎಲ್ಲಿಂದ ಕಂಡೀತು ? ನೀನು ಬರಿಯ ಕಥೆ ಓದಿದ್ದೀ, ಕಾವ್ಯ ಓದಿಲ್ಲ. ಕಾವ್ಯಗಳಲ್ಲಿ ಪಶ್ಚಿಮ ದಿಗ್ವನಿತೆ ಅಂತ ಹೇಳುತ್ತಾರೆ. ಅವಳು ನಿನ್ನ ಹಾಗೆಯೇ ಈಗ, ಅಲ್ಲಿ ನೋಡು, ದೊಡ್ಡ ದೊಡ್ಡ ಮುಗಿಲ ಬಂಡೆಗಳ ಮೇಲೆ ಕುಳಿತಿರುವ ಹಾಗಿದೆ. ನಿನ್ನ ಮುಖ ಕೆಂಪಾಗಿರುವಂತೆ ಅವಳ ಮುಖವೂ ಕೆಂಪಾಗಿದೆ, ಅಲ್ಲವೆ ?"

ಸೀತೆ, "ಹೌದು" ಎಂದಳು.

"ಆ ಕೆಂಪಿಗೆ ರಾಗ ಎನ್ನುತ್ತಾರೆ. ಇದೇ ಸಂಧ್ಯಾರಾಗ. ರಾಗ ಎಂದರೆ ಇನ್ನೊಂದು ಅರ್ಥ ಇದೆ. ನಿನಗೆ ಗೊತ್ತೇ ?"

"ನಾನು ನಿನ್ನಷ್ಟು ಓದಿಲ್ಲವಲ್ಲ !"

"ರಾಗ ಎಂದರೆ ಪ್ರೀತಿ ಎಂತಲೂ ಅರ್ಥ. ಪಡುವಣ ಹೆಣ್ಣನ್ನ ಸೂರ್ಯ ಈಗ ಒಲಿಸಿಕೊಳ್ಳತೊಡಗಿದ್ದಾನೆ. ಪ್ರೀತಿ ಅವಳ ಮುಖದಲ್ಲಿ ಕೆಂಪಾಗಿ ಚಿಮ್ಮಿದೆ; ನಿನ್ನ ಮುಖವಲ್ಲಿ ಚಿಮ್ಮುತ್ತಿರುವ ಹಾಗೆ...."

"ನನ್ನ ಮುಖ ಕೆಂಪಾಗಿದೆಯೇ !"

" ನಿನಗೆ ಹೇಗೆ ಗೊತ್ತಾಗಬೇಕು ? ಕೆಂಪಗೆ ಚೆಲುವಾಗಿದೆ."

" ಹೀಗೆ ಯಾರೂ ಹೇಳಿರಲಿಲ್ಲ, ಕೃಷ್ಣ-ಮೂರ್ತಿ."

ಇಬ್ಬರೂ ಒಬ್ಬರ ಮುಖವನ್ನು ಒಬ್ಬರು ನೋಡುತ್ತಿದ್ದರು ಈಗ. ಸೀತೆ ತನಗರಿಯದಂತೆ ಕೃಷ್ಣಮೂರ್ತಿಯ ಹೆಗಲಿಗೆ ತನ್ನ ಕೆನ್ನೆಯನ್ನು ಒರಗಿಸಿದ್ದಳು. ಅವನ ಕೈಬೆರಳು ಅವಳ ತಲೆಗುರುಳೊಂದಿಗೆ ಚಕ್ಕಂದವಾಡುತ್ತಿತ್ತು.

" ಈಗ ನೋಡು, ಸೂರ್ಯ ಹೇಗೆ ಕೆಂಪಾಗಿ ಕಾಣುತ್ತಿದಾನೆ! ಪಶ್ಚಿಮ ದಿಕ್ಕಿನ ಹೆಣ್ಣಿನ ಹಣೆಯ ಕುಂಕುಮದ ಬೊಟ್ಟಿನ ಹಾಗೆ! "

ಇದ್ದಕ್ಕಿದ್ದ ಹಾಗೆ, ಸೀತೆಯ ಮನಸ್ಸು ಅರಿವಿನ ಅಗ್ನಿಕುಂಡದಲ್ಲಿ ಬೇಯತೊಡಗಿತು.

" ನನ್ನ ಹಣೆಯಲ್ಲಿ ಕುಂಕುಮದ ಬೊಟ್ಟಿಲ್ಲ, ನಿನಗೆ ಗೊತ್ತಿಲ್ಲವೆ, ಮೂರ್ತಿ ? "

" ಗೊತ್ತು."

" ನೀನು ನನ್ನನ್ನ ಹೀಗೆ ಕಾಣಬಾರದು."

" ಹೇಗೆ ? "

" ಗತಿಗೆಟ್ಟ ಹೆಣ್ಣು, ಹೇಗೆ ಹೇಳಿದರೆ ಹಾಗೆ ಕೇಳುತ್ತೆ—ಅಂತ."

" ನೀನು ಗತಿಗೆಟ್ಟ ಹೆಣ್ಣಲ್ಲ, ಸೀತೆ."

" ಕುಂಕುಮ ಅಳಿಸಿದ ಹೆಣ್ಣು ಗತಿಗೆಟ್ಟ ಹೆಣ್ಣಲ್ಲದೆ ಇನ್ನೇನು, ನಮ್ಮ ಸಮಾಜದಲ್ಲಿ ? "

" ಅಳಿಸಿದ ಕುಂಕುಮವನ್ನು ಮತ್ತೆ ಇಡಬಹುದು, ಸೀತೆ. ಬೆಳಗ್ಗೆ ಆ ಹಿರಿಯ ಮುತ್ತೈದೆ ನಿನಗೆ ಕುಂಕುಮ ಕೊಟ್ಟರು ನೋಡು, ಆಗಲೆ ನಿರ್ಧಾರ ಮಾಡಿಬಿಟ್ಟೆ ನಾನು—"

" ಏನಂತ ?—"

" ನಿನ್ನ ಹಣೆಗೆ ಮತ್ತೆ ನಾನು ಕುಂಕುಮ ಇಡುವುದು ಎಂತ."

" ಅದು ಹೇಗೆ ಸಾಧ್ಯ, ಮೂರ್ತಿ ? "

" ನೋಡು, ಹೀಗೆ...."

—ಎಂದು ತನ್ನ ಜೇಬಿನಲ್ಲಿದ್ದ ಕಾಗದದ ಪೊಟ್ಟಣವೊಂದನ್ನು ತೆಗೆದು ಬಿಚ್ಚಿದ; ತುಸು ಕುಂಕುಮವನ್ನು ತೆಗೆದು ಅವಳ ಹಣೆಗಿಟ್ಟ.

" ಅಮ್ಮನವರ ಪ್ರಸಾದದ ಕುಂಕುಮ, ಸೀತಾ."

" ಅಮ್ಮನವರ ಕೃಪೆ ನನ್ನ ಮೇಲೆ ಇಲ್ಲ, ಮೂರ್ತಿ."

" ಹಾಗೆ ತಿಳಿದುಕೊಳ್ಳಬೇಡ. ಇವತ್ತಿನಿಂದ ಅದು ಮೊದಲಾಗಿದೆ."

" ಇವತ್ತೇ ಕೊನೆಯಾಗುತ್ತೆ. ಈ ಕುಂಕುಮ ಅಳಿಸಿಕೊಂಡೇ ಮನೆಗೆ ಹೋಗಬೇಕು."

ಮಾತನಾಡುತ್ತಿದ್ದರೂ ಇಬ್ಬರೂ ಮುಳುಗುವ ರವಿಯ ವರ್ಣಕರ್ಮದ ಪವಾಡವನ್ನು ಈಕ್ಷಿಸುತ್ತಲೇ ಇದ್ದರು. ಕ್ರಮಕ್ರಮವಾಗಿ, ತಡೆದು ತಡೆದು, ಆದರೂ ಬೇಗನೆ, ರವಿಯ ರಕ್ತಬಿಂಬ ಕೆಳಕ್ಕಿಳಿಯಿತು.

" ನೋಡು ಮೂರ್ತಿ, ನೀನು ಹೇಳಿದ ಆ ಕುಂಕುಮದ ಬೊಟ್ಟು ಅಳಿಸಿ ಹೋಯಿತು."

" ಆದರೆ ನಾಸಿಟ್ಟ ಕುಂಕುಮದ ಬೊಟ್ಟು ಅಳಿಸುವುದಿಲ್ಲ, ಸೀತೆ...."

" ಅದು ಹೇಗೆ ಸಾಧ್ಯ, ಮೂರ್ತಿ ? "

" ನೋಡು, ಹೀಗೆ...."

—ಎಂದು ಕೃಷ್ಣಮೂರ್ತಿ ಸೀತೆಯ ಕೆಂದುಟಿಗಳನ್ನು ಮುತ್ತಿಟ್ಟು, ತೇವಗೊಂಡ ತನ್ನ ತುಟಿಗಳನ್ನು ಅವಳ ಹಣೆಗೆ ಒತ್ತಿದನು.

" ಈ ಕುಂಕುಮ ಅಳಿಸುವುದಿಲ್ಲ, ಸೀತೆ."

" ನೀನು ಮದುವೆಯಾದಾಗ ಇದೂ ಅಳಿಸುತ್ತೆ, ಮೂರ್ತಿ. ವಿಧಿ ಕಿತ್ತಿಕೊಂಡ ಕುಂಕುಮವನ್ನು ಮನುಷ್ಯ ಮತ್ತೆ ಇಡುವುದು ಸಾಧ್ಯವೇ, ಮೂರ್ತಿ ? "

" ನಾನು ಮದುವೆಯಾಗುವುದಿಲ್ಲ, ಸೀತೆ."

" ನೀನು ಮದುವೆಯಾಗದಿದ್ದರೆ, ನನಗೆ ಬಂದ ಭಾಗ್ಯವೇನು ? "

" ಕುಂಕುಮ ಭಾಗ್ಯ ! "

" ಕುಂಕುಮ ಭಾಗ್ಯ ? "

" ಹೌದು, ನಾನು ಮದುವೆಯಾದರೆ ನಿನ್ನನ್ನೇ ! "

ಸೀತೆ ನಕ್ಕಳು—ನಿರಭಿಮಾನದ ಹೊಳ್ಳು ನಗೆ.

" ಯಾಕೆ, ನಗುತ್ತೀಯಾ ? "

" ನನ್ನ ತಾಯಿ ಒಂದೊಂದು ಸಲ ಹೇಳ್ತಾರೆ, ಹಾಗಲವಾಡಿಗೆ

ಹೋದರೆಗೀದರೆ ಅಂತ.... ಹಾಗೆ...."

"ನಿನ್ನನ್ನ ಮದುವೆಯಾಗುವುದು ಅಸಾಧ್ಯ ಅಂತಲೆ, ಸೀತೆ? ಎಂದಿಗೂ ಇಲ್ಲ. ಈಗ ಕಾಲ ಬದಲಾಯಿಸುತ್ತ ಇದೆ. ಸಮಾಜ ಸುಧಾರಣೆ ಆಗಬೇಕು ಅಂತ ತಿಳಿದವರು ಹೇಳುತಾ ಇದಾರೆ. ನನಗೆ ತಂದೆ ತಾಯಿ ಇದ್ದರೆ, ನಿನ್ನನ್ನ ಮದುವೆಯಾಗುವುದಕ್ಕೆ ಒಪ್ಪುತ್ತಿದ್ದರೋ ಇಲ್ಲವೋ...."

"ಏನು, ನಿನಗೆ ತಂದೆ ತಾಯಿ ಇಲ್ಲವೆ?"

"ತಾಯಿಯ ಮುಖವನ್ನೇ ಕಾಣೆ. ನನಗೆ ಐದು ವರ್ಷವಾಗಿದ್ದಾಗ ತಂದೆ ತೀರಿಹೋದರು. ನಾನು ಸ್ವತಂತ್ರ."

"ಇಲ್ಲ, ಮೂರ್ತಿ. ಕರ್ತವ್ಯ ಮಾಡಬೇಕಾದ ನಿನಗೆ ಸ್ವಾತಂತ್ರ್ಯ ಎಲ್ಲಿ ಇರುತ್ತೆ?"

"ನೀನು ಹೇಳುವುದು ನನಗೆ ಅರ್ಥವಾಗುವುದಿಲ್ಲ...."

"ಶಾರದೆಯನ್ನ ಮದುವೆ ಮಾಡಿಕೋ ಅಂತ ನಮ್ಮ ಚಿಕ್ಕಪ್ಪ ಚಿಕ್ಕಮ್ಮ ಬಲವಂತ ಮಾಡಿದರೆ?"

"ಮನೆಮಕ್ಕಳು ಸುಮ್ಮನೆ ಹಾಗೆ ಹಾಸ್ಯ ಮಾಡುತ್ತಾರೆ, ಅಷ್ಟೆ. ಶಾರದೆಯನ್ನ ಎಂದಾದರೂ ಅವರು ನನ್ನಂಥ ತಬ್ಬಲಿಗೆ ಕೊಡುತ್ತಾರೆಯೆ?"

"ಒಂದು ವೇಳೆ ಕೊಡಬಂದರೆ?"

"ಒಲ್ಲೆ ಎನ್ನುತ್ತೇನೆ."

"ಯಾಕೆ, ಶಾರದೆಯನ್ನು ಕಂಡರೆ ನಿನಗೆ ಪ್ರೀತಿ ಇಲ್ಲವೆ?"

"ಎಂದಿಗೂ ಇಲ್ಲ."

"ಯಾಕೆ, ಅವಳು ಚೆನ್ನಾಗಿಲ್ಲವೆ?"

"ನಿನ್ನಷ್ಟು ಚೆನ್ನಾಗಿಲ್ಲ."

"ಹಾಗಾದರೆ, ನೀನು ಖಂಡಿತವಾಗಿ ಅವಳನ್ನ ಪ್ರೀತಿಸುವುದಿಲ್ಲವೋ?"

"ಇಲ್ಲ. ಖಂಡಿತವಾಗಿಯೂ ಇಲ್ಲ. ಪ್ರೀತಿ ಎನ್ನುವುದನ್ನ ಕಥೆ ಕಾವ್ಯಗಳಲ್ಲಿ ಓದಿದ್ದೆ. ನಿನ್ನನ್ನು ಕಂಡಮೇಲೆ, ಅದು ಅನುಭವಕ್ಕೆ ಬಂತು."

ಈ ಮಾತುಗಳನ್ನು ಕೇಳುತ್ತಿದ್ದಂತೆ, ಸೀತೆಯ ಕೆನ್ನೆ ಕಂಬನಿಯಿಂದ ತೊಯ್ದಿದ್ದುದು ಕೃಷ್ಣಮೂರ್ತಿಯ ಗಮನಕ್ಕೆ ಬಂದಿತು.

"ಯಾಕೆ ಸೀತೆ, ಅಳುತ್ತಿದ್ದಿ? ನಾನು ಹೇಳಿದ್ದರಿಂದ ನಿನ್ನ ಮನಸ್ಸಿಗೆ ನೋವಾಯಿತೆ?"

" ಇಲ್ಲ ಇಲ್ಲ, ಖಂಡಿತ ಇಲ್ಲ. ಇದು ಸಂತೋಷದ ಕಣ್ಣೀರು. ಯಾರೂ ಬಾಯಿಬಿಟ್ಟು ' ನಿನ್ನನ್ನ ಪ್ರೀತಿಸುತ್ತೇನೆ ' ಎಂದು ಹೇಳಿರಲಿಲ್ಲ. ಕಂಡವರೆಲ್ಲ ಮೆಚ್ಚಿದ್ದಾರೆ....ಆದರೆ...."

" ನೀನು ಹಾಗಿದ್ದೀಯೆ, ಸೀತೆ, ನಿಜವಾಗಲೂ...."

" ಹಾಗಾದರೆ, ನೀನೂವೆ........"

" ಹೌದು. ನಾನೂ ಎಲ್ಲರ ಹಾಗೆಯೇ ನಿನ್ನ ರೂಪಿಗೆ ಸೋತಿದ್ದೇನೆ. ಇಲ್ಲ ಎಂದರೆ ಸುಳ್ಳಾಗುತ್ತೆ. ನಿನ್ನನ್ನು ಪ್ರೀತಿಸುತ್ತೇನೆ, ನೀನು ಬೇಡ ಎಂದರೆ ಹೇಗೆ? ಶಾಖ ಬೇಡ, ಉರಿ ಇರಲಿ ಎಂದ ಹಾಗೆ. ಅದಕ್ಕೇ ನಾನು ಹೇಳಿದ್ದು, ನಾನು ನಿನ್ನನ್ನು ಮದುವೆಯಾಗುತ್ತೇನೆ ಅಂತ."

" ನೀನು ಹೇಳುವುದೂ ನಿಜ. ನಾನು ಹೇಳುವುದೂ ನಿಜ. ಸುಮ್ಮನೆ ಈಗ ಹಾಗನ್ನುತ್ತೀ. ನನ್ನನ್ನ ನೀನು ಮದುವೆ ಆಗುವುದು ಆಗದ ಹೋಗದ ಮಾತು. ಇಲ್ಲದ ಹುಸಿನೆಚ್ಚಿಕೆ ಯಾಕೆ ಇಟ್ಟುಕೊಳ್ಳಲಿ? ನಿನ್ನ ಬಾಯಿಂದ ಪ್ರೀತಿ ಎನ್ನುವ ಮಾತು ಬಂತು. ಅಷ್ಟು ಸಾಕು ನನಗೆ, ನಿನ್ನಿಂದ. ಮನೆಗೆ ಹೋಗುವಷ್ಟರಲ್ಲಿ ನೀನಿಟ್ಟ ಈ ಕುಂಕುಮ ಅಳಿಸಿಹೋಗುತ್ತೆ. ನಿನ್ನ ಪ್ರೀತಿಯ ಮಾತು ನನ್ನ ನೆನಪಿನಿಂದ ಎಂದೆಂದಿಗೂ ಅಳಿಸುವುದಿಲ್ಲ."

" ಹೋಗಲಿ, ನಾಳೆಯ ಯೋಚನೆ ಈಗೇಕೆ? ಇಂದು ನಾವಿಬ್ಬರೂ ಸುಖವಾಗಿರಬಹುದಲ್ಲಾ? ಇಂದಿನ ಸುಖ ನಾಳೆ ದೊರಕುತ್ತೆ ಅನ್ನುವ ನೆಚ್ಚಿಕೆಯಾದರೂ ಏನು? ನೀನು ಹೇಳುವುದೇ ನಿಜ ಅಂದುಕೋ. ನಾನು ನಿನ್ನನ್ನ ಪ್ರೀತಿಸುವಂತೆ, ನೀನೂ ನನ್ನನ್ನ ಪ್ರೀತಿಸುತ್ತೀಯೋ ಇಲ್ಲವೋ?"

" ಇಲ್ಲ ಅಂತ ಹೇಗೆ ಹೇಳಲಿ? ಇವೊತ್ತು ನಾನು ನಿನ್ನವಳು."

ಪಡುವಣ ಹೆಣ್ಣಿನ ಹಣೆಯ ಕುಂಕುಮ ಅಳಿಸಿತ್ತು, ದಿಟ. ಆದರೆ ಹಗಲು-ಇರುಳಿನ ಅಪ್ಪುಗೆಯಲ್ಲಿ ಇನ್ನೂ ರಾಗರಂಜಿತವಾಗಿ ಶೋಭಿಸುತ್ತಿತ್ತು.

ಇರುಳ ತೆರೆ ಮೆಲ್ಲನೆ‌ಮೆಲ್ಲನೆ ಇಳಿಯುತ್ತಿತ್ತು; ಎಲ್ಲವನ್ನೂ ಮರೆ ಮಾಡುತ್ತಿತ್ತು.

## ಪ್ರಕರಣ ಹತ್ತು

೧

ಬಸವಾಪಟ್ಟಣದ ವೈಲಾರಯ್ಯನವರಿಂದ ವೆಂಕಟಸುಬ್ಬಯ್ಯನವರಿಗೆ ಸಂತೋಷದ ಸಮಾಚಾರ ಬಂದಿತ್ತು; ವೆಂಕಟಸುಬ್ಬಯ್ಯನವರ ಸತತ ಪ್ರಯತ್ನದ ಫಲವಾಗಿತ್ತು ಅದು. ಸೀತೆಗೂ ಗೌರಮ್ಮನಿಗೂ ತಾವು ಕೊಡಲೊಪ್ಪಿರುವ ಜೀವನಾಂಶ ದ್ರವ್ಯವನ್ನು ತಾವು ಕೊಡಲು ಸಿದ್ಧರಾಗಿರುವುದಾಗಿಯೂ ಇಬ್ಬರು ಹೆಣ್ಣುಮಕ್ಕಳನ್ನೂ ಹಾಸನಕ್ಕೆ ಕರೆದುಕೊಂಡುಬಂದು ಪತ್ರ 'ರಿಜಿಸ್ಟರ್' ಮಾಡಿಸಿ, ರಿಜಿಸ್ಟ್ರಾರರ 'ರೂಬುರೂಬು' ಹಣ ಪಡೆಯಬೇಕೆಂದೂ ಹಣ ಪಡೆಯಲು ಸಾವಕಾಶಮಾಡಿ ತಮ್ಮಲ್ಲಿರುವ ಹಣ ವೆಚ್ಚವಾಗಿ ಹೋದರೆ ಅದಕ್ಕೆ ತಾವು 'ಜವಾಬುದಾರ'ರಲ್ಲವೆಂದೂ ವೈಲಾರಯ್ಯನವರು ಸ್ವಾಗತಾರ್ಹವಾದ 'ನೋಟೀಸು' ಕೊಟ್ಟುಬಿಟ್ಟಿದ್ದರು. ಎರಡನೆಯ ಯೋಚನೆಯನ್ನು ಮಾಡದೆ, ಮೈಸೂರಿಗೆ ಹೋಗಿ ಶಾಮಣ್ಣನವರನ್ನು ಕಂಡು ಮಾತನಾಡಿ ಸೀತೆಯನ್ನೂ ಗೌರಮ್ಮನನ್ನೂ ಹಾಸನಕ್ಕೆ ಕರೆದುಕೊಂಡು ಬಂದು ವ್ಯವಹಾರವನ್ನು 'ಫೈಸಲು' ಮಾಡಿಬಿಡಬೇಕೆಂದು ವೆಂಕಟಸುಬ್ಬಯ್ಯನವರು ನಿರ್ಧರಿಸಿದ್ದರು. ಆದ್ದರಿಂದ, 'ಮನೆಯ ಕಡೆ ಜೋಕೆ' ಎಂದು ರಾಮಸ್ವಾಮಿಗೆ ಹೇಳಿ ಊರು ಬಿಟ್ಟಿದ್ದರು. ಈಚೀಚೆಗೆ ರಾಮಸ್ವಾಮಿ ಸ್ವಲ್ಪ ದಾರಿಗೆ ಬರುತ್ತಿದ್ದನೆಂದು ನಂಬಿದ್ದರು; ಒಳಗೊಳಗೇ ಸಮಾಧಾನಗೊಂಡಿದ್ದರು. 'ರಾಮಸ್ವಾಮಿಗೆ ಹೇಳಿ ಹೋಗುವುದಕ್ಕಿಂತ ಮನೆಯ ಕಂಬಕ್ಕೆ ಹೇಳಿ ಹೋಗುವುದು ವಾಸಿ' ಎಂಬ ತಮ್ಮ ಮಾತನ್ನೇ ತಾವಿಂದು ಮರೆತಿದ್ದರು. ಮಗಳ ಹಣ ಕಡೆಗೆ ದೊರೆಯುವುದೆಂಬ ಸಂತೋಷಭಾವ ಬಹುಶಃ ಅದನ್ನು ಮರಸಿರಬೇಕು. ಅಂತೂ ವೆಂಕಟಸುಬ್ಬಯ್ಯನವರು ತರಾತುರಿಯಲ್ಲಿ ಮೈಸೂರಿಗೆ ಹೊರಟರು.

ಮೈಸೂರಿಗೆ ಬಂದ ವೆಂಕಟಸುಬ್ಬಯ್ಯನವರು ಶಾಮಣ್ಣನವರ ಮನೆಗೆ ಮೊದಲು ಬಂದರು. ಅಲ್ಲಿಗೂ ವೈಲಾರಯ್ಯನವರು ಕಾಗದ ಬರೆದದ್ದರಿಂದ, ಶಾಮಣ್ಣನವರಿಗೆ ಸಂದರ್ಭದ ವಿವರಣೆಯೇನೂ ಬೇಕಿರಲಿಲ್ಲ. ಶಾಮಣ್ಣನವರು

ಮೂರು ದಿನಗಳ ರಜ ಪಡೆದು, ಗೌರಿಯನ್ನೂ ಕರೆದುಕೊಂಡು, ವೆಂಕಟ ಸುಬ್ಬಯ್ಯನವರೊಂದಿಗೆ ಹಾಸನಕ್ಕೆ ಹೋಗುವುದೆಂದು ತೀರ್ಮಾನವಾಯಿತು.

ವೆಂಕಟಸುಬ್ಬಯ್ಯನವರು ಸೀತೆಯನ್ನು ಕರೆತರವುದಕ್ಕೆಂದು ರಾಮ ಕೃಷ್ಣಯ್ಯನವರ ಮನೆಗೆ ಹೋಗಿ, ಅಲ್ಲಿಯೂ ಒಂದು ದಿನವೊಪ್ಪತ್ತು ಇದ್ದ ಶಾಸ್ತ್ರಮಾಡಿದರು. ಸೀತೆಯನ್ನು ಕಳಿಸಿಕೊಡಲು ಲಕ್ಷ್ಮೀದೇವಮ್ಮನವರು ಮೊದಲು ಒಪ್ಪಲಿಲ್ಲ.

"ಸೀತೆ ಮನೆಯಲ್ಲಿ ಅಷ್ಟು ಚೆನ್ನಾಗಿ ಎಲ್ಲರೊಂದಿಗೆ ಹೊಂದಿಕೊಂಡಿದ್ದಾಳೆ. ನನಗೆ ನಮ್ಮ ಶಾರದೆ ಬೇರೆಯಲ್ಲ, ಅವಳು ಬೇರೆಯಲ್ಲ. ಕೃಷ್ಣ ಮೂರ್ತಿ ಅವಳಿಗೆ ಮನೆಯಲ್ಲೆ ಇಂಗ್ಲಿಷು ಕನ್ನಡ ಎಲ್ಲ ಚೆನ್ನಾಗಿ ಪಾಠಹೇಳಿ ಕೊಡುತ್ತಿದ್ದಾನೆ. ಅವನೂ ಅಕ್ಕ ತಂಗಿ ಕಾಣದ ತಬ್ಬಲಿ. ಸೀತೆಯನ್ನ ತಂಗಿಗಿಂತ ಹೆಚ್ಚಾಗಿ ಕಂಡುಕೊಂಡಿದಾನೆ. ಈ ಸಲ ಖಂಡಿತ ಕನ್ನಡ ಇಂಗ್ಲಿಷ್ ಲೋವರ್ ಸೆಕಂಡರಿ ಪ್ಯಾಸುಮಾಡಿಸಿಯೇ ಮಾಡಿಸುತೇನೆ ಎಂದು ಹಠತೊಟ್ಟಿದಾನೆ. ಮುಂದಿನ ತಿಂಗಳು ಪರೀಕ್ಷೆಗೆ ಕಟ್ಟಬೇಕು. ಈಗ ಯಾಕೆ ಕರೆದುಕೊಂಡು ಹೋಗುತ್ತೀರಿ? ಇಲ್ಲೇ ಬಿಟ್ಟಿರಿ, ಭಾವಯ್ಯ...." ಎಂದು ಲಕ್ಷ್ಮೀದೇವಮ್ಮನರರು ಹೇಳಿದ್ದನ್ನೆ ಮತ್ತೆ ಮತ್ತೆ ತಿರುಗಿಸಿ ಒತ್ತಿ ಹೇಳಿದರು.

"ನೀನು ಹೇಳುವುದು ಎಲ್ಲ ಸರಿ, ಲಕ್ಷ್ಮೀದೇವಮ್ಮ....ನೋಡಿದೆಯಾ, ಸಂದರ್ಭ ಹೀಗಿದೆ. ಕಾದ ಕಬ್ಬಿಣವನ್ನು ಹೊಡೆಯದೆ ಬಿಟ್ಟುಬಿಟ್ಟರೆ, ಕುಲುಮೆಯೇ ಆರಿಹೋದರೆ ಏನು ಮಾಡುವುದಮ್ಮ?" ಎಂದು ವೆಂಕಟಸುಬ್ಬಯ್ಯ ನವರು ಸಂದರ್ಭವನ್ನು ವಿವರಿಸಿದಮೇಲೆ, ಲಕ್ಷ್ಮೀದೇವಮ್ಮನವರು ಸೀತೆಯನ್ನು ಕಳಿಸಿಕೊಡಲು ಒಪ್ಪಿದರು.

"....ಇನ್ನೊಂದು ಎರಡು ದಿನ ಇದ್ದರೆ ಚೆನ್ನಾಗಿತ್ತು. ನಾಳೆಯಾದರೂ ಹೊರಡಬಾರದೆ? ಹೆಣ್ಣುಮಗು; ಹಣೆಗೆ ಕುಂಕುಮ ಇಲ್ಲ ಅಂತ ಕಡೆಗಣಿಸೋದೆ? ನಾಳೆ ಯಾರು ಯಾರಿಗೆ ಏನೇನು ಕಾದಿದೆಯೋ ಯಾರಿಗೆ ಗೊತ್ತು? ಒಂದು ಪಾಯಸ ಮಾಡಿದ ಶಾಸ್ತ್ರವೂ ಆಗಲಿಲ್ಲ...."

ಲಕ್ಷ್ಮೀದೇವಮ್ಮನವರ ಅಂತಃಕರಣದ ಮಾತು, ಸೀತೆಯ ಪ್ರಸ್ತಾಪ— ವೆಂಕಟಸುಬ್ಬಯ್ಯನವರ ಕಣ್ಣನ್ನು ತೇವಮಾಡಿದುವು. ಕಂಠದ ಗದ್ಗದವನ್ನು

ಸರಿಪಡಿಸಿಕೊಂಡು ಹೇಳಿದರು :

" ನಿನ್ನೆ ಉತ್ಥಾನ ದ್ವಾದಶಿಯ ಹಬ್ಬದೂಟ ಆಯಿತಲ್ಲಮ್ಮ, ಅದಕ್ಕಿಂತ ಇನ್ನೇನು."

" ಹೋಗಲಿ, ಅಲ್ಲಿಯ ಕೆಲಸ ಮುಗಿದಮೇಲೆ ಮತ್ತೆ ಕಳಿಸಿಕೊಡಿ, ಪರೀಕ್ಷೆಗೆ ಕಟ್ಟುವ ಹೊತ್ತಿಗಾದರೂ."

" ಆಗಲಿ ನೋಡೋಣ, ಅದಕ್ಕೇನು. ಸುಬ್ಬಸ್ವಾಮಿಗೆ ನೆಲೆಕಾಣಿಸಿದವರು ನೀವು. ಸೀತೆಗೂ ನೀವೇ ದಿಕ್ಕಾಗಬೇಕಾಗುತ್ತೋ ಏನೋ " ಎಂದರು ವೆಂಕಟಸುಬ್ಬಯ್ಯನವರು.

" ಅಂಥ ಮಾತು ಯಾಕೆ, ಭಾವಯ್ಯ ? ನೀವಿಲ್ಲವೆ ? ಅವಳಿಗೋಸ್ಕರ ಎಷ್ಟು ಒದ್ದಾಡುತ್ತಾ ಇಲ್ಲ. ಅವಳ ಹಣೆಯ ಬರಹ. ಎಷ್ಟು ದುಃಖಪಟ್ಟರೂ ತೀರದ್ದು...."

ಇಂಥ ದಿನ ಹಾಸನಕ್ಕೆ ಬರುತ್ತೇವೆಂದು ಬಸವಾಪಟ್ಟಣಕ್ಕೆ ಮುಂಚಿತವಾಗಿಯೇ ಕಾಗದ ಹಾಕಿ, ವೆಂಕಟಸುಬ್ಬಯ್ಯನವರೂ ಶಾಮಣ್ಣನವರೂ ತಮ್ಮ ಹೆಣ್ಣುಮಕ್ಕಳೊಂದಿಗೆ ಹಾಸನಕ್ಕೆ ಪ್ರಯಾಣಮಾಡಿದರು. ಉಭಯತ್ರರಿಗೂ ಬೇಕಾದವರಾದ ವಕೀಲರೊಬ್ಬರ ಮನೆಯಲ್ಲಿ ಮೈಲಾರಯ್ಯನವರು ತಮ್ಮ ಬೀಗರನ್ನು ಎದುರುಗೊಂಡರು. ವ್ಯವಹಾರವೆಲ್ಲ ' ಹೂವಿನ ಸರ ಎತ್ತಿದಷ್ಟು ಹಗುರ 'ವಾಗಿ ಮುಗಿಸಿಕೊಟ್ಟದ್ದಕ್ಕೆ ಮೈಲಾರಯ್ಯನವರು ಇಬ್ಬರಿಗೂ ಕೃತಜ್ಞತೆಯನ್ನು ಸಲ್ಲಿಸಿದರು. " ನನ್ನ ಇಬ್ಬರು ಮಕ್ಕಳ ಋಣ ಇಂದಿಗೆ ತೀರಿತು " ಎಂದವರು ಕಂಬನಿದುಂಬಿದರು. ಉಳಿದವರಿಗೂ ಬೇರೆಬೇರೆಯ ರೀತಿಯಲ್ಲಿ ದುಃಖವಾಗದೆ ಇರಲಿಲ್ಲ.

ವ್ಯವಹಾರವೆಲ್ಲ ಮುಗಿದಮೇಲೆ, ಶಾಮಣ್ಣನವರು ಮಗಳೊಂದಿಗೆ ಮೈಸೂರಿಗೆ ಹಿಂದಿರುಗುವಾಗ, " ಈಗಲಾದರೂ ನಮ್ಮೂರಿಗೆ ಬಂದು ಒಪ್ಪೊತ್ತು ಇದ್ದು ಹೋಗಬಾರದೆ ? " ಎಂದು ಅವರನ್ನು ವೆಂಕಟಸುಬ್ಬಯ್ಯನವರು ಬೇಡಿಕೊಂಡರು. ಅದಕ್ಕೆ ಶಾಮಣ್ಣನವರು, " ನೀವೇ ನೋಡಿದ್ದೀರಲ್ಲ ನಮ್ಮ ಮನೆಯ ಅಸಂಗತವನ್ನ ? ಜೊತೆಗೆ, ನೀವು ಕಂಡಹಾಗೆ ಮೂರು ದಿನ ರಜ ಪಡೆಯುವುದು ಎಷ್ಟು ದುಸ್ತರವಾಯಿತು ನೋಡಿ. ಸರ್ಕಾರದ ಗುಲಾಮಗಿರಿಗೆ ಸೇರುವುದಕ್ಕಿಂತ ಮುಟ್ಠಾಳ ಕೆಲಸ ಬೇರೆ ಇಲ್ಲ—" ಎಂದು ವೇಚಾಡಿ

ಕೊಂಡರು. “ ಅದು ದಿಟವೆ. ನಿಮ್ಮ ಅನುಕೂಲ. ನಾನು ಬಲಾತ್ಕಾರ ಮಾಡುವುದಿಲ್ಲ. ನಮ್ಮ ಸೀತೆ, ನಿಮ್ಮ ಗೌರಿ—ನಮ್ಮ ಊರಿನಲ್ಲಿ ಒಂದೆರಡು ದಿನ ಒಟ್ಟಿಗೆ ಇರಲಿ ಅನ್ನಿಸಿತ್ತು. ಅವರು ಒಬ್ಬರನ್ನೊಬ್ಬರು ನೋಡುವುದು ಇನ್ನೆಂದಿಗೋ. ನನಗೂ ಊರಿನ ಕಡೆಯದೇ ಚಿಂತೆಯಾಗಿದೆ. ಮನೆಯ ಭಾರವನ್ನೆಲ್ಲ ನಮ್ಮ ಅನಾಥ್ಯ ರಾಮಸ್ವಾಮಿಯ ಮೇಲೆ ಹಾಕಿ ಬಂದಿದ್ದೇನೆ. ಊರು ಬಿಟ್ಟು ಒಂದು ವಾರದ ಮೇಲಾಯ್ತು. ನಾನು ಹೋಗುವ ಹೊತ್ತಿಗೆ ಏನು ಅನಾಹುತವಾಗಿರುತ್ತೊ” ಎಂದು ವೆಂಕಟಸುಬ್ಬಯ್ಯನವರೂ ತಮ್ಮ ಪೇಚಾಟದ ಸರದಿಯನ್ನು ಮುಗಿಸಿದರು. ಓರಗಿತ್ತಿಯರು ನಿಜವಾದ ಅಗಲಿಕೆಯ ವೇದನೆಯನ್ನು ಅನುಭವಿಸುತ್ತಿದ್ದರು; ಕಣ್ಣ ನೋಟ ಇಬ್ಬರಿಗೂ ಹೃದಯದ ಬಾಗಿಲು ತೆರೆದಿದ್ದುವು; ಮೌನವಾಗಿಯೇ ಒಬ್ಬರನ್ನೊಬ್ಬರು ಬೀಳ್ಕೊಳ್ಳುತ್ತಿದ್ದಾಗ, ಸೀತೆ ತಡೆಯಲಾರದೆ—“ ಹೋಗಿ ಬರ್ತೀನೆ, ಗೌರಕ್ಕ ” ಎಂದಳು. “ ಒಳ್ಳೆಯದಮ್ಮ” ಎಂದಳು ಗೌರಿ.

ಶಾಮಣ್ಣನವರು ರೈಲು ಹಿಡಿದರು; ಬಸ್ಸಿಗೆ ಹೋಗಲು ವೆಂಕಟಸುಬ್ಬಯ್ಯನವರಿಗೆ ಇನ್ನೂ ಕಾಲಾವಕಾಶವಿತ್ತು. ವಕೀಲರೊಂದಿಗೆ ಮಾತನಾಡುತ್ತ ಕುಳಿತಿದ್ದರು.

ಮಾತುಕತೆಯಲ್ಲಿ, ಕೋಳಲೂರಿನ ಸುದ್ದಿ ಒಂದು ವೆಂಕಟಸುಬ್ಬಯ್ಯನವರಿಗೆ ಕಿವಿಗೆ ಬಿದ್ದು, ಎದೆ ಝುಗ್ಗೆನ್ನಿಸಿತು.

“....ಅದು ಯಾರೋ ನಿಮ್ಮೂರಿನ ತಿಮ್ಮನಂತೆ, ಅವನನ್ನ ಯಾರೋ ತುರುಕರವನು ಕೊಲೆ ಮಾಡಿಬಿಟ್ಟಿದಾನಂತಲ್ಲ....”

“ ಆ್ಞಾ, ಹಾಗೇ! ನಮ್ಮ ಕೋಳಲೂರೇನು ಸಾಮಾನ್ಯ ಅಲ್ಲ. ಆದರೂ, ಕೊಲೆ!....ನಾನು ಕಂಡ ಹಾಗೆ ಅಂಥಾದ್ದೇನೂ ನಡೆದಿರಲಿಲ್ಲ ನಮ್ಮೂರಿನಲ್ಲಿ!....”

“ ಮೊನ್ನೆ ನಿಮ್ಮೂರಿನ ಪೋಲೀಸು ಸಬ್ ಇನ್‌ಸ್ಪೆಕ್ಟರೆ ಬಂದಿದ್ರು. ಹೆಣ ನೇತಾಡ್ತಾ ಇತ್ತಂತೆ. ಕೊಲೆಮಾಡಿ ನೇತು ಹಾಕಿದಾರೆ ಅಂತ ಡಾಕ್ಟರ ಪರೀಕ್ಷೆಯಿಂದ ಗೊತ್ತಾಯಿತಂತೆ. ಇಲ್ಲಿಂದ ಡಿ.ಎಂ ಓ. ಹೋಗಿದ್ದರಲ್ಲಾ....”

ವಿಶೇಷ ಸುದ್ದಿಯ ವಿವರಗಳನ್ನು ಊರಿಗೆ ತಲಪಿದಾಗ ತಿಳಿಯುವ ಕುತೂಹಲದಿಂದಲೆ ವೆಂಕಟಸುಬ್ಬಯ್ಯನವರು ಮಗಳೊಂದಿಗೆ ಬಸ್ಸು ಹತ್ತಿದರು.

೨

ಊರಿನ ವರೆಗೂ ಹೋಗಬೇಕಾಗಿಯೇ ಇರಲಿಲ್ಲ. ಬಸ್ಸಿನಲ್ಲಿಯೇ ಇನ್ನು ಕೆಲವು ವಿವರಗಳು ತಿಳಿಯಬಂದವು. ಪ್ರಯಾಣಿಕರಲ್ಲಿ ಬಹು ಮಂದಿ ಕೊಳಲೂರಿನವರೆ; ಕೆಲವರು ವೆಂಕಟಸುಬ್ಬಯ್ಯನವರ ಪರಿಚಯಸ್ಥರೂ ಸಹ.

"....ಕೊಲೆ ಮಾಡ್ದೋರು ಯಾರೋ ಸರಿಯಾಗಿ ಗೊತ್ತಿಲ್ಲ. ಅಂತೂ, ಆ ತಿಮ್ಮನ ಹೆಂಡತಿ, ಕೂಡಿಕೊಂಡಿದ್ದೋಳು, ಅಗಸರ ರಾಮಿ, ಮಂಗಮಾಯ ವಾಗಿದಾಳೆ. ಅವೊತ್ತಿನಿಂದ ಊರಿನಲ್ಲಿ ಹುಸೇನಿ ಕರಿಯಣ್ಣ ಇಬ್ಬರೂ ಪತ್ತೆ ಇಲ್ಲ ..."—ಯಾರೋ ಹೇಳಿದರು.

"ಕರಿಯಣ್ಣನೇ! ಸಾಹುಕಾರ ರಾಮಪ್ಪನವರ ಮಗ!"—ವೆಂಕಟ ಸುಬ್ಬಯ್ಯನವರು ಉದ್ಗಾರ ತೆಗೆದರು.

"ಹ್ಞಾ, ಹ್ಞಾ, ಅವನೇ. ಹುಸೇನೀನೂ ಅವನೂ ತುಂಬ ಸ್ನೇಹಿತ ರಂತೆ...."

ವೆಂಕಟಸುಬ್ಬಯ್ಯನವರ ಹೊಟ್ಟೆಯಲ್ಲಿ ಏನೋ ತಳಮಳಕ್ಕೆ ಪ್ರಾರಂಭ ವಾಯಿತು.

"ಅವರಿಬ್ಬರೂ ಊರಿನಲ್ಲಿ ಇಲ್ಲ ಅಂತ ಪೋಲೀಸಿನವರಿಗೆ ಅವರ ಮೇಲೆ ಕಣ್ಣು."

"ಸರಿ ಸರಿ, ಈ ಪೋಲೀಸನೋರನ್ನ ಬಿಡಿ. ವೆಂಕಟಸುಬ್ಬಯ್ಯ ನೋರೂ ಊರಿನಲ್ಲಿ ಇಲ್ಲ ಅಂದುಕೊಳ್ಳುತ್ತಾ ಇದ್ದರು" ಎಂದು ಇನ್ನೊಬ್ಬರು ಹೇಳಿ, ನಕ್ಕರು.

"....ಕೊಲೆ ಮಾಡಿದೋರು ಯಾರು ಅಂತ ಇನ್ನೂ ಗೊತ್ತಾಗಿಲ್ಲ. ಆ ರಾಮಿ ರಂಡೇನೇ ಹೇಳಿ ಮಾಡಿಸಿದಾಳೆ ಅಂತ ಊರಿನೋರು ಹೇಳಿಕೊಳ್ಳುತ ಇದಾರೆ. ಅಂತೂ ಅವರನ್ನೆಲ್ಲಾ ಹಿಡಿಯೋಕೆ ಪೋಲೀಸನೋರು ತರದೂದು ಮಾಡುತಾ ಇದಾರೆ."

*  *  *  *

ತಮ್ಮ ಮನೆಯ ಬಾಗಿಲಿನಲ್ಲಿಯೇ ಪೋಲೀಸಿನವನೊಬ್ಬನು ನಿಂತಿದ್ದು ದನ್ನು ಕಂಡು ವೆಂಕಟಸುಬ್ಬಯ್ಯನವರಿಗೆ ಯಮದೂತನನ್ನು ಕಂಡಹಾಗಾ ಯಿತು; ಕರುಳು ಗಂಟಲಿಗೆ ಬಂದಂತಾಯಿತು. ತಳಮಳದ ಪೂರ್ವ ಸೂಚನೆ ಪ್ರಮಾಣಭೂತವೆನ್ನಿಸಿತು.

ತಂದೆ ಮಗಳು ಮನೆಯ ಹೊಸಲು ಮೆಟ್ಟುವುದಕ್ಕಿಲ್ಲ, ಪಾರ್ವತಮ್ಮ ನವರು ಎದೆ ಹೊಯ್ದುಕೊಳ್ಳುತ್ತ, ಹಣೆ ಚಚ್ಚಿಕೊಳ್ಳುತ್ತ, ಗೋಳಾಡತೊಡಗಿದರು :

"....ನಮ್ಮ ರಾಮುಸ್ವಾಮಿ ಕೊಲೆಗಡಿಕರ ಜೊತೆ ಸೇರಿದಾನಂತಲ್ಲ ಅಂದ್ರೆ ....ನಮ್ಮ ಹೊಟ್ಟೆ ಪುಣ್ಯ ಇನ್ನೇನು ಅಂತ ಹೇಳೋಣ.... ಈ ಪೊಲೀಸ್ನೋರು ನಾಲ್ಕು ದಿನದಿಂದ ನಮ್ಮ ಮನೇಗೆ ಕಾವಲು....ರಾಮುಸ್ವಾಮಿ ಬಂದ್ನೇ ಬಂದ್ನೇ ಅಂತ ಒಂದೇ ಸಮ ಪೀಡಿಸ್ತಾ ಇದಾರೆ....ಮೊನ್ನೆ ಮನೇ ಎಲ್ಲ ಹುಡುಕಿ ಬಿಟ್ಟರು, ಒಳಗೆಲ್ಲೋ ಅವಿತುಕೊಂಡಿರಬಹುದು ಅಂತ...."

ವೆಂಕಟಸುಬ್ಬಯ್ಯನವರ ಅಂತರಾಳದಲ್ಲಿ ದುಃಖವನ್ನು ಮೆಟ್ಟಿ ರೋಷ ಉಕ್ಕಿ ಉಕ್ಕಿ ಬರುತ್ತಿತ್ತು :

"....ಸಾಕು, ನಿಲ್ಸು ನಿನ್ನ ಪುರಾಣ. ಕೊಲೆಮಾಡಿದೋರ ಜೊತೆ ತಲೆ ತಪ್ಪಿಸಿಕೊಂಡಿದಾನೆ ಅಂತ ಹೇಳೋಕೆ ಯಾಕೆ ಸುಮ್ಮನೆ ಅಷ್ಟು ಪ್ರಯಾಸ ಪಡುತ್ತಿ....ಹೌದೋ ಅಲ್ಲವೋ, ಚೆಲುವಣ್ಣ ?" ಎಂದು ವೆಂಕಟಸುಬ್ಬಯ್ಯ ನವರು ಒಳಗೆ ಬಂದು ನಿಂತಿದ್ದ ಪೊಲೀಸಿನವನ ಮುಖ ನೋಡಿದರು.

ಚೆಲುವಣ್ಣ ಹೇಳಿದ ಉತ್ತರ ಬೇರೆ: "ಗಾಬರಿ ಬೀಳಬೇಡಿ, ಬುದ್ಧಿ. ನಿಮ್ಮ ಮಕ್ಕಳ್ಗೆ ಏನೂ ತೊಂದರೆಯಾಗೋದಿಲ್ಲ. ಕೆಲ್ಸ ಎಲ್ಲ ಆ ಹೊಲ ಮುಂಡೆ ರಾಮಿದು; ಮಾಡ್ದೋನು ಹುಸೇನ್‌ಸಾಬಿ. ಕರಿಯಣ್ಣೋರು, ರಾಮುಸ್ವಾಮುಪ್ನೋರು...."

"....ಅವರಿಗೆ ಸಾವಿಾಲು ತಾನೆ ?"

"ಛೆ ಛೇ ಛೇ ಛೆ....ಹಾಂಗಲ್ಲ. ಅವರು ಮೂವ್ರೋರೂ ಸ್ನೇಹಿತರು, ನೋಡಿ. ನಿಮಗೆ ಗೊತ್ತಿಲ್ಲ ಅಂತ ಕಾಣ್ತದೆ. ಬುಡಿ, ಆ ಇಚಾರ ಹೇಳಿ ನಿಮಗೆ ಯಾಕೆ ಬೇಸರ ಮಾಡ್ಲಿ. ಇವರಿಬ್ಬರ್ನ ಹಿಡಿದರೆ, ಅವರ ವಿಚಾರ ಏನಾರ ಗೊತ್ತಾಗ್ತದೇನೋ ಅಂತ ನಮ್ಮ ದೀಡು, ಅಷ್ಟೆ."

"ಹಿಡಕೊಂಡು ಹೋಗಿ, ಬೇಡ ಅಂದೋರು ಯಾರು. ಗಲ್ಲಿಗೆ ಹಾಕಿ, ಸರಿಯೇ. ಅವನು ನನ್ನ ಮಗ ಅಲ್ಲ, ತಿಳೀತೇ. ಇನ್ನು ನಮ್ಮ ಮನೇ ಬಾಗಿಲಿನಲ್ಲಿ ನಿಂತುಕೋಬೇಡಿ, ಗೊತ್ತಾಯಿತೇ...."

"ಕೋಪ ಮಾಡ್ಕೋಬ್ಯಾಡೀ, ಬುದ್ಧಿ. ನಮ್ಮ 'ಡ್ಯೂಟಿ' ನಾವು

ಮಾಡ್ಬೇಕೋ ಇಲ್ಲವೋ ?...."

"ನಮ್ಮ ಮನೇ ಒಳಗೇನಿಲ್ಲವಲ್ಲ ಇನ್ನ ನಿಮ್ಮ ಡ್ಯೂಟಿ? ನಾನೂ ಪೋಲೀಸು, ಕಾನೂನು, ಕೋರ್ಟು, ಕಚೇರಿ ಎಲ್ಲ ಕಂಡೋನು...."

"ನಂಗೆ ತಿಳೀದೇ, ಬುದ್ಧಿ. ನೀವು ಈಗ ಬರ್‍ತೀರಿ ಅಂತ ಊಹಿಸ್ದೆ. ನಾಳೆ ಸಬ್‌ಇನ್‌ಸ್ಪೆಕ್ಟ್ರು ಸಾಹೇಬ್ರು ನಿಮ್ಮನ್ನ ಕಾಣೋಕೆ ಬರ್‍ತಾರೆ ಹೊತ್ತಾರೆ. ಅಷ್ಟು ತಿಳಿಸಿದರೆ, ಇನ್ನು ನನ್ನ ಡ್ಯೂಟಿ ತೀರಿತು...."

ಚೆಲುವಣ್ಣ ನಮಸ್ಕಾರ ಮಾಡಿ ಹೊರಹೊರಟ.

ಕಂಬದ ಜೊತೆಗೆ ಕಂಬದಂತೆ ನಿಂತಿದ್ದ ಸುಬ್ಬಾಭಟ್ಟನನ್ನು ವೆಂಕಟ ಸುಬ್ಬಯ್ಯನವರು ಈಗ ಗಮನಿಸಿದರು. 'ನೀನು ಯಾಕೆ ಇಲ್ಲಿ?' ಎಂದು ಕೇಳುವಂತೆ ಅವನ ಕಡೆ ತಿರುಗಿದರು. ಆಗ ಪಾರ್ವತಮ್ಮನವರು ಹೇಳಿದರು:

"ಪಾಪ, ಈಗ ಮೂರು ನಾಲ್ಕು ದಿನದಿಂದ ಸುಬ್ಬಪ್ಪ ರಾತ್ರಿ ಹೊತ್ತು ಮನೆಯಲ್ಲಿ ಮಲಗಿಕೊಳ್ತಾ ಇದಾನೆ. ಒಂದು ರಾತ್ರಿ ಯಾರೂ ಇಲ್ಲದೆ ಎಚ್ಚರವಾಗೇ ಇದ್ದೆ, ನಿದ್ದೇನೆ ಬರದೆ. ಶಿವರಾಮುಭಟ್ಟರ ಕೈಕಾಲು ಕಟ್ಟಿಕೊಂಡೆ. ಸುಬ್ಬಪ್ಪನೂ ದೊಡ್ಡ ಮನಸ್ಸುಮಾಡಿ ಬರ್‍ತಾ ಇದಾನೆ...."

ವೆಂಕಟಸುಬ್ಬಯ್ಯನವರ ಹುಬ್ಬುಗಂಟು ಸಡಿಲವಾಯಿತು: "ಸಮಯ ಕ್ಕಾದವನೇ ನಂಟ, ಸುಬ್ಬಪ್ಪ. ಹೀಗೇ ಸಮಯ ಬಿದ್ದಾಗ ಉಪಕಾರ ಮಾಡುತ್ತಾ ಇರಪ್ಪ."

ಸುಬ್ಬಾಭಟ್ಟನ ದೃಷ್ಟಿ ಸೀತೆಯ ಕಡೆಗಿತ್ತು; ಅರ್ಥಗರ್ಭಿತವಾದ ಮುಗುಳುನಗೆ ಅವಳನ್ನು ಮಾತ್ರ ಕೆಣಕುತ್ತಿತ್ತು.

ಸೀತೆಯಿಂದಾಗಿ ಐನೂರು ರೂಪಾಯಿ ದೊರೆತ ಸುದ್ದಿಯನ್ನು ಹೆಂಡತಿಗೆ ತಿಳಿಸುವುದರಲ್ಲಿ ವೆಂಕಟಸುಬ್ಬಯ್ಯನವರಿಗೆ ಯಾವ ಸಂತೋಷವೂ ಇರಲಿಲ್ಲ.

೩

ವೆಂಕಟಸುಬ್ಬಯ್ಯನವರಿಗೆ ಸುಬ್ಬಾಭಟ್ಟನಿಂದ ಕೊಲೆಯ ಪ್ರಕರಣ ವಿವರ ಗಳೆಲ್ಲ ಸಾಂಗೋಪಾಂಗವಾಗಿ ತಿಳಿಯಿತು. ಮಾರನೆಯ ಬೆಳಗ್ಗೆ ಸಬ್ ಇನ್ಸ್ಪೆಕ್ಟರ ಪ್ರಶ್ನೆಗಳನ್ನು ಧೈರ್ಯದಿಂದ ಎದುರಿಸಿದರು. ಕೊಲೆ ನಡೆದ ದಿನ ದಿಂದ ರಾಮಸ್ವಾಮಿ ಊರಿನಲ್ಲಿ ಇಲ್ಲದಿರುವುದು ಕಾಕತಾಳೀಯವೆಂದು ವಾದಿಸಿ

ದರು. "ಹಾಗಾದರೆ ಎಲ್ಲಿಗೆ ಹೋಗಿದಾನೆ? ನೀವು ಊರಿನಲ್ಲಿ ಇಲ್ಲದೆ ಹೋದರೆ, ತನ್ನ ತಾಯಿಗಾದರೂ ತಿಳಿಸಿ ಹೋಗಬೇಕಾಗಿತ್ತಲ್ಲ?" ಎಂದು ಸಬ್ ಇನ್‌ಸ್ಪೆಕ್ಟರ ಒಂದೇ ಪ್ರಶ್ನೆ.

"ಅವನ ಸ್ವಭಾವನೇ ಹಾಗೆ."

"ಅಂಥವನ ಮೇಲೆ ಗುಮಾನಿ ಇರುವುದು ಸ್ವಾಭಾವಿಕವೇ ತಾನೇ?"

ಏನು ಮಾಡಿದರೂ ಸಬ್ ಇನ್‌ಸ್ಪೆಕ್ಟರನ್ನು ಸಮಾಧಾನಪಡಿಸುವುದಾಗ ಲಿಲ್ಲ. ಅವರ ಪ್ರಶ್ನೆ, ವಿಚಾರಣೆ ಎಲ್ಲ ನ್ಯಾಯವಾಗಿಯೇ ಕಾಣುತ್ತಿದ್ದುವು. ಅವರ ಭೇಟಿ ನಿತ್ಯ ಇದ್ದೇ ಇದ್ದಿತು.

ಸಮುದಾಯಿಕರಾದ ರಾಮಪ್ಪನವರನ್ನು ಕಂಡುಬರಲು ವೆಂಕಟಸುಬ್ಬಯ್ಯ ನವರು ಒಂದು ದಿನ ಹೋದರು.

"....ನೋಡಿ ವೆಂಕಟಸುಬ್ಬಯ್ಯನೋರೆ, ಪೋಲೀಸಿನೋರೆ ಹೇಳ್ತಾರೆ, ಬಹುಶಃ ಇದು ನಮ್ಮ ನಿಮ್ಮ ಮಕ್ಕಳ ಕೆಲಸ ಅಲ್ಲ, ಆ ತುರುಕನದೇ ಅಂತ. ನಮ್ಮನ್ನ ಸುಮ್ಮನೇ ಸತಾಯಿಸ್ತಾ ಇದಾರೆ. ನಾನು ಅವನನ್ನ ಸರಿಮಾಡಿ ಕೊಳ್ಳೋಣ ಅಂತ ಯೋಚನೆ ಮಾಡುತಾ ಇದೀನಿ...."

"ಅಂದ್ರೆ...." ವೆಂಕಟಸುಬ್ಬಯ್ಯನವರು ಸಂದೇಹ ವ್ಯಕ್ತಪಡಿಸಿದರು.

"ಒಂದು ಇನ್ನೂರೋ ಮುನ್ನೂರೋ ನಾನ್ನೂರೋ ಖರ್ಚುಮಾಡ ಬೇಕು....ಪರಿವಾರದೇವತೆಗಳನ್ನ ಒಲಿಸಿಕೊಳ್ಳಬೇಕು...."

ವೆಂಕಟಸುಬ್ಬಯ್ಯನವರು ಹೆಂಡತಿಯೊಂದಿಗೆ ತುಂಬ ಆಲೋಚನೆ ಮಾಡಿದರು. ಕೊಲೆಗೆಲಸಕ್ಕೆ ಸಹಾಯಕನಾಗುವ ಮಟ್ಟಿಗೆ ಪ್ರವರ್ತಿಸಲಾರ ತಮ್ಮ ಮಗ ಎಂದು ಅವರಿಗೆ ಅನ್ನಿಸುತ್ತಿತ್ತು. ಈಗಾಗಲೇ ಸಾಕಷ್ಟು ಕಳಂಕ ತಟ್ಟಿದೆ. ಇನ್ನು ಕೋರ್ಟು ಕಚೇರಿ, ವಿಚಾರಣೆ—ತಮ್ಮ ಹೆಸರೂ ಹೊರಕ್ಕೆ ಬರುತ್ತದೆ. ಸಹಜವಾಗಿಯೂ ತಪ್ಪಿತಸ್ಥನಲ್ಲದ ಮಗನನ್ನು ಕಾಪಾಡಿಕೊಳ್ಳ ಬೇಕಾದದ್ದೂ ತಮ್ಮ ಧರ್ಮವೇ ಅಲ್ಲವೇ? ಮೂರು ನಾಲ್ಕು ದಿನ ಸಾಗಿತು ರಹಸ್ಯಾಲೋಚನೆ.

ಯತ್ನವಿಲ್ಲದೆ ಅವರು ಮಗಳ ಮುಂದೆ ಬಾಯಿಬಿಡಬೇಕಾಯಿತು:

"ಸೀತಾ...."

"ಏನಪ್ಪ?"

"ರಾಮಪ್ಪನವರನ್ನ ಕೇಳಿದೆ, ಸಾಧ್ಯವಿಲ್ಲ ಎಂದರು. ಸುಬ್ಬಯ್ಯಶೆಟ್ಟರು ಸಾಯುವ ಸ್ಥಿತಿಯಲ್ಲಿದಾರೆ. ಅವರನ್ನ ಕೇಳೋಹಾಗೇ ಇಲ್ಲ. ನಿನ್ನ ಹಣದಲ್ಲಿ ಒಂದು ಮುನ್ನೂರನ್ನ ಬಳಸಿಕೊಂಡಿರುತ್ತೀನಮ್ಮ, ನೀನು ಒಪ್ಪಿದರೆ...." ಎಂದು ಸಂದರ್ಭವನ್ನು ವಿವರಿಸಿದರು.

"ಅಪ್ಪಾ, ಆ ಐನೂರು ನನ್ನದಲ್ಲ, ನಿನ್ನದು; ಸಂಸಾರಕ್ಕೆ ಸೇರಿದ್ದು. ರಾಮಸ್ವಾಮಿಯ ಪ್ರಾಣ–ಮಾನ ಉಳಿಯುವುದಾದರೆ ಅಷ್ಟನ್ನೂ ತೆಗೆದುಕೊ, ಅಪ್ಪ....ಆ ಐನೂರು ಇಲ್ಲದೆ ಇದ್ದರೆ ನೀವು ನನ್ನ ಕತ್ತು ಹಿಡಿದು ಹೊರಕ್ಕೆ ದೂಡುತ್ತಿದ್ದಿರಾ ?...."

ವೆಂಕಟಸುಬ್ಬಯ್ಯನವರು ಮಗಳನ್ನು ತಬ್ಬಿಕೊಂಡು ಬಿಕ್ಕಿಬಿಕ್ಕಿ ಅತ್ತರು.

ಮಾರನೆಯ ದಿನ, ಸೀತೆಯ ಮುನ್ನೂರು ರೂಪಾಯಿ ರಾಮಪ್ಪನವರ ಅಂಗಡಿಗೆ ಹೋಯಿತು; 'ಅದನ್ನು ಹೇಗೆ ವಿಲೆ ಮಾಡಬೇಕೋ ಹಾಗೆ ಮಾಡಿದೆ' ಎಂದು ರಾಮಪ್ಪನವರು ವೆಂಕಟಸುಬ್ಬಯ್ಯನವರಿಗೆ ಸುದ್ದಿ ಮುಟ್ಟಿಸಿದರು.

ಈಗ ಪೊಲೀಸಿನವರು ವೆಂಕಟಸುಬ್ಬಯ್ಯನವರ ಮನೆಯ ಮುಂದೆ ತಿರುಗಾಡುವುದು ಕಡಮೆಯಾಯಿತು. ಅವರು ಸ್ವಲ್ಪ ಧೈರ್ಯವಾಗಿ ತಲೆಯೆತ್ತಿಕೊಂಡು ಬೀದಿಯಲ್ಲಿ ಓಡಾಡುವಂತಾಯಿತು.

ಮೈಸೂರಿನಿಂದ ಹಿಂದಿರುಗಿದಮೇಲೆ ಸೀತೆ ಒಬ್ಬಳೇ ಅವರಿವರ ಮನೆಗೆ ಹೋಗಿಬರುವುದಕ್ಕೆ ತೊಡಗಿದ್ದಳು. "ಅಕ್ಕನ ಮನೆಗೆ ಹೋಗಿಬಂದಮೇಲೆ ಸೀತೆ ಬೆಳೆದುಬಿಟ್ಟಿದಾಳೆ. ಮೈಕೈ ತುಂಬಿಕೊಂಡಿದಾಳೆ. ತುಂಬ ಬದಲಾಯಿಸಿಯೂ ಬಿಟ್ಟಿದಾಳೆ. ಎಷ್ಟಾಗಲಿ, ಈಗ ಓದಿದವಳು" ಎಂದು ಅವರಿವರು ಅವಳನ್ನು ಕುರಿತು ಮಾತಾಡಿಕೊಂಡಿದ್ದರು.

ಈ ನಡುವೆ, ಪೊಲೀಸಿನವರು ಕೊಡಗಿನ ಗಡಿಯ ಬಳಿ ಒಂದು ಹಳ್ಳಿಯ ಕಾಫಿಯ ತೋಟದಲ್ಲಿ ಹುಸೇನಿಯೂ ರಾಮಿಯೂ ಅಡಗಿಕೊಂಡಿರುವರೆಂಬ ವರ್ತಮಾನವನ್ನು ಕೇಳಿ, ಅವರನ್ನು ಹಿಡಿದು ತಂದರು. ತಿಮ್ಮಯ್ಯನನ್ನು ಕೊಲೆಮಾಡಿದವನು ತಾನೇ ಎಂದು ಹುಸೇನಿ ಒಪ್ಪಿಕೊಂಡುಬಿಟ್ಟನು; ರಾಮಿ ಕೊಲೆಗೆ ಪ್ರೇರೇಪಣೆ ಮಾಡಿದಳೆಂದು ಹೊರಪಟ್ಟಿತು. ಈ ಕೊಲೆಯ ಪ್ರಕರಣಕ್ಕೂ ಕರಿಯಣ್ಣ ಮತ್ತು ರಾಮಸ್ವಾಮಿಗೂ ಯಾವ ಸಂಬಂಧವೂ ಇಲ್ಲ

ವೆಂದೂ, ಅವರು ಕೇವಲ ಭೀತಿಯಿಂದ ತಲೆಮರಸಿಕೊಂಡಿರುವರೆಂದೂ ವಿಚಾರಣೆ ಯಿಂದ ಸ್ಪಷ್ಟವಾಯಿತು. ಆದರೂ 'ಪ್ರಾಸಿಕ್ಯೂಷನ್' ಸಾಕ್ಷ್ಯಕ್ಕೆ ಅವರು ಬೇಕಾಗಿದ್ದುದರಿಂದ ಪೋಲೀಸರು ಅವರ ಪತ್ತೆಹಚ್ಚುವುದರಲ್ಲಿ ನಿರತರಾಗಿಯೇ ಇದ್ದರು.

ರಾಮಸ್ವಾಮಿ ನಿರ್ದೋಷಿಯೆಂದು ಊರಿನಲ್ಲಿ ಬಹುಮಟ್ಟಿಗೆ ಪ್ರಚಾರ ಗೊಂಡಾಗ, ಒಂದು ದಿನ ಪಾರ್ವತಮ್ಮನವರು ಗಂಡನಿಗೆ ಹೇಳಿದರು :

"....ಆದದ್ದು ಆಗಿಹೋಯಿತು. ವಿಷಯ ಹೀಗಿದೆ ಅಂತ ತಿಳಿದರೆ ಅವನು ಊರಿಗೆ ಬಂದರೂ ಬಂದಾನು ಎಲ್ಲಿಗೆ ಹೋಗಿರುತಾನೆ ಹೇಳಿ? ಸಕಲೇಶಪುರಕ್ಕೋ ಹಾಸನಕ್ಕೋ ಹೊಳೆನರಸೀಪುರಕ್ಕೋ ಮೈಸೂರಿಗೋ ಹೋಗಿ, ತಿಳಿದವರ ಮನೆಯಲ್ಲಿ ಅಡಗಿಕೊಂಡಿರುತ್ತಾನೆ. ನೀವು ಸ್ವಲ್ಪ ನೋಡಿ ಕರೆದುಕೊಂಡು ಬರಬಾರದೆ?"

ವೆಂಕಟಸುಬ್ಬಯ್ಯನವರಿಗೂ ಇದು ತಾವು ಮಾಡಬೇಕಾದ ಕರ್ತವ್ಯ ಎನ್ನಿಸಿತು. ಉಳಿದಿದ್ದ ಸೀತೆಯ ಹಣದಲ್ಲಿ ಐವತ್ತನ್ನು ಪ್ರಯಾಣದ ಖರ್ಚಿ ಗೆಂದು ತೆಗೆದುಕೊಂಡು ಮಗನನ್ನು ಹುಡುಕಿಕೊಂಡು ಹೊರಟರು. ಅವರು ಊರಿನಲ್ಲಿ ಇಲ್ಲದ ವೇಳೆಯಲ್ಲಿ ರಾತ್ರಿ ಜೊತೆಗೆ ಯಾರು ಎಂಬ ಪ್ರಶ್ನೆ ಎದ್ದಾಗ, "ಈಗಲೂ ಸುಬ್ಬಾಭಟ್ಟನನ್ನೇ ಕೇಳುವುದು" ಎಂದು ಪಾರ್ವತಮ್ಮನವರೇ ಹೇಳಿದರು. "ಆಗಬಹುದು" ಎಂದು ವೆಂಕಟಸುಬ್ಬಯ್ಯನವರು ಒಪ್ಪಿ, ಹೊರಟರು.

೪

ಪಾರ್ವತಮ್ಮನವರು ಶಿವರಾಮಭಟ್ಟರ ಹೆಂಡತಿಗೆ ಹೇಳಿ, ತಮ್ಮ ಯಜ ಮಾನರು ಊರಿನಲ್ಲಿಲ್ಲದಿರುವಾಗ ರಾತ್ರಿಯ ಹೊತ್ತು ಗಂಡುದಿಕ್ಕಾಗಿ ಮಲಗಲು ಈಗಲೂ ಸುಬ್ಬಾಭಟ್ಟನನ್ನು ಒಪ್ಪಿಸಿಕೊಂಡರು. ಸಂದರ್ಭವನ್ನು ವಿವರಿಸಿ ಹೇಳಿದಾಗ, ಸುಬ್ಬಾಭಟ್ಟನಲ್ಲಿ ಸುಪ್ತವಾಗಿದ್ದ ಆಳಿಯಾಸೆ ಮರುಕೊಳಿಸಿತು. ತಾನಾಗಿ ದೊರೆತ ಅನುಕೂಲ ಸನ್ನಿವೇಶಕ್ಕೆ ಅವನು ಒಳಗೊಳಗೇ ಹಿಗ್ಗಿದ ನಾದರೂ, ಯಾವಯಾವುದೋ ನೆಪವನ್ನು ಮುಂದೊಡ್ಡಿ ಒಲ್ಲೆ ಎನ್ನುವಂತೆ ನಟಿಸಿದನು. ತುಂಬ ಬಲಾತ್ಕಾರ ಮಾಡಿದಮೇಲೆ, ಕಡೆಗೆ ಒಪ್ಪಿಕೊಂಡಂತೆ ಒಪ್ಪಿಕೊಂಡನು.

ಮೊದಲ ದಿನ ಸಂಜೆಯೇ, ಸುಬ್ಬಾಭಟ್ಟ ಮತ್ತೆ ತನ್ನ ಹಾಸುವ ಹೊದೆಯುವ ಕಂಬಳಿಗಳನ್ನೂ ದಿಂಬನ್ನೂ ವೆಂಕಟಸುಬ್ಬಯ್ಯನವರ ಮನೆಯಲ್ಲಿ ತಂದಿಟ್ಟನು. ಎಲ್ಲವನ್ನೂ ಬಲ್ಲ ಸೀತೆ ಅವನು ಹಾಸುಗೆ ತಂದಿಟ್ಟಾಗ ಮನದಲ್ಲಿ ಅಳುಕಿದಳು.

ಅವಳ ಅಳುಕು ಪೊಳ್ಳಾಗಲಿಲ್ಲ.

ಸುಬ್ಬಾಭಟ್ಟನ ಕಾವಲಿನಲ್ಲಿ ಮೊದಲ ರಾತ್ರಿ ಸುರಕ್ಷಿತವಾಗಿಯೇ ಕಳೆಯಿತು. ಮಾರನೆಯ ಬೆಳಗ್ಗೆ ಅವನು ಎದ್ದು, ಹಾಸುಗೆಯನ್ನು ಸುತ್ತಿಟ್ಟು, ಇನ್ನೇನು ಹೊರಡುವುದರಲ್ಲಿದ್ದಾಗ ಪಾರ್ವತಮ್ಮನವರು, "ಇಲ್ಲೇ ಮಡಿ ಉಟ್ಟುಕೊಂಡು ಸಂಧ್ಯಾವಂದನೆ ಮಾಡಿಬಿಡು, ಸುಬ್ಬು. ಕಾಫಿ ಕುಡಿದುಕೊಂಡು ಹೋಗುವೆಯಂತೆ" ಎಂದರು. ಶಿವರಾಮಭಟ್ಟರ ಮನೆಯಲ್ಲೇನೋ ಕಾಫಿ ಕುಡಿಯುವ ಅಭ್ಯಾಸವಿಲ್ಲ. ಆದರೆ ಇತರ ಕಡೆ ಕುಡಿದು ಕಾಫಿಯ ರುಚಿಯನ್ನು ಬಲ್ಲ ಸುಬ್ಬಾಭಟ್ಟ ಪಾರ್ವತಮ್ಮನವರ ಮಾತಿಗೆ ಒಪ್ಪಿಕೊಂಡುಬಿಟ್ಟ.

ಸುಬ್ಬಾಭಟ್ಟ ಅಡುಗೆಯ ಮನೆಯಲ್ಲೇ ಕುಳಿತು ಸಂಧ್ಯಾವಂದನೆ ಮಾಡಿದ. ಅಲ್ಲಿಯೇ ಕಾಫಿಯ ವಿನಿಯೋಗವೂ ಆಯಿತು. ಅವನು ಕಾಫಿ ಕುಡಿಯುತ್ತಿದ್ದಾಗ ಅವರೆಂದರು: "ನೀನು ಹಣೆಗೆ ವಿಭೂತಿ ಇಟ್ಟುಕೊಂಡು ಸಂಧ್ಯಾವಂದನೆ ಮಾಡುತ ಇರುವುದನ್ನು ನೋಡಿದರೆ ಅದೆಷ್ಟು ಸಂತೋಷವಾಗುತ್ತಪ್ಪ. ಅವರೇನೋ ಒಂದು ಮೂರು ಆಚಮನ ಮಾಡುತ್ತಾರೆ. ನಮ್ಮ ಸುಬ್ಬಸ್ವಾಮಿಯಂತೂ ಕಣ್ಣೆದುರಿಗಿಲ್ಲವೋ? ಏನು ಮಾಡುತ್ತಾನೋ ಏನು ಬಿಡುತ್ತಾನೋ ಕಂಡಿರುವವರು ಯಾರು? ನಮ್ಮ ರಾಮಸ್ವಾಮಿ ಕಥೆ ಊರಿಗೇ ಗೊತ್ತು" ಎಂದು ತೇವಗೊಂಡ ಕಣ್ಣನ್ನು ಸೆರಗಿನ ಕೊನೆಯಿಂದ ಒರಸಿಕೊಂಡು, ತುಸು ಹೊತ್ತು ಮೌನವಾಗಿದ್ದು, ಮುಂದುವರಿಸಿದರು: "....ನನ್ನ ಪುಣ್ಯ ನೋಡಪ್ಪ, ಮೂರು ಮಾರಾಚೆ ಹೊಳೆ ಇಟ್ಟುಕೊಂಡು, ನಿತ್ಯ ಹೊಳೆಯ ಸ್ನಾನ ಮಾಡುವ ಪುಣ್ಯ ಇಲ್ಲ. ಹೊಳೆಗೆ ಹೋಗಬೇಕಾದರೆ ಅವರು ಮನೆಯಲ್ಲಿ ಇರಬೇಕು; ಇಲ್ಲ, ರಾಮಸ್ವಾಮಿಯ ಕೈಕಾಲು ಕಟ್ಟಿಕೊಳ್ಳಬೇಕು. ರಾಮಸ್ವಾಮಿಯ ಅವಾಂತರದಲ್ಲಿ ಈ ಸಲ ಮಾಘಮಾಸದಲ್ಲಿ ಕೂಡ ಹೊಳೆಗೆ ಹೋಗಲಿಲ್ಲ. ನೀನು ದೊಡ್ಡ ಮನಸ್ಸುಮಾಡಿ, ನಾಳೆ ಬೆಳಗ್ಗೆ ಸ್ವಲ್ಪ ಮನೆಯಲ್ಲೇ ಇದ್ದರೆ, ಬೇಗ ಹೊಳೆಗೆ ಹೋಗಿ ಬಂದುಬಿಡುತ್ತೇನೆ. ಏನಪ್ಪಾ, ಇಷ್ಟು ಉಪಕಾರ ಮಾಡ

ಒಲ್ಲೆಯಾ ?" ಎಂದು ಗೋಗರೆಯುವ ದನಿಯಲ್ಲಿ ಬೇಡಿಕೊಂಡರು. "ಅದಕ್ಕೇನು, ವೆಂಕಟಸುಬ್ಬಯ್ಯನೋರು ಬರುವವರೆಗೆ ನಿಶ್ಯ ಬೇಕಾದರೂ ಹೋಗಿ ಬನ್ನಿ" ಎಂದು ಸುಪ್ರಸನ್ನನಾಗಿ ನುಡಿದ ಸುಬ್ಬಾಭಟ್ಟ. "ಏನೂ ತಿಳಿದುಕೊಳ್ಳ ಬೇಡವಪ್ಪ. ಮನೆಗೆಲ್ಲಾ ಸೀತೆಯೊಬ್ಬಳನ್ನೇ ಬಿಟ್ಟುಹೋಗಲು ಅದೇನೋ ಅಂಜಿಕೆ. ಅದಕ್ಕೋಸ್ಕರ ಕೇಳಿದೆ" ಎಂದು ಅವರು ಕ್ಷಮೆ ಬೇಡುವ ರೀತಿ ನುಡಿದರು. ಪುಟ್ಟಣ್ಣಯ್ಯನ ಪ್ರಕರಣದಲ್ಲಿ, ಸುಬ್ಬಾಭಟ್ಟ ಸೀತೆಯ ಮಾನವನ್ನು ಸಂರಕ್ಷಿಸಲು ಪ್ರಯತ್ನಪಟ್ಟಿದ್ದನೆಂದು ಕೇಳಿದ್ದ ಅವರು ಅವನಲ್ಲಿ ಈಗ ಇಮ್ಮಡಿಯ ನಂಬುಗೆಯನ್ನಿಡಲು ಸಿದ್ಧವಾಗಿದ್ದರು. ಹಿಡಿದ ಹಗ್ಗ ಹಾವಾಗುವುದೆಂದು, ಕಾಲೂರಿದ ಗಟ್ಟಿ ನೆಲ ಕುಸಿಯುವುದೆಂದು, ಅವರು ಮುಂಗಾಣಬೇಕು ಹೇಗೆ ?

ಈ ಮಾತುಕತೆ ನಡೆದಾಗ ಸೀತೆ ಮನೆಯ ಸುತ್ತುಗೆಲಸದಲ್ಲಿ ನಿರತಳಾಗಿದ್ದಳು. ಇಬ್ಬರೂ ಏನೋ ಮಾತಾಡಿಕೊಳ್ಳುತ್ತಿದ್ದಾರೆ ಎನ್ನುವುದು ಗಮನಕ್ಕೆ ಬಂತೇ ಹೊರತು ವಿಷಯವೇನೆಂದು ಗೊತ್ತಾಗಲಿಲ್ಲ.

ಮಾರನೆಯ ದಿನ, ಸೀತೆಗೆ ಹೇಳಿ ಪಾರ್ವತಮ್ಮನವರು ಹೊಳೆಗೆ ಹೋದೊಡನೆಯೇ, ಸುಬ್ಬಾಭಟ್ಟ ಮುಂಬಾಗಿಲು ಚಿಲಕ ಹಾಕಿಕೊಂಡು ಹಿತ್ತಿಲ ಕಡೆ ಉಪಕರಣೆ ತೊಳೆಯುತ್ತಿದ್ದ ಸೀತೆಯ ಪಕ್ಕದಲ್ಲಿ ಬಂದು ನಿಂತ.

"ಸೀತೇ...." ಎಂದು ಕಾತುರಪೂರ್ಣನಾಗಿದ್ದರೂ ಮೆಲುದನಿಯಲ್ಲೇ ಸಂಬೋಧಿಸಿದ.

ಸೀತೆ ಕತ್ತು ತಿರುಗಿಸಲಿಲ್ಲ; ಪಾತ್ರೆಗಳನ್ನು ಬೆಳಗುತ್ತಲೇ ಇದ್ದಳು. ಯಾರು, ಏಕೆ, ಏನು—ಎಲ್ಲ ಅವಳಿಗೆ ಮಿಂಚಿ ಮನದಟ್ಟಾಯಿತು. ಏನು ಆಡುವುದಕ್ಕೂ ತೋರದೆ ಮೌನವಾಗಿದ್ದಳು.

"ಸೀತೇ...."—ಅದೇ ದನಿಯಲ್ಲಿ, ಅದೇ ನುಡಿ : ಒತ್ತಾಯದ ಅರ್ಥಪೂರ್ಣ ಬೇಡಿಕೆ.

ಸೀತೆ ಬಾಯಿಬಿಡಲಿಲ್ಲ : ಕೋಪ, ದುಃಖ ಒತ್ತರಿಸಿ ಬರುತ್ತಿದ್ದುವು.

ಸುಬ್ಬಾಭಟ್ಟ ತಾನೂ ಅವಳ ಎದುರಿಗೆ ಕುಳಿತುಬಿಟ್ಟ. ಅವಳ ಮುಖ ಕೆಂಪೇರಿ, ತುಟಿ ಕಚ್ಚಿ, ಕಣ್ಣು ಕಿಡಿ ಕಾರುವಂತಿದ್ದುದು ಅವನ ಗಮನಕ್ಕೆ ಬಾರದಿರಲಿಲ್ಲ.

" ಏಕೆ, ಸೀತೆ, ನನ್ನ ಮೇಲೆ ಕೋಪವೆ ? "

ಇಮ್ಮಡಿಯ ಬಿರುಸಿನಿಂದ ಸೀತೆ ಪಾತ್ರೆಗಳನ್ನು ತಿಕ್ಕತೊಡಗಿದಳು. ಚಿನ್ನದ ಒಳೆಯೆರಡರ ಮೆಲ್ಲುಲಿ ಸುಬ್ಬಾಭಟ್ಟನ ಕಿವಿಗೆ ಇಂಪಾಗಿತ್ತು.

" ಸೀತೆ, ಈಗ ಇಲ್ಲಿ ಯಾರೂ ಇಲ್ಲ. ಮುಂದುಗಡೆ ಬಾಗಿಲುಹಾಕಿದ್ದೇನೆ. ನಿಮ್ಮ ತಾಯಿ ಹೊಳೆಯಿಂದ ಬರಬೇಕಾದರೆ ಇನ್ನೂ ಅರ್ಧ ಮುಕ್ಕಾಲು ಗಂಟೆ ಆಗುತ್ತೆ. ನಿನ್ನ ಇಷ್ಟವಿಲ್ಲದೆ, ಪುಟ್ಟಣ್ಣಯ್ಯನ ಹಾಗೆ ನಡೆದುಕೊಳ್ಳಲು ನನಗೂ ಇಷ್ಟವಿಲ್ಲ. ನಿನ್ನ ಮೇಲೆ ನಾನು ಎಷ್ಟು ಆಸೆ ಇಟ್ಟುಕೊಂಡಿದ್ದೇನೆ, ನಿನಗೆ ಗೊತ್ತಿಲ್ಲವೇ, ಸೀತೆ ?...."

ಸೀತೆ ಮೌನವಾಗಿದ್ದಳು. ಸುಬ್ಬಾಭಟ್ಟ ಅವಳ ಒಂದು ಕೈಯನ್ನು ಬಲವಾಗಿ ಹಿಡಿದುಕೊಂಡು—

" ಸೀತೆ, ಏಳು, ಬಾ. ನನ್ನ ಬಹುದಿನಗಳ ಆಸೆಯನ್ನು...."

" ಸುಬ್ಬೂ, ಕೈಬಿಡುತ್ತೀಯೋ ನಾನು ಕಿರಿಚಿಕೊಂಡುಬಿಡಲೋ ? "

" ನೋಡು, ಸೀತೆ, ನಾನು ಒಳ್ಳೆಯ ಮಾತಿನಲ್ಲೇ ನಿನ್ನನ್ನ ಒಲಿಸಿ ಕೊಳ್ಳಲು ಪ್ರಯತ್ನಪಡುತ್ತಿದ್ದೇನೆ. ನೀನು ಮೊಂಡುಹಿಡಿಯಬೇಡ. ನೀನು ಕಿರಿಚಿದರೆ ನಾನು ಬೇಲಿ ಹಾರಿ ಹೋಗುತ್ತೇನೆ. ಏನೋ ಮಾಡುತ್ತೇನೆ. ನಾನೇನು ಸಿಕ್ಕಿಹಾಕಿಕೊಳ್ಳುವಷ್ಟು ದಡ್ಡನಲ್ಲ. ಸುಮ್ಮನೆ ಗುಲ್ಲಿಗೆ ಅವಕಾಶ ಕೊಡಬೇಡ....."

" ನೀನು ಹೀಗೆಲ್ಲ ಕಾಡಬಾರದು, ಸುಬ್ಬೂ. ನಾನು ದಿಕ್ಕಿಲ್ಲದವಳು ಅಂತ ನಿನಗೆ ತಿಳಿಯದೆ ? ನನ್ನ ಮೇಲೆ ನಿನಗೆ ನಿಜವಾದ ಪ್ರೀತಿ ಇದ್ದರೆ, ನನ್ನ ಪಾಡಿಗೆ ನನ್ನನ್ನ ಬಿಟ್ಟುಬಿಡು, ಹೊರಟುಹೋಗು...." ಎಂದು ಕೈಯನ್ನು ಕೊಸರಿಕೊಳ್ಳಲು ಪ್ರಯತ್ನಪಟ್ಟಳು.

" ಹಾಗೆ ದಾರಿಗೆ ಬಾ " ಎಂದು ಸುಬ್ಬು ಅವಳ ಕೈ ಬಿಟ್ಟ. ಅವಳು ಮೇಲೆದ್ದು, ಒಳಕ್ಕೆ ಹೋಗುವ ಸನ್ನಾಹ ಮಾಡಿದಳು. ಅವನು ಅವಳಿಗೆ ಅಡ್ಡನಾಗಿ ನಿಂತ.

" ಒಳಕ್ಕೆ ಹೋಗಬೇಕು, ಬಿಡು, ಸುಬ್ಬು...."

" ಅದಕ್ಕೇನೂ ಅಡ್ಡಿಯಿಲ್ಲ, ಆಗಬಹುದು. ಆದರೆ ನಾನು ಹೇಳುವುದನ್ನ ಪೂರ್ತಿ ಕೇಳಿಬಿಡು. ನಿನ್ನ ಮೇಲೆ ನನಗೆ ನಿಜವಾದ ಪ್ರೀತಿ ಇತ್ತು ; ಮದುವೆ

ಮಾಡಿಕೊಳ್ಳಬೇಕು ಅಂತ ಎಷ್ಟೋ ಆಸೆಯೂ ಇತ್ತು. ಆದರೆ ನಿನ್ನ ದುರದೃಷ್ಟ ದಿಂದ ಅದು ಕೂಡಿಬರಲಿಲ್ಲ. ಈಗ ನಾನು ನಿನ್ನನ್ನ ಪ್ರೀತಿಸಿದರೂ ಒಂದೇ, ಪ್ರೀತಿಸದಿದ್ದರೂ ಒಂದೇ. ಪ್ರೀತಿ ಇದೆ ಅಂತ ಇಬ್ಬರೂ ಒಟ್ಟಿಗೆ ಬಾಳುವೆ ಮಾಡುವುದಕ್ಕೆ ಆಗುತ್ತೆಯೋ? ಎಂದಿಗೂ ಇಲ್ಲ. ಈಗ ನೀನು ಪಾತ್ರೆ ತಿಕ್ಕಿದೆಯಲ್ಲ, ಹುಣಿಸೆಹಣ್ಣಿನಿಂದ, ಅದರ ಹಾಗೆ, ನನ್ನ ನಿನ್ನ ಪ್ರೀತಿಯೆಲ್ಲ ತೊಳೆದು ಹೋಯಿತು; ಉಳಿದಿರುವುದು ಚರಟ. ನಿನ್ನ ಮೇಲೆ ಎಷ್ಟೇ ಆಸೆ ಯಿದ್ದರೂ ನಾನು ನಿನ್ನನ್ನ ಮುಟ್ಟುತ್ತಲೂ ಇರಲಿಲ್ಲ. ಆದರೆ ಡೊಳ್ಳುಹೊಟ್ಟೆ ಪುಟ್ಟಣ್ಣಯ್ಯ.... ಕತ್ತೆಭಡವಾ.... ನನ್ನ ಮನಸ್ಸನ್ನೂ ಕೆಡಿಸಿಬಿಟ್ಟ. ನಾನೇನು ಮಾಡಲಿ? ಈಗ ದೊರೆತ ಅವಕಾಶ ಬಿಡುವುದಕ್ಕೆ ನನಗೆ ಇಷ್ಟವಿಲ್ಲ, ಸೀತೆ. ನೀನು ಒಪ್ಪು, ಬಿಡು—ಅದು ನನಗೆ ಮುಖ್ಯವಲ್ಲ...."

"ಇದು ಚೆನ್ನಲ್ಲ, ಸುಬ್ಬು. ಬೇಡ, ಬೇಡ. ಖಂಡಿತ ಬೇಡ. ನನ್ನ ಮಾನ, ನಿನ್ನ ಮಾನ...."

"ಪುಟ್ಟಣ್ಣಯ್ಯನ ಜೊತೆ ಚೆನ್ನಾಗಿತ್ತೇನೋ? ಮೇಷ್ಟರ ಗೋಪಾ ಲಯ್ಯನ ಹೆಸರೂ ಸ್ವಲ್ಪ ಹೊರಕ್ಕೆ ಬಂದಿತ್ತು. ನಿನಗೆ ತಿಳಿಯದು, ಪಾಪ." ವ್ಯಂಗ್ಯ ನಗೆ ನಕ್ಕು ನುಡಿದ ಸುಬ್ಬಾಭಟ್ಟ: "ಮುಕ್ಕಾದ ಮಾನ ಇನ್ನಷ್ಟು ಮುಕ್ಕಾಗುತ್ತೆ, ಅಷ್ಟೇ ತಾನೆ? ಕೆಟ್ಟಮೇಲೆ ಕೆಡಿಸುವುದೇನು ಬಂತು? ಅದಕ್ಕೂ ನೀನು ಹೆದರಬೇಕಾಗಿಲ್ಲ. ನಮ್ಮಿಬ್ಬರಿಂದ ಹೊರಕ್ಕೆ ಹೋಗದ ಗುಟ್ಟು ರಟ್ಟಾಗುವುದು ಸಾಧ್ಯ ಇಲ್ಲ.... ಮುಚ್ಚುಮರೆ ಏನು, ಸೀತೆ? ಇನ್ನು ನಿನ್ನ ಬಾಳು ಹೀಗೆಯೇ; ನಾನೇ ಕಡೆಯುವನೇನಾಗುವುದಿಲ್ಲ. ಈಗ ಮಾನ ಮಾನ ಅಂತ ಕೊಸರಾಡುತ್ತಿ. ನನಗೆ ಗೊತ್ತು, ಅದು ಬರಿಯ ಬೇಳ್ಕೆ. ನನಗೆ ಬೇಕಾದ್ದು ನಿನಗೂ ಬೇಕೇ ಬೇಕು. ನಿನಗೆ ಹೆದರಿಕೆ, ಅಷ್ಟೆ. ನನಗೆ ಹೆದರಿಕೆ ಇಲ್ಲ...."

"ಬೇಡ, ಸುಬ್ಬು, ಖಂಡಿತ ಬೇಡ. ಪ್ರೀತಿ ಇಲ್ಲದ ಕಡೆ ಒತ್ತಾಯ ಮಾಡಬಾರದು...."

"ಸುಮ್ಮನೆ ನಟನೆ ನಾಟಕ ಯಾಕೆ, ಸೀತೆ? ಪ್ರೀತಿ ಅನ್ನುವ ಮಾತಿಗೆ ಅರ್ಥ ಇಲ್ಲ. ಅದೇನೋ ನಾನು ಕಾಣೆ. ನನಗೆ ನೀನು ಬೇಕು, ಅಷ್ಟು ನನಗೆ ಗೊತ್ತು.... ತೀರಿದಲ್ಲದೆ ನಿನ್ನ ಮೇಲಿನ ಆಸೆಯನ್ನ ನಾನು ಈ ಜನ್ಮದಲ್ಲಿ ಬಿಡಲಾರೆ...."

ಸೀತೆ ಏನೋ ಹೇಳಬೇಕೆನ್ನುವಷ್ಟರಲ್ಲಿ, ಸುಬ್ಬಾಭಟ್ಟ ಅವಳನ್ನು ಬಲವಾಗಿ ಅಪ್ಪಿಕೊಂಡು, ಮೈ ಕೊಡವಿಕೊಳ್ಳುವ ಮುನ್ನವೇ ಮುತ್ತಿಟ್ಟುಬಿಟ್ಟ.

ಸೀತೆ ಸೆರಗಿನಿಂದ ತುಟಿಯನ್ನು ಒರಸಿಕೊಂಡಳು; ಕಣ್ಣೀರು ನಿಧಾನವಾಗಿ ಅವಳ ಕೆನ್ನೆಯನ್ನು ತೋಯಿಸಿತು.

"ನೀನು ಏನು ಮಾಡೀಯು, ಸುಬ್ಬು. ನನ್ನ ದುರದೃಷ್ಟ. ಆಯಿತು, ಇನ್ನು ನನ್ನ ಕಾಡಬೇಡ...." ಎಂದು ಸೀತೆ ದೀನಳಾಗಿ ಬೇಡಿಕೊಂಡಳು.

"ಅದು ಹೇಗೆ ಸಾಧ್ಯ, ಸೀತೆ? ಮಗುವಿನ ಕೈಗೆ ಕಲ್ಲುಸಕ್ಕರೆ ಕೊಟ್ಟು ಅದು ಬಾಯಿಗೆ ಹಾಕಿಕೊಂಡಮೇಲೆ ಕೊಡು ಇಲ್ಲಿ ಅಂತ ಕೇಳಿದಹಾಗೆ! ನಾನೇನು ಪುಟ್ಟಣ್ಣಯ್ಯನ ಹಾಗೆ ಮೃಗ ಅಂತ ತಿಳಿದುಕೊಂಡೆಯಾ? ಎಷ್ಟಾದರೂ ನನ್ನವಳಾಗಬೇಕಾಗಿದ್ದ ಸೀತೆ ಅನ್ನುವ ಮಮತೆ ನನಗಿಲ್ಲವೆ? ಈಗಲ್ಲದಿದ್ದರೆ ರಾತ್ರಿ....ನಾಳೆ....ನಾಡಿದ್ದು....ಇನ್ನು ಎಂಟು ಹತ್ತು ದಿನ ನೀನು ನನ್ನವಳು, ನನ್ನ ರಾಣಿ. ಹೌದೋ ಅಲ್ಲವೋ?" ಎಂದು ಸುಬ್ಬಾಭಟ್ಟ ಒಲಿಸಿಕೊಳ್ಳುವ ನಗೆ ನಕ್ಕ; ಉತ್ತರ ನಿರೀಕ್ಷಿಸಿ ನಿಂತ.

ಸೀತೆ ಮತ್ತೆ ಪಾತ್ರೆ ಬೆಳಗಲು ಕುಳಿತಳು. ಅವಳ ಕೆನ್ನೆಯ ಕಣ್ಣೀರ ಕೋಡಿ ಆರಿ, ಕರೆಕಟ್ಟಿತ್ತು—ಅವಳ ಬಾಳಿಗೇ ಅಂಟಿದ ಕರೆಯಂತೆ.

"ನಾನು ಪುಟ್ಟಣ್ಣಯ್ಯನ ಹಾಗೆ ಅಲ್ಲ, ಸೀತೆ. ನೀನೂ ಜಾಣೆ; ಜಾಣೆಯ ಹಾಗೆ ನಡೆದುಕೊ....ನಿಮ್ಮ ತಾಯಿ ಬಂದುಬಿಟ್ಟಾರು, ಹೋಗಿ ಬಾಗಿಲು ತೆಗೆದು ಹಜಾರದಲ್ಲೇ ಇರುತ್ತೇನೆ" ಎಂದು ಸುಬ್ಬಾಭಟ್ಟ ಮನೆಯೊಳಕ್ಕೆ ತೆರಳಿದ.

ತನ್ನ ಕೆನ್ನೆಯಂತೆ ಕರೆಗಟ್ಟಿಹೋಗಿದ್ದ ಪಾತ್ರೆಗಳನ್ನು ಮತ್ತೆ ತಿಕ್ಕಿ ಬೆಳಗತೊಡಗಿದಳು ಸೀತೆ. ಕರೆಕಟ್ಟಿದಮೇಲೆ, ಎಷ್ಟು ಬೆಳಗಿದರೂ ಅದರ ಕುರುಹು ಉಳಿದೇ ಉಳಿಯಿತು.

೫

ವೆಂಕಟಸುಬ್ಬಯ್ಯನವರು ಕೈಯಲ್ಲಿದ್ದ ಹಣವನ್ನೆಲ್ಲ ವ್ಯಯಮಾಡಿ, ಮಲೇರಿಯಾ ರೋಗವನ್ನು ಸಂಪಾದಿಸಿಕೊಂಡು ಹಿಂದಿರುಗಿದರು. ಕೊಳಲೂರು ಮಲೆನಾಡಿನ ಸೆರಗಿನಲ್ಲಿನ ಗ್ರಾಮವಾದ್ದರಿಂದ ಎಂದೂ ಅಲ್ಲಿ ಮಲೇರಿಯದ ಹೊಡೆತ ಪ್ರಬಲವಲ್ಲ. ವೆಂಕಟಸುಬ್ಬಯ್ಯನವರು ಪುತ್ರಾನ್ವೇಷಣೆಯಲ್ಲಿ ಮಲೆ

ನಾಡಿನ ಬಸಿರನ್ನೆಲ್ಲ ಹೊಕ್ಕು ಬಂದಿದ್ದರು. ಕರಿಯಣ್ಣ ಸಾಗರದಲ್ಲಿ ರಾಮ ಸ್ವಾಮಿಯನ್ನು ಬೀಳ್ಕೊಂಡು ಊರಿಗೆ ಹಿಂದಿರುಗಿದ್ದನೆಂದು ಅವರು ಸಕಲೇಶ ಪುರದಲ್ಲಿದ್ದಾಗ ಅವರಿಗೆ ಸುದ್ದಿ ಮುಟ್ಟಿತ್ತು. ಹತ್ತು ಹದಿನೈದು ದಿನಗಳ ಮೇಲಣ ಸುತ್ತಾಟದ ಆಸರು ಅವರನ್ನು ಹಣ್ಣುಹಣ್ಣುಮಾಡಿತ್ತು. ಬಂದವರೇ ಹಾಸಿಗೆ ಹಿಡಿದು ಮಲಗಿದರು. ಮನೆಯ ಕಂಬಳಿಗಳೆಲ್ಲ ಅವರ ಮೈಮೇಲೆ ಹೋದುವು. ಛಳಿಜ್ವರದಲ್ಲಿ ಹುಚ್ಚುಹುಚ್ಚಾಗಿ ಮಾತಾಡುತ್ತಿದ್ದರು : "ಇನ್ನು ರಾಮುಸ್ವಾಮಿ ನನ್ನ ಪಾಲಿಗೆ ಸತ್ತ. ನಾನೇ ಸತ್ತರೆ, ತೊಂದರೆಯೇ ಇಲ್ಲ" —ಇದು ಅವರ ಹಾಸಿಗೆಯ ಮೇಲಿನ ನಿತ್ಯ ಪಲ್ಲವಿ.

ವೆಂಕಟಸುಬ್ಬಯ್ಯನವರು ಹಿಂದಿರುಗಿದಂದಿನಿಂದ ಸೀತೆಗೂ ಏನೋ ಬೇಸರಿಕೆ, ಬಳಲಿಕೆ; ಮುಖ ಮುಂಕು, ಮನಸ್ಸು ಚಂಚಲ. "ಯಾಕಮ್ಮಾ, ಮೈಸೂರಿಂದ ಬಂದಾಗ ಅಷ್ಟು ಗೆಲವಾಗಿದ್ದೆ. ಈಗ ಸರಿಯಾಗಿ ಊಟವೇ ಮಾಡುವುದಿಲ್ಲವಲ್ಲಮ್ಮಾ" ಎಂದು ತಾಯಿ ಅಕ್ಕರೆಯಿಂದ ಮಗಳನ್ನು ಕೇಳು ವರು. "ಏನೋ ಮೈಗೇ ಸರಿಯಾಗಿಲ್ಲವಮ್ಮಾ, ಈಚೆಗೆ" ಎಂದು ಸೀತೆ ಉದಾಸಳಾಗಿ ಉತ್ತರಿಸುವಳು. "ಹೇಗಿದ್ದರೂ ಅವರಿಗೆ ಸುಬ್ರಮಣ್ಯಪಂಡಿತರ ಹತ್ತಿರ ಔಷಧಿ ತರುತ್ತೀ. ನೀನೂ ಕೈ ತೋರಿಸಿ ಏನಾದರೂ ತೆಗೆದುಕೊಳ್ಳ ಬಾರದೆ, ತಾಯಿ?" ಎಂದು ಪಾರ್ವತಮ್ಮನವರು ಸಲಹೆ ಕೊಟ್ಟರೆ, "ಮೊದಲು ಅಪ್ಪನಿಗೆ ಗುಣವಾಗಲಿ. ಆಮೇಲೆ ನೋಡೋಣ. ನನಗೇನೂ ಆಗಿಲ್ಲ" ಎನ್ನುವಳು.

"ನೀನು ಮೈಸೂರಿಂದ ಬಂದಮೇಲೆ ಹೊರಗೇ ಆಗಿಲ್ಲ, ಅಲ್ಲವೇನೇ?" ಎಂದು ಪಾರ್ವತಮ್ಮನವರು ಏನೋ ನೆನಪಾಗಿ ಇದ್ದಕ್ಕಿದ್ದಹಾಗೆ ಒಂದು ದಿನ ಪ್ರಶ್ನಿಸಿದರು—ಅಡುಗೆಮನೆಯ ಏಕಾಂತದಲ್ಲಿ.

ಸೀತೆ ಮೌನವಾಗಿದ್ದಳು.

"ಹಾಗೇ ಬಿಡಬಾರದಮ್ಮಾ. ಏನಾದರೂ ಬಲವಾದ ಕಾಯಿಲೆಗಿಟ್ಟು ಕೊಂಡರೆ ಕಷ್ಟ" ಎಂದು ಅಂತಃಕರಣದಿಂದ ನುಡಿದರು ತಾಯಿ.

ಸೀತೆಯ ತುಟಿ ಬಿರಿಯಿತು; ಮಾತು ಮಾತ್ರ ಹೊರಡಲಿಲ್ಲ. ನುಡಿಯ ಲಾರದ ನೋವನ್ನು ಮನಸ್ಸು ತುಂಬಿಕೊಂಡಿತ್ತು; ಮುಖದ ಮೇಲೆ ಅದರ ಮುದ್ರೆಯಿತ್ತು.

ವೆಂಕಟಸುಬ್ಬಯ್ಯನವರಿಗೆ ಈಗ ಚಳಿಜ್ವರ ನಿಂತಿತ್ತು; ಹದಿನೈದು ದಿ
ಗಳ ಪ್ರಯಾಣದಿಂದ ಬಳಲಿದ್ದ ದೇಹವನ್ನು ಇನ್ನು ಹದಿನೈದು ದಿನಗ
ಬೇನೆ ಬೆನ್ನು ಬಗ್ಗುವಂತೆ ಮಾಡಿತ್ತು.

ವೆಂಕಟಸುಬ್ಬಯ್ಯನವರು ಎದ್ದು ಓಡಾಡುವಹಾಗಾದಮೇಲೆ, ತ
ಅಸ್ವಸ್ಥತೆಯ ಬಗ್ಗೆ ತಂದೆತಾಯಿ ಅಡುಗೆಯ ಮನೆಯಲ್ಲಿ ಮೆಲ್ಲನೆ ಮಾತಾ
ಕೊಂಡದ್ದು ಸೀತೆಯ ಕಿವಿಗೆ ಬಿದ್ದೇ ಬಿದ್ದಿತು.

"....ಏನು ಮಾಡುವುದು ಹೇಳಿ, ನಮ್ಮ ಗ್ರಹಚಾರ. ಇನ್ನೂ ಏನೇ
ಕಾಣಬೇಕಾಗಿದೆಯೋ ಈ ಕಣ್ಣಿನಿಂದ. ಎಷ್ಟು ಖರ್ಚಾದರೂ ಚಿಂತೆಯಿ
ಏನಾದರೂ ಔಷಧಿ ಕೊಡಿಸಿ ಸರಿಮಾಡಬೇಕು...."

"....ತಿಳಿಯದೆ ಮಾಡದೆ ಔಷಧಿ ಕೊಡಿಸಿ ಒಂದು ಹೋಗಿ ಒಂದಾದ
ಏನು ಮಾಡುವುದು? ನಾಚಿಕೆಯೇನು, ಅವಳನ್ನೇ ಕೇಳು, ಯಾರ
ಅಂತ?...."

"ನೀವು ಯಾಕೋ ಹುಡುಗರಹಾಗೆ ಆಡುತೀರಿ ಅಂದ್ರೆ. ಯಾರಾದರ
ಹೇಳುತ್ತಾರೆಯೆ? ಕಣ್ಣಿಂದ ಕಂಡದ್ದಕ್ಕೆ ಕುರುಡನ ಸಾಕ್ಷಿ ಕೇಳಿದಹಾಗೆ..
ಇನ್ನು ನೀವು ಕೂಗಿ ರೇಗಿ ಮಾಡಬೇಡಿ....ಏನೋ ವಿಷಘಳಿಗೆ ಬಂತು, ಆ
ಬಾರದ್ದು ಆಗಿಹೋಗಿದೆ....ನಮ್ಮದೇ ತಪ್ಪು...."

"ನೀನು ಹೇಳೋದೂ ಸರಿಯೆ. ಇದು ಬಿಸಿಯ ತುಪ್ಪ; ಹೊಟ್ಟೆ
ಹುಣ್ಣು....ಅನುಭವಿಸಲೇ ಬೇಕು."

ವೆಂಕಟಸುಬ್ಬಯ್ಯನವರು ಇನ್ನೊಂದು ದಿನ ಹೇಳಿದರು:

"ಸುಬ್ರಮಣ್ಯಪಂಡಿತರು, ಇದಕ್ಕೆ ಔಷಧಿಯೇನೋ ಇದೆ, ಅ
ಖಂಡಿತ ಆಗೋದಿಲ್ಲ ಎಂದುಬಿಟ್ಟರು. ನರಸಿಂಹಪಂಡಿತರನ್ನು ಕೇಳಿ
ಅಳಿದೂ ಸುರಿದೂ ಕೊನೆಗೆ ಒಪ್ಪಿಕೊಂಡಿದಾರೆ. ಒಂದು ನೂರು ರೂಪಾ
ಕೊಡಬೇಕಂತೆ."

"ಏನು, ಒಂದು ನೂರು ರೂಪಾಯಿ!" ಎಂದು ಪಾರ್ವತಮ್ಮನವ
ಉದ್ವೇಗದಲ್ಲಿ ಗಟ್ಟಿಯಾಗಿಯೇ ಹೇಳಿಬಿಟ್ಟರು.

"ಔಷಧಿ ಖರ್ಚಲ್ಲ. ಪ್ರಾಯಶ್ಚಿತ್ತಕ್ಕೆ ಅಂತ ಹೇಳಿದರು. ಪ್ರಾಯಶ್ಚಿ
ವೇನು ಬಂತು, ಮಣ್ಣು—ಬಾಯಿ ಮುಚ್ಚಿಕೊಂಡಿರೋಕೆ."

" ಇನ್ನೇನು ಮಾಡುವುದು ಹೇಳಿ, ಎಷ್ಟಾದರೂ ಕೊಡಿಸಬೇಕು. ಇಲ್ಲದೆ ಹೋದರೆ ನಾವೂ ರಾಮಸ್ವಾಮಿಯ ಹಿಂದೆ ಹೋಗಬೇಕು. ಹೇಗಿದ್ದರೂ ಅವಳ ದುಡ್ಡೇ ಇದೆಯಲ್ಲಾ...."

" ಯಾವ ಘಳಿಗೆಯಲ್ಲಿ ಕೈಗೆ ಬಂತೋ ಹಾಳಾದ್ದು ಆ ದುಡ್ಡು, ಎಲ್ಲಾ ಕೆಟ್ಟದ್ದಕ್ಕೇ ಖರ್ಚಾಯಿತು...."

ಸೀತೆ ಹೊರಗೆ ನಿಂತು ಹಲ್ಲುಕಚ್ಚಿಕೊಂಡು, ಎದೆ ಗಟ್ಟಿಮಾಡಿಕೊಂಡು, ಕೇಳಬೇಕಾದ್ದನ್ನು ಕೇಳಿದಳು; ಆಡಲಾಗದ್ದನ್ನು ಅಡಗಿಸಿಕೊಂಡಳು. ಬೇಡ ಬೇಡವೆಂದರೂ ಕಣ್ಣಮುಂದೆ ಗೌರಿ ಬಂದು ನಿಂತಂತಾಗುತ್ತಿತ್ತು ; ಅವಳೇನೋ ತನಗೆ ಧೈರ್ಯದ ಮಾತುಗಳನ್ನು ಹೇಳುತ್ತಿರುವಂತೆ ಭಾಸವಾಗುತ್ತಿತ್ತು.

ಮೊದಲು, ಸೀತೆ " ನಾನು ಔಷಧಿ ಒಲ್ಲೆ " ಎಂದು ಸೆಟೆತುಕೊಂಡಳು. ಆ ಮಾತು ನುಡಿದಾಗ ಯಾವುದೋ ವಾತ್ಸಲ್ಯಭಾವನೆ ಅವಳ ಕರುಳನ್ನು ಮಿಡಿಯುತ್ತಿತ್ತು. " ಒಲ್ಲೆ ಎಂದರೆ ಹೇಗಮ್ಮ. ನಾವು ಹೊಳೆಗೆ ಮುಗುಚಿ ಕೊಳ್ಳಬೇಕು ಅಂತ ನಿನ್ನ ಇಷ್ಟವೆ ? " ಎಂದು ತಾಯಿ ಮೃದುವಾಗಿಯೇ ಹೇಳಿದರು. ಸೀತೆ ಒಪ್ಪಿಕೊಂಡಳು.

ನರಸಿಂಹಪಂಡಿತರ ಚಿಕಿತ್ಸೆ ಉಗ್ರರೂಪದಲ್ಲಿಯೇ ಇದ್ದಿತು. ಚಿಕಿತ್ಸೆ ಯಾದಮೇಲೆ ಸೀತೆಗೆ ಮೂರು ತಿಂಗಳ 'ಬಾಣಂತಿ'ತನದ ಪಥ್ಯೋಪಚಾರ ವಿಧಿಸಿದರು. ಸೀತೆಯ 'ಜೀವನಾಂಶದ'ದ ಉಳಿಕೆಯ ಅಂಶ ಅವಳ ಜೀವ ಉಳಿಸುವುದಕ್ಕೆ ಸದ್ವಿನಿಯೋಗವಾಯಿತು.

" ಸೀತೆಗೆ ಏನೋ ಖಾಯಿಲೆಯಂತೆ ಪಾಪ " ಎಂಬ ಸುದ್ದಿ ಕೋಟೆಯ ಹೆಂಗಸರ ಕನಿಕರದ ಮಾತಾಗಿತ್ತು. " ಗಂಡ ಹೋದ ನೋವನ್ನು ನುಂಗಿ ಕೊಂಡು, ಮೈಸೂರಿಗೆ ಹೋಗಿ ಬಂದ ಮೇಲೆ ಓಡಾಡಿಕೊಂಡಿದ್ದಳು ಪಾಪ " ಎಂದವರೊಬ್ಬರು. " ತಂದೆ ಹಾಸಿಗೆ ಹಿಡಿದಾಗ ಔಷಧಿ ತರುವುದರಿಂದ ಹಿಡಿದು ಪೇಟೆಗೆ ಹೋಗೋದರವರೆಗೆ ಎಲ್ಲ ಅವಳೇ ಮಾಡಬೇಕಾಗಿತ್ತು, ಪಾಪ. ಆಲಪಟೆಯಾಯಿತು ಅಂತ ಕಾಣುತ್ತೆ. ಕೆಲಸ ಮಾಡಿಯೂ ಅಭ್ಯಾಸವಿಲ್ಲ " ಎಂದು ಮತ್ತೊಬ್ಬರ ವಿವರಣೆ. " ಅಲ್ಲಾ ಅಂದ್ರೆ, ಪಾರ್ವತಮ್ಮನವರ ಯಜ ಮಾನರು ಊರಿನಲ್ಲಿ ಇಲ್ಲದಿದ್ದಾಗ ಶಿವರಾಮುಭಟ್ಟರ ಮಗ ಮಲಗಿಕೊಳ್ಳೋಕೆ ಹೋಗುತಾ ಇದ್ದ ; ಪಾಪ, ಅವರು ಖಾಯಿಲೆ ಬಿದ್ದಾಗ ಒಂದಿಷ್ಟು ಔಷಧಿ

ಗಿವಪಥಿ ತಂದುಕೊಡಬಾರದಾಗಿತ್ತೆ ? ಎಲ್ಲದಕ್ಕೂ ಸೀತೆಯೇ ಓಡಾಡಬೇಕಾಗಿತ್ತಲ್ಲ ಅಂದ್ರೆ ! ” ಎಂದು ಮೂರನೆಯವರ ಆಕ್ಷೇಪಣೆ—ಶಿವರಾಮಭಟ್ಟರ ಹೆಂಡತಿ ಎದುರು ಇಲ್ಲ ಎಂದು ತಿಳಿದು.

ನರಸಿಂಹಭಟ್ಟರ ಮುಚ್ಚಿದ್ದ ಬಾಯೇ ಸ್ವಾಭಾವಿಕವಾಗಿ ತೆರೆಯಿತೋ, ಸೂಕ್ಷ್ಮಮತಿಯ ಸಾತಮ್ಮನವರು ಸುಳಿವು ಕಂಡರೋ— ಏನಾದರೂ ಆಗಲಿ, ಸೀತೆಯ ಖಾಯಿಲೆಯನ್ನು ಕುರಿತು ‘ ಹೀಗಂತೆ ಹಾಗಂತೆ ’ ಎಂದು ಕೋಟೆಯ ಬಳಗ ಆಡಿಕೊಳ್ಳತೊಡಗಿತು. ಹೆಂಗಸರ ಪಿಸುಮಾತು ಗಂಡಸರ ಗುಸು ಮಾತಾಯಿತು. ವೆಂಕಟಸುಬ್ಬಯ್ಯನವರ ಕಿವಿಗೆ ಹೇಗೆ ಮುಟ್ಟಬೇಕೋ ಹಾಗೆ ಮುಟ್ಟಿಯೂ ಮುಟ್ಟಿತು.

ಸೀತೆ ಚೇತರಿಸಿಕೊಳ್ಳುತ್ತಾ ಇದ್ದಳು ; ಆಗ ರಾಮಸ್ವಾಮಿ ನೂರು ರೂಪಾಯಿ ಕಳಿಸಬೇಕೆಂದೂ, ತಾನು ಹಿಂದಿರುಗಿ ಬರುವುದಾಗಿಯೂ, ಬೊಂಬಾಯಿಂದ ಕಾಗದ ಬರೆದಿದ್ದ. ಆರು ತಿಂಗಳಿಂದ ವೆಂಕಟಸುಬ್ಬಯ್ಯನವರು ತಮ್ಮ ‘ ವೃತ್ತಿ ’ಗೆ ರಜ ಕೊಟ್ಟುಕೊಂಡಿದ್ದರು ; ಕೈಲಿ ಕಾಸಿರಲಿಲ್ಲ ; ತಮಗೂ ಹಣ ಬೇಕಾಗಿತ್ತು ; ಕೂಡಲೆ ಇನ್ನೂರು ರೂಪಾಯಿ ಕಳಿಸುವಂತೆ ವೆಂಕಟಸುಬ್ಬಯ್ಯನವರು ಸುಬ್ಬಸ್ವಾಮಿಗೆ ರಿಜಿಸ್ಟರ್ ಮಾಡಿ ಕಾಗದ ಹಾಕಿದರು.

ವೆಂಕಟಸುಬ್ಬಯ್ಯನವರು ಆ ಕಾಗದ ರವಾನಿಸಿ, ಅಂಚೆಕಚೇರಿಯ ಮೆಟ್ಟಲು ಇಳಿದುಬರುತ್ತಿದ್ದಾಗ, ತಾವು ಭದ್ರಪಡಿಸಿದ್ದ ಸುದ್ದಿ ತಮ್ಮ ಬೆಂಬತ್ತಿ ಬಂದಿತ್ತು. ಹಿಂದಿರುಗಿ ನೋಡಿದಾಗ, ತಮ್ಮ ‘ ಪೂಟಲಾಯರಿ ’ಯಲ್ಲಿ ವಿರೋಧ ಕಟ್ಟಿಕೊಂಡಿದ್ದವರಿಬ್ಬರು ವಾಗ್ಬಾಣ ಬಿಟ್ಟು ಬೆನ್ನು ತಿರುಗಿಸಿ ನಿಂತಿದ್ದರು. ಆದರೆ ಆ ಬಾಣ ಇವರ ಬೆನ್ನನ್ನು ಇರಿದು ಎದೆಯನ್ನು ಒಡೆಯಿತು.

ತಲೆತುಂಬ ವರ್ಷ ವರ್ಷ ಹೆಪ್ಪುಗಟ್ಟಿದ್ದ ಚಿಂತೆ ; ಪಟ್ಟುಗಟ್ಟಿದ್ದ ಬೋಳು ತಲೆ ; ವೈಶಾಖದ ಬಿರುಬಿಸಿಲು. ಅಂಚೆಕಚೇರಿಯ ಮುಂದೆ ವೆಂಕಟಸುಬ್ಬಯ್ಯನವರು ಮುಖವಡಿಯಾಗಿ ಬಿದ್ದು, ಎಚ್ಚರದಪ್ಪಿದರು.

ಜಗಲಿಯ ಮೇಲೆ ನಿಂತವರು ನಿಂತೇ ಇದ್ದರು.

ಪೋಸ್ಟ್‌ಮಾಸ್ಟರ ಕಣ್ಣಿಗೆ ದೃಶ್ಯ ಕಾಣಲಿಲ್ಲ.

‘ ಶೈತ್ಯೋಪಚಾರ ’ ಮಾಡಲಾರದ ಸೂರ್ಯದೇವ ತಪಿಸುತ್ತಿದ್ದ.

ಶಾಲೆಯ ಬಾಗಿಲು ಹಾಕಿಕೊಂಡು ಮನೆಯ ದಾರಿಯನ್ನು ಹಿಡಿದಿದ್ದ

ಸುಬ್ಬರಾಯರು ಬೀದಿಯಲ್ಲಿ ಬಿದ್ದಿದ್ದ ವೆಂಕಟಸುಬ್ಬಯ್ಯನವರನ್ನು ಕಾಣುವ ಹೊತ್ತಿಗೆ ಐದು ಹತ್ತು ನಿಮಿಷಗಳು ನಿಧಾನವಾಗಿ ನಡೆದಿದ್ದುವು.

ಕರುಣಾಳು ಸುಬ್ಬರಾಯರು ತಾವು ಮಾಡಬೇಕಾದ ಕರ್ತವ್ಯವನ್ನು ಶ್ರದ್ಧೆಯಿಂದ ಮಾಡತೊಡಗಿದರು.

ನಡುಹಗಲವರೆಗೂ ಊಟಕ್ಕಾಗಿ ಮನೆಯ ಯಜಮಾನರ ಬರವನ್ನು ಕಾಯುತ್ತಿದ್ದ ಬಡ ಮುತ್ತೈದೆ ಸುಬ್ಬರಾಯರ ಜೋಡೆತ್ತಿನ ಬಂಡಿಯಲ್ಲಿ ತಂದ ಪತಿಯ ಜೀವಚ್ಛವವನ್ನು ಎದುರುಗೊಂಡರು.

ವೆಂಕಟಸುಬ್ಬಯ್ಯನವರನ್ನು ಹಾಸಿಗೆಯ ಮೇಲೆ ಮಲಗಿಸಿದ್ದಾಯಿತು; ಸುಬ್ಬರಾಯರು ಡಾಕ್ಟರನ್ನು ಕರೆದುಕೊಂಡು ಬಂದು ತೋರಿಸಿದರು; ಕಟ್ಟೆಗೆಯಾಗಿದ್ದ ವೆಂಕಟಸುಬ್ಬಯ್ಯನವರ ದೇಹವನ್ನು ಪರೀಕ್ಷಿಸಿ, "ಲಕ್ವಾ ಹೊಡೆದಿದೆ" ಎಂದು ಡಾಕ್ಟರು ತಿಳಿಸಿದರು. "ಸರ್ವ ಪ್ರಯತ್ನ ಮಾಡೋಣ, ಇಷ್ಟರಮೇಲೆ ದೇವರ ಚಿತ್ತ" ಎಂದು ಸುಬ್ಬರಾಯರನ್ನು ಹೊರಕ್ಕೆ ಕರೆದುಕೊಂಡು ಹೊರಟರು.

ಪಾರ್ವತಮ್ಮನವರ ಸೂಚನೆಯ ಮೇರೆಗೆ, ಸೀತೆ ತನ್ನ ಅಣ್ಣ ಸುಬ್ಬಸ್ವಾಮಿಗೆ ತಂದೆಯ ಸ್ಥಿತಿಯನ್ನು ವಿವರಿಸಿ ಕಾಗದ ಬರೆದಳು; ಸಾಧ್ಯವಾದರೆ ಕೂಡಲೆ ಹೊರಟುಬರಬೇಕೆಂದು ಅದರಲ್ಲಿ ತಾಯಿಯ ಮೊರೆ ಮಗಳ ಮಾತಿನಲ್ಲಿ ಮೂಡಿತ್ತು.

"ರಾಮಸ್ವಾಮಿಗೂ ಒಂದು ಕಾಗದ ಹಾಕಿಬಿಡಮ್ಮ. ಮನೆ ಬಿಟ್ಟು ಹೋದ ಅಂತ, ಮಗನಲ್ಲ ಅನ್ನುವುದಕ್ಕಾಗುತ್ತೆಯೆ" ಎಂದು ಮಾರನೆಯ ದಿನ ಪಾರ್ವತಮ್ಮನರು ಗದ್ಗದ ಕಂಠದಿಂದ ಸೀತೆಗೆ ಹೇಳಿದರು. ವೆಂಕಟಸುಬ್ಬಯ್ಯನವರ ಕೋಟಿನ ಜೇಬುಗಳನ್ನು ಶೋಧಿಸಿ, ಸೀತೆ ರಾಮಸ್ವಾಮಿಯ ಕಾಗದವನ್ನು ಹುಡುಕಿ ತೆಗೆದು, ಬೊಂಬಾಯಿಯ ವಿಳಾಸವನ್ನು ತಿಳಿದುಕೊಂಡು, ಅವನಿಗೂ ಒಂದು ಕಾಗದ ಹಾಕಿದಳು.

ವೆಂಕಟಸುಬ್ಬಯ್ಯನವರು ಪ್ರಜ್ಞಾಶೂನ್ಯರಾಗಿ ಒಂದು ವಾರ ಕಾಲ ಹಾಸಿಗೆಯ ಮೇಲೆ ಬಾಳ್ವೆಣವಾಗಿ ಬಿದ್ದಿದ್ದರು. ಡಾಕ್ಟರ ಸೂಚನೆಯಂತೆ, ಸುಬ್ಬರಾಯರು ಸುಬ್ಬಸ್ವಾಮಿಗೆ ಒಂದು ತಂತಿಯ ಸಮಾಚಾರವನ್ನು ಕೊಡುವ ಏರ್ಪಾಡು ಮಾಡಿದರು.

"ಅವರು ಇವರು ಬಂದು ವಿಚಾರಿಸಿಕೊಂಡು ಹೋಗುತಾ ಇದಾರೆ. ಆದರೆ ನಿಮ್ಮ ಹಾಗೆ ಸಮಯಕ್ಕೆ ಆಗಿರೋರು ಯಾರು ಸುಬ್ಬರಾಯರೆ? ನೀವು ನಮ್ಮ ಭಾಗದ ದೇವರ ಹಾಗೆ ದೊರೆತಿದ್ದೀರಿ" ಎಂದು ಪಾರ್ವತಮ್ಮನವರು ಸುಬ್ಬರಾಯರನ್ನು ಕೊಂಡಾಡಿದರು.

ತಂದೆಯ ಪ್ರಾಣವಿರುವಾಗಲೇ ಸುಬ್ಬಸ್ವಾಮಿ ಬೆಂಗಳೂರಿನಿಂದ ಧಾವಿಸಿ ಬಂದ. ಅವನಿಗೆ ರಾಮಸ್ವಾಮಿಯ ವೃತ್ತಾಂತವೆಲ್ಲ ತಿಳಿಯದೆ ಹೋದರೂ, ಅವನು ಬೊಂಬಾಯಿಯಲ್ಲಿದ್ದಾನೆ ಎಂದು ಅಷ್ಟು ಮಾತ್ರ ಮೊದಲು ತಿಳಿದ ಸಮಾಚಾರ; ಅನಂತರ ಅಂಶ ಅಂಶವಾಗಿ ಎಲ್ಲ ತಿಳಿಯಿತು. ಎಲ್ಲ ತಿಳಿದ ಮೇಲೆ, "ಅವನು ಬಂದು ಏನಾಗಬೇಕಾಗಿದೆ?" ಎಂದು ಕನಲಿ ನುಡಿದ. ಸುಬ್ಬಸ್ವಾಮಿಗೆ ಹೇಳಿ, ಪಾರ್ವತಮ್ಮನವರು ರಂಗಸ್ವಾಮಿಗೂ ಒಂದು ಕಾಗದ ಹಾಕಿಸಿದರು.

ಸುಬ್ಬಸ್ವಾಮಿ ಬಂದ ಎರಡು ದಿನಕ್ಕೆ ವೆಂಕಟಸುಬ್ಬಯ್ಯನವರು ಕಡೆ ಉಸಿರು ಬಿಟ್ಟರು. ಅದೇ ಸಂಜೆ ರಂಗಸ್ವಾಮಿ ಕಾವೇರಿ ಬಸ್ಸಿನಿಂದ ಬಂದರು. ಹಿರಿಯ ಮಗಳಿಗೆ ತಂದೆಯ ಮುಖ ಸಿಕ್ಕಿತು.

ಈ ಸಲ ತಂದೆಯ ಕಾಗದಕ್ಕೆ ಮನ್ನಣೆ ಕೊಟ್ಟು ಸುಬ್ಬಸ್ವಾಮಿ ಇನ್ನೂರು ರೂಪಾಯನ್ನು ಜೊತೆ ಮಾಡಿದ್ದ. ಅದನ್ನು ತಂದೆಯ ದಹನಕ್ರಿಯೆ ಅಪರ ಕರ್ಮಗಳಿಗೆ ಉಪಯೋಗಿಸಬೇಕಾಗುತ್ತದೆಂದು ಅವನು ಎಣಿಸಿರಲಿಲ್ಲ.

ಕರ್ಮಾಂತರಗಳನ್ನೆಲ್ಲಾ ಬೆಂಗಳೂರಿನಲ್ಲೆ ಮಾಡುವುದಾಗಿ ಸುಬ್ಬಸ್ವಾಮಿ ನಿರ್ಧರಿಸಿ, ಮನೆಯ ಬಾಗಿಲಿಗೆ ಬೀಗ ಹಾಕಿ, ತಂಗಿಯನ್ನೂ ತಾಯಿಯನ್ನೂ ಕರೆದುಕೊಂಡು ಬೆಂಗಳೂರಿಗೆ ಪ್ರಯಾಣ ಮಾಡಿದ. ಸಾಧ್ಯವಾದರೆ ಆ ವೇಳೆಗೆ ಹೆಂಡತಿ ಮಕ್ಕಳೊಂದಿಗೆ ಬರುವುದಾಗಿ ಹೇಳಿ, ರಂಗಸ್ವಾಮಿ ಸಕಲೇಶಪುರಕ್ಕೆ ಹಿಂದಿರುಗಿದ.

ತಂದೆಯ ಮರಣವಾರ್ತೆಯನ್ನು ಒಯ್ದು ರಾಮಸ್ವಾಮಿಗೆ ಇನ್ನೊಂದು ಕಾಗದ ಹೋಗಿತ್ತು; ಬೆಂಗಳೂರಿಗೆ ಬರತಕ್ಕದ್ದೆಂದು ಅದರಲ್ಲಿ ತಿಳಿಸಿತ್ತು.

ಸುಬ್ಬರಾಯರು ಗುಡಿಯ ಗೋಷ್ಠಿಯಲ್ಲಿ ಬೇಸರ ಹೊಂದಿ ಅಲ್ಲಿಗೆ ಈಗ ಹೆಚ್ಚಾಗಿ ಹೋಗುತ್ತಿರಲಿಲ್ಲ. ಅಲ್ಲಿಗೆ ಹೋದಾಗ, ಅವರ ಎದುರಿನಲ್ಲಿ ಯಾರೂ ವೆಂಕಟಸುಬ್ಬಯ್ಯನವರ ಸಂಸಾರದ ವಿಚಾರವನ್ನು ಎತ್ತುತ್ತಲೇ ಇರಲಿಲ್ಲ.

ಸುಬ್ಬಸ್ವಾಮಿ ತಾಯಿ ತಂಗಿಯರೊಂದಿಗೆ ಬೆಂಗಳೂರಿಗೆ ಹೋದ ಮೇಲೆ, "ಮಾಡಬಾರದ್ದು ಮಾಡಿದರೆ ಆಗಬಾರದ್ದು ಆಗುತ್ತೆ" ಎಂಬುದು ಗೋಷ್ಠಿಯ ಸದಸ್ಯರ ಏಕಾಭಿಪ್ರಾಯವಾಗಿತ್ತು. ಅಂದು ಸುಬ್ಬರಾಯರು ಎದುರಿಸಲ್ಲಿ ಇರಲಿಲ್ಲ.

ಸುಬ್ಬಸ್ವಾಮಿ ಊರು ಬಿಡುವುದಕ್ಕೆ ಮುನ್ನ ಸುಬ್ಬರಾಯರು ಅವನನ್ನು ಏಕಾಂತಕ್ಕೆ ಕರೆದು, "....ನಾನು ನಿಮಗೆ ಹೆಚ್ಚು ಹೇಳಬೇಕಾದ್ದಿಲ್ಲ ತಾಯಿ ತಂಗಿಯ ಸಂರಕ್ಷಣೆಯ ಭಾರ ನಿಮ್ಮ ಮೇಲೆ ಬಿದ್ದಿದೆ. ಬೆಂಗಳೂರಿನಲ್ಲಿ ಹೆಣ್ಣು ಮಕ್ಕಳ ವಿದ್ಯಾಭ್ಯಾಸಕ್ಕೆ ಒಳ್ಳೆಯ ಸೌಕರ್ಯ ಇದೆ. ಸೀತೆಯ ವಿದ್ಯಾಭ್ಯಾಸವನ್ನು ಮುಂದುವರಿಸಿ. ಈಗಿನ ಕಾಲಕ್ಕೆ, ಮುತ್ತೈದೆಗೆ ಗಂಡ ಹೇಗೋ ವಿಧವೆಗೆ ವಿದ್ಯಾಭ್ಯಾಸ ಹಾಗೆ. ನಾನು ಹೀಗೆ ಅಂದೆ ಅಂತ ಏನೂ ತಿಳಿದುಕೊಳ್ಳಬೇಡಿ" ಎಂದು ಸಲಹೆ ಕೊಟ್ಟರು.

ಸುಬ್ಬಸ್ವಾಮಿಗೆ ಸೀತೆಯ ಯೋಚನೆಗಿಂತ ಹೆಚ್ಚಾಗಿ ತಾಯಿಯನ್ನು ತಂಗಿಯನ್ನು ಕರೆತಂದುದಕ್ಕೆ ಹೆಂಡತಿ ಏನೆನ್ನುವಳೋ ಎಂಬ ಯೋಚನೆ ಬಲವಾಗಿತ್ತು.

೬

ಪಾರ್ವತಮ್ಮನವರು ತಮ್ಮ ಮಗಳೊಂದಿಗೆ ಹಿರಿಯ ಮಗನ ಮನೆಯಲ್ಲಿ ಒಂದು ವರ್ಷ ಕಾಲ ಆಶ್ರಯ ಪಡೆದರು. ಈ ಒಂದು ವರ್ಷ ಕಾಲದಲ್ಲಿ, ಮಡಿ ಹಿಡಿದಿದ್ದ ಅವರು ಮೂವರನ್ನು ನೆನೆನೆನೆದು ಕೊರಗುತ್ತ, ಅವರ ದುಃಖ ಮುಪ್ಪುರಿಗೊಂಡಿತ್ತು: ಒಂದು ಕಡೆ ತೀರಿಕೊಂಡ ಪತಿಗಾಗಿ ದುಃಖ; ಇನ್ನೊಂದು ಕಡೆ ಕಾಣದ ಕೈತಪ್ಪಿದ ಮಗನಿಗಾಗಿ ಹಂಬಲಿಕೆ, ತೊಳಲಿಕೆ; ಮತ್ತೊಂದು ಕಡೆ, ತಂದೆತಾಯಿ ಕಣ್ಣೆದುರಿಗಿದ್ದೂ 'ಕೈಮಿರಿ' ಹೋಗಿದ್ದ ಸೀತೆಯ ಭವಿಷ್ಯವನ್ನು ಕುರಿತು ಮರುಕೊಳಿಸಿದ್ದ ಹಳೆಯ ಕೊರಗು.

"ಪರಲೋಕದಲ್ಲಿಯಾದರೂ ಅವರ ಆತ್ಮ ತೃಪ್ತಿಯಾಗಿರಲಿ, ಕರ್ಮಲೋಪ ಮಾಡಬೇಡಪ್ಪ" ಎಂದು ತಾಯಿ ಮಗನನ್ನು ಬೇಡಿಕೊಂಡಿದ್ದರು.

ರಂಗಸ್ವಾಮಿಗೆ ಬೆಂಗಳೂರಿಗೆ ಬರುವುದಕ್ಕೆ ಇಷ್ಟವಿಲ್ಲ: ಕಾರಣ, ತಾಯಿ ಮಗಳು ಇಬ್ಬರ ಪೈಕಿ ಒಬ್ಬರ ಸಂರಕ್ಷಣ ಭಾರವಾದರೂ ಎಲ್ಲಿ ತಲೆಯ ಮೇಲೆ

ಶಾಶ್ವತವಾಗಿ ಬೀಳುತ್ತದೆಯೋ ಎಂಬ ಹೆದರಿಕೆ. ಆದರೆ ಕಾವೇರಿ ತಾಯಿಯ ಅರಿಶಿನ ಕುಂಕುಮ ನೋಡಲೇಬೇಕು ಎಂದು ಕಣ್ಣೀರಿನಲ್ಲಿ ಕೈ ತೊಳೆದದ್ದರಿಂದ, ರಂಗಸ್ವಾಮಿ ಹೆಂಡತಿ ಮಕ್ಕಳನ್ನು ಹತ್ತನೆಯ ದಿನದ ಹೊತ್ತಿಗೆ ಬೆಂಗಳೂರಿಗೆ ಕರೆದುಕೊಂಡು ಬಂದು, ಕರ್ಮಾಂತರಗಳು ಮುಗಿದ ಮಾರನೆಯ ದಿನವೇ, ಅಶುಭಕ್ಕೆ ಬಂದವರು ಹೆಚ್ಚು ಕಾಲ ನಿಲ್ಲಬಾರದೆಂಬ ಸಂಪ್ರದಾಯದ ಮೇರೆಗೆ, ಊರಿಗೆ ತೆರಳಿದನು. ಸೀತೆಯನ್ನು ಜೊತೆಗೆ ಕರೆದೊಯ್ಯಬೇಕೆಂದು ಕಾವೇರಿಯ ಮನಸ್ಸು; ಆದರೆ ಅವನಿಗೆ, ಅಂದು ಒಮ್ಮೆ ಬೇಕಾಗಿದ್ದ ಸೀತೆ ಇಂದು ಬೇಡವಾದಳು.

ತಾಯಿಯ ಬಲವಂತಕ್ಕೆ ಕಟ್ಟುಬಿದ್ದು ಸುಬ್ಬಸ್ವಾಮಿ ತಿಂಗಳು ತಿಂಗಳೂ ತಂದೆಯ ಶ್ರಾದ್ಧವನ್ನು ಮಾಡಿದ. ಈ ವರ್ಷದಲ್ಲಿ ಅವನ ಸಂಸಾರದ ಮುಖ್ಯ ಘಟನೆಯೇ ಇದು—ತನ್ನ ಅಪ್ಪನ ತಿಥಿ. ಮಡಿಯೇನೆಂಬುದನ್ನೇ ಕಾಣದ ಸರೋಜಮ್ಮ ಅತ್ತೆಯ ಎದುರಿನಲ್ಲಿ ತಿಂಗಳು ತಿಂಗಳೂ ಗಂಡನ ಜೊತೆ ಮಡಿಯಲ್ಲಿರಬೇಕಾಗಿತ್ತು.

ಹೀಗೆ ಹನ್ನೊಂದು ತಿಂಗಳು ಉರುಳಿ, ಹನ್ನೆರಡನೆಯ ತಿಂಗಳು ವೆಂಕಟಸುಬ್ಬಯ್ಯನವರ ವರ್ಷದ ಶ್ರಾದ್ಧವೂ ಬಂದಿತು. ರಂಗಸ್ವಾಮಿ ಹೆಂಡತಿ ಮಕ್ಕಳನ್ನು ಕರೆದುಕೊಂಡು ಮತ್ತೆ ಬಂದಿದ್ದ; ಸುಬ್ಬಸ್ವಾಮಿಯ 'ಮುಂಡುಮೋಚಿದ.' ಶುಭಸ್ವೀಕಾರವಾದಮೇಲೆ ರಂಗಸ್ವಾಮಿ ಹಿಂದಿರುಗಿ ಹೊರಡುವ ಮಾತು ಬಂದಿತು.

ತಾಯಿ ಮಗಳು—ಇಬ್ಬರಲ್ಲಿ ಒಬ್ಬರನ್ನು ಕರೆದೊಯ್ಯುವ ಇಷ್ಟವನ್ನು ಈ ಸಲ ರಂಗಸ್ವಾಮಿಯೇ ವ್ಯಕ್ತಪಡಿಸಿದ. ಕಾರಣ, ಕಾವೇರಿ ಗರ್ಭಿಣಿ!

ಸೀತೆಗೆ ಸುಬ್ಬಸ್ವಾಮಿಯ ಮನೆ ಅಣ್ಣನ ಮನೆ ಎನ್ನಿಸಲಿಲ್ಲ; ಅತ್ತಿಗೆಯ ಮನೆ ಎನ್ನಿಸಿತ್ತು. ಯಾರೂ ತನ್ನ ಮನೆಯಲ್ಲಿ ನಿಲ್ಲಬೇಕಾಗಿಲ್ಲ ಎಂಬಷ್ಟರ ಮಟ್ಟಿಗೆ, ಈ ಒಂದು ವರ್ಷದ ಕಾಲದಲ್ಲಿ, ಸರೋಜಮ್ಮ ಸಾಕಷ್ಟು ಸೂಚನೆ ಕೊಟ್ಟಿದ್ದಳು. ಭಾವನ ಇಂಗಿತವನ್ನರಿತ ಸೀತೆ, ಅಕ್ಕನ ಮನೆಗೆ ಹೋಗಲು ತಾನೇ ಮುಂದಾದಳು. ಆದರೆ ಸರೋಜಮ್ಮನಿಗೆ ಅತ್ತೆಗೆ ಆಶ್ರಯಕೊಟ್ಟು, ಎಂದೂ ಇಲ್ಲದ್ದು ಇಂದು ಅವರನ್ನು ಅನುಸರಿಸಿಕೊಂಡುಹೋಗಲು ಇಷ್ಟವಾಗಲಿಲ್ಲ. "ಸೀತೆಯೇ ಇಲ್ಲಿ ಇದ್ದುಕೊಳ್ಳಲಿ. ನನ್ನ ಮಕ್ಕಳೋ ದುಷ್ಟ ಮಕ್ಕಳು.

ಅತ್ತೆಮ್ಮನವರು ಇಲ್ಲಿ ಮಡಿಹುಡಿ ಸರಿಯಾಗಿ ನಡಸುವುದಕ್ಕಾಗುವುದಿಲ್ಲ, ಪಾಪ. ಇಳಿವಯಸ್ಸಿನಲ್ಲಿ ನಾವು ಅವರ ಕೈಲಿ ದುಡಿಸಿಕೊಳ್ಳುವುದೇ? ಚೆನ್ನಾಯಿತು" ಎಂದು ಬಹು ನಯವಾಗಿ ಮಾತಾಡಿ, ಸರೋಜಮ್ಮ ಪಾರ್ವತಮ್ಮನವರನ್ನೇ ಕಾವೇರಿಯ ಮನೆಗೆ ಸಾಗಹಾಕುವ ಸನ್ನಾಹಮಾಡಿ, ಗೆದ್ದಳು. ವಾಸ್ತವವಾಗಿ, ಪಾರ್ವತಮ್ಮನವರಿಗೆ ಬೇಕಾಗಿದ್ದುದೂ ಅದೇ. ಅವರದ್ದು ಒಂದು ಬಯಕೆ: ತಾವು ಎಲ್ಲಿಯೇ ಇರಲಿ, ಸೀತೆ ತಮ್ಮ ಕಣ್ಣಮುಂದೆ ಇರಬೇಕೆಂಬುದು. ಆದರೆ ಅದು ನಡೆಯದ ಬಯಕೆಯಾಗಿತ್ತು.

ಪಾರ್ವತಮ್ಮನವರು ಹಿರಿಯ ಮಗನ ಮನೆಯನ್ನು ಬಿಡುವಾಗ, ಕಂಬನಿದುಂಬಿ ಮಗನನ್ನು ಬೇಡಿಕೊಂಡರು: "ಅಪ್ಪಾ, ಸುಬ್ಬಸ್ವಾಮಿ. ಇನ್ನು ಸೀತೆಗೆ ನೀನೇ ತಂದೆ, ಸರೋಜಮ್ಮನೇ ತಾಯಿ. ದಿಕ್ಕಿಲ್ಲದ ಹೆಣ್ಣನ್ನು ಕೈಬಿಡಬೇಡಿ. ಅವಳದ್ದೇನಾದರೂ ತಪ್ಪಾದರೆ ಹೊಟ್ಟೆಗೆ ಹಾಕಿಕೊಳ್ಳಿ.... ರಾಮಸ್ವಾಮಿಯ ಸುದ್ದಿ ಏನಾದರೂ ತಿಳಿದರೆ, ಕಾಗದ ಹಾಕಪ್ಪ."

ಪಾರ್ವತಮ್ಮನವರು ಸೀತೆಯನ್ನು ಬೀಳ್ಕೊಳ್ಳಲಾರದೆ ಬೀಳ್ಕೊಂಡರು. ತಾಯಿ, ಇಬ್ಬರು ಹೆಣ್ಣುಮಕ್ಕಳು ಕಾವೇರಿ ಮತ್ತು ಸೀತೆ—ಇವರ ಕಂಬನಿ ತ್ರಿವೇಣೀ ಸಂಗಮವಾಗಿ ಹರಿಯಿತು.

# ಪ್ರಕರಣ ಹನ್ನೊಂದು

೧

ಸುಬ್ಬಸ್ವಾಮಿಯ ಸಂಸಾರ 'ತೋಟಿ ಶೃಂಗಾರ, ಒಳಗೆ ಗೋಣೀಸೊಪ್ಪು' ಎನ್ನುವಂತಿತ್ತು. ಸರೋಜಮ್ಮ 'ದೊಡ್ಡ ಮನುಷ್ಯ'ರ ಒಬ್ಬಳೇ ಮಗಳು ಎನ್ನಿಸಿ, ತವರುಮನೆಯ ಐಸಿರಿಯ ಐಠಕ್ಕು, ದೊಡ್ಡಸ್ತಿಕೆಯ ದರ್ಪ, ಹಣದ ಹೆಮ್ಮೆ ಇವನ್ನೆಲ್ಲ ಬಳುವಳಿಯಾಗಿ ತಂದಿದ್ದಳೇ ಹೊರತು ಅಲ್ಲಿನ ಸಿರಿಯನ್ನೆಲ್ಲಾ ತನ್ನ ಇಬ್ಬರು ಅಣ್ಣಂದಿರ ಪೋಲಿನ ಪಾಲುಗಾರಿಕೆಗೆ ಬಿಟ್ಟುಬಂದಿದ್ದಳು. ಸುಬ್ಬಸ್ವಾಮಿ ಸರೋಜಮ್ಮನನ್ನು ಮದುವೆಯಾದಷ್ಟು, ಅರಸಿನ ಆನೆಯನ್ನು ಆಳು ಸಾಕಿಕೊಂಡಂತಾಗಿತ್ತು. ಅಠಾರಾ ಕಚೇರಿಯ ಚಿಕ್ಕ ನೌಕರ 'ದೊಡ್ಡ ಕುದುರೆಯ ಚೇಷ್ಟೆ'ಯನ್ನು ಆಡಬೇಕಾಗಿಬಂದಿತ್ತು. ಸರೋಜಮ್ಮ ತನ್ನ ಗಂಡನನ್ನು ಹಾಗೆ ಮೂಗುದಾರ ಹಾಕಿ ಆಡಿಸುತ್ತಿದ್ದಳು. 'ನಮ್ಮ ಸುಬ್ಬಸ್ವಾಮಿ ಹೆಂಡತಿಯ ಸೀರೆ ಒಗೆಯುವುದಕ್ಕೂ ಸಿದ್ಧ' ಎಂದು ಎಂದೋ ನಿರ್ಣಯಿಸಿದ್ದರು ಪಾರ್ವತಮ್ಮನವರು. ಇಷ್ಟೆಲ್ಲ ಬರಿಯ ಚೆಲುವಿನ ಮೋಡಿಯಲ್ಲ; ಬಿಂಕದ ಗಾಡಿಯೂ ಹೌದು. ಚೆಲುವೊಂದೇ ಎಣಿಕೆಗೆ ಬಂದರೆ, ಅವಳು ಎಂದಿಗೂ ಸೀತೆಗೆ ಸಮನಲ್ಲ. ಸರೋಜಮ್ಮ ಉಡಿಗೆತೊಡಿಗೆಯ 'ಫ್ಯಾಷನ್' ಅನುಸರಿಸುವುದರಲ್ಲಿ ಯಾವಾಗಲೂ 'ಅಪ-ಟು-ಡೇಟ್.' ಮಕ್ಕಳಿಗೆ ಹಾಕುವ ಬಟ್ಟೆಗಳಲ್ಲೂ ಅಷ್ಟೆ, ಮನೆಯ ಅಲಂಕರಣದಲ್ಲಿಯೂ ಅಷ್ಟೆ, ಊಟ ಉಪಚಾರಗಳಲ್ಲಿಯೂ ಅಷ್ಟೆ: ತಾನು 'ಸಿರಿಗುವರಿ' ಎಂಬುದನ್ನು ಮರೆಯಲು ಅವಳು ಎಂದೂ ಸಿದ್ಧಳಾಗಿರಲಿಲ್ಲ.

ಮೆಚ್ಚಿನ ಮಡದಿಯ ಅಚ್ಚನ್ನ ಭಕ್ತನಾದ ಸುಬ್ಬಸ್ವಾಮಿ ಅವಳಿಗಾಗಿ ದೇಹವನ್ನು ತೇಯುತ್ತಿದ್ದ; ಕಚೇರಿಯ ಕೆಲಸದ ಜೊತೆಗೆ ಯಾವ ಯಾವುದೋ ಸಂಘಸಂಸ್ಥೆಗಳಲ್ಲಿ ಹೆಚ್ಚಿನ ವರಮಾನಕ್ಕಾಗಿ ದುಡಿಯುತ್ತಿದ್ದ; ಬಿಡುವು ತಪ್ಪಿದಾಗ ಮಂಡಿಗಳಲ್ಲಿ ಕೂಡ ಲೆಕ್ಕ ಬರೆದಿದ್ದ; ಅವೆಲ್ಲಾ ಮುಗಿದು ಈಗ, ಸಹಕಾರ ಸಂಘವೊಂದರ ಗುಮಾಸ್ತನಾಗಿ ಕೆಲಸ ಮಾಡುತ್ತಿದ್ದ; ಟೈಪ್ ರೈಟಿಂಗ್ ಪ್ಯಾಸು ಮಾಡಿ, 'Job Typing Undertaken' (ಟೈಪು ಕೆಲಸ

ಮಾಡಲಾಗುವುದು) ಎಂಬ ಬೋರ್ಡನ್ನೂ ತಗುಲಿಹಾಕಿಕೊಂಡಿದ್ದ. ಇಷ್ಟೆಲ್ಲಾ ಮಾಡಿದರೂ ತಕ್ಕಡಿಯ ತೂಕ ಏರದೆ, ನೂರೆಂಟು ಕಡೆ ಸಾಲಗಾರನಾಗಿದ್ದ. ಹಿಂದೊಮ್ಮೆ ತಂದೆ, ಬಳಿಕ ತಂದೆಯ ಹೆಸರಿನಲ್ಲಿ ರಾಮಸ್ವಾಮಿ ಹಣಕ್ಕಾಗಿ ಕಾಗದಗಳನ್ನು ಬರೆದಿದ್ದಾಗ ಅವನು ಹಣ ಕಳಿಸಲು ಸಾಧ್ಯವಾಗದಿದ್ದುದಕ್ಕೆ ಅವನ ತಾಪತ್ರಯವೇ ಕಾರಣ.

ತಂದೆಯ ಶ್ರಾದ್ಧಾದಿಗಳ ದೆಸೆಯಿಂದ ಆ ವರ್ಷದಲ್ಲಿ ಸುಬ್ಬಸ್ವಾಮಿಯ ಸಾಲಗಳ ಲೆಕ್ಕಕ್ಕೆ ಇನ್ನು ಐನೂರು ಸೇರಿತ್ತು. ತಾಯಿ, ತಂಗಿ ಇವರೂ ಸೇರಿ ಸಂಸಾರದ ಹೊರೆಯನ್ನು ದ್ವಿಗುಣಗೊಳಿಸಿದ್ದರು. ಸರೋಜಮ್ಮ ಈ ಕಾಲದಲ್ಲಿ ಅದು ಹೇಗೋ ಸಹಿಸಿಕೊಂಡಿದ್ದಳು; ಬಾಯಿ ಮುಚ್ಚಿಕೊಂಡಿದ್ದಳು. ಸೀತೆ ಒಬ್ಬಳೇ ಉಳಿದಮೇಲೆ, "ನಿಮ್ಮ ಕಡೆಯವರಿಂದ ಸಾಲ ಹೆಚ್ಚಿತು. ಮದುವೆ–ಮುಂಜಿ ಮಾಡುವ ಹಾಗೆ ಮಾಡಿದಿರಿ ಅಪ್ಪನ ತಿಥಿಯನ್ನ. ನಿಮ್ಮ ತಮ್ಮ ತಿಥಿಗೆ ಕೂಡ ಬರಲಿಲ್ಲ, ಇನ್ನು ನೋಡಿ ಬೇಕಾದರೆ, ಆಸ್ತಿಯಲ್ಲಿ ಪಾಲು ಕೇಳಲು ಬರುತ್ತಾನೆ. ನಿಮ್ಮ ತಂಗಿಯನ್ನೂ ನಿಮ್ಮ ತಾಯಿಯ ಜೊತೆಯಲ್ಲಿ ರವಾನೆ ಹಾಕಬೇಕಾಗಿತ್ತು. ಬೆಂಗಳೂರಿನ ಸಂಸಾರ ಅಂದರೆ ಅವರಿಗೆ ಏನು ಗೊತ್ತು? ನೀವೋ, ಮಾತೆತ್ತಿದರೆ ಮನೆಯ ಖರ್ಚು ಕಡಮೆ ಮಾಡು ಎನ್ನುತ್ತೀರಿ. ಖರ್ಚು ಕಡಮೆ ಮಾಡಬೇಕು ಎನ್ನುವ ಬದಲು ಹೆಚ್ಚಿನ ಹೊರಿಗೆ ಹೆಗಲು ಕೊಡದೆ ಇದ್ದರಾಯಿತು" ಎಂದು ಗಂಡನಿಗೆ ನಿತ್ಯ ಪುರಾಣ ಓದತೊಡಗಿದಳು. ಇದರಲ್ಲಿ ಮುಚ್ಚುಮರೆ ಏನೂ ಇರಲಿಲ್ಲ; ಸೀತೆಗೆ ಕೇಳುವಂತೆಯೇ ಆಡಿಬಿಡುತ್ತಿದ್ದಳು. ಉಭಯಸಂಕಟಕ್ಕೆ ಸಿಲುಕಿದ್ದ ಸುಬ್ಬಸ್ವಾಮಿ, ಬಾಯಿ ಬಿಡದಿರುವುದೇ ಒಳ್ಳೆಯದು ಎಂಬ ನಿಲುವಿಗೆ ಬಂದಿದ್ದನು. ಬಹುಶಃ ತಾನು ಸಾಯುವವರೆಗೆ ಇರಬೇಕಾಗಿಬಂದಿದ್ದ ಅತ್ತಿಗೆಯ ಮನೆಯಲ್ಲಿ ತನ್ನ ಸ್ಥಾನವೇನೆಂಬುದನ್ನು ಸೀತೆ ಕ್ರಮಕ್ರಮವಾಗಿ ಅರಿತುಕೊಳ್ಳತೊಡಗಿದಳು. ಆರು ತಿಂಗಳು ಕಳೆಯುವ ಹೊತ್ತಿಗೆ ಆ ಸ್ಥಾನಮಾನ ಒಂದು ನಿರ್ದಿಷ್ಟರೂಪವನ್ನು ಪಡೆಯಿತು.

ಕಸಮುಸುರೆಯವಳನ್ನು ಬಿಡಿಸಿದ್ದಾಯಿತು; ಸುಬ್ಬಸ್ವಾಮಿಯ ಮತ್ತು ಮಕ್ಕಳ ಬಟ್ಟೆ ಒಗೆಯುತ್ತಿದ್ದ ಆಳನ್ನು ಬಿಡಿಸಿದ್ದಾಯಿತು; ಅಡಿಗೆಯ ಕೋಣೆಯಲ್ಲೇ ಇದ್ದ ಉಗ್ರಾಣ ಭಾಗವನ್ನು ತೆರವುಮಾಡಿ, ಹಾಲು ಮೊಸರು ತುಪ್ಪ

ಬೆಲ್ಲ ಕೊಬ್ಬರಿ ಅಡಕೆ ಕಾಫಿಪುಡಿ ಸಕ್ಕರೆ ಮುಂತಾದ 'ಶ್ರೀಮಂತ ಸಾಮಗ್ರಿ' ಗಳನ್ನು ಬೇರೆ ಕೋಣೆಗೆ ಸಾಗಿಸಿ, ಸರೋಜಮ್ಮ ತನ್ನ ಸ್ವಾಧೀನದಲ್ಲಿ ಇಟ್ಟು ಕೊಂಡದ್ದಾಯಿತು. ಇಷ್ಟೆಲ್ಲಾ ಆದಮೇಲೆ, ಸೀತೆಗೆ ಅಡುಗೆಯ ಮನೆಯ ಸಂಪೂರ್ಣ ಅಧಿಕಾರವನ್ನು ವಹಿಸಲಾಯಿತು. ಶ್ರೀಮಂತಿಕೆಯನ್ನು ಮೆರೆ ಯುತ್ತಿದ್ದರೂ ಯತ್ನವಿಲ್ಲದೆ ದುಡಿಯುತ್ತಿದ್ದ ಸರೋಜಮ್ಮ ದುಡಿಸಿಕೊಳ್ಳುವ, ನಿಜವಾದ ಯಜಮಾನಿಯಾದಳು.

ಕಾಫಿ ಕಾಸುವವಳು ಮಾತ್ರ ಸರೋಜಮ್ಮನೆ. ಸೀತೆಗೆ ಕಡಮೆ ಹಾಲಿನ ಕಾಫಿ; ಒಂದು ದಿನ, ಕಾಫಿಯ ಚರಟವನ್ನು ಉಪಯೋಗಿಸಿ ಕಾಫಿ ಕಾಯಿಸಿ ಕೊಟ್ಟಿದ್ದನ್ನು ಸೀತೆ ಕಂಡುಬಿಟ್ಟಳು. ಆದರೆ ಏನೂ ಬಾಯಿಬಿಡಲಿಲ್ಲ. "ನಾನು ಬಡಿಸುವುದೇನು? ನಿನಗೆ ಊಟಕ್ಕೆ ತುಪ್ಪ ತೆಗೆದುಕೋ" ಎಂದು ಸರೋಜಮ್ಮ ಪ್ರೀತಿಯಿಂದ ಒಂದು ಡಬ್ಬಿ ಧಾರಾಪುರದ ತುಪ್ಪವನ್ನು ನಾದಿನಿಯ ವಶಕ್ಕೆ ಕೊಟ್ಟುಬಿಡುತ್ತಿದ್ದಳು. ಉಳಿದವರಿಗೆಲ್ಲ ಬೆಣ್ಣೆ ಕಾಯಿಸಿದ ತುಪ್ಪವನ್ನು ಸರೋಜಮ್ಮ ತಾನೇ ಬಡಿಸುತ್ತಿದ್ದಳು; ಅಡುಗೆಗೆ ಅಕ್ಕಿ ಬೇಳೆ ಇಷ್ಟು ಇಷ್ಟೆಂದು ನಿತ್ಯ ಪಡಿ ಅಳೆದುಬಿಡುತ್ತಿದ್ದಳು. ಎರಡು ಹೊತ್ತೂ ಎಲ್ಲರ ಊಟವಾದಮೇಲೆಯೇ ಸೀತೆಯ ಊಟ; ಅರೆಹೊಟ್ಟೆಯಾದರೂ ಆಯಿತು, ಉಪವಾಸವಾದರೂ ಆಯಿತು.

ಯಾರ ಕೈಲಿ ದೂರಬೇಕು? ಯಾರ ಕೈಲಿ ದುಃಖ ಹೇಳಿಕೊಳ್ಳಬೇಕು? ಅಕ್ಕಪಕ್ಕದ ಮನೆಗಳಿಗೆ ಹೋಗಿ, ನೆರೆಯ ಹೆಂಗಸರ ಕೂಡ ಒಂದೆರಡು ಮಾತಾಡಿ ಹೃದಯದ ಭಾರ ಕಳೆದುಕೊಳ್ಳುವುದಕ್ಕೂ ಬಿಡುವಿಲ್ಲ. ಸಂಜೆಯ ಹೊತ್ತು ಸರೋಜಮ್ಮ ತನ್ನ ಮನಸ್ತೃಪ್ತಿಯಾಗುವ ಮಟ್ಟಿಗೆ ಶೃಂಗಾರ ಮಾಡಿ ಕೊಂಡು ಗೆಳತಿಯರ ಮನೆಗೆಂದು ಹೊರಟುಬಿಡುತ್ತಿದ್ದಳು. ಹೋಗುವಾಗ, "ಮನೆಯ ಕಡೆ ಜೋಪಾನ, ಸೀತೆ. ಹಸು ಹೊಡೆದುಕೊಂಡು ಬಂದಾಗ ಹಾಲಿನ ಪಾತ್ರೆ ನೋಡುವುದು ಮರೆಯಬೇಡ" ಎಂದೋ, "ಬೆಂಗಳೂರು ಸಂಸಾರ ಕಣಮ್ಮ—ಎಲ್ಲಾ ದೀಪಾನೂ ಒಟ್ಟಿಗೆ ಉರಿಸಬೇಡ. 'ಹಾಲಿ'ನ ದೊಂದು ಹಚ್ಚಿರು, ಸಾಕು" ಎಂದೋ, "ಬಟ್ಟೆಗಳೆಲ್ಲಾ ಒಣಗಿವೆ ಅಂತ ಕಾಣುತ್ತೆ. ಮಡಿಸಿಟ್ಟುಬಿಡು" ಎಂದೋ—ಏನಾದರೂ ಒಂದು ಆಜ್ಞೆಯ ನ್ನಿತ್ತೇ ಹೊರಕ್ಕೆ ಹೊರಡುತ್ತಿದ್ದಳು. 'ಅಪ್ಪ ಅಮ್ಮನೂ ನನಗೆ ಹೀಗೆ ಅಂಕೆ

ಇಡುತ್ತಿರಲಿಲ್ಲ' ಎಂದು ಸೀತೆಯ ಕೊರಗು.

ಇಂಥ ಸಂದರ್ಭಗಳಲ್ಲಿ ಸೀತೆಗೆ ಸಹಜವಾಗಿ ಗೌರಿಯ ನೆನಪಾಗುವುದು. ಗೌರಿಯೂ ತನ್ನ ಹಾಗೆಯೇ, ತನಗಿಂತ ಹೆಚ್ಚಾಗಿ, ದುಡಿಯುತ್ತಿದ್ದಳು. ಆದರೆ ಮನೆಯವರಿಗೆಲ್ಲ ಗೌರಿಯನ್ನು ಕಂಡರೆ ಅದೆಷ್ಟು ಅಕ್ಕರೆ! ಎಷ್ಟು ದುಡಿದರೂ ಬಳಲಿದಂತೆ ಕಾಣುತ್ತಿರಲಿಲ್ಲ ಅವಳು; ಒಪ್ಪೊತ್ತಿನ ಊಟವಾದರೂ ಬಡವಾಗಿರಲಿಲ್ಲ ಅವಳು; ಮುಖದಲ್ಲಿ ಸದಾ ಗೆಲವು. ತಾನೇಕೆ ಹೀಗೆ? ಇಬ್ಬರೂ ಮನೆತಪ್ಪಿದವರು. ತಾನೇಕೆ ಹೀಗೆ? ಅವಳಂತೆಯೇ ತಾನು ಕೆಂಪು ಸೀರೆ ಉಟ್ಟರೆ ಆ ಪ್ರೀತಿ ಗೌರವಗಳು ದೊರೆತಾವೋ ಇಲ್ಲಿ? ಕೆಂಪು ಸೀರೆ ಇಲ್ಲದೆಯೇ ಆ ಪದವಿ ತನಗೆ ಇಲ್ಲಿ ದೊರೆತಿದೆ. ಆದ್ದರಿಂದ 'ಮಡಿಹುಡಿ'ಯ ಪ್ರಶ್ನೆಯೇ ಇಲ್ಲಿ ಇಲ್ಲ. ಹಾಗಾದರೆ, ತಾನೇಕೆ ಹೀಗೆ? ಆಗ ಸಹಜವಾಗಿಯೇ, ತಾಯಿಯ ಮನೆಯ ನೆನಪಾಗುವುದು. ತನಗಾಗಿ ಎಷ್ಟು ಒದ್ದಾಡಿದರು ತಂದೆ ತಾಯಿ! ತನ್ನ ತಪ್ಪನ್ನೆಲ್ಲಾ ಮುಚ್ಚಿಕೊಂಡರು, ಒಪ್ಪಿಕೊಂಡರು, ತಿದ್ದಿದರು! ತನ್ನ ಕೈಲಿ ದುಡಿಸಿಕೊಳ್ಳುತ್ತಿರಲಿಲ್ಲ. ಗೌರಿಯ ತಂದೆ ತಾಯಿ ಇದ್ದಾರೆ— ತನಗೂ ಅವಳಿಗೂ ಈಗ ಇದೇ ವ್ಯತ್ಯಾಸ. ಅಕ್ಕನ ಮನೆಗೆ ಹೋದರೂ ತನ್ನ ಪಾಡು ಇಷ್ಟೇ; ಅಥವಾ ಸ್ವಲ್ಪ ಮೇಲಾಗಬಹುದು. ಅಕ್ಕನ ಬಾಣಂತಿ ತನದಲ್ಲಿ ತಾನು ಅಲ್ಲಿಗೆ ಹೋಗಿದ್ದಾಗ ಅಕ್ಕ ಭಾವಂದಿರ ಮಿಗಿಲಾದ ಅಕ್ಕರೆ ಯೆಲ್ಲ ಸ್ವಾರ್ಥಕ್ಕಾಗಿ ಕೊಟ್ಟ ಸಂಚಕಾರ; ಎಂದೆಂದೂ ಇರುವುದಾದರೆ, ಇನ್ನು ಎಲ್ಲಿಯಾದರೂ ತನ್ನ ಬಾಳು ಇಷ್ಟೇ! ಅಕ್ಕರೆಯ ಸಕ್ಕರೆ ಬೆರೆಯದ ದುಡಿತದ ತಂಗೂಳು ತಿನ್ನುವುದು! ಇಂಥ ಕಹಿಯ ನೆನಪಿನ ಹೊತ್ತಿನಲ್ಲಿ ಚಿಕ್ಕಮ್ಮನ ಮನೆಯಲ್ಲಿ ತಾನು ಕಳೆದ ಸುಖದ ದಿನಗಳ ಸವಿನೆನಪು, ಮೊದಲ ಮಳೆ ಬಿದ್ದ ಮೇಲೆ ಬೆಂದ ನೆಲ ಹಸುರೊಡೆದು ನಲಿಯುವಂತೆ, ಮನಸ್ಸಿಗೆ ತಂಪೂಡು ತ್ತಿದ್ದಿತು. ಕೃಷ್ಣಮೂರ್ತಿಯ ಪ್ರೇಮಪ್ರದಾನ ಆ ಸ್ಮೃತಿಮಂದಿರಕ್ಕೆ ಕಲಶ ಪ್ರಾಯವಾಗಿ ಎದ್ದು ಕಾಣುವುದು. ಆಗ ಕೈಬೆರಳು ತಾನಾಗಿ ಹಣೆಯ ಮೇಲೆ ಆಡುವುದು: ಅವನಿಟ್ಟ ಕುಂಕುಮದ ನೆನಪಾಗುವುದು. ಅವನು ಹೇಳಿದ್ದ: ಎಂದೂ ಅಳಿಸದ ಕುಂಕುಮ ಇದು, ಎಂದು. ಈ ಸುಖದ ನೆನಪಿನ ಹೂವಿನ ಹಿಂದೆ ಮುಳ್ಳು ಇದ್ದೇ ಇರುತ್ತಿತ್ತು........' ಅಯ್ಯೋ, ಕೃಷ್ಣಮೂರ್ತಿ, ಕೃಷ್ಣ ಮೂರ್ತಿ, ನೀನು ಹೇಳಿದ್ದೇನು, ನಿನ್ನ ಮಾತಿನಲ್ಲಿ ನಂಬಿಕೆಯಿಟ್ಟೆನೇ! ಇಲ್ಲ,

ಇಲ್ಲ, ಅರ್ಥವಿಲ್ಲದ ಮಾತು ಅದು; ಉತ್ಸಾಹದ ನುಡಿ; ವ್ಯಾಮೋಹವಚನ
ನನ್ನನ್ನು ಮದುವೆಯಾಗಿ ಅವನು ಮರ್ಯಾದೆಯಾಗಿ ಹೇಗೆ ಬದುಕುವುದ
ಸಾಧ್ಯ? ನಾವು ಮದುವೆ ಎಂದುಕೊಂಡರೂ, ಜನ ನನ್ನನ್ನ ಇಟ್ಟುಕೊಂ
ದ್ದಾನೆ ಎನ್ನುತ್ತಾರೆ. ಈಗಂತೂ ಇಬ್ಬರೂ ತಬ್ಬಲಿಗಳು....' ಒಂದೊಂದ
ದಿನ ಅವಳು, 'ಕೃಷ್ಣಮೂರ್ತಿಗೆ ಒಂದು ಕಾಗದ ಬರೆದುನೋಡಲೆ? ನನ್ನನ್ನ
ಮದುವೆಯಾಗದಿದ್ದರೂ ಚಿಂತೆಯಿಲ್ಲ, ನನ್ನನ್ನು ಈ ಸೆರೆಯಿಂದ ಬಿಡಿಸ
ಎಂದು ಬೇಡಿಕೊಳ್ಳಲೆ?' ಎಂದು ಬಗೆಯುವಳು. 'ಛೆ ಛೆ, ಹಾಗೆ ಮಾ
ಬಾರದು. ಅವನು ನನ್ನನ್ನು ಮರೆತು ಸುಖವಾಗಿರಬಹುದು. ಈ ವರ
ಅವನಿಗೆ ಬಿ.ಎ. ಪ್ಯಾಸಾಗುತ್ತೆ. ಸರಿಯಾದ ಹೆಣ್ಣನ್ನ ಮದುವೆಮಾಡಿಕೊಂಡ
ಸುಖವಾಗಿರುತ್ತಾನೆ. ಕಾಗದ ಬರೆದು ಅವನ ಸುಖದ ಭೂಮಿಯಲ್ಲಿ ನಾನೇ
ವಿಷಬೀಜ ಬಿತ್ತಲಿ?' ಎಂದು ತನ್ನಲ್ಲಿಯೇ ಸಮಾಧಾನಗೊಳ್ಳುವಳು. ಎಷ್ಟೆ
ವಿರಹವೇದನೆಯನ್ನು ತಂದರೂ, ಕೃಷ್ಣಮೂರ್ತಿಯ ನೆನಪು ಸೀತೆಯ ಬಾ
ಮರುಭೂಮಿಯಲ್ಲಿ ಹಸುರು ಹೊಲವಾಗಿತ್ತು. ಮುಳ್ಳು ಚುಚ್ಚಿದರೂ ಮೋಹ
ವಾಗಿತ್ತು, ನರುಗಂಪು ಸೂಸುತ್ತಿತ್ತು, ಮುಡಿದ ನಲ್ಲನ ನೆನಹಿನ ಹೂ.

'ಗಾಣದೆತ್ತಿನ ದುಡಿತ' ಎಂಬ ಮಾತಿನ ಅರ್ಥ ಸೀತೆಗೆ ಸಂಪೂರ್ಣ
ವಾಗಿತ್ತು—ಈ ಎರಡು-ಮೂರು ವರ್ಷಗಳ ಅವಧಿಯಲ್ಲಿ.

## ೨

ಸುಬ್ಬಸ್ವಾಮಿಯ ಸಾಲ ಬಹುಮುಖವಾಗಿ ಬೆಳೆದು ಈಗ ಪಾಪಾಸ
ಕಳ್ಳಿಯಂತಾಗಿತ್ತು. ಊರಿನ ಕಡೆ ಮುಖವೇ ಹಾಕಿರಲಿಲ್ಲ. ಮನಸ್ಸೇನೋ
ಪಿತ್ರಾರ್ಜಿತದ ಜೇನುಹುಟ್ಟಿಗೆ ನಾಲಗೆ ಚಾಚುತ್ತಿತ್ತು. ಅಲ್ಲಿ ಜೇನೆಲ್ಲಾ
ವೆಚ್ಚವಾಗಿ ಬರಿಯ ಮೇಣವೇ ಎಂಬುದನ್ನು ಅವನು ಕಾಣ. ಊರಿನ ಆಸ್ತಿ
ಯನ್ನು ಮಾರಿ ತನ್ನ ಸಾಲದ ಭಾಗವನ್ನಾದರೂ ಬಗೆಹರಿಸಿಕೊಳ್ಳೋಣವೆಂದರೆ,
ರಾಮಸ್ವಾಮಿಯ ಒಪ್ಪಿಗೆ ರುಜು ಇಲ್ಲದೆ ಏನೂ ಮಾಡುವಂತಿರಲಿಲ್ಲ. ಈ ಮಧ್ಯೆ
ಸಾಹುಕಾರ ರಾಮಪ್ಪನವರು ಸುಬ್ಬಸ್ವಾಮಿಗೆ ತಂದೆ ಮಾಡಿದ್ದ 'ಸಂಸಾರದ
ದರ್ದಿನ' ಸಾಲಕ್ಕಾಗಿ ಹಿರಿಯ ಮಗನಾದ ಸುಬ್ಬಸ್ವಾಮಿಗೆ ಒಂದು 'ತಗಾದೆ'
ಪತ್ರವನ್ನು ಬರೆದಿದ್ದರು. ಈ ಪರಿಸ್ಥಿತಿಯಲ್ಲಿ ಊರಿಗೆ ಹೋಗುವುದಕ್ಕಿಂತಲೂ

ಹೋಗದೆ ಇರುವುದೇ ಮೇಲೆಂದು ಭಾವಿಸುತ್ತಿದ್ದ.

ಒಂದು ದಿನ, ಇದ್ದಕ್ಕಿದ್ದ ಹಾಗೆ ಆಕಾಶದಿಂದೆಂಬಂತೆ ರಾಮಸ್ವಾಮಿ ಸುಬ್ಬಸ್ವಾಮಿಯ ಮನೆಯಲ್ಲಿ ಅವತರಿಸಿದನು. ಅವನು ಕೊಳಲೂರಿಗೂ ಸಕಲೇಶಪುರಕ್ಕೂ ಭೇಟಿ ಕೊಟ್ಟೇ ಬಂದಿದ್ದನು. ತಾನು ಕರಿಯಣ್ಣನೊಂದಿಗೆ ಎಲ್ಲವನ್ನೂ ಮಾತಾಡಿರುವುದಾಗಿಯೂ, ಇಬ್ಬರೂ ಕೂಡಿ ತಾಯಿಯೊಂದಿಗೆ ಆಸ್ತಿಯನ್ನೆಲ್ಲ ರಾಮಪ್ಪನವರ ಸಾಲಕ್ಕೆ ಬರೆದುಕೊಟ್ಟುಬಿಟ್ಟರೆ, ಕೈಗೆ ಒಟ್ಟು ಏಳನೂರ ಐವತ್ತು ರೂಪಾಯಿ ಬರುವುದಾಗಿಯೂ ತಮ್ಮ ಅಣ್ಣನಿಗೆ ವಿವರಿಸಿದನು. ಬೇರೆ ಸಂದರ್ಭದಲ್ಲಿ, ಸುಬ್ಬಸ್ವಾಮಿ ಇನ್ನೇನಲ್ಲದಿದ್ದರೂ ತಮ್ಮನನ್ನು ನಾಲ್ಕು ಮಾತು ಅನ್ನಬೇಕು. ಕೈಗೆ ಇನ್ನೂರು ಮುನ್ನೂರು ಬರುವುದೆಂಬ ಸಂತಸದಲ್ಲಿ ತಮ್ಮ ತಾತ್ಕಾಲಿಕವಾಗಿ ಬೇಕಾದವನಾದನು.

ರಾಮಸ್ವಾಮಿ ಎರಡು–ಮೂರು ದಿನ ಅಣ್ಣನ ಮನೆಯಲ್ಲಿ ಇದ್ದ.

ಒಂದು ಮಧ್ಯಾಹ್ನ ರಾಮಸ್ವಾಮಿಗೆ ಸೀತೆ ಬಡಿಸುತ್ತಿದ್ದಳು. ಅವನ ಮುಂದೋಳಿನ ಮೇಲೆ 'ರಾಮಿ' ಎಂಬೆರಡು ಅಕ್ಷರಗಳು ಮೊದಲ ಬಾರಿಗೆ ಸೀತೆಯ ಕಣ್ಣಿಗೆ ಬಿದ್ದುವು. ಈಗ ಅವು ಕಂಡರೆ ಕಾಣಲಿ ಎಂಬ ಧೈರ್ಯ ರಾಮಸ್ವಾಮಿಗೆ. ಆಗ ಸೀತೆಗೆ ಹೊಳೆಯಿತು—ಕೊಲೆಯ ಸಂಬಂಧದಲ್ಲಿ ರಾಮಸ್ವಾಮಿ ಏಕೆ ತಲೆತಪ್ಪಿಸಿಕೊಂಡುಹೋಗಿದ್ದ ಎಂದು; ರಾಮಸ್ವಾಮಿ ಎಂಥವನಾಗಿದ್ದ ಎಂದು. ಮರುಕ್ಷಣದಲ್ಲೆ, ಅವನನ್ನು ನಿಂದಿಸಲು ತಾನು ಎಷ್ಟರವಳು ಎಂದುಕೊಂಡಳು. ಅವನು ಹೆಣ್ಣನ್ನು ತಾನಾಗಿ ಬಯಸಿ ಕೆಟ್ಟಿರಬಹುದು; ಗಂಡಸರು ತನ್ನನ್ನು ಬಯಸಿ ತಾನು ಕೆಟ್ಟಿರಬಹುದು. ಪರಿಣಾಮ ಒಂದೇ ಆಯಿತು. ಅಣ್ಣನಿಗೆ ತಕ್ಕ ತಂಗಿ ಎಂದುಕೊಂಡಳು. ಮನಸ್ಸಿಗೆ ತುಂಬ ನೋವಾಯಿತು. ಬೆನ್ನಹಿಂದೆಯೇ ಕೃಷ್ಣಮೂರ್ತಿಯ ನೆನಪು ಬಂದು ನೋವನ್ನು ಮಾಯಿಸಿತು.

"ಪುಟ್ಟಣ್ಣಯ್ಯ ಈಗ ಇದೇ ಊರಿನಲ್ಲಿ ಸಿಟಿ ಪೋಸ್ಟಾಫೀಸಿನಲ್ಲಿ ಇದಾನೆ, ಸೀತೆ—" ಎಂದು ರಾಮಸ್ವಾಮಿ ತುತ್ತಿನ ನಡುವೆ ಹೇಳಿದ. ಅವನ ಮಾತಿನಲ್ಲಿ ಏನು ಉದ್ದೇಶ ಇತ್ತೋ ಅವಳಿಗೆ ಹೊಳೆಯಲಿಲ್ಲ, ಆದರೂ ಆ ಹೆಸರು ಕಹಿ ನೆನಪನ್ನು ತಂದಿತು. "ಅವನು ಎಲ್ಲಿ ಇದ್ದರೆ ನನಗೇನು?" ಎಂದಳು. "ನಿನ್ನನ್ನ ವಿಚಾರಿಸಿದ. ಅದಕ್ಕೆ ಹೇಳಿದೆ—" ಎಂದನವನು.

" ಇನ್ನು ಕೊಂಚ ಕೂಟು ಹಾಕಲಿ, ರಾಮಸ್ವಾಮಿ " ಎಂದು ಸೀತೆ ಮಾತನ್ನು ತಿರುಗಿಸಿದಳು.

ಅಣ್ಣ ತಮ್ಮಂದಿರಿಬ್ಬರೂ ಊರಿಗೆ ಹೋಗಿ ವ್ಯವಹಾರವನ್ನು ಪೂರೈಸಿದರು. ಕಳೆದುಳಿದ ಹೊಲ ಗದ್ದೆ ಮನೆ—ಎಲ್ಲ ಮಾರಿಯಾದ ಮೇಲೆ, ನಿರೀಕ್ಷಿಸಿದ್ದಕ್ಕಿಂತ ಹೆಚ್ಚಾಗಿಯೇ ಹಣ ಬಂದಿತು. ಇಬ್ಬರೂ ಸಕಲೇಶಪುರಕ್ಕೆ ಹೋಗಿ ತಾಯಿಗೆ ವರದಿಮಾಡಿದರು. ತಾಯಿಯ ಸಲಹೆಯಂತೆ, ನೂರು ರೂಪಾಯನ್ನು ಅರಿಶಿನ ಕುಂಕುಮಕ್ಕೆಂದು ಕಾವೇರಿಗೆ ಕೊಡಲಾಯಿತು. ಉಳಿದ ಹಣ ಮೂರು ಭಾಗವಾಗಿ, ತಾಯಿಗೆ ಮುನ್ನೂರು, ಅಣ್ಣತಮ್ಮಂದಿರಿಗೆ ತಲಾ ಮುನ್ನೂರು ಬಂದಿತು. ಪಾರ್ವತಮ್ಮನವರು ಮಕ್ಕಳು ತಮಗೆ ಕೊಟ್ಟ ಹಣವನ್ನು, " ಸೀತೆಗೆ ಕೊಡಪ್ಪ " ಎಂದು ಸುಬ್ಬಸ್ವಾಮಿಯ ಕೈಗೆ ಹಾಕಿದರು. ರಾಮಸ್ವಾಮಿ ಮುನ್ನೂರನ್ನು ತೆಗೆದುಕೊಂಡು, " ಊರಿನಲ್ಲಿ ಚಿಲ್ಲರೆ ಅಂಗಡಿ ಇಡುತ್ತೀನಿ " ಎಂದು ಹೇಳಿ, ಎಲ್ಲಿಗೋ ಹೋದ. ಸುಬ್ಬಸ್ವಾಮಿ ಆರುನೂರು ರೂಪಾಯಿಯೊಂದಿಗೆ ಬೆಂಗಳೂರಿಗೆ ಹಿಂದಿರುಗಿದ.

ಸುಬ್ಬಸ್ವಾಮಿ ಮುನ್ನೂರು ರೂಪಾಯಿನ ವಿಚಾರವನ್ನು ಮೊದಲೇ ಸೀತೆಗೆ ಹೇಳಲಿಲ್ಲ; ಹೆಂಡತಿಗೆ ತಿಳಿಸಿದ. ಅವಳು ಏನೂ ತಿಳಿಸಬೇಕಾದ್ದಿಲ್ಲ ಎಂದು ಗಂಡನಿಗೆ ಆಜ್ಞೆಮಾಡಿದಳು. ಆದರೆ ಅವನ ಮನಸ್ಸಿಗೆ ಅದು ಒಪ್ಪಿತವಾಗಲಿಲ್ಲ " ಇದು ನಿನ್ನ ದುಡ್ಡಮ್ಮಾ, ಸದ್ಯಕ್ಕೆ ಬಳಸಿಕೊಂಡಿರುತ್ತೇನೆ...." ಎಂದು ಸೀತೆಯ ಅನುಮತಿ ಕೇಳಿದ. " ನೀನು ನನ್ನನ್ನ ಮೂರು ವರ್ಷ ಮಾನಸಹಿತ ಕಾಪಾಡಿಲ್ಲವೇ, ಅಪ್ಪ. ನೀನೇ ಬಳಸಿಕೋ—ನನಗೇನೂ ಬೇಡ " ಎಂದಳು, ಮನಃಪೂರ್ವಕವಾಗಿ. ಮಾರನೆಯ ದಿನವೇ ಸರೋಜಮ್ಮ ಗಂಡನಿಂದ ನೂರು ರೂಪಾಯಿ ಕಸಿದುಕೊಂಡಳು; ತಾನೇ ಹೋಗಿ, ತನಗಾಗಿ, ಎರಡು ರೇಷ್ಮೆ ಸೀರೆ ಕೊಂಡುತಂದಳು. ಸುಬ್ಬಸ್ವಾಮಿ ಐನೂರನ್ನು ' ಬೀಸುವ ದೊಣ್ಣೆಯ ಏಟು 'ಗಳನ್ನು ನಿವಾರಿಸಿಕೊಳ್ಳಲು ವಿನಿಯೋಗಿಸಿದ.

ಇದಾದ ಕೆಲವು ದಿನಕ್ಕೆ, ಚಿಕ್ಕಮ್ಮನ ಮನೆಯಿಂದ ಲಗ್ನಪತ್ರಿಕೆ ಬಂದಿತು. ಕೃಷ್ಣಮೂರ್ತಿಗೂ ಶಾರದೆಗೂ ಮದುವೆ! ಸೀತೆಗೆ ನೋವು-ನಲಿವಿನ ಸುದ್ದಿ.

' ಸಕಲೇಶಪುರಕ್ಕೂ ಹೋಗಿರುತ್ತೆ ಲಗ್ನಪತ್ರಿಕೆ. ಅಲ್ಲಿಂದ ಹೋದರೆ ತಂಗಿಯ ಮಗಳ ಮದುವೆ ಅಂತ ಅಮ್ಮ ಹೋಗಬೇಕು. ಅವಳನ್ನ ಕಳಿಸಿ

ಕೊಡುವವರು ಯಾರು ? ಜೊತೆಗೆ ಯಾರು ?.... ಇಲ್ಲಿಂದ ಯಾರೂ ಹೋಗುವು ದಿಲ್ಲ, ಬಹುಶಃ. ಶಾರದಮ್ಮನಿಗೆ ಒಂದು ಐದು ರೂಪಾಯಾದರೂ ಓದಿಸಿ ಕಳಿಸಬಹುದಲ್ಲ ? ಯಾಕೆ ಕಳಿಸುತ್ತಾರೆ, ಎಲ್ಲಾ ಬಿಟ್ಟು. ನಾನಾದರೂ ಕಳಿಸ ಬೇಕು—ಶಾರದೆಗೆ ಐದು ರೂಪಾಯಿ, ಕೃಷ್ಣಮೂರ್ತಿಗೆ ಐದು ರೂಪಾಯಿ. ನನ್ನ ಹತ್ತಿರ ಮೂರು ಕಾಸೂ ಇಲ್ಲ. ಸುಬ್ಬಣ್ಣನನ್ನೇ ಕೇಳಬೇಕು....'

ಇನ್ನೂ ಒಂದು ವಾರವಿತ್ತು ಮದುವೆಗೆ. ಮದುವೆಯ ಸುದ್ದಿ ಸೀತೆಯ ಮನಸ್ಸನ್ನು ನಾನಾ ಪ್ರಕಾರಗಳಲ್ಲಿ ಆಲೋಚನೆಗೀಡುಮಾಡಿತ್ತು :

'....ಕೃಷ್ಣಮೂರ್ತಿ ನನ್ನನ್ನ ಮರೆತುಬಿಟ್ಟದ್ದಾನೆ ಅಂತ ಕಾಣುತ್ತೆ. ಅಥವಾ ಮರೆತಿರಲಾರ. ಅನ್ನ ಬಟ್ಟೆ ಕೊಟ್ಟು, ವಿದ್ಯೆ ಕಲಿಸಿ ಕಾಪಾಡಿದವರು ಮಗಳನ್ನು ಮದುವೆಯಾಗು ಎಂದರೆ ಹೇಗೆ ಒಲ್ಲೆನ್ನುವುದು ? ಇಷ್ಟರಮೇಲೆ, ಶಾರದೆ ಕುರೂಪಿಯೂ ಅಲ್ಲ. ಯಾವ ನೆವ ಒಡ್ಡಿ ಒಲ್ಲೆನ್ನುವುದು ? ಅವಳನ್ನು ಮದುವೆಯಾದರೆ ದೊರೆಯುವ ಗೌರವ, ಸುಖ ನನ್ನನ್ನ ಕೂಡಿಕೊಂಡಿದ್ದರೆ ಅವನಿಗೆ ದೊರೆಯುತ್ತದೆಯೆ ? ಎಂದಿಗೂ ಇಲ್ಲ. ಅವನು ಮದುವೆಗೆ ಒಪ್ಪಿದ್ದೇ ಒಳ್ಳೆಯದಾಯಿತು. ನನಗೋಸ್ಕರ ಅವನೂ ಕಷ್ಟಪಡಬೇಕೆ ? ಅವನಾದರೂ ಸುಖವಾಗಿರಲಿ, ಚೆನ್ನಾಗಿ ಬಾಳುವೆ ಮಾಡಲಿ, ನಾಲ್ಕು ಮಕ್ಕಳು ಹಡೆಯಲಿ....'

ಮಕ್ಕಳ ಮಾತು ನೆನೆದು ಸೀತೆಗೆ ದುಃಖ ಉಮ್ಮಳಿಸಿ ಬಂತು ; ಹೊಟ್ಟೆ ಯಲ್ಲಿ ತಳಮಳವಾಯಿತು ; ಉಕ್ಕಿದ ದುಃಖವನ್ನು ನುಂಗಿಕೊಂಡಳು.

ತನ್ನ ಒಳ್ಳೆಯ ಹಾರೈಕೆಯ ಗುರುತಾಗಿ ವಧೂವರರಿಗೆ ಹೇಗಾದರೂ ಮಾಡಿ ಏನಾದರೂ ಕಳಿಸಲೇಬೇಕು ಎಂದು ನಿರ್ಧರಿಸಿಕೊಂಡಳು. ' ಹೇಗಾ ದರೂ ' ಎಂಬ ಪ್ರಶ್ನೆ ಹೇಗೂ ಬಗೆಹರಿಯದಾಯಿತು. ಕಡೆಗೆ ಅಣ್ಣನನ್ನೇ ಕೇಳಿದಳು. " ಸುಬ್ಬಣ್ಣ, ಒಂದು ಹತ್ತು ರೂಪಾಯಿ ಬೇಕಲ್ಲ...." ಎಂದು ಅತ್ತಿಗಮ್ಮ ಕಣ್ಮರೆಯಾಗಿದ್ದ ಸಮಯ ಕಾದು ಅವನನ್ನು ಕೇಳಿದಳು ; ಸಂದರ್ಭ ವನ್ನು ವಿವರಿಸಿದಳು : "....ಚಿಕ್ಕಮ್ಮನ ಮನೆಯಲ್ಲಿ ಅಷ್ಟು ದಿನ ಇದ್ದೆ. ಶಾರದೆಗೆ ನನ್ನದಾಗಿ ಏನಾದರೂ ಕಳಿಸಲೇಬೇಕು. ಅದಕ್ಕೋಸ್ಕರ." ಸೀತೆ ಕಳಿಸಿ ತಾನು ಕಳಿಸದಿದ್ದರೆ ಚೆನ್ನಾಗಿರುವುದೇ ? ತಾನೂ ಅವರ ಮನೆಯಲ್ಲಿ ಓದಿದವನಲ್ಲವೆ ? ಸೀತೆಯದೆಂದು ಕೊಟ್ಟ ಹಣವನ್ನು ತಾನು ಬಳಸಿಕೊಂಡಿರುವು ದಾಗಿದೆ. ಅವಳು ಈಗ ಕೇಳಿದಾಗ ಇಲ್ಲ ಎನ್ನುವುದೂ ಚೆನ್ನಾಗಿರದು—

" ಅವಳಿಗೆ ಹೇಳಬೇಡ, ನಾನು ಹಣ ಕೊಟ್ಟೆ ಅಂತ " ಎಂದು ಸೂಚನೆ ಕೊಟ್ಟು ಸೀತೆಗೆ ಹತ್ತು ರೂಪಾಯಿ ಕೊಟ್ಟ; ತಾನೂ ಹತ್ತು ರೂಪಾಯಿ ಕಳಿಸುವುದಾಗಿ ತೀರ್ಮಾನಿಸಿದ. ಮನಿಯಾರ್ಡರು ಫಾರಮ್ಮನ್ನು ತಾನೇ ಭರ್ತಿಮಾಡಿ, ಏನಾದರೂ ಬರೆಯುವುದಿದ್ದರೆ ಬರೆದುಕೊಡು ಎಂದು ಫಾರಮ್ಮನ್ನು ಸೀತೆಗೆ ಮರೆಯಲ್ಲಿ ಕೊಟ್ಟ. ಸೀತೆ ಅಣ್ಣನನ್ನು ಮನಸ್ಸಿನಲ್ಲಿಯೇ ವಂದಿಸಿದಳು. ಕೂಪನ್ನಿನ ಭಾಗದಲ್ಲಿ ಎರಡೇ ವಾಕ್ಯ ಬರೆದು, ಕೆಳಗೆ ತನ್ನ ಹೆಸರು ಬರೆದಳು :

'ಕೃಷ್ಣಮೂರ್ತಿ ಮತ್ತು ಸೌ. ಶಾರದೆಗೆ ಮದುವೆಯ ಶುಭದಿನದಲ್ಲಿ, ವಧುವಿನ ಕುಂಕುಮಭಾಗ್ಯ ಶಾಶ್ವತವಾಗಿರಲಿ ಎಂದು ಕೋರಿ, ವಧುವಿನ ಸೋದರಿ ಕಳಿಸಿಕೊಟ್ಟದ್ದು. ಇದನ್ನು ದಯಮಾಡಿ ನಮ್ಮ ತಾಯಿ ಪಾರ್ವತಮ್ಮನವರ ಹೆಸರಿನಲ್ಲಿ ವಧೂವರರಿಗೆ ಓದಿಸುವುದು—ಸೀತಾ.'

ಸೀತೆ ಹಾಗೆಂದು ಉದ್ದೇಶಪಡದಿದ್ದರೂ, ಕೃಷ್ಣಮೂರ್ತಿಗೆ ಉಳಿದೆಲ್ಲರಿಗಿಂತ ಹೆಚ್ಚಾಗಿ ಸೀತೆಯ ನೆನಪಾಯಿತು—ಅವಳು ಕಳಿಸಿದ್ದ ಹಣವನ್ನು ಓದಿಸಿದಾಗ. ಅಣ್ಣ ಸುಬ್ಬಸ್ವಾಮಿಯ ಮನೆಯಲ್ಲಿ ಸೀತೆ ಇರುವುದಾಗಿಯೂ ಕೃಷ್ಣಮೂರ್ತಿಗೆ ವ್ಯಕ್ತಪಟ್ಟಿತು. ಅವನು ಸೀತೆಗೆ ಒಂದು ಕಾಗದ ಬರೆಯಬೇಕೆಂದೂ ತೀರ್ಮಾನಿಸಿಕೊಂಡನು.

ಮದುವೆಯಾದ ಕೆಲ ದಿನಗಳಲ್ಲಿ ಕೃಷ್ಣಮೂರ್ತಿಯಿಂದ ಸೀತೆಗೆ ಒಂದು ಕಾಗದವೂ ಬಂದಿತು. ಎಂದೂ ಇಲ್ಲದ್ದು ಸೀತೆಗೆ ಒಂದು ಕಾಗದ ಬಂದದ್ದನ್ನು ಕಂಡು ಸರೋಜಮ್ಮನ ಮುಖ ಕೋಪದಿಂದ ಕೆಂಪೇರಿತು. ತಾನೇ ಈಸಿಕೊಂಡಿದ್ದ ಕಾಗದವನ್ನು, " ನಿನಗೆ ಯಾರೋ ಕಾಗದ ಬರೆದಿರುವ ಹಾಗಿದೆಯಮ್ಮ, ತೆಗೆದುಕೋ " ಎಂದು ತಾತ್ಸಾರದಿಂದ ಸೀತೆಯ ಬಳಿಗೆ ಎಸೆದಳು.

ಲಕ್ಕೋಟೆಯನ್ನು ಒಡೆದು ಸೀತೆ ಕಾಗದದ ಮೇಲೆ ಕಣ್ಣು ಹರಿಸಿದಳು :

ನನ್ನ ಪ್ರಿಯ ಸೀತೆ,

........ನಾನು ನಿನ್ನನ್ನು ಮರೆತಿದ್ದೇನೆ ಎಂದು ನೀನು ತಿಳಿದಿರಬಹುದು. ಇಲ್ಲ; ಎಂದಿಗೂ ಮರೆತಿಲ್ಲ; ಎಂದಿಗೂ ಮರೆಯಲಾರೆ. ಹೃದಯದ ಹಸೆಮಣೆಯ ಮೇಲೆ ನಿನ್ನನ್ನು ವರಿಸಿದ್ದೇನೆ; ನಿನಗೆ ಅಲ್ಲಿಯೇ ಸ್ಥಾನ. ನಿನ್ನ ತಂಗಿ ಶಾರದೆಯನ್ನು ಲೋಕರೂಢಿಯಂತೆ ಮದುವೆಯಾಗಿದ್ದೇನೆ. ನೀನು ನಿನ್ನ ತಂಗಿಗೆ ಕೋರಿದ ಶುಭ ನಡೆಯಲಿ

ಎಂದೇ ನನ್ನ ಹಾರೈಕೆ. ನಾನು ಬಲವಂತಕ್ಕೆ ಕಟ್ಟುಬಿದ್ದು, ಅನ್ನ ದಾತರಿಗೆ ಕೃತಘ್ನನಾಗಲು ಇಷ್ಟಪಡದೆ, ಶಾರದೆಯನ್ನು ಮದುವೆಯಾಗ ಬೇಕಾಗಿ ಬಂದಿತು. ನಿನಗೆ ಕೊಟ್ಟ ಭರವಸೆಯ ಮಾತು ಪೊಳ್ಳಲ್ಲ ದಿದ್ದರೂ, ಅದರಂತೆ ನಡೆಯುಲು ವಿಧಿ ಅವಕಾಶ ಕೊಡಲಿಲ್ಲ. ದೇವರು ಅನುಕೂಲಕೊಟ್ಟಾಗ, ನಾನು ಬೇರೆಯ ಸಂಸಾರ ಹೂಡಿದಾಗ, ನಾನು ಕೊಟ್ಟ ಮಾತನ್ನು ನಡಸುತ್ತೇನೆ. ತಂಗಿಯೊಂದಿಗೆ ನೀನು ಅಕ್ಕನಾಗಿ ಇರಬಹುದು. ಇದಕ್ಕೆ ಅವಳೂ ಆಕ್ಷೇಪಿಸಳು. ಪ್ರೇಮವೇ ರಹಸ್ಯ ವಾದುದು. ನಮ್ಮ ಪ್ರೇಮವನ್ನು ಹೊರಗಿನ ಲೋಕಕ್ಕೆ ಇರಲಿ, ಶಾರದೆಗೆ ತಾನೆ ಏಕೆ ತಿಳಿಸಬೇಕು? ಅವಳು ನೊಂದುಕೊಳ್ಳದಂತೆ ಇಬ್ಬರೂ ಒಬ್ಬರನ್ನು ಒಬ್ಬರು ಪ್ರೀತಿಸುತ್ತ ಒಟ್ಟಿಗೆ ಇರುವುದು ಸಾಧ್ಯ—ನೀನು ಅವಕಾಶ ಕೊಟ್ಟರೆ. ಆ ಕಾಲ ಬೇಗನೆ ಬರಲಿ ಎಂದು ಹಾರೈಸುತ್ತೇನೆ....

ನಿನ್ನ,

**ಕೃಷ್ಣಮೂರ್ತಿ**

"ನಮ್ಮ ಚಿಕ್ಕಮ್ಮನ ಮಗಳು ಶಾರದೆ ಬರೆದಿದ್ದಾಳೆ. ಅವರ ಮನೆಯಲ್ಲಿ ಮೂರು ತಿಂಗಳು ಇದ್ದೆನಲ್ಲಾ. ಮದುವೆಗೆ ಏಕೆ ಬರಲಿಲ್ಲ ಎಂದು ಆಕ್ಷೇಪಣೆ ಮಾಡಿದ್ದಾಳೆ...." ಇತ್ಯಾದಿಯಾಗಿ ಸೀತೆ ಅತ್ತಿಗಮ್ಮನಿಗೆ ಸುಳ್ಳು ಹೇಳಿದಳು. ಇಷ್ಟವಿಲ್ಲದೆ, ಕಾಗದವನ್ನು ಅಗ್ನಿದೇವನ ಸಂರಕ್ಷಣೆಗೆ ಒಪ್ಪಿಸಿದಳು.

ಸೀತೆಯ ಜಂಜಡದ ಬಾಳಿನಲ್ಲಿ ಹೊಸ ಹೊಂಗನಸೊಂದು ರೂಪಗೊಳ್ಳ ತೊಡಗಿತು; ತನಗಾಗಿ ಕುದಿಯುವ ಜೀವ ಒಂದಿದೆ ಎನ್ನಿಸಿ, ಬದುಕು ತುಸು ಮಟ್ಟಿಗೆ ಸಹ್ಯವಾಯಿತು.

೩

ರೂಪಗೊಂಡ ಹೊಂಗನಸಿನ ಗುಳ್ಳೆ ಒಡೆಯುತ್ತಿತ್ತು, ಮತ್ತೆ ರೂಪ ಗೊಳ್ಳುತ್ತಿತ್ತು. ಕೆಲ ಕಾಲ, ಅವಳ ಮನೋಮಂದಿರದಲ್ಲಿ ಇದೊಂದು ನಿತ್ಯ ನಾಟಕವಾಯಿತು.

'ಕೃಷ್ಣಮೂರ್ತಿ ಬೆಂಗಳೂರಿನಲ್ಲಿ ಉದ್ಯೋಗಸ್ಥನಾಗಿದ್ದಾನೆ; ಶಾರದೆ ಯೊಂದಿಗೆ ಸಂಸಾರ ಹೂಡಿದ್ದಾನೆ. ಇಲ್ಲಿಗೆ ಬಂದು ತನ್ನನ್ನೂ ಕರೆದುಕೊಂಡು

ಹೋಗಿದ್ದಾನೆ. ಅವನು ಹೇಳಿದ ಹಾಗೆ, ಶಾರದೆಯು ಅಕ್ಕನಂತೆ ಅವನ ಮನೆಯಲ್ಲಿ ತಾನು ಸುಖವಾಗಿದ್ದಾಳೆ. ಇಲ್ಲಿಯ ಬಂಧನ, ಬವಣೆ, ಬೇಗುದಿ—ಎಲ್ಲ ಮಾಯವಾಗಿದೆ.'

ಆದರೆ, ಕೂಡಲೆ, ವಸ್ತುಸ್ಥಿತಿಯ ಅರಿವಿನ ಮುಳ್ಳು ಆ ಸೊಗಸಾದ ಗುಳ್ಳೆಯನ್ನು ಒಡೆಯುತ್ತಿತ್ತು :

'ಎಲ್ಲ ಭ್ರಾಂತಿ ! ನಿನ್ನನ್ನ ಮದುವೆಯಾಗುತ್ತೇನೆ ಎಂದೇ ಹೇಳಿದ್ದ. ಮದುವೆಯಾದನೆ ? ಹಾಗೆಯೇ, ಸಂಸಾರವೊಂದಿಗನಾಗಿ ನನ್ನನ್ನು ಮನೆಗೆ ಸೇರಿಸಿಕೊಳ್ಳುವುದುಂಟೆ ? ಕಂಡವರು ಏನೆಂದುಕೊಂಡಾರು ಎಂದಾದರೂ ಹಿಂದೆ ಮುಂದೆ ನೋಡದೆ ಇರುತ್ತಾನೆಯೆ ? ಅಥವಾ ಅವನಿಗೆ ಇಷ್ಟವಿದ್ದರೂ, ಶಾರದೆ ಅಷ್ಟಕ್ಕೆ ಆವಕಾಶಕೊಡುವಳೆ ? ಎಲ್ಲ ಆಗದ ಹೋಗದ ಮಾತು....'

ಆದರೆ, ಮತ್ತೆ ಮತ್ತೆ, ಕೃಷ್ಣಮೂರ್ತಿಯ ಮನೆಯಲ್ಲಿ ಗೌರವಯುತವಾದ ಆಶ್ರಯ ಪಡೆಯುವ ಕನಸು ಕಾಣುವ ಪ್ರವೃತ್ತಿ ಬಲವಾಗುತ್ತಿತ್ತು. 'ಕಾದು ನೋಡೋಣ. ಅವನ ಮಾತಿನಲ್ಲಿ ಯಾಕೆ ಅಪನಂಬಿಕೆ ಇಡಬೇಕು ?' ಎಂದುಕೊಳ್ಳುವಳು.

ಕೃಷ್ಣಮೂರ್ತಿಯ ಆಗಮನಕ್ಕಾಗಿ ಸೀತೆ ವರ್ಷ ಕಾಲ ತಾಳ್ಮೆಯಿಂದ ಕಾದಳು ; ಈ ಕಾಯುವಿಕೆಯಲ್ಲಿ ಅವಳಿಗೊಂದು ಸುಖಾನುಭವವಿತ್ತು. ಅತ್ತಿಗೆಯ ಮನೆಯಲ್ಲಿನ ಬಾಳಿನ ಭಾರ ತುಸು ಹಗುರವಾಗಿತ್ತು.

ಈ ಕಾಲದಲ್ಲಿ, ಹೊರಕ್ಕೆ ಹೋಗದೆಯೇ ಒಂದು ಹೊಸ ಮುಖದ ಪರಿಚಯವಾಯಿತು : ಈ ವರೆಗೆ ಸುಬ್ಬಸ್ವಾಮಿಯ ಮನೆಯಲ್ಲಿ ಪರಿಚಯವಾಗದಿದ್ದ ಪುರುಷನ ಮುಖ.

ಸುಬ್ಬಸ್ವಾಮಿಯ ಸಾಲಸೋಲ ಚಿಲ್ಲರೆ ಚಿಲ್ಲರೆಯಾಗಿ ಹತ್ತಾರು ಕಡೆ ಹರಡಿ, 'ಹಾಗದ ಕಪಿ ಮುಪ್ಪಾಗದ ಬೆಲ್ಲ ತಿಂದಿತು' ಎನ್ನುವಂತೆ, ತಿಂಗಳು ತಿಂಗಳೂ ಸಾಲದ ಕಡೆಗೆ ಕೈಬಿಟ್ಟುಹೋಗುವ ಹಣವೆಲ್ಲ ಬಡ್ಡಿಯ ಭೂತದ ಅರೆಹೊಟ್ಟೆಗೂ ಸಾಲುತ್ತಿರಲಿಲ್ಲ. ಈ ಚೆದರಿದ ಸಾಲವನ್ನೆಲ್ಲ ಒಟ್ಟಿಗೆ ಒಂದು ಕಡೆ ಮಾಡಿ, ಪಠಾನರ ಮತ್ತು ಮಾರ್ವಾಡಿಗಳ ತಿಂಗಳ ಮೊದಲ ತಾರೀಕು ಕಚೇರಿಯ ಸಂದರ್ಶನಗಳನ್ನು ತಪ್ಪಿಸಿಕೊಳ್ಳಬೇಕೆಂದು ಸುಬ್ಬಸ್ವಾಮಿ ಒಂದು ದೀರ್ಘಾವಧಿಯ ಯೋಜನೆಯನ್ನು ಆಲೋಚಿಸಿ, ಅದರ ಫಲಪ್ರಾಪ್ತಿಗಾಗಿ

ಆಪ್ತಸ್ನೇಹಿತರೊಬ್ಬರ ಮೂಲಕ 'ಬಡ್ಡಿ' ಭೀಮರಾಯರ ಸಹಾಯವನ್ನು ಯಾಚಿಸಿದನು.

ಬಡ್ಡಿ ಭೀಮರಾಯರು ಸಾಲಗಾರರಿಂದ ಅಸಲನ್ನು ಬಯಸುತ್ತಲೇ ಇರಲಿಲ್ಲ, ಅದಕ್ಕಾಗಿ ತಗಾದೆ ಮಾಡುತ್ತಿರಲಿಲ್ಲ, ಕೋರ್ಟು ಕಚೇರಿ ಹತ್ತುತ್ತ ಇರಲಿಲ್ಲ. ತಾವು ಧರ್ಮಬಡ್ಡಿಯನ್ನು ಮಾತ್ರ ವಸೂಲುಮಾಡುವುದಾಗಿ ಅವರ ಹೇಳಿಕೆ. ಅವರು ಪಠಾನರಂತೆ ಕಚೇರಿಯ ಬಳಿಗೆ ಹೋಗಿ ಸಾಲಗಾರರ ಮಾನ ಮರ್ಯಾದೆ ಕಳೆಯದೆ ಪ್ರತಿ ತಿಂಗಳಲ್ಲಿಯೂ ಮೊದಲ ವಾರದಲ್ಲಿ ಒಂದು ದಿನ ಸಾಲಗಾರರ ಮನೆಯ ಬಾಗಿಲಿಗೆ ಜಟಕಾದಲ್ಲಿ ಬಂದುಬಿಡುತ್ತಿದ್ದರು. ಜಟಕಾ ಅವರ ಸ್ವಂತದ್ದು. ಅದರ ಕುದುರೆಯ ಕೊರಳಿಗೆ ಕಟ್ಟಿದ್ದ ಗೆಜ್ಜೆಗಳ ಘಲಿರು ಸಾಲಗಾರರ ಮನೆಯವರಿಗೆ ಬೇಗನೆ ಪರಿಚಯವಾಗಿ, ಅದರ ಸದ್ದು ತಿಂಗಳ ಪ್ರಾರಂಭದಲ್ಲಿ ಕೇಳಿದಾಗ 'ಬಡ್ಡಿ ಭೀಮರಾಯರು ಬಂದರು' ಎಂದು ಹೇಳಿ ಬಿಡುತ್ತಿದ್ದರು. ಬಡ್ಡಿ ವಸೂಲಿಯಲ್ಲೂ ಅವರ ರೀತಿನೀತಿ ಬಹು ಮೃದು, ಆದರೆ ಬಹು ಜಿಗುಟು. ಬೇರೆಯ ಕಡೆ ಸಾಲಮಾಡಿಯಾದರೂ ಅವರ ಬಡ್ಡಿ ಸಲ್ಲಿಸಿಬಿಡಬೇಕು. ಇದು ಅವರ ಕಡ್ಡಾಯದ ಷರತ್ತು. ಹೀಗೆ, ತಪ್ಪದೆ ತಮ್ಮ ಈ ವರೆಗಿನ ಲೇವಾದೇವಿಯ ವೃತ್ತಿಯಲ್ಲಿ ಗಳಿಸಿದ್ದ ಬಡ್ಡಿಯಿಂದಲೇ ಅವರು ಬಸವನಗುಡಿಯಲ್ಲಿ ಒಂದು ಬಂಗಲೆ, ಎರಡು ಸಾಧಾರಣ ಮನೆಗಳು, ಮಲ್ಲೇಶ್ವರದಲ್ಲಿ ಮೂರು ಮನೆ, ವಿಶ್ವೇಶ್ವರಪುರದಲ್ಲಿ ಎರಡು ಮನೆ, ಚಾಮ ರಾಜಪೇಟೆಯಲ್ಲಿ ಎರಡು ಮನೆ—ಹೀಗೆಯೇ ಅನೇಕ ಮನೆಗಳ ಮಾಲೀಕ ರಾಗಿದ್ದರು. 'ಬಡ್ಡಿಬಾಚಿ'ಯಿಂದ ಜೀವಿಸುತ್ತಿದ್ದ ಅವರು ಬಡ್ಡಿಬಾಚಿ, ಈಗ ಮನೆಯಬಾಡಿಗೆಯಿಂದಲೇ ಜೀವಿಸುತ್ತಿದ್ದಾರೆ ಎಂದು ಜನ ಹೇಳಿಕೊಳ್ಳು ತ್ತಿದ್ದರು. ಅವರ ಓಡಾಟದ ಬಹು ಭಾಗವಂತೂ ಬಡ್ಡಿ ವಸೂಲಿಗಾಗಿಯೇ ಮೀಸಲಾಗಿತ್ತು. ಅವರ ದೃಷ್ಟಿಯಲ್ಲಿ 'ಕನಿಷ್ಠ' ಮೊತ್ತವೇ ಇಲ್ಲ. ಒಂದು ರೂಪಾಯಿ ಸಾಲದಿಂದ ಒಂದು ಸಾವಿರದ ವರೆಗೆ, 'ಆಸಾಮಿ'ಯ ಧಡೂತಿ ನೋಡಿಕೊಂಡು, ಸಾಲ ಕೊಡುತ್ತಿದ್ದರು. ಅಂತೂ, ನಾನಾ ಕಾರಣಗಳಿಂದ ಬಹು ಒಳ್ಳೆಯ ಅರ್ಥದಲ್ಲಿಯೇ ಅವರು ಬಡ್ಡಿಭೀಮರಾಯರೆಂದೇ ಪ್ರಸಿದ್ಧರು.

ಭೀಮರಾಯರು ರೂಪಿನಲ್ಲಿ ಸುಂದರರೆಂದೇ ಹೇಳಬೇಕು. ಸುಮಾರು ಮೂವತ್ತು ಮೂವತ್ತೈದರ ಪ್ರಾಯವಾದರೂ ಗಾತ್ರ ಮಹಿಮೆಯಿಂದ ನಲವ

ತ್ತರ ಪ್ರಾಯದವರಾಗಿ ಕಾಣುತ್ತಿದ್ದರು. 'ಚಾಮರಾಜ ಒಡೆಯರ' ಮಿಾಸೆ, ಜೊತೆಗೆ ಜರಿಯ ಪೇಟ, ಕಿವಿಗೆ ಹತ್ತ ಕಡುಕು, ಕಪ್ಪು 'ಅಲ್ಪಾಕ' ನಿಲುವಂಗಿ, ಮೇಲುಕೋಟೆ ಗುಂಡಂಚಿನ ಪಂಚೆ, ಪೂನಾದ ಕೆಂಪು ಮೊಚ್ಚೆ, ಬಲಗೈಗೆ ಚಿನ್ನದ ಕಾಪು, ಎರಡು ಕೈಗಳ ಎರಡೆರಡು ಬೆರಳುಗಳಲ್ಲಿ ವಜ್ರದ ಉಂಗುರ, ಜೇಬಿನಿಂದ ಇಳಿಯಬಿಟ್ಟ ಬೆಳ್ಳಿಯ ಗಡಿಯಾರದ ಸರಪಣಿ—ಇವೆಲ್ಲಾ ಅವರ ಭವ್ಯ ಆಕೃತಿಗೆ ಒಪ್ಪಿದ್ದುವು; ಅವರಿಗೊಂದು ರಾಜಠೀವಿಯನ್ನು ಕೊಟ್ಟಿದ್ದುವು. ಅವರು ದಾರಿಯಲ್ಲಿ ನಡೆದುಹೋಗುತ್ತಿದ್ದರೆ—ಗಾಡಿಯನ್ನು ಬಾಡಿಗೆಗೂ ಹೊಡೆಸುತ್ತ ಇದ್ದದ್ದರಿಂದ ಅವರು ನಡೆಯುತ್ತಿದ್ದುದೂ ಉಂಟು—ಯಾರೇ ಆಗಲಿ ಅವರ ಕಡೆಗೊಮ್ಮೆ ತಿರುಗಿ ನೋಡುವಂತಿತ್ತು, ಅವರ ವಿಶಿಷ್ಟ ವ್ಯಕ್ತಿ ಸ್ವರೂಪ.

ಸುಬ್ಬಸ್ವಾಮಿಗೆ ಈಚೆಗೆ ತಾನೆ ಹೊಸದಾಗಿ ಸಾಲ ಕೊಟ್ಟಿದ್ದ ಭೀಮ ರಾಯರು ಮೊದಲನೆಯ ತಿಂಗಳ ಬಡ್ಡಿ ವಸೂಲು ಮಾಡುವುದಕ್ಕೆ ಐದನೆಯ ತಾರೀಖು ಬೆಳಗ್ಗೆ ಹೊತ್ತಿಗೆ ಮುಂಚೆಯೇ ಬಂದುಬಿಟ್ಟರು. ಸುಬ್ಬಸ್ವಾಮಿ ಇನ್ನೂ ಮನೆಯಲ್ಲಿ ಇದ್ದ. ಅವನು ಅವರನ್ನು ಆದರಪೂರ್ವಕವಾಗಿ ಬರ ಮಾಡಿಕೊಂಡು ಮುಂದುಗಡೆಯ ಕೋಣೆಯಲ್ಲಿ ಕೂರಿಸಿಕೊಂಡ. ಆಗತಾನೇ ಕಾಫಿ ಕಾಯಿಸಿ ಅದು ಸಿದ್ಧವಾಗಿತ್ತು. ಕೋಣೆಗೆ 'ಅಣ್ಣ'ನನ್ನು ಹುಡುಕಿ ಕೊಂಡುಬಂದ ರಾಧಾಕೃಷ್ಣನಿಗೆ, "ಎಲ್ಲಿ, ಹೋಗಿ ಎರಡು ಲೋಟ ಕಾಫಿ ತರುವಹಾಗೆ ಹೇಳು, ಅಮ್ಮನಿಗೆ" ಎಂದು ಸುಬ್ಬಸ್ವಾಮಿ ಹೇಳಿದ. ಹುಡುಗ ಒಳಕ್ಕೆ ಹೋಗಿ, ತಂದೆ ಹೇಳಿದ್ದನ್ನು ಹೇಳಿದ. ಸರೋಜಮ್ಮ, "ಕಾಫಿ ಆಗಿದೆ. ತಗೊಂಡುಹೋಗಿ ಕೊಡು ಸೀತೆ, ಮುಂದುಗಡೆ ರೂಮಿನಲ್ಲಿ ಇದಾರೆ" ಎಂದು ಎರಡು ಲೋಟ ಕಾಫಿಯನ್ನು ಒಂದು 'ಜರ್ಮನ್ ಸಿಲ್ವರ್' ತಟ್ಟೆ ಯಲ್ಲಿಟ್ಟು, ಸೀತೆಯ ಕೈಲಿ ಕೊಟ್ಟಳು. ಸೀತೆ ಕಾಫಿಯನ್ನು ಕೋಣೆಗೆ ಕೊಂಡೊಯ್ದು, ಇಬ್ಬರಿಗೂ ಕಾಫಿ ಕೊಟ್ಟಳು.

ಆಗ ಸೀತೆಯ ಉಡಿಗೆತೊಡಿಗೆ ಬೆಳಗ್ಗೆಯ ಕೆಲಸದ ಚಿಹ್ನೆಗಳನ್ನು ಚೆನ್ನಾಗಿ ತೋರುತ್ತಿತ್ತು; ಸೀರೆಯ ನೆರಿ ಸೆಕ್ಕಿಸಿಕೊಂಡಿದ್ದಳು; ತಲೆಯ ಮುಂಗುರುಳು ಕೆದರಿ ಹಾರಾಡುತ್ತಿತ್ತು. ಈಚೆಗಂತೂ ಸೀತೆ ಕೃಶಳಾಗಿಯೇ ಇದ್ದಳು. ಆದರೂ ಅವಳ ಸಹಜ ಸೌಂದರ್ಯ ಭೀಮರಾಯ ಕಣ್ಣಿಗೆ

ಸೊಗಸುಣಿಸದೆ ಹೋಗಲಿಲ್ಲ. ಯಾವಾಗಲೂ ಸ್ತ್ರೀಸೌಂದರ್ಯದ ಕಡೆಗೆ ಒಲವುಳ್ಳ ಭೀಮರಾಯರು, ಕೃತಕ ವಜ್ರಗಳ ನಡುವೆ ನಿಜವಾದ ವಜ್ರವನ್ನು ಪರೀಕ್ಷೆಮಾಡಬಲ್ಲ ರತ್ನಪಡಿ ವರ್ತಕನಂತೆ, ಆಕರ್ಷಕವಲ್ಲದ ಉಡುಪಿನಲ್ಲಿದ್ದ ಸೀತೆಯ ನೈಜ ಸೌಂದರ್ಯವನ್ನು ಗುರುತಿಸಿದರು.

ಕ್ಷಣಕಾಲ ಕೊರಲೆತ್ತಿ ನೋಡಿ, ಭೀಮರಾಯರು ಬಹು ಮರ್ಯಾದೆಯ ರೀತಿಯಲ್ಲಿ ತಲೆ ಬಗ್ಗಿಸಿ ಕಾಫಿಯ ಬಟ್ಟಲನ್ನು ತುಟಿಯತ್ತ ಒಯ್ದರು.

ಸುಬ್ಬಸ್ವಾಮಿ ಬಡ್ಡಿಯ ಹಣವನ್ನು ತಂದುಕೊಟ್ಟ. ಮೊದಲನೆಯ ತಿಂಗಳೇ ಸುಸ್ತಿಯಾಗುವಷ್ಟು ಅವಿವೇಕಿಯಲ್ಲ ಅವನು ; ನುರಿತ ಸಾಲಗಾರ! ಭೀಮರಾಯರಿಗೂ ತೃಪ್ತಿಯಾಯಿತು.

“ಕಾಫಿ ತಂದು ಕೊಟ್ಟರಲ್ಲ, ನಿಮ್ಮ?....” ಎಂದು ಭೀಮರಾಯರು ತಮ್ಮ ಪ್ರಶ್ನೆಯನ್ನು ಅರ್ಧಕ್ಕೇ ನಿಲ್ಲಿಸಿದರು. ‘ಮಗಳೇ ?’ ಎಂದು ಕೇಳ ಬೇಕಾಗಿತ್ತು ; ತಮ್ಮ ವಯಸ್ಸಿನವನೇ ಆದ ಸುಬ್ಬಸ್ವಾಮಿಗೆ ಅಷ್ಟು ದೊಡ್ಡ ಮಗಳಿರುವುದು ಅಸಂಭವವೆಂದು ಶಂಕಿಸಿ, ಪ್ರಶ್ನೆಯನ್ನು ನುಂಗಿಕೊಂಡಿದ್ದರು.

“ನನ್ನ ತಂಗಿ” ಎಂದ ಸುಬ್ಬಸ್ವಾಮಿ.

“ಅಯ್ಯೋ ಪಾಪ” ಎಂದು ಭೀಮರಾಯರು ಕಾಫಿಯ ಲೋಟವನ್ನು ಕೆಳಗಿಟ್ಟು, ಕರವಸ್ತ್ರದಿಂದ ಕಾಫಿಯ ರುಚಿಯಲ್ಲಿ ಪಾಲುಗೊಂಡಿದ್ದ ಮೀಸೆಯ ಅಪರಾಧವನ್ನು ಒರಸತೊಡಗಿದರು.

ಎದ್ದು ಹೊರಕ್ಕೆ ಹೊರಡುವ ಮುನ್ನ ಭೀಮರಾಯರು ಮನೆಯ ಹಜಾರಕ್ಕೆ ನುಗ್ಗಿದರು ; ಸುತ್ತ ಕಣ್ಣಾಡಿಸಿದರು ; ಮೊದಲು ಕಣ್ಣಿಗೆ ಬಿದ್ದದ್ದು ಸರೋಜಮ್ಮನ ‘ಫೋಟೋ ಎನ್‌ಲಾರ್ಜ್‌ಮೆಂಟ್’, ಅದರಲ್ಲಿ ಮುಗುಳುನಗೆ ಸೂಸುತ್ತಿದ್ದ ಅವಳ ಆಕರ್ಷಕ ಸುಂದರ ವದನ ; ಎರಡು ನಿಮಿಷವಾದಮೇಲೆ, ಟವಲಿನಿಂದ ಮುಖ ಒರಸಿಕೊಳ್ಳುತ್ತ ಹೊರಕ್ಕೆ ಬರುತ್ತಿದ್ದ ಚಿತ್ರದ ಮೂಲ ವ್ಯಕ್ತಿಯೇ ಅವರ ಕುತೂಹಲ ದೃಷ್ಟಿಗೆ ಚೆಲುವಿನ ಪ್ರಖರ ಪ್ರಭೆಯನ್ನು ಎರಚಿತು. ಅದೇ ತಾನೇ ಪ್ರಾತಃಕಾಲದ ಅಲಂಕರಣಕ್ಕೆ ತೊಡಗಿದ್ದಳು ಸರೋಜಮ್ಮ. ಸೀತೆಯ ನಿರಾಭರಣ ಕರುಣಾಜನಕ ಸೌಂದರ್ಯ ಸರೋಜಮ್ಮನ ಸಾಲಂಕೃತ ಹಿನ್ನೆಲೆಯಲ್ಲಿ ಅವರಿಗೆ ಸ್ಪಷ್ಟವಾಗಿ ನೆನಪಿಗೆ ಬಂದಿತು. ಈಕೆ, ಈಕೆಯ ಚಿತ್ರ, ಮನೆಯ ಅಚ್ಚುಕಟ್ಟಿನ ಸ್ಥಿತಿ, ಒಪ್ಪ ವಾರಣ

—ಭೀಮರಾಯರು ಹಾಗೆ ಯೋಚಿಸಿದರು—' ಇಂಥ ರಂಭೆಯನ್ನು ಕೈಹಿಡಿದ ಮೇಲೆ ಸುಬ್ಬಸ್ವಾಮಿ ಸಾಲಗಾರನಾಗಿರುವುದು ಆಶ್ಚರ್ಯವೇನಲ್ಲ ಬಡ್ಡಿ ಸಲೀಸಾಗಿ ಬರುವಂತೆ, ಅಸಲಿಗೆ ಮೋಸ ಆಗದ ಹಾಗೆ, ಇವನೊಂದಿಗೆ ಸರಿಯಾಗಿ ವ್ಯವಹರಿಸಬೇಕು' ಎಂದು ತೀರ್ಮಾನಿಸಿಕೊಂಡರು. ಸೀತೆಯ ವಿಚಾರ ಪ್ರಶ್ನಿಸಿದಂತೆ, ಸರೋಜಮ್ಮನ ವಿಚಾರ ಪ್ರಶ್ನಿಸುವ ಆವಶ್ಯಕತೆ ಉಂಟಾಗಲಿಲ್ಲ. ಹಜಾರ ಬಿಟ್ಟು ಹೊರಕ್ಕೆ ಬರುವಾಗ, "ಎಷ್ಟು ಬಾಡಿಗೆ?" ಎಂದು ಭೀಮರಾಯರು ಪ್ರಶ್ನಿಸಿದರು. "ಇಪ್ಪತ್ತೈದು" ಎಂದ ಸುಬ್ಬಸ್ವಾಮಿ. "ಹೆಚ್ಚು" ಎಂದರು ಅವರು. "ಹೌದು" ಎಂದು ಇವನು ಒಪ್ಪಿಕೊಂಡ. ಅವರ ಅರ್ಥ ಬೇರೆ; ಇವನ ಅರ್ಥವೇ ಬೇರೆ.

ಭೀಮರಾಯರು ಸುಬ್ಬಸ್ವಾಮಿಯ ಮನೆ ಬಿಟ್ಟು ಹೊರಡುವಾಗ ಎರಡು ಚಿತ್ರಗಳು ಅವರ ಮನಃಪಟಲದ ಮೇಲೆ ಪ್ರತಿಬಿಂಬಿತವಾದುವು: ಒಂದು ಸೀತೆಯ ಮ್ಲಾನ ಲಾವಣ್ಯ ರೂಪ, ಅಸಹಾಯಕವಾದ ಹೆಣ್ಣು ಜಿಂಕೆಯಂತಹದು; ಇನ್ನೊಂದು ಸರೋಜಮ್ಮನ ಪ್ರಕಾಶಮಾನ ಸೌಂದರ್ಯ, ಹೊಳೆಹೊಳೆಯುವ ಹೆಣ್ಣು ಹೆಬ್ಬಲಿಯಂತಹದು. ಅದು ಕಾಡುಮಲ್ಲಿಗೆ, ಇದು ಉದ್ಯಾನದ ರೋಜ ಎಂಬ ಭಾವ ಭೀಮರಾಯರ ಮನಸ್ಸಿನಲ್ಲಿ ಉಂಟಾಯಿತು. ಸಹಜವಾಗಿಯೇ ಸೀತೆಯ ನೆನಪು ಅವರ ಮನಸ್ಸಿನಲ್ಲಿ ಅಂಕಿತವಾಯಿತು; ಸರೋಜಮ್ಮನದು ಅಳಿಸಿಹೋಗದಿದ್ದರೂ ಅಂಕಿತಗೊಳ್ಳಲಿಲ್ಲ.

೪

ಭೀಮರಾಯರು ಹತ್ತು ಹನ್ನೆರಡು ವರ್ಷಗಳಿಂದ ಅನೇಕ ಸಾಲಗಾರರ ಮನೆಗಳಲ್ಲಿ ಮನೆಯವರೊಂದಿಗೆ ಸಲಿಗೆ ಹೊಂದಿದ್ದವರು; ಸಂಕೋಚವಿಲ್ಲದೆ ಮನೆಯ ಹೆಂಗಸರೊಂದಿಗೆ ಮಾತನಾಡಿ ಹೋಗುತ್ತಿದ್ದರು. ಇಲ್ಲಿ ಮಾತ್ರ ಅವರ ಅನುಭವ ಬೇರೆಯಾಯಿತು. ಎರಡನೆಯ ತಿಂಗಳು ಸುಬ್ಬಸ್ವಾಮಿ ಇಲ್ಲದಿದ್ದಾಗ ಅವರು ಮನೆಗೆ ಬಂದಿದ್ದರು. ಕೇಳಿದ ನಾನಾ ಪ್ರಶ್ನೆಗಳಿಗೆ, ಸರೋಜಮ್ಮನ ಸಿಡುಕು ಮೋರೆಯಿಂದ ಬಂದ 'ಇಲ್ಲ', 'ಗೊತ್ತಿಲ್ಲ', 'ನಾ ಕಾಣೆ' ಎಂಬ ಕಟುದನಿಯ ದ್ವ್ಯಕ್ಷರಿ ತ್ರ್ಯಕ್ಷರಿಗಳು ಆಕೆ ಹೆಣ್ಣು ಹುಲಿಯೆಂಬ ಅವರ ಭಾವನೆಯನ್ನು ಬಲಪಡಿಸಿದುವು. ಮೂರನೆಯ ದಿನ ಅವರು ಬೇರೆಯ ಮಾರ್ಗ

ಹಿಡಿದರು; ಅವೊತ್ತು ಸುಬ್ಬಸ್ವಾಮಿ ಮನೆಯಲ್ಲಿ ಇರಲಿಲ್ಲ—ಜೇಕೆಂದೇ ಎಂದಿಗಿಂತ ಹೊತ್ತಿಗೆ ಮುಂಚೆ ಮನೆ ಬಿಟ್ಟಿದ್ದ. ಭೀಮರಾಯರು ಹೋಗು ವಾಗಲೇ ಧೈರ್ಯಮಾಡಿ, ಸಲಿಗೆ ವಹಿಸಿ, "ಸೀತಮ್ಮಾ" ಎಂದೇ ಕೂಗಿ ಕೊಂಡು ಹೋದರು. ಕರೆದಾಗ ಬರದಿರುವುದು ಹೇಗೆ? ಸೀತೆ ಬಂದಳು; ಕೇಳಿದ ಪ್ರಶ್ನೆಗಳಿಗೆ ಸಹಜವಾಗಿ, ಮೃದು ಧ್ವನಿಯಲ್ಲಿ, ಸೌಜನ್ಯವನ್ನು ತೋರುವುದಕ್ಕಾಗಿ ಬಾರದ ನಗೆಯನ್ನು ಬೀರುತ್ತ ಎರಡಕ್ಷರದ ಮಾತುಗಳನ್ನೇ ಆದರೂ ವೀಣೆಯ ತಂತಿಯಲ್ಲಿ ಗಮಕವನ್ನು ಹೊರಡಿಸುವ ಹಾಗೆ ನಯವಾಗಿ ಆಡಿದಳು. ಹಿಂದಿನ ದಿನ ಅತ್ತಿಗೆ ಆಡಿದ ಮಾತಿನ ರೀತಿಯನ್ನೂ ಅದಕ್ಕೆ ಪ್ರತಿಕ್ರಿಯೆಯಾಗಿ ಭೀಮರಾಯರ ಮುಖದ ಸುಪ್ರಸನ್ನತೆ ಬಿಗುವುಗೊಂಡಿ ದ್ದುದನ್ನೂ ಅವಳು ಗಮನಿಸಿದ್ದಳು. ಸಾಲ ಕೇಳಲು ಬಂದವರಿಗೆ ಬಡ್ಡಿ ಕೊಡ ದಿದ್ದರೂ ಚಿಂತೆಯಿಲ್ಲ; ಎರಡು ಒಳ್ಳೆಯ ಮಾತಾದರೂ ಬೇಡವೆ? ಸಾಲ ಈಸಿಕೊಂಡವರೇ ಸಾಲ ಕೊಟ್ಟವರ ಹಾಗೆ ನಡೆದುಕೊಂಡರೆ? ಅತ್ತಿಗೆಯ ವರ್ತನೆ ವಿವೇಕರಹಿತವಾಗಿತ್ತೆಂದು ಸೀತೆ ಆ ಕೂಡಲೆ ನಿರ್ಧರಿಸಿದ್ದಳು. ಅಣ್ಣನ ಕ್ಷೇಮಕ್ಕಾಗಿ ತಾನೇ ಮುಂದೆ ಬಂದು, ಸುಪ್ರಸನ್ನತೆಯ ಮುಖವಾಡ ಧರಿಸಿ, ಭೀಮರಾಯರಿಗೆ ತೃಪ್ತಿಕರವಾಗಿ ಉತ್ತರ ಹೇಳಿದ್ದಳು. ಸೀತೆಯ ಸುಪ್ರಸನ್ನತೆ ಭೀಮರಾಯರ ಸಹಜ ಸುಪ್ರಸನ್ನತೆಯನ್ನು ಇಂದು ಕಳೆಯಲಿಲ್ಲ, ದಿಟ. ಆದರೆ ಅದು ಅವಳು ನಿರೀಕ್ಷಿಸದಿದ್ದ ಬೇರೆಯ ಪರಿಣಾಮವನ್ನು ಬೀರತೊಡಗಿತು.

'ಈ ಹೆಣ್ಣು ವಿಧವೆಯಾಗಿಲ್ಲದಿದ್ದಿದ್ದರೆ ನಾನೇ ಮದುವೆಯಾಗಬಹುದಾ ಗಿತ್ತು' ಎಂಬ ಮಧುರ ಭಾವವೊಂದು ಅವರ ಮನಸ್ಸಿನಲ್ಲಿ ಸುಳಿಯಿತು— ಅವರು ಅಂದು ಹಿಂದಿರುಗಿ ಹೋಗುವಾಗ.

ಅವರು ಅತ್ತ ಹೋದರೋ ಇಲ್ಲವೋ, ಇತ್ತ ಸರೋಜಮ್ಮ ಸೀತೆಯನ್ನು ಝಂಕಿಸತೊಡಗಿದಳು:

"ಅಲ್ಲವೇ ಸೀತೆ, ಹೆಂಡತಿಯಾದ ನಾನೇ ತೇಲಿಸಿ ತೇಲಿಸಿ ಉತ್ತರ ಕೊಟ್ಟಿದ್ದೀನಿ. ನೀನು ಮನೆ ಯಜಮಾನಿಗಿಂತ ಹೆಚ್ಚಾಗಿ 'ಅಲ್ಲಿಗೆ ಹೋಗಿ ದಾರೆ, ಇಲ್ಲಿಗೆ ಹೋಗಿರಬಹುದು, ಆಗ ಬರ್‍ತಾರೆ, ಈಗ ಸಿಕ್ತಾರೆ, ಬಂದರೆ ನೀವು ಬಂದಿದ್ದಿರಿ ಅಂತ ಹೇಳುತೀನಿ' ಅಂತ ಹೇಳೋದಕ್ಕೆ ನಿನಗೆ ಯಾರು ಅಧಿಕಾರ ಕೊಟ್ಟವರು?"

ಇದು ಅತ್ತಿಗೆಯ ಬಗೆಯಾಗಿರಲಿಲ್ಲ; ಅತ್ತೆಯ ರೀತಿಯಾಗಿತ್ತು.

" ನಾನು ಹಾಗೆಲ್ಲಿ ಹೇಳಿದೆ, ಅತ್ತಿಗಮ್ಮ? ನೀನು ಹೇಳಿದ್ದನ್ನೇ ಸ್ವಲ್ಪ ನಯವಾಗಿ ಹೇಳಿದೆ, ಅಷ್ಟೆ."

" ಹೌದು, ಹೌದು. ನೀನೇ ನಯ ಕಂಡವಳು. ನಾನು ಅವನ ಕೂಡ ನಯವಾಗಿ ನಗುನಗುತ್ತ ಮಾತಾಡಿ ಅವನನ್ನ ಒಲಿಸಿಕೊಳ್ಳಬೇಕಾಗಿದೆಯೆ ?"

" ಮಾತಾಡಿ ಪ್ರಯೋಜನವಿಲ್ಲ, ಅತ್ತಿಗಮ್ಮ. ನಾಳೆಯಿಂದ ಅವರಿಗೆ ನೀವೇ ಉತ್ತರ ಕೊಡಿ, ಹೇಗೆ ಬೇಕೋ ಹಾಗೆ."

" ನನ್ನ ಕೇಳಿದ್ದರೆ ನಾನೇ ಹೇಳುತ್ತಾ ಇದ್ದೆ. ಆತ ನಿನ್ನ ಹೆಸರು ಹಿಡಿದು ಕೂಗಿಕೊಂಡು ಬಂದರಲ್ಲಾ. ಇನ್ನೊಂದು ದಿನ ಅವನು ಕೇಳೋದೂ ನಿನ್ನನ್ನೇ. ಏನು ಹೇಳಬೇಕೋ ಅದನ್ನ ಹೇಗೆ ಹೇಳಬೇಕೋ ಹಾಗೆ ಹೇಳ ಬೇಕು."

" ನಾನು ಹೇಳಬಾರದ್ದನ್ನ ಏನು ಹೇಳಿರೋದು ?"

" ಏನೇ ? ' ಸೊಸೈಟಿಗೆ ಹೋಗಿದಾರೆಯೇ ಅವರು ' ಅಂತ ಕೇಳಿದರೆ, ಗೊತ್ತಿಲ್ಲ ಅಂತ ಹೇಳಬೇಕೇ ಹೊರತು ' ಇಲ್ಲ ' ಅಂತ ಯಾಕೆ ಹೇಳಿದೆ? ' ಹತ್ತರ ಹೊತ್ತಿಗೆ ಬಂದರೆ ಸಿಗುತ್ತಾರೆಯೆ ' ಅಂತ ಕೇಳಿದರೆ, ' ಕಾಣೆ ' ಅಂತ ಹೇಳದೆ ' ಹೂಂ ' ಅಂತ ಯಾಕೆ ಅಂದೆ ?"

" ನಿನ್ನಷ್ಟು ಅನುಭವ ಇಲ್ಲ ಅತ್ತಿಗಮ್ಮ ನನಗೆ. ನೀನೇ ಹೇಗೆ ಬೇಕೋ ಹಾಗೆ ಉತ್ತರ ಹೇಳಿಕಳಿಸಿಕೋ. ನಾನು ಬಾಯಿ ಮುಚ್ಚಿಕೊಂಡಿರುತ್ತೇನೆ."

" ನೀನು ಇರುವುದು ಯಾತಕ್ಕೆ ?"

ಸೀತೆ ಪ್ರತ್ಯುತ್ತರ ಕೊಡದೆ ಒಳಕ್ಕೆ ಹೊರಟುಹೋದಳು. ಸರೋಜಮ್ಮ ಗಂಡನ ಕೂಡ ಸೀತೆಯ ' ಸ್ವಚ್ಛಂದ ' ವರ್ತನೆಯನ್ನು ಖಂಡಿಸಿ ಮಾತನಾಡಿ ದಳು. ಸುಬ್ಬಸ್ವಾಮಿಯ ಸ್ಥಿತಿ ' ಅತ್ತ ದರಿ, ಇತ್ತ ಹುಲಿ ' ಎನ್ನುವ ಹಾಗಿತ್ತು.

ಹೀಗೆ, ನಾನಾ ರೀತಿಯ ಸಣ್ಣ ಪುಟ್ಟ ಘಟನೆಗಳನ್ನೆಲ್ಲಾ ದೊಡ್ಡದು ಮಾಡಿ, ಬಣ್ಣ ಕಟ್ಟಿ, ಜೀವ ತುಂಬಿ, ಸೀತೆಯ ಮೇಲೆ ಗಂಡನೊಂದಿಗೆ ದೂರು ವುದು ನಿತ್ಯ ಪಾಠವಾಯಿತು.

" ಅಲ್ಲ, ರಾಧಾಕೃಷ್ಣನಿಗೆ ಸಂಜೆಯ ಹೊತ್ತು ಸ್ವಲ್ಪ ಪಾಠ ಹೇಳಿಕೊಡು ಸೀತೆ ಅಂದರೆ ಏನು ಹೇಳಿದಳು ಗೊತ್ತೆ ?" ಸುಬ್ಬಸ್ವಾಮಿ ಹೇಳಿದ್ದನ್ನೆಲ್ಲಾ

ನುಂಗಲು ಸಿದ್ಧನಾಗಿ ಮೌನವಾಗಿದ್ದ. "ನಾನೇನು ಮೇಡಂ ಕೆಟ್ಟುಹೋದೆನೆ" ಎಂದಳು.

ಸಕಲ ಸಿದ್ಧತೆಗಳನ್ನೂ ಮಾಡಿಕೊಂಡು, ಕೋಟೆಯ ಮೇಲೆ ಮುತ್ತಿಗೆ ಹಾಕುವಂತೆ, ಸರೋಜಮ್ಮ ಒಂದು ದಿನ ಗಂಡಸಿಗೆ 'ತೀರ್ಮಾನಿಕೆ' ಕೊಟ್ಟು ಬಿಟ್ಟಳು: "....ಇನ್ನು ನಿಮ್ಮ ತಂಗಿಯ ಜೊತೆ ಏಗುವುದಕ್ಕೆ ನನಗೆ ಆಗುವು ದಿಲ್ಲ. ಇವಳಿಗೆ ಹಾಕುವ ಹಿಟ್ಟನ್ನ ಯಾರಿಗೆ ಹಾಕಿದರೂ ಮನೆಗೆಲಸ ಮಾಡಿ ಕೊಂಡು ಹೋಗುತ್ತಾರೆ. ಇವಳ ಹೆಚ್ಚುಗಾರಿಕೆ ಏನು? ಇವಳು ಇನ್ನು ನಮ್ಮ ಮನೇಲೆ ಇದ್ದರೆ ನಮಗೆ ಕೆಟ್ಟ ಹೆಸರು ಬರುತ್ತೆ ಅಷ್ಟೆ. ನಾನು ಎಷ್ಟು ಹೇಳಿ ದರೂ ಕೇಳೋದಿಲ್ಲ. ಆ ಭೀಮರಾಯ ಈಚೆಗೆ ಬರೋದೂ ಹೆಚ್ಚಾಗಿದೆ. ಇವಳು ಒಂದು ಮಾತಿನಲ್ಲಿ ಉತ್ತರ ಹೇಳದೆ, ಅವನ ಕೂಡ ನಗುನಗುತ ಯಾಕೆ ಮಾತನಾಡಬೇಕು? ಅದು ಹಾಗಿರಲಿ, ನಾನು ಬಸುರಿಯಾಗಿರೋದು ಇವಳಿಗೆ ಹೊಟ್ಟೆಕಿಚ್ಚು! 'ರಾಧಾಕೃಷ್ಣನಿಗೆ ಏಳು ವರ್ಷ ಅಲ್ಲವೆ ಅತ್ತಿಗಮ್ಮ' ಅಂತ ಕೊಂಕು ಮಾತಾಡ್ತಾಳೆ...."

'ಏನಾದರೂ ಮಾಡಿ, ಸೀತೆಯನ್ನು ಬೇರೆ ಎಲ್ಲಿಗಾದರೂ ಕಳಿಸಿ' ಎಂಬ ಮಾತನ್ನು ಮಾತ್ರ ಸರೋಜಮ್ಮ ಬಾಯಿಬಿಟ್ಟು ಆಡಲಿಲ್ಲ.

"ನಾನು ಅಲಂಕಾರ ಮಾಡಿಕೊಂಡರೆ ಇವಳಿಗೇನು? ಇಬ್ಬರೂ ಒಟ್ಟಿಗೆ ತಲೆ ಬಾಚಿಕೊಳ್ಳೋದಕ್ಕೆ ಕೂತಿದ್ದೆವು. ಕೊಬ್ಬರಿಎಣ್ಣೆ ಆಗಿಹೋಗಿತ್ತು. ಸ್ವಲ್ಪ 'ಹೇರಾಯಿಲ'ನ್ನೆ ತೊಡೆದುಕೋ ಎಂದರೆ, 'ನನಗ್ಯಾಕೆ ಹೇರಾಯಿಲ್ಲು ಗೀರಾ ಯಿಲ್ಲು?' ಎಂದಳಲ್ಲ! ಏನು ಅವಳ ಮಾತಿನ ಅರ್ಥ? ನಾನು ಸೂಳೇ ಹಾಗೂ, ತಾನು ಗರತಿಯ ಹಾಗೂ ಆಡುತಾಳೆ. ನಾವು ಸ್ವಲ್ಪ ಅವಕಾಶ ಕೊಟ್ಟರೆ ಆ ಭೀಮರಾಯನ ಹಿಂದೆ ಓಡಿಹೋಗುವುದಕ್ಕೆ ಸಿದ್ಧವಾಗಿದ್ದಾಳೆ...."

ಸುಬ್ಬಸ್ವಾಮಿ ಹೆಂಡತಿ ಹೇಳಿದ್ದನ್ನೆಲ್ಲಾ ಎಡಗಿವಿಯಿಂದ ಕೇಳಿ ಬಲ ಗಿವಿಯಿಂದ ಹೊರಕ್ಕೆ ಬಿಡುತ್ತಿದ್ದ; ಇಂದೂ ಹಾಗೇ ಮಾಡಿದ.

ಈ ನಡುವೆ ಭೀಮರಾಯರ ಮಗಳ ಮದುವೆ ಗೊತ್ತಾಗಿ, ಎಲ್ಲ ಸಾಲ ಗಾರರಿಗೂ ಕೊಟ್ಟಿದ್ದಂತೆ ಸುಬ್ಬಸ್ವಾಮಿಗೂ ಲಗ್ನಪತ್ರಿಕೆ ಬಂದಿತ್ತು. ಬರಿಯ ಲಗ್ನಪತ್ರಿಕೆಯಾಗಿದ್ದರೆ ಉದಾಸೀನ ಮಾಡಬಹುದಾಗಿತ್ತು. ಭೀಮರಾಯರೇ ಬಂದು ಬಲವಂತ ಮಾಡಿ ಕರೆದು ಹೋಗಿದ್ದರು. "....ಸೀತಮ್ಮನನ್ನೂ ಕರೆದು

ಕೊಂಡು ಬನ್ನಿ" ಎಂದು ಹೇಳಿ ಹೋಗಿದ್ದರು. ಮದುವೆಯ ದಿನ, ಊಟ ಮಾಡಿಕೊಂಡು ಎರಡು ಗಂಟೆಯ ಧಾರೆಯ ಹೊತ್ತಿಗೆ ಎಲ್ಲರೂ ಹೋಗುವು ದೆಂದೂ, ಸುಬ್ಬಸ್ವಾಮಿ ಕಚೇರಿಯಿಂದ ಹಿಂದಿರುವಾಗ ಒಟ್ಟಿಗೆ ಬರುವುದೆಂದೂ ಸಿದ್ಧಾಂತವಾಯಿತು. ಆದರಂತೆ, ಹೊರಡುವಾಗ ಸೀತೆ ತಾನು ಬರುವುದಿಲ್ಲ ಎಂದು ಹೇಳಿಬಿಟ್ಟರು. ಆದರ ಕಾರಣ ಬೇರೆ.

ಕೃಷ್ಣಮೂರ್ತಿ ಈಗ ಬೆಂಗಳೂರಿನಲ್ಲಿ ಉದ್ಯೋಗಸ್ಥನಾಗಿದ್ದ. ಸೀತೆ ಯನ್ನು ನೋಡಲೋಸುಗ ಸುಬ್ಬಸ್ವಾಮಿಯ ಮನೆಯನ್ನು ಹುಡುಕಿಕೊಂಡು ಒಂದು ದಿನ ಸಂಜೆ ಬಂದ. "ಸುಬ್ಬಸ್ವಾಮಿ ಅವರ ಮನೆ ಇದೇಯೇ?" ಎಂದು ಅಪರಿಚಿತ ತರುಣನೊಬ್ಬನು ಬಂದು ಕೇಳಿದಾಗ, ಬಾಗಿಲಿನಲ್ಲಿಯೇ ನಿಂತಿದ್ದ ಸರೋಜಮ್ಮ ತಕ್ಷಣ "ಹ್ದೂ" ಎಂದು ಉತ್ತರಿಸಿದ್ದಳು. ಅವನು ಹಿಂದೆ ಮುಂದೆ ನೋಡದೆ ಕೇಳಿದ ಮರು ಪ್ರಶ್ನೆ: "ಸೀತೆ ಇಲ್ಲೇ ಇದ್ದಾಳಲ್ಲವೆ? ಅವಳನ್ನು ನೋಡಿಕೊಂಡು ಹೋಗೋಣ ಅಂತ ಬಂದೆ." 'ಸೀತೆ ಗೀತೆ ಯಾರೂ ಇಲ್ಲ ಇಲ್ಲಿ' ಎಂದು ಸರೋಜಮ್ಮ ಹೇಳಬೇಕು, ಅಷ್ಟರಲ್ಲಿ ಹೊರಗೆ ನಿಂತಿದ್ದ ಕೃಷ್ಣಮೂರ್ತಿಯನ್ನು ಒಳಗಿನಿಂದಲೇ ಗುರುತಿಸಿ, ಸೀತೆ ಧಾವಿಸಿ ಹೊರಕ್ಕೆ ಬಂದಳು.

"ನಮ್ಮ ಚಿಕ್ಕಮ್ಮನ ಮಗಳು ಶಾರದೆಯ ಯಜಮಾನರು ಅತ್ತಿಗಮ್ಮ" ಎಂದು ಸೀತೆ ಪ್ರಫುಲ್ಲವದನಳಾಗಿ ಪರಿಚಯ ಮಾಡಿಕೊಟ್ಟಳು. "ಓ! ನನಗೆ ಗೊತ್ತೇ ಇರಲಿಲ್ಲ" ಎಂದು ಸರೋಜಮ್ಮ ಉದಾಸೀನಳಾಗಿ ಹೇಳಿದಳು. "ಒಳಕ್ಕೆ ಬಾ, ಕೃಷ್ಣಮೂರ್ತಿ. ಒಂದು...." ಅಷ್ಟಕ್ಕೇ ನಿಲ್ಲಿಸಿದಳು ಸೀತೆ. '....ಲೋಟ ಕಾಫಿ ತೆಗೆದುಕೊಂಡು ಹೋಗುವೆಯಂತೆ' ಎಂಬ ಮಾತುಗಳು ಹೊರಬರಲು ಅಂಜಿ ಒಳಗಡಗಿಕೊಂಡುವು. "ಇಲ್ಲೇ ಯಾವುದಾದರೂ ಮನೆ ಖಾಲಿ ಇದೆಯೇ ಅಂತ ಹುಡುಕುತ್ತಾ ಇದ್ದೆ. ಹಾಗೇ ನೆನಪಾಯಿತು. ನೋಡಿಕೊಂಡು ಹೋಗೋಣ ಅಂತ ಬಂದೆ" ಎಂದು ಹೇಳಿ, "ನಿಮ್ಮ ಅಣ್ಣ ಇದ್ದಾರೋ?" ಎಂದು ಕೇಳಿದ. "ಇಲ್ಲಾ, ಕಚೇರಿಯಿಂದ ಬಂದಿಲ್ಲ. ನಾಳೆ ಬಾ, ಪುರುಸೊತ್ತಾದರೆ" ಎಂದು ಸೀತೆ ಹೇಳಿದಳು. ಅದಕ್ಕೆ "ಆಗಲಿ" ಎಂದು ಕೃಷ್ಣಮೂರ್ತಿ ಹೊರಟುಹೋದ. ಭೀಮರಾಯರ ಮನೆಯ ಮದುವೆಯ ಹಿಂದಿನ ಸಂಜೆ ಇದು ನಡೆದದ್ದು.

ಸರೋಜಮ್ಮನಿಗೆ ಸೀತೆಯ ಮಾತುಗಳಲ್ಲಿ ಸಂದೇಹವೇನಿರಲಿಲ್ಲ. ಆದರೂ ತಾನು ಇಲ್ಲದಿದ್ದಾಗ ಆ ಕೃಷ್ಣಮೂರ್ತಿ ಮನೆಗೆ ಬರುವುದು ಅವಳಿಗೆ ಇಷ್ಟವಾಗಲಿಲ್ಲ. ಸೀತೆ ಮದುವೆಯ ಮನೆಗೆ ಬರುವುದಿಲ್ಲ ಎಂದಾಗ, ಕೃಷ್ಣಮೂರ್ತಿಗೋಸ್ಕರ ಒಬ್ಬಳೇ ಇರಬೇಕಾಗಿ ಬಯಸುತ್ತಾಳೆ ಎಂದು ಊಹಿಸಿದಳು. ಆದರೆ ಮದುವೆಯ ಮನೆಯ ಆಹ್ವಾನದ ವಿಷಯ ಕೃಷ್ಣಮೂರ್ತಿಗೆ ತಿಳಿಯದು ಎಂಬುದನ್ನು ಊಹಿಸಲಿಲ್ಲ.

ಸರೋಜಮ್ಮನ ಎಣಿಕೆ ತಪ್ಪಾಯಿತು. ಮಾರನೆಯ ದಿನ ಕೃಷ್ಣಮೂರ್ತಿ ಬೆಳಗ್ಗೆಯೇ ಬಂದ. ಆಗ ಸುಬ್ಬಸ್ವಾಮಿ ಮನೆಯಲ್ಲಿಯೂ ಇದ್ದ. ಪರಸ್ಪರ ಪರಿಚಯ ಮಾಡಿಕೊಂಡು, ಇಬ್ಬರೂ ಸಂತೋಷಿಸಿದರು. ಕೃಷ್ಣಮೂರ್ತಿಯೇ ಆಗಲಿ ಸೀತೆಯೇ ಆಗಲಿ ಪರಸ್ಪರ ಅಪೇಕ್ಷಣೀಯವಲ್ಲದ ಆಸಕ್ತಿಯನ್ನು ವ್ಯಕ್ತಪಡಿಸಲಿಲ್ಲ. ಕೇವಲ ಎರಡು–ಮೂರು ಕುಶಲಪ್ರಶ್ನೆಯ ಮಾತುಗಳನ್ನಾಡಿದರು. ಸುಬ್ಬಸ್ವಾಮಿಯೇ ಹೆಂಡತಿಗೆ ಹೇಳಿ, ಕಾಫಿ ಮಾಡಿಸಿ ತರಿಸಿಕೊಟ್ಟ. ಚಿಕ್ಕಮ್ಮನ ಅಳಿಯ ಎಂದರೆ ಮನೆಯ ಅಳಿಯನಿಗೆ ಸಮಾನ ಎಂದು ಭಾವನೆ. "ಕೆಲಸ ಇದೆ, ನಾನು ಬರುತ್ತೇನೆ.... ಇಲ್ಲೇ ಊಟಕ್ಕೇಳಬಹುದಲ್ಲ ?" ಎಂದ ಸುಬ್ಬಸ್ವಾಮಿ. ಕೃಷ್ಣಮೂರ್ತಿ, "ಹೋಟಲಿಗೆ ತೆರುವ ಹಣ ಏಕೆ ದಂಡವಾಗಬೇಕು ?" ಎಂದು ಊಟಕ್ಕೆ ಬರಲೊಪ್ಪಲಿಲ್ಲ. "ಹಾಗಿದ್ದರೆ ಸರಿ" ಎಂದು ಸುಬ್ಬಸ್ವಾಮಿ ಹೊರಕ್ಕೆ ಹೊರಟ. ಆಗ, ಕೃಷ್ಣಮೂರ್ತಿ ಇನ್ನೂ ಕೋಣೆಯಲ್ಲೇ ಕುಳಿತಿದ್ದ, ಸೀತೆ ಬಂದರೆ ಹೇಳಿಹೋಗುವುದೆಂದು. ಊಹಿಸಿದಂತೆ, ಬೀಳ್ಕೊಳ್ಳಲು ಸೀತೆ ಬಂದಳು. ಬೆನ್ನ ಹಿಂದೆ ಸರೋಜಮ್ಮನ ಕಾವಲಿದೆ ಎಂದು ಕಾಣಳು. "ಕೃಷ್ಣಮೂರ್ತಿ, ಇವತ್ತು ಯಾರದ್ದೋ ಮದುವೆಯ ಮನೆಗೆ ಎಲ್ಲರೂ ಹೋಗ್ತಾರೆ. ಪುರಸೊತ್ತಾದರೆ ಮಧ್ಯಾಹ್ನ ಮೂರು ಗಂಟೆ ಹೊತ್ತಿಗೆ ಬಾ. ತುಂಬ ಮಾತಾಡಬೇಕು" ಎಂದು ಮೆಲ್ಲನೆಯೇ ಹೇಳಿದಳು, ಕೋಣೆಯೊಳಕ್ಕೆ ಕೊರಳು ಚಾಚಿ. "ನೀನು ಹೋಗುವುದಿಲ್ಲವೆ ?" ಎಂದು ಕೃಷ್ಣಮೂರ್ತಿ ಕೇಳಿದ; "ಇಲ್ಲ" ಎಂದಳು. "ಹಾಗಿದ್ದರೆ ಬರುತ್ತೀನಿ" ಎಂದು ಒಪ್ಪಿ, ಹೊರಡಲು ಎದ್ದ. ಈ ಮಾತುಗಳನ್ನೆಲ್ಲಾ ಸರೋಜಮ್ಮ ಕೇಳಿಸಿಕೊಂಡಿದ್ದಳು.

ಈ ಸಂದರ್ಭವಿಲ್ಲದಿದ್ದರೆ, ಸೀತೆ ಮದುವೆಯ ಮನೆಗೆ ಬರುವುದಿಲ್ಲವೆಂದಿ

ದ್ದರೆ ಸರೋಜಮ್ಮ ಸುಮ್ಮನಿದ್ದು ಬಿಡುತ್ತಿದ್ದಳು. ಸೀತೆ ಬರುವುದಿಲ್ಲವೆಂದಾ
ಅವಳ ಮತ್ತು ಕೃಷ್ಣಮೂರ್ತಿಯ ಭೇಟಿಗೆ ಕಲ್ಲುಹಾಕುವ ಮನಸ್ಸು
ಮಾಡಿದಳು.

" ಹಾಗೆಂದರೆ ಹೇಗೆ, ಸೀತೆ? ನಾವು ಯಾರೂ ಮನೆಯಲ್ಲಿಲ್ಲದಿರುವಾ
ನೀನು ಒಬ್ಬಳೇ ಇರುವುದೆಂದರೇನಮ್ಮಾ? ನಮ್ಮ ಮನೆಯಲ್ಲಿ ನೀನು ಇರುವ
ವರೆಗೂ ಇಲ್ಲದ ಅಪಖ್ಯಾತಿ ನಮಗೆ ಬೇಡವಮ್ಮ" ಎಂದು ಸರೋಜಮ
ವ್ಯಂಗ್ಯವಾಗಿ ನುಡಿದಳು. ಸೀತೆ ಅತ್ತಿಗಮ್ಮನ ಮಾತಿಗೆ ಪ್ರತಿ ಹೇಳಲಾರದ
ಳಾಗಿ, ಜೊತೆಯಲ್ಲಿ ಹೊರಡಲು ಒಪ್ಪಿದಳು.

ಪಾಪ, ಕೃಷ್ಣಮೂರ್ತಿ ಅಂದು ಕಚೇರಿಗೆ ರಜ ತೆಗೆದುಕೊಂಡಿದ್ದ
ಮಧ್ಯಾಹ್ನ ಬಂದು, ಬಾಗಿಲ ಬೀಗದ ಮುಖ ನೋಡಿಕೊಂಡು, ನಿರಾಶನಾ
ಹಿಂದಿರುಗಿದ. ಸೀತೆಯೂ ಮದುವೆಗೆ ಹೋಗಿರಬೇಕೆಂದು ಊಹಿಸಿದ.

ಸೀತೆಯೂ ಸರೋಜಮ್ಮನೂ ಲಗ್ನದ ಹೊತ್ತಿಗೇ ಹೋಗಿದ್ದರು
ಸುಬ್ಬಸ್ವಾಮಿಯ ಹೆಸರಿನಲ್ಲಿ ಸರೋಜಮ್ಮ ವಧುವಿಗೆ ಒಂದು ರವಿಕೆಕಣ
ಓದಿಸಿದಳು—ತನ್ನ ದೊಡ್ಡಸ್ತಿಕೆ ಮೆರೆಯುವುದಕ್ಕಾಗಿ. ತಕ್ಕಮಟ್ಟಿಗೆ ಒಳ್ಳೆಯ
ಸೀರೆಯನ್ನೇ ಉಟ್ಟು, ಆಭರಣವಿಲ್ಲದಿದ್ದರೂ ಆಕರ್ಷಕಳಾಗಿ ಕಂಡ ಸೀತ
ಹಲವು ಯುವತಿಯರ ನೆಟ್ಟ ನೋಟಕ್ಕೆ ಪಾತ್ರಳಾದಳು; ಚಿಕ್ಕವರು ದೊಡ್ಡ
ರೆನ್ನದೆ ಹಲವು ಗಂಡಸರ ಕಣ್ಣಾಸೆಗೆ ಒತ್ತಾಸೆಯಾದಳು.

ಎಲ್ಲರಿಗಿಂತ ಹೆಚ್ಚಾಗಿ ಸೀತೆಯ ಮನಸ್ಸಿಗೆ ನಾಟಿದ ವಿಷಯವೆಂದರೆ
ಸುಮಾರು ಹದಿನೈದು ವರ್ಷ ವಯಸ್ಸಿನ ವಧು ಪದ್ಮಾವತಿಯ ಎಳೆಯ
ಚೆಲುವು; ತಾಯಿಯಿಲ್ಲದ ತಬ್ಬಲಿ ಎಂದು ಧಾರೆಯ ಕಾಲದಲ್ಲಿ ವ್ಯಕ್ತಪಟ್ಟಾಗ
ಮೆಚ್ಚಿಗೆಯೊಂದಿಗೆ ಮರುಕವೂ ಆಯಿತು. ಈ ಭಾವಧಾರೆಯೊಂದಿಗೆ ಕೃಷ್ಣ
ಮೂರ್ತಿಯ ನೆನಪೂ ಆಗಿ, ಅವನು ನಿರಾಶೆಗೊಳ್ಳುವನಲ್ಲಾ ಎನ್ನಿಸಿತು.

ಒಳ್ಳೆಯ ಸೀರೆಯುಟ್ಟ ಸೀತೆ ಭೀಮರಾಯರ ವಿಶೇಷ ಗಮನಕ್ಕೆ
ಬೀಳದೆ ಹೋಗಲಿಲ್ಲ. ಎಲ್ಲರನ್ನೂ ಬೀಳ್ಕೊಳ್ಳುವಾಗ, " ನೀವು ಸೀತಮ್ಮನನ್ನ
ಎಲ್ಲಿ ಕರೆದುಕೊಂಡು ಬರುವುದಿಲ್ಲವೋ ಎಂದಿದ್ದೆ. ಕರೆದುಕೊಂಡು ಬಂದದ್ದು
ತುಂಬ ಸಂತೋಷವಾಯಿತು" ಎಂದು ಅವರು ಸುಬ್ಬಸ್ವಾಮಿಗೆ ಹೇಳಿದರು.

೫

ಕೃಷ್ಣಮೂರ್ತಿ ತನ್ನ ಮನೆಯ ಕಡೆ ಸುಳಿಯದಂತೆ ಸರೋಜಮ್ಮ ಆತನಿಗೆ ಅಪಮಾನ ಮಾಡಿಬಿಟ್ಟಿದ್ದಳು.

ಭೀಮರಾಯರ ಮನೆಯ ಮದುವೆಯಾದಮೇಲೆ, ಕೃಷ್ಣಮೂರ್ತಿ ವಾರಕ್ಕೆ ಒಂದು ಸಲವಾದರೂ ಬಂದು, ಸುಬ್ಬಸ್ವಾಮಿಯನ್ನು ವಿಚಾರಿಸಿ ಕೊಂಡು ಹೋಗುವ ನೆವದಲ್ಲಿ ಸೀತೆಯನ್ನು ನೋಡಿಕೊಂಡು ಹೋಗುತ್ತಿದ್ದ. ಒಂದು ಸಲ, ಸರೋಜಮ್ಮ ಕಾಣದಿದ್ದಾಗ, ಸೀತೆಯೇ ಮೆಲ್ಲಗೆ ಹೇಳಿದ್ದಳು: "ಹೀಗೆ ವಾರ ವಾರವೂ ಬರಬೇಡ, ಮೂರ್ತಿ. ಏನಾದರೂ ತಪ್ಪು ತಿಳಿದು ಕೊಂಡಾರು. ನೀನು ಮನೆ ಮಾಡಿದಮೇಲೆ ನಾನೇ ನಿಮ್ಮ ಮನೆಗೆ ಧೈರ್ಯ ವಾಗಿ ಬರುತ್ತೇನೆ." ಕೃಷ್ಣಮೂರ್ತಿ ಈ ಮಾತಿನ ವಿವೇಕವನ್ನು ಒಪ್ಪಿ, ತಿಂಗಳಿಗೊಮ್ಮೆ ಬರಲು ನಿರ್ಧರಿಸಿದ್ದ. ಅಷ್ಟರಲ್ಲಿಯೇ ಅವನಿಗೆ ವಿಶ್ವೇಶ್ವರ ಪುರದಲ್ಲಿ ಒಂದು ಮನೆ ಸಿಕ್ಕಿದ್ದರಿಂದ, ಶಾರದೆಯನ್ನು ಕರೆತರುವ ಸಂತೋಷದ ಸುದ್ದಿಯನ್ನು ಸೀತೆಗೆ ತಿಳಿಸಲು ಬಂದ. ತುಂಬಿದ ಬಸುರಿ ಸರೋಜಮ್ಮ ಬಾಗಿಲಲ್ಲಿ ಬಂಡೆಯಂತೆ ಕುಳಿತಿದ್ದಳು. ಎದ್ದು ದಾರಿ ಕೊಡುವುದಾಗಲಿ, ಸೀತೆಯನ್ನು ಕೂಗಿ ಕರೆಯುವುದಾಗಲಿ ಅವಳಿಗೆ ಇಷ್ಟವಾಗಲಿಲ್ಲ. ಸೀತೆಯೂ ಹಿತ್ತಿಲ ಕಡೆ ಬಟ್ಟೆ ಒಗೆಯುತ್ತಿದ್ದಳು.

"ಒಂದು ಮಾತು ಹೇಳುತ್ತೇನಿ, ಏನೂ ತಿಳಿದುಕೊಳ್ಳಬೇಡಿ, ಅಪ್ಪ. ಮನೆಯಲ್ಲಿ ಗಂಡಸರು ಇರುವ ಹೊತ್ತಿನಲ್ಲಿ ಬನ್ನಿ. ಹೀಗೆಲ್ಲಾ ಹೊತ್ತುಗೊತ್ತು ಇಲ್ಲದೆ ಸೀತೆಯನ್ನ ಹುಡುಕಿಕೊಂಡು ಬರಬೇಡಿ. ನೆರೆಹೊರೆಯಲ್ಲಿ ನಮ್ಮ ಮರ್ಯಾದೆ ಏನಾಗಬೇಕು? ನಿಮಗೆ ಸೀತೆ ಅಷ್ಟು ಬೇಕಾದವಳಾಗಿದ್ದರೆ ನಿಮ್ಮ ಮನೆಗೇ ಕರೆದುಕೊಂಡುಹೋಗಿ, ನಾವೇನು ಅವಳನ್ನ ಕಟ್ಟಿಹಾಕಿ ಕೊಂಡಿಲ್ಲ. ನಮ್ಮ ಮನೆಯಲ್ಲಿರುವವರೆಗೂ ಅವಳ ಮಾನಮರ್ಯಾದೆಗೆ ನಾವು ಹೊಣೆ, ನೋಡಿ. ತಪ್ಪು ತಿಳಿದುಕೊಳ್ಳಬೇಡಿ, ಹೌದೋ ಅಲ್ಲವೋ?" ಎಂದು ಸರೋಜಮ್ಮ ನಿಷ್ಠುರವಾಕ್ಯನ್ನು ನಯದಲ್ಲಿ ಮುಚ್ಚಿ ಕೃಷ್ಣಮೂರ್ತಿಯ ಮುಖದ ಮೇಲೆ ಎಸೆದಳು.

ಬಾಗಿಲಲ್ಲಿ ಕುಳಿತಿದ್ದಾಕೆ ಕಲ್ಲುಬಂಡೆಯಲ್ಲ, ಹೆಣ್ಣುಹುಲಿಯೇ ಎನ್ನಿಸಿ ಬಿಟ್ಟಳು ಸರೋಜಮ್ಮ.

ಭಂಗಿತನಾದ ಕೃಷ್ಣಮೂರ್ತಿ ಮರುಮಾತು ಕೊಡಲರಿಯದೆ, 'ಇನ್ನು ಇತ್ತ ಸುಳಿಯಬಾರದು' ಎಂದು ನಿಶ್ಚಯಿಸಿ ಹೊರಟುಹೋದನು.

'ಕೃಷ್ಣಮೂರ್ತಿ ಈಚೆಗೆ ಬರುವುದನ್ನೇ ಬಿಟ್ಟುಬಿಟ್ಟ. ಎಲ್ಲೋ ಮನೆ ಮಾಡಿ ಶಾರದೆಯನ್ನು ಕರೆದುಕೊಂಡುಬಂದು ಸಂಸಾರ ಹೂಡಿದಾನೆ ಅಂತ ಕಾಣುತ್ತದೆ. ಶಾರದೆಯನ್ನು ಇಲ್ಲಿಗೆ ಕರೆದುಕೊಂಡು ಬಂದರೂ ಬರಬಹುದು' ಎಂಬ ಪ್ರತೀಕ್ಷೆಯಲ್ಲಿ ಸೀತೆ ಕಾಲ ಕಳೆದಳು. ಆ ಯೋಚನೆ ಕೃಷ್ಣಮೂರ್ತಿಗೆ ಬಾರದೆ ಇರಲಿಲ್ಲ. ಆದರೆ ಸೀತೆಯ ಅತ್ತಿಗೆಯ ಮನೆಗೆ ಹೆಂಡತಿಯನ್ನು ಕರೆದೊಯ್ಯಲು ಅವನು ಈಗ ಅಪೇಕ್ಷೆಪಡುವಂತಿರಲಿಲ್ಲ.

ಸರೋಜಮ್ಮನ ಹೆರಿಗೆಯೇನೋ ಆಸ್ಪತ್ರೆಯಲ್ಲೇ ಆಯಿತು; ಆದರೆ ಬಾಣಂತಿತನದ ಸಂಪೂರ್ಣ ಭಾರ ಸೀತೆಯ ಮೇಲೆಯೇ ಬಿದ್ದಿತು. ಅವಳಿಗೆ ಅಕ್ಕನ ಬಾಣಂತಿತನದ ಅನುಭವವಾಗಿದ್ದರಿಂದ, ಕಷ್ಟವೇನೂ ತೋಚಲಿಲ್ಲ. ಸಂತೋಷಚಿತ್ತಳಾಗಿ, ಅನ್ನದಾತನಾದ ಅಣ್ಣನ ಋಣ ತೀರಿಸಲು ಸೊಂಟಕಟ್ಟಿ ನಿಂತಿದ್ದಳು. ಒಡ್ಡಿಯಲ್ಲಿ ಈಚೆಗೆ ತುಂಬ ಸುಸ್ತಿಯಾಗಿದ್ದ ಸುಬ್ಬಸ್ವಾಮಿಯ ಮನೆಗೆ ಭೀಮರಾಯರು ತಿಂಗಳಿಗೆ ಎರಡು–ಮೂರು ದಿನ ಬಂದು ಹೋಗುತ್ತಿದ್ದರು. ಸೀತೆಯ ಸಂಸಾರನಿರ್ವಹಣ ಸಾಮರ್ಥ್ಯವನ್ನು ಕಂಡು, ಅವರು ಬೆರಗಾಗಿದ್ದರು. 'ಈ ಹೆಣ್ಣಿನ ಕೈಲಿ ಚೆನ್ನಾಗಿ ದುಡಿಸಿಕೊಳ್ಳುತ್ತಾರೆಯೇ ಹೊರತು, ಹೊಟ್ಟೆಗೆ ಹಾಕುವ ಹಾಗೆ ಕಾಣುವುದಿಲ್ಲ' ಎಂದು ಅವರು ಮನಸ್ಸಿನಲ್ಲೆ ಪೇಚಾಡಿಕೊಂಡರು.

ಐದು ತಿಂಗಳ ಮಗುವಾದರೂ ಸರೋಜಮ್ಮನ ಬಾಣಂತಿತನ ನಡೆಯುತ್ತಲೇ ಇತ್ತು. ಆ ತಿಂಗಳು ಭೀಮರಾಯರು ಎಂದಿನಂತೆ ಮೊದಲ ವಾರ ಬರದೆ, ಬಹು ತಡವಾಗಿ ಬಂದರು. ಸುಬ್ಬಸ್ವಾಮಿ ಮನೆಯಲ್ಲಿ ಇರಲಿಲ್ಲ. ಸೀತೆಯೇ ಸ್ವಾತಂತ್ರ್ಯ ವಹಿಸಿ ಉತ್ತರ ಕೊಟ್ಟಳು: "ನಮ್ಮ ಅಣ್ಣ ಮನೆಯಲ್ಲಿಲ್ಲ. ಪಾಪ, ಈ ಸಲ ನಿಮಗೆ ಕೊಡಬೇಕೂ ಅಂತಲೇ ಹಣ ಜೊತೆ ಮಾಡಿದ್ದರು...."
ಅಷ್ಟರಲ್ಲಿಯೇ, ಸಪ್ಪೆ ಮುಖ ಹಾಕಿಕೊಂಡೇ ಬಂದಿದ್ದ ಭೀಮರಾಯರು ಬಿಕ್ಕಿ ಬಿಕ್ಕಿ ಅಳತೊಡಗಿದರು. ಸೀತೆಗೆ ಆಶ್ಚರ್ಯವಾಯಿತು, ಗಾಬರಿಯಾಯಿತು. ಅಗಲಿಸಿದ ಕಣ್ಣು, ಬಿಟ್ಟ ಬಾಯಿಂದ ಭೀಮರಾಯರ ಮುಖವನ್ನು ನೋಡುತ್ತ ನಿಂತುಬಿಟ್ಟಳು.

"........ಇವೊತ್ತು ಬಡ್ಡಿಗೆ ಬರಲಿಲ್ಲ ಕಣಮ್ಮ. ನಿನ್ನ ನೆನಪಾಯಿತು, ಬಂದುಬಿಟ್ಟೆ, ದುಃಖ ಹೇಳಿಕೊಳ್ಳೋಣ ಅಂತ. ನನ್ನ ಅಳಿಯ ಹೋಗಿಬಿಟ್ಟ ನಮ್ಮ; ಇಪ್ಪತ್ತು ದಿನ ಆಯ್ತು. ಯಾರು ಸಮಾಧಾನ ಮಾಡಿದರೂ ಕೇಳುವುದಿಲ್ಲ. ಕಷ್ಟ ಕಂಡವಳು ನೀನು, ನೀನು ಏನಾದರೂ ಸಮಾಧಾನ ಮಾಡೀಯೇನೋ ಅಂತ ನಿನ್ನ ನೆನಪಾಯಿತು, ಬಂದೆ...." ಎಂದು ಬಿಕ್ಕುತ್ತ ಬಿಕ್ಕುತ್ತಾ ಹೇಳಿದರು ಭೀಮರಾಯರು.

"....ನಮ್ಮ ಅಣ್ಣನನ್ನ ಕೇಳಿ, ಬರುತ್ತೇನೆ, ಅದಕ್ಕೇನು...." ಎಂದಳು ಸೀತೆ.

ಸಂಜೆ ಭೀಮರಾಯರು ಗಾಡಿ ತೆಗೆದುಕೊಂಡು ಬಂದು ಸೀತೆಯನ್ನು ಕರೆದೊಯ್ದರು; ಸುದ್ದಿಯನ್ನು ತಿಳಿದ ಸುಬ್ಬಸ್ವಾಮಿಯೂ ಅವರ ಜೊತೆಗೆ ಹೋಗಿದ್ದ.

ಚಿರದುಃಖಿನಿಯ ಸಾಂತ್ವವಚನಗಳು ನೂತನ ದುಃಖಿನಿಯ ಬೆಂದ ಹೃದಯಕ್ಕೆ ತಂಪೆರೆಯಿತು; ಭೀಮರಾಯರ ವಿವೇಕದ ಊಹೆ ಫಲಕಾರಿಯಾಗಿ ಪರಿಣಮಿಸಿತು. ಸೀತೆ ಆಗೊಮ್ಮೆ ಈಗೊಮ್ಮೆ ಅವರ ಮನೆಗೆ ಹೋಗುವುದೂ, ಭೀಮರಾಯರು ಮಗಳೊಂದಿಗೆ ಸುಬ್ಬಸ್ವಾಮಿಯ ಮನೆಗೆ ಬರುವುದೂ ಪರಿಪಾಟಿಯಾಗುತ್ತ ಬಂತು. ಇವರಿಂದ ಸುಬ್ಬಸ್ವಾಮಿಗೆ ಸಂತೋಷವೇ ಆದರೂ, ಸರೋಜಮ್ಮನ ಈರ್ಷ್ಯೆ ಕೆರಳಿತು—ತನಗೆ ಸಲ್ಲದ ಅಥವಾ ಸಲ್ಲಬೇಕಾದ ಗೌರವ ಸೀತೆಗೆ ಸಲ್ಲುತ್ತಾ ಇದೆಯೆಂದು.

ಸರೋಜಮ್ಮನ ಸ್ವಭಾವವೇ ಅಂಥದು; ಅವಳು ಒಂದು ವಿಶಿಷ್ಟ ವರ್ಗದ ಹೆಣ್ಣು ಜಾತಿಗೆ ಸೇರಿದವಳು. ಈ ಜಾತಿಯ ಹೆಣ್ಣು ಅಲಂಕಾರಪ್ರಿಯೆ, ಭೋಗಲಾಲಸೆ; ಸ್ತ್ರೀಪ್ರಪಂಚವೇ ಅಲಂಕಾರದಲ್ಲಿ ಪ್ರೀತಿಯುಳ್ಳದ್ದು; ಇನ್ನೊಂದು ಹೆಣ್ಣಿನ ಅಲಂಕಾರವನ್ನು ಮೆಚ್ಚಬೇಕು, ಕರುಬಬಾರದು ಎಂಬ ಉದಾರಬುದ್ಧಿ ಈ ಹೆಣ್ಣಿಗೆ ಇರುವುದಿಲ್ಲ. ಯಾರೂ ಮಾಡಿಕೊಳ್ಳದ ಅಲಂಕಾರ ತಾನು ಮಾಡಿಕೊಳ್ಳಬೇಕು, ಎಲ್ಲರಿಗಿಂತ ತಾನು ಮೇಲುಗೈಯಾಗಿರಬೇಕು, ಹೆಂಗಸರ ಮಾತಿರಲಿ—ಎಲ್ಲ ಗಂಡಸರೂ ತನ್ನನ್ನು ನೋಡಿ ಮೆಚ್ಚಬೇಕು, ಆಸೆಪಡಬೇಕು ಎಂಬುದು ಈ ಜಾತಿಯ ಹೆಣ್ಣಿನ ಬುದ್ಧಿ. ಹಾಗೆಂದು ಈ ಬಗೆಯ ಹೆಣ್ಣು ಪರಪುರುಷ ಸಹವಾಸವನ್ನು ಬಯಸತಕ್ಕವಳೂ ಅಲ್ಲ.

ಕೈಹಿಡಿದ ಗಂಡನಲ್ಲಿ, ಮಕ್ಕಳಲ್ಲಿ ವಿಶೇಷ ಪ್ರೇಮವುಳ್ಳವಳು. ಆದರೆ ತನ್ನ ಭೋಗವಿಲಾಸದ ಮಾತು ಬಂದರೆ—ಗಂಡ, ಮಕ್ಕಳು ಗಾವುದ ದೂರ. ಸಂಸಾರದಲ್ಲಿ ಇಂಥ ಹೆಣ್ಣಿನೊಂದಿಗೆ ಬಾಳ್ವೆಮಾಡುವ ಗಂಡು ತುಂಬ ದುರದೃಷ್ಟಶಾಲಿ: ಹೆಣ್ಣಿನ ಸೆಳೆತ ಒಂದು ಕಡೆ, ಹೆಣ್ಣಿಗಾಗಿ ದುಡಿತ ಒಂದು ಕಡೆ. ಸಂಸಾರದಲ್ಲಿ ತ್ಯಾಗಮಯಿಯಾದ ಗೃಹಿಣಿ ತಾನು ಸವೆದು ಇತರರಿಗೆ ಪರಿಮಳ ಕೊಡುವ ಚಂದನಕಾಷ್ಠವಾದರೆ, ಭೋಗವಿಲಾಸಪ್ರಿಯೆಯಾದ ಸ್ವಾರ್ಥ ಬುದ್ಧಿಯ ಗೃಹಿಣಿ ತಾನು ಹುಟ್ಟಿ ಬೆಳೆಯುವ ನೆಲದ ಸಾರವನ್ನೆಲ್ಲ ಹೀರಿ, ದಿಕ್ಕುದಿಕ್ಕಿಗೂ ಹಬ್ಬಿ ಹರಡಿ, ಎಲೆಎಲೆಗೂ ಹೂತು ಕಾತು, ಯಾರಿಗೂ ಆಗದ ಕಹಿ ಸೋರೆಯ ಗಿಡ. ಈ ಜಾತಿಯ ಹೆಣ್ಣು ಬಡವನ ಕೈಹಿಡಿದರೆ ಅವಳಿಗೂ ಸುಖವಿಲ್ಲ, ಗಂಡನಿಗೂ ಸುಖವಿಲ್ಲ. ಅವಳ ನಿತ್ಯ ಅತೃಪ್ತಿ ಗಂಡನ ಮುಳ್ಳಿನ ಹಾಸಿಗೆ.

ಸುಬ್ಬಸ್ವಾಮಿ ಸರೋಜಮ್ಮನನ್ನು ತೃಪ್ತಿಪಡಿಸಬೇಕೆಂದು ಮೈಮುರಿಯ ದುಡಿಯುತ್ತಿದ್ದ, ಈಗ ಸಾಲಗಾರನೂ ಆಗಿದ್ದ. ಈಗ ಎರಡು–ಮೂರು ತಿಂಗಳಿನಿಂದ ಸರೋಜಮ್ಮ ಗಂಡನಿಗೆ ಸರಿಯಾಗಿ ಮುಖಕೊಟ್ಟು ಮಾತನಾಡುತ್ತಿರಲಿಲ್ಲ. ಏನೆಂದು ಕೇಳಿದರೆ ಬಾಯಿಬಿಡಲೊಲ್ಲಳು. ಉದ್ದೇಶಪೂರ್ವಕವಾಗಿಯೇ ವಜ್ರಮೌನವನ್ನು ಧರಿಸಿದ್ದಳು. ಕಡೆಗೊಮ್ಮೆ ತನ್ನ ಬೇಗುದಿಯನ್ನು ಅವನ ಮುಂದೆ ಕಾರಿದಳು :

" ಸ್ವಲ್ಪ ಬಾಗಿಲು ಮುಂದುಮಾಡಿಕೊಳ್ಳಿ."

ದಾಸಾನುದಾಸನಾದ ಸುಬ್ಬಸ್ವಾಮಿ ಪತ್ನಿಯ ಅಜ್ಞೆಯನ್ನು ಪರಿಪಾಲಿಸಿದ ; ಮಂಚದ ಮೇಲೆ ಅವಳ ತೊಡೆಸೋಂಕಿನಲ್ಲಿ ಕುಳಿತ ; " ಏನು ? ಯಾಕೆ ಈಚೆಗೆ ನಾನು ಮಾತಾಡಿದರೆ ಸಿಡುಕುತ್ತೀಯೆ ?...." ಎಂದು ಭುಜದ ಮೇಲೆ ಕೈಯಾಡಿಸಿ, ಕೇಳಿದ.

ಸರೋಜಮ್ಮ ಅವನ ಕೈಕೊಡವಿ ನುಡಿದಳು ; ಬಾಣಂತಿತನದ ಏಕಾಂತವಾಸದಲ್ಲಿ ದೀರ್ಘಾಲೋಚನೆಯ ಬಳ್ಳಿಯಲ್ಲಿ ಬಿಟ್ಟ ತನಿವಣ್ಣು. ಸುಬ್ಬಸ್ವಾಮಿ ತಿನ್ನಲಾರ, ಬಿಡಲಾರ !

" ಈಗ ನಾನೂ ತುಂಬಾ ದಿನದಿಂದ ನೋಡುತ್ತ ಇದೇನೆ. ನಿಮಗೆ ಹೇಳಬಾರದೇ ಕೂಡದೇ ಅಂತ ಯೋಚಿಸಿ ಯೋಚಿಸಿ, ತಲೆ ಚಿಟ್ಟುಹಿಡಿದು

ಹೋಯಿತು. ನನ್ನ ಮಾತನ್ನ ನಡಸಿಕೊಡುವುದಾಗಿ ಮಾತುಕೊಟ್ಟರೆ ಮಾತ್ರ ಹೇಳುತ್ತೇನೆ...."

ಏನಿರಬಹುದು ಬೇಡಿಕೆ ಎಂದು ಸುಬ್ಬಸ್ವಾಮಿ ಊಹಿಸುವ ಗೊಡವೆಗೆ ಹೋಗಲಿಲ್ಲ. ಕೈಕೆಗೆ ದಶರಥ ವರ ಕೊಟ್ಟ ರೀತಿ ನುಡಿದ :

" ನಿನ್ನ ಮಾತನ್ನ ಎಂದು ನಡೆಸಿಲ್ಲ ? ಅದೇನು ಹೇಳಬಾರದೆ ? "

" ಅದೇಕೆ ಈ ಕೊಸರಾಟ ? ಆಗಲಿ ಅಂತ ಒಪ್ಪಿಕೊಳ್ಳಿ."

" ಹ್ಞಾ, ಆಗಲಿ."

" ಇನ್ನು ಒಂದು ತಿಂಗಳ ವಾಯಿದೆ : ಅಷ್ಟರಲ್ಲಿ, ಸೀತೆಯನ್ನ ಮನೆ ಬಿಟ್ಟು ಆಚೆಗೆ ಹೊರಡಿಸಿ."

ಈ ಮಾತನ್ನು ಖಂಡಿತ ನಿರೀಕ್ಷಿಸಿರಲಿಲ್ಲ ಸುಬ್ಬಸ್ವಾಮಿ. ಕ್ಷಣಮಾತ್ರ ದಲ್ಲಿ, ತನ್ನ ಗೃಹದಲ್ಲಿ ಸೀತೆಯ ವರ್ಷಗಳ ವಾಸದ ನೆನಪು ಸುಳಿದುಹೋಯಿತು. ತನ್ನ ಮಟ್ಟಿಗೆ, ಅವಳು ಯಾವ ಭಾಗದಲ್ಲಿಯೂ ಆಕ್ಷೇಪಣೀಯವಾದ ರೀತಿ ಯಲ್ಲಿ ನಡೆದುಕೊಂಡಿರಲಿಲ್ಲ. ತನ್ನ ಸಂಸಾರಕ್ಕಾಗಿ ದೇಹವನ್ನು ತೇಯುತ್ತಿ ದ್ದಾಳೆ. ಆದರೂ ಹೆಂಡತಿ ಹೀಗೆ ಅಸಮಾಧಾನಗೊಂಡಿದ್ದಾಳಲ್ಲ, ಇದಕ್ಕೆ ಕಾರಣವೇನು ?

" ಇಷ್ಟು ದಿನ ಅವಳ ಕೈಲಿ ದುಡಿಸಿಕೊಂಡು, ಈಗ ಮನೆ ಬಿಟ್ಟು ಹೊರಡಿಸುವುದೇ ? "

" ಏನು, ಬಿಟ್ಟಿ ದುಡಿದಿದ್ದಾಳೆಯೇ ? ಎರಡು ಹೊತ್ತು ರಸಕವಳ ಹೊಡೆಯುತ್ತಿಲ್ಲವೇ, ಹೊಟ್ಟೆಬಿರಿಯ ? ನನ್ನ ಬಾಣಂತಿತನದ ಜೊತೆಗೆ ತನ್ನ ಆರೈಕೆಯನ್ನೂ ಮಾಡಿಕೊಂಡಿದ್ದಾಳೆ. ಈಗ ನೋಡಿ, ಹೇಗೆ ಮೈಕೈ ತುಂಬಿ ಕೊಂಡಿದ್ದಾಳೆ ? "

ಹೌದು ; ಕೃಶವಾಗಿದ್ದ ಸೀತೆ ಈಗ ಮೈಕೈ ತುಂಬಿಕೊಂಡಿದ್ದಳು, ಗೆಲವಾಗಿದ್ದಳು. ಯಾವುದೋ ಒಂದು ಹೊಂಗನಸು ಅವಳಿಗೆ ಹುರುಪನ್ನು ನೀಡಿತ್ತು. 'ಕೆಟ್ಟ ಕಾಲವಾದಮೇಲೆ ಒಂದು ಒಳ್ಳೆಯ ಕಾಲ ಬರಲೇಬೇಕು. ಅಲ್ಲಿಯವರೆಗೆ ಸಹಿಸಿಕೊಂಡಿರೋಣ' ಎಂಬ ತಾಳ್ಮೆ, ತೃಪ್ತಿ ಅವಳಿಗೆ ನೆಮ್ಮದಿ ಯನ್ನುಂಟುಮಾಡಿದ್ದುವು ; ನೆಮ್ಮದಿಯಾದ ಮನಸ್ಸು, ದುಡಿತ— ಇವು ಅವಳಿಗೆ ಹಿತಕರವಾಗಿ ಪರಿಣಮಿಸಿದ್ದುವು. ಅವಳು ಎಂದಿನ ಚೆಲುವೆಯೇ ಆಗಿದ್ದಳು.

ಯಾರಿಗಾದರೂ ಹೊಯಿಕ್ಕೈ. ಸರೋಜಮ್ಮನಿಗೆ ಸೀತೆಯ ಮೇಲಣ ಈರ್ಷ್ಯೆಗೆ ಇದೊಂದು ಕಾರಣ. ಕವಿ ಕವಿಗೆ ಮುನಿಯುವಂತೆ, ಚೆಲುವೆ ಚೆಲುವೆಗೆ ಮುನಿಯದಿದ್ದಾಳೆ?

ಸುಬ್ಬಸ್ವಾಮಿ ಹೆಂಡತಿಯ ಮಾತಿಗೆ ಉತ್ತರ ಕೊಡಲರಿಯದೆ ಮೌನ ವನ್ನವಲಂಬಿಸಿದ್ದನು.

"ಬಿಟ್ಟಿಯ ಕೂಳು ತಿಂದು ಅವಳಿಗೆ ಸೊಕ್ಕೇರಿದೆ. ಶಾರದೆಯ ಗಂಡ ನಂತಲ್ಲ ಅದು ಯಾವೋನೋ, ಕೃಷ್ಣಮೂರ್ತಿ, ಇವಳಿಗೆ ಮಿಂಡನಾಗಬೇಕು ಅಂತ ಹವಣಿಸಿದ, ಅದಕ್ಕೆ ನಾನು ಅವಕಾಶ ಕೊಡಲಿಲ್ಲ ಅಷ್ಟೆ. ಈಗ ಇವಳು ಆ ಭೀಮರಾಯರ ಬಲೆಗೆ ಬಿದ್ದಿರುವಹಾಗೆ ಕಾಣುತ್ತೆ. ಅವಳು ಎತ್ತಲಾಗಾ ದರೂ ಹಾಳಾಗಿ ಹೋಗಲಿ, ಅದನ್ನ ಕಟ್ಟಿಕೊಂಡು ನನಗೇನು? ಆವಳನ್ನ ಹುಡುಕಿಕೊಂಡು ಬರುವ ಗಂಡಸರೆಲ್ಲಾ ಒಳ್ಳೆಯೋರು ಅಂತ ತಾನೇ ಹೇಗೆ ನಂಬೋದು...."

"ಕೃಷ್ಣಮೂರ್ತಿ ಭೀಮರಾಯರು ಅಲ್ಲದೆ ಇನ್ನು ಯಾರು ಬರುತಾ ಇದಾರೆ, ನಾವು ಕಾಣದವರು?" ಎಂದು ಸುಬ್ಬಸ್ವಾಮಿ ಬಾಯಿಬಿಟ್ಟ, ಯತ್ನವಿಲ್ಲದೆ.

"ನೀವು ಮನೆಯಲ್ಲಿ ಎಲ್ಲಿ ಇರುತ್ತೀರಿ? ನಿಮಗೆ ಹೇಗೆ ಗೊತ್ತಾಗ ಬೇಕು? ನಾನು ಈ ಕೋಣೆ ಬಿಟ್ಟು ಹೊರಕ್ಕೇ ಹೋಗುವುದಿಲ್ಲ. ಈಗ ಮುಂದಿನ ಕೋಣೆಯೆಲ್ಲ ಅವಳ ಕಾರುಬಾರಿಗೇ ಮೀಸಲಾಗಿದೆ....ಸೀತೆಯ ವಿಚಾರ ಆಡಿಕೊಂಡರೆ ಕತ್ತೆಯ ಬಾಲ ಹೋಯಿತು. ನನ್ನ ವಿಚಾರವೂ ಜನದ ಬಾಯಿಗೆ ಬಿದ್ದರೆ ಏನು ಮಾಡುವುದು ಅನ್ನೋದನ್ನ ನೀವು ತುಸು ಯೋಚಿಸಿದ್ದೀರ? ಆಗ ನಿಮ್ಮ ಮರ್ಯಾದೆ ಎಷ್ಟರದಾಗುತ್ತೆ?"

ಸುಬ್ಬಸ್ವಾಮಿಗೆ ಇದು ನುಂಗಲಾರದ ತುತ್ತಾಯಿತು. ಕಟ್ಟುಕತೆಯ ಚೇಳಿನ ಸುಳ್ಳಿನ ಕೊಂಡಿ ಬಲವಾಗಿ ಕುಟುಕಿತು. ತನ್ನ ಚೆಲುವೆಯಾದ ಹೆಂಡತಿಯ ಮೇಲೆ ಪರಪುರುಷರ ಕಣ್ಣು ಈ ರೀತಿ ಬಿದ್ದು, ಜನರ ಆಡಿಕೆಗೆ ಅನುವಾಗುತ್ತದೆಯೆಂದು ಅವನು ಎಂದೂ ಎಣಿಸಿದವನಲ್ಲ. ಈಗ, ಚೆಲುವೆ ಹೆಂಡತಿಯೇ ಆ ಮಾತು ಹೇಳುತ್ತಿರಬೇಕಾದರೆ, ಅದರಲ್ಲಿ ನಂಬಿಕೆ ಇಡದಿರು ವುದು ಹೇಗೆ? ಸುಬ್ಬಸ್ವಾಮಿ ಅವಳ ಮಾತಿನಲ್ಲಿ ಸಂಪೂರ್ಣ ವಿಶ್ವಾಸವಿಟ್ಟನು.

"....ನೀನು ಹೇಳುವುದೆಲ್ಲ ಸರಿ, ಸರೋಜ. ಆ ಕೃಷ್ಣಮೂರ್ತಿಗೆ ಬೇಕಾದರೆ ನಾನು ಯಾವಾಗಲಾದರೂ ಕಂಡಾಗ ಹೇಳುತೀನಿ, ನಯವಾಗಿ. ಭೀಮರಾಯರು ನನಗೆ ಅಷ್ಟು ಉಪಕಾರಿಗಳಾಗಿದ್ದಾರೆ; ಅವರಿಗೆ ನಯವಾಗಿ ತಾನೆ ಹೇಗೆ ಹೇಳುವುದು? ನೀನೇ ಕಂಡಿದ್ದೀಯೆ, ಈಚೀಚೆಗೆ ಅವರಿಗೆ ಬಡ್ಡಿಯನ್ನ ಸಹ ಕೊಡುವುದಕ್ಕೆ ಆಗಿಲ್ಲ. ಬಡ್ಡಿ ಕೇಳುವುದಕ್ಕೆ ಬಂದರೆ, ಮನೆಗೇ ಬರಬೇಡಿ ಅನ್ನುವುದಕ್ಕಾಗುತ್ತದೆಯೇ? ಹಾಗೇನಾದರೂ ಮಾಡಿದರೆ, ನನ್ನ ಮೇಲೆ ದಾವಾ ಹಾಕಿದರೆ ಏನು ಮಾಡುವುದು? ಇದನ್ನೆಲ್ಲಾ ಯೋಚಿಸಬೇಕೋ ಇಲ್ಲವೊ?...."

"ಅವರನ್ನೆಲ್ಲಾ ಅಂದು ಆಡಿ ಮಾಡಬೇಕು ಅಂತ ಯಾರು ಹೇಳೋರು? ಸೀತೆಗೋಸ್ಕರ—ಅವರೆಲ್ಲ ಇಲ್ಲಿ ಬರುವುದು. ಅದಕ್ಕೇ ನಾನು ಹೇಳುವುದು—ಸೀತೆಯನ್ನ ಹೊರಕ್ಕೆ ಹಾಕಿದರೆ ಅವರ ತುಕ್ಕಾಟವೂ ತಪ್ಪುತ್ತೆ."

"ನೀನು ಹೇಳುವುದನ್ನ ನಾನು ಒಪ್ಪಿದೆ. ಆದರೆ ನೀನು ಹೇಳುವ ಹಾಗೆ ನಿಂತ ನಿಲುವಿನಲ್ಲಿ ಅವಳನ್ನ ಹೊರಡಿಸುವುದಕ್ಕೆ ಆಗುತ್ತೆಯೆ? ಅವಳನ್ನ ಓದಿಸಿ, ಅವಳಿಗೆ ಒಂದು ದಾರಿ ಮಾಡಿಕೊಡೋಣ ಅಂದರೆ, ಅದಕ್ಕೂ ನೀನೇ ಅಡ್ಡ ಬಂದೆ: 'ಅವಳು ರಾಣಿಯ ಹಾಗೆ ಸ್ಕೂಲಿಗೆ ಹೋಗಲಿ, ನಾನು ಅವಳ ಆಳಾಗಿ ದುಡಿಯಲೆ' ಅಂತ ಬೇಡ ಅಂದೆ. ನಾನು ಹೇಳಿದಹಾಗೆ ನೀನು ಕೇಳಿದ್ದರೆ ಅವಳಿಗೆ ಎಸ್.ಎಸ್.ಎಲ್.ಸಿ. ಆಗಿ ಇಷ್ಟು ಹೊತ್ತಿಗೆ ಎಲ್ಲಾದರೂ ಸ್ಕೂಲು ಮೇಡಂ ಆಗಿರುತ್ತಿದ್ದಳು. ಅವಳಿಗೂ ಆಸೆ ಇತ್ತು; ನನ್ನ ಕೈಲಿ ಒಂದು ದಿನ ಹೇಳಿಕೊಂಡಳು. ಈಗ ಹೊರಕ್ಕೆ ಅಟ್ಟಿದರೆ, ಅವಳ ನಡತೆಗೋಸ್ಕರ ಅಟ್ಟಿದರು ಅಂತ ಯಾರ ಕೇಳುತ್ತಾರೆ? ನಮ್ಮನ್ನೇ ದೂರುತ್ತಾರೆ. ಅವಳಿಗೆ ಏನಾದರೂ ಒಂದು ಏರ್ಪಾಡು ಮಾಡಿಕೊಟ್ಟು ಕಳಿಸಿದರೆ, ಎಲ್ಲರಿಗೂ ಒಳ್ಳೆಯದು ಆ ಭೀಮರಾಯರಿಗೇ ಹೇಳಿದರೆ, ಏನಾದರೂ ಒಂದು ಏರ್ಪಾಡು ಮಾಡುತ್ತಾರೆ. ಸುಮ್ಮನೆ ದುಡುಕುವುದು ಬೇಡ...."

ಸರೋಜಮ್ಮ ಸಿಡಿದು ನುಡಿದಳು: "ಯಾವಾಗಲೂ ಹೀಗೆ. ನಾನು ಏತಿ ಅಂದರೆ ನೀವು ಪ್ರೇತಿ. ನಾನು ಏನು ಹೇಳಿದೆ ಅನ್ನಿ, ಇನ್ನು ತಡಮಾಡಿದರೆ ಮುಂದಿನ ವರ್ಷ ಅವಳ ಬಾಣಂತಿತನಕ್ಕೆ ನೀವು ಏರ್ಪಾಡು ಮಾಡಬೇಕಾಗುತ್ತೆ."

"ಸ್ವಲ್ಪ ಸಮಾಧಾನವಾಗಿರೇ ಮಹಾರಾಯಿತಿ, ಎಲ್ಲಾ ನಾನು ಏರ್ಪಾಡು ಮಾಡುತೀನಿ" ಎಂದು ಸುಬ್ಬಸ್ವಾಮಿ ಅಂಗಲಾಚಿ ಬೇಡಿಕೊಂಡ.

ಗಂಡಹೆಂಡಿರಲ್ಲಿ ತಾತ್ಕಾಲಿಕ ಕಲಹವಿರಾಮದ ಒಪ್ಪಂದವಾಯಿತು. ಅದಕ್ಕೆ ಉಚಿತವಾದ ಮುದ್ರೆಯೂ ಬಿದ್ದಿತು.

# ಪ್ರಕರಣ ಹನ್ನೆರಡು

## ೧

ಅನೇಕ ವೇಳೆ ಹೆಣ್ಣಿನ ವಿಚಾರದಲ್ಲಿ ಗಂಡಸು ತಳೆಯುವ ಕನಿಕರ ಅನುಕೂಲ ಸನ್ನಿವೇಶಗಳಲ್ಲಿ ವ್ಯಾಮೋಹವಾಗಿ ಪರಿಣಮಿಸಬಹುದು ; ನಿಜವಾದ ಪ್ರೇಮವಾಗಿ ತಿರುಗಬಹುದು. ಬಹು ದಿನಗಳಿಂದ ಭೀಮರಾಯರು ಹಸಿದ ಕಣ್ಣಿನಿಂದ ತನ್ನನ್ನು ನೋಡುತ್ತಿದ್ದುದನ್ನು ಸೀತೆ ಗುರುತಿಸಿದ್ದಳು ; 'ಗಂಡು ಜಾತಿಯೆಲ್ಲ ಒಂದೇ' ಎಂದು ಮನಸ್ಸಿನಲ್ಲಿಯೇ ಹೇಸಿದ್ದಳು. ಆದರೆ ಭೀಮರಾಯರ ಮಗಳು ಪದ್ಮಾವತಿ ತನ್ನಂತೆ ವಿಧವೆ ಆದಮೇಲೆ ಅವರು ತನ್ನನ್ನು ಕಾಣುವ ರೀತಿಯಲ್ಲಿ ದೊಡ್ಡ ಮಾರ್ಪಾಟಾಗಿದ್ದುದನ್ನೂ ಗುರುತಿಸಿದ್ದಳು. ಎಂದೂ ಗಂಭೀರವಾಗಿಯೇ ನಡೆದುಕೊಳ್ಳುತ್ತಿದ್ದ ಅವರ ನಡೆನುಡಿಯಲ್ಲಿ ತನ್ನ ಬಗೆಗೆ ಅವರು ಈಚೀಚೆಗೆ ತೋರುತ್ತಿದ್ದ ಅಕ್ಕರೆ, ಮರುಕ ಇವುಗಳಿಗಾಗಿ ಸಂತಸಪಟ್ಟಿದ್ದಳು. ಭೀಮರಾಯರಲ್ಲಿ ಅವಳಿಗೆ ಒಂದು ವಿಧವಾದ ಗೌರವ ಭಾವನೆ ಮೂಡುತ್ತಿತ್ತು.

ಹೆಂಡತಿಯ ಕಟ್ಟಾಜ್ಞೆಯಿಂದ ಬಂಧಿತನಾದ ಸುಬ್ಬಸ್ವಾಮಿ ಒಂದು ದಿನ ಬಿಡುವು ಮಾಡಿಕೊಂಡು, ಭೀಮರಾಯರನ್ನು ಭೇಟಿಮಾಡುವ ಉದ್ದೇಶದಿಂದಲೇ ಬಹು ಹೊತ್ತಿಗೆ ಮುಂಚೆ ಚಾಮರಾಜಪೇಟೆಯ ಕಡೆ ಹೊರಟ. ಅವರ ಬೀದಿಯಲ್ಲೇ ಹೋಗುತ್ತಿದ್ದಾಗ, ಅವರನ್ನು ಕೂರಿಸಿಕೊಂಡು ಅವರ ಜಟಕಾಬಂಡಿಯೇ ಎದುರಿಗೆ ಬರುತ್ತಿತ್ತು. ಅವರು ಗಾಡಿಯನ್ನು ನಿಲ್ಲಿಸಿದರು ; "ಎಲ್ಲಿಗೋ ಹೊರಟಿರುವಹಾಗಿದೆ, ಬನ್ನಿ. ಬಿಟ್ಟುಬರುತ್ತೇನೆ" ಎಂದು ಸುಬ್ಬಸ್ವಾಮಿಯನ್ನು ಆಹ್ವಾನಿಸಿದರು. "ನಿಮ್ಮನ್ನೇ ಹುಡುಕಿಕೊಂಡು ಬಂದೆ" ಎಂದ ಸುಬ್ಬಾಸ್ವಾಮಿ. "ಹಾಗಾದರೆ ಸರಿಹೋಯಿತು, ಬನ್ನಿ" ಎಂದು ಮತ್ತೆ ಕರೆದರು. ಸುಬ್ಬಸ್ವಾಮಿ ಗಾಡಿಯನ್ನು ಹತ್ತಿ ಕುಳಿತ.

ಗಾಡಿಯಲ್ಲಿ ಸುಬ್ಬಸ್ವಾಮಿ ಸೀತೆಯ ವಿಚಾರ ಪ್ರಸ್ತಾಪಿಸಲಿಲ್ಲ. ಸಾಲದ ಬಡ್ಡಿ ಕೊಡುವುದರಲ್ಲಿ ತಾನು ಸುಸ್ತಿ ಬಿದ್ದಿರುವುದಕ್ಕಾಗಿ ವಿಷಾದಿಸಿ, ಕ್ಷಮಾಪಣೆ ಬೇಡಿದ. "ಬಿಡಿ ಬಿಡಿ, ಎಲ್ಲಿ ಹೋಗುತ್ತೆ. ಒಟ್ಟಿಗೆ ಕೊಡುತ್ತೀರ, ಅಷ್ಟೆ

ತಾನೆ ?" ಎಂದು ಭೀಮರಾಯರು ಸಮಾಧಾನಗೊಂಡ ರೀತಿಯಲ್ಲಿ ನುಡಿದರು.

ಮಾತನಾಡುತ್ತ ಆಡುತ್ತ, ಗಾಡಿ ಮಾರ್ಕೆಟ್ ಚೌಕದ 'ಅಯ್ಯಂಗಾರ್ ಕಾಫಿ ಕ್ಲಬ್'ನ ಮುಂದೆ ನಿಂತಿತು. ಇಬ್ಬರೂ ಹೋಟೆಲಿನ ಒಳಕ್ಕೆ ಹೋದರು. ಭೀಮರಾಯರು ಎರಡೆರಡು ಮಸಾಲೆ ದೋಸೆಗೆ 'ಆರ್ಡರ್' ಕೊಟ್ಟರು. "ಹತ್ತು ಗಂಟೆಗೆ ಊಟಕ್ಕೆ ಕೂರಬೇಕು, ನನಗೆ ಬೇಡ" ಎಂದು ಸುಬ್ಬ ಸ್ವಾಮಿ ಮೊರೆಯಿಡಲು, ಅವನ ತಟ್ಟೆಯ ಒಂದು ದೋಸೆಯನ್ನು ಭೀಮ ರಾಯರು ತಮ್ಮ ತಟ್ಟೆಗೆ ಹಾಕಿಕೊಂಡರು.

ದೋಸೆ ತಿನ್ನುತ್ತಾ, ಮಾತಿಗೆ ಮೊದಲಾಯಿತು. ಭೀಮರಾಯರೂ ಸುಮುಖವಾಗಿಯೇ ಇದ್ದರು; ಗೆಲವಾಗಿಯೂ ಇದ್ದರು. ದುಃಖ ಬಂದಾಗ ಕಕ್ಕಿಬಿಟ್ಟು ಮತ್ತೆ ಗೆಲವಾಗಿ ಇರುವ ಜಾತಿ ಅವರದ್ದು. ಅಳಿಯನ ಮರಣದ ವ್ಯಥೆಯನ್ನು ಮರೆಯುತ್ತ ಬಂದಿದ್ದರು. ಸುಬ್ಬಸ್ವಾಮಿಯ ಮುಖ ಮಾತ್ರ ಸಪ್ಪೆಯಾಗಿತ್ತು.

"....ದೋಸೇನೂ ತಿನ್ನಲಿಲ್ಲ. ಯಾಕೆ, ಸಪ್ಪೆಯಾಗಿದ್ದೀರಲ್ಲ. ಮೈಗೆ ಸರಿಯಾಗಿಲ್ಲವೆ ?" ಎಂದು ಭೀಮರಾಯರು ಸಹಜ ಸಹಾನುಭೂತಿಯ ಪ್ರಶ್ನೆ ಕೇಳಿದರು.

"ಮೈಗೆ ಸರಿಯಾಗಿದೆ. ಆದರೆ ಮನಸ್ಸಿಗೆ ನೆಮ್ಮದಿಯಿಲ್ಲ. ಮೈಗೆ ಸ್ವಸ್ಥ ವಿಲ್ಲದೆ ಹೋದರೆ ಮದ್ದಿದೆ; ಮನಸ್ಸಿನ ನೆಮ್ಮದಿ ತಪ್ಪಿದರೆ ಮದ್ದೇ ಇಲ್ಲ...."

"ಮದ್ದೇನೋ ಇಲ್ಲ. ಅಂಥೋರಿಗೆ ದೊಡ್ಡಪೇಟೆ ಕೊನೆಯಲ್ಲಿ ಒಂದು ಮನೆಯೇ ಇದೆಯಲ್ಲ" ಎಂದು ಭೀಮರಾಯರು ಗೊಳ್ಳನೆ ನಕ್ಕು, ನೆತ್ತಿ ಹತ್ತಿಸಿಕೊಂಡು, ನೀರು ಕುಡಿದು, ಮತ್ತೆ ಮುಂದುವರಿಸಿದರು : "ಅದಕ್ಕೇ, ನಾನು ಮನಸ್ಸಿನ ನೆಮ್ಮದಿ ಕೆಡಿಸಿಕೊಳ್ಳೋದೇ ಇಲ್ಲ. ಮನಸ್ಸಿನ ನೆಮ್ಮದಿ ಕೆಟ್ಟರೆ ಮಸಾಲೆ ದೋಸೆಯೇ ಮದ್ದು....ಇನ್ನೂ, ಬಳೇಪೇಟೆವರೆಗೆ ಬುದ್ಧಿ ಓಡೋದಿಲ್ಲ. ಬುದ್ಧಿಯೇನು, ನಮ್ಮ ಕುದುರೆಯೇ ಓಡೋದಿಲ್ಲ ! ಅದರ ಕಾಲು ಯಾವಾಗಲೂ ಚಾಮರಾಜಪೇಟೆಯ ಕಡೆಗೇನೇ...." ಎಂದು ಮತ್ತೆ ನಕ್ಕರು. ಮರಳಿ, "........ಅಂತೂ ನನ್ನ ಮದ್ದು ನಿಮಗೆ ಹಿಡಿಯಲಿಲ್ಲ. ಇನ್ನೇನಾಗಬೇಕು ? ಬಡ್ಡಿ ವಿಚಾರ ಹಚ್ಚಿಸಿಕೊಳ್ಳಬೇಡಿ. ಆಗಲೇ ನಿಮಗೆ ಹೇಳಿದೆನಲ್ಲಾ...."

“ ಅದೊಂದೂ ಅಲ್ಲ. ಮನೆಯಲ್ಲಿ ಸಂಸಾರದಲ್ಲಿ ಸುಖವಿಲ್ಲ, ರಾಯರೆ. ಸೀತೆ ನಮ್ಮ ಮನೆಗೆ ಬಂದಾಗಿನಿಂದ ಅವಳು ಹೇಗೆಹೇಗೊ ಆಗಿಬಿಟ್ಟಿದ್ದಾಳೆ....”

“ ನಿಮ್ಮ ಸೀತಮ್ಮ ಅಂಥವಳಲ್ಲವಲ್ಲ? ನಮ್ಮ ಪದ್ದು ನಿಮ್ಮ ಸೀತೆಯನ್ನ ತುಂಬ ಮೆಚ್ಚಿಕೊಂಡಿದ್ದಾಳೆ....”

“ ಒಳ್ಳೆಯೋಳೆ. ಆದರೆ ಅತ್ತಿಗೆ–ನಾದಿನಿಗೆ ಹೊಂದಿಬರಲಿಲ್ಲ. ಅವರ ಮನಸ್ತಾಪದ ಕಾವು ನನಗೆ ತಟ್ಟುತ್ತಾ ಇದೆ. ನೀವು ಪ್ರಭಾವಶಾಲಿಗಳಾಗಿದ್ದೀರಿ. ಅವಳಿಗೆ ಏನಾದರೂ ದಾರಿ ಮಾಡಿಕೊಟ್ಟು, ಅವಳ ಪಾಡು ಅವಳು ನೋಡಿಕೊಳ್ಳುವಹಾಗೆ ಮಾಡಿದರೆ ನನಗೆ ನೆಮ್ಮದಿಯಾಗಿರುತ್ತೆ. ನಿಮ್ಮ ಸಲಹೆ ಏನು ?”

“ ಅದಿರಲಿ. ಅವಳ ಪಾಡನ್ನು ಅವಳು ನೋಡಿಕೊಳ್ಳುವಹಾಗೆ ಮಾಡುವುದು ಎಂದರೆ ಏನರ್ಥ, ಸುಬ್ಬಸ್ವಾಮಿಗಳೆ ? ”

ಸುಬ್ಬಸ್ವಾಮಿ ಮೌನವಾಗಿದ್ದ.

“ ನೀವು ಅವಳ ಹಿರಿಯ ಅಣ್ಣ ತಾನೆ ? ”

“ ಹೌದು.”

“ ಅವಳಿಗೆ ತಂದೆಯ ಸಮಾನ ಅಂತ ತಿಳಿಯೋದೋ ? ”

ಸುಬ್ಬಸ್ವಾಮಿ ಬಾಯಿಬಿಡದಿರಲು,

“ ಹೌದು ಅನ್ನಿ ” ಎಂದರು ಭೀಮರಾಯರು.

“ ಹೌದು.”

“ ಅವಳನ್ನ ಕಾಪಾಡುವುದು ನಿಮ್ಮ ಧರ್ಮ ಅಲ್ಲವೆ ? ”

“ ಹೌದು ”

“ ಇರಲಿ ಬನ್ನಿ, ಹೋಟೆಲಿನಲ್ಲಿ ಯಾಕೆ ಈ ಮಾತು ” ಎಂದು ಭೀಮರಾಯರು ಗಲ್ಲದ ಮೇಲೆ ಕುಳಿತಿದ್ದ ಅಯ್ಯಂಗಾರ್ ಸ್ವಾಮಿಗಳಿಗೆ ಏಳೂವರೆ ಆಣೆ ಕೊಟ್ಟು, ಗಾಡಿ ಹತ್ತಿದರು. ಸುಬ್ಬಸ್ವಾಮಿಯೂ ಗಾಡಿಯನ್ನು ಹತ್ತಿದ. ಗಾಡಿಯಲ್ಲಿ ನಿರಾತಂಕವಾಗಿ ಮಾತು ಸಾಗಿತು.

“ ಅವಳ ಪಾಡನ್ನು ಅವಳು ನೋಡಿಕೊಳ್ಳುವುದು ಎಂದರೆ ಏನು ನಿಮ್ಮ ಅರ್ಥ, ಈಗ ನನಗೆ ವಿವರಿಸಿ ಹೇಳಿ—” ಎಂದು ಭೀಮರಾಯರು ಸವಾಲು ಹಾಕಿದರು.

" ಏನೂ ಅಂದರೆ, ಅವಳಿಗೆ ಏನಾದರೂ ಸಂಪಾದನೆಗೆ ದಾರಿ ಮಾಡಿ ಕೊಟ್ಟರೆ, ಅವಳ ಪಾಡು ಅವಳು ನೋಡಿಕೊಳ್ಳಬಹುದು. ನಮ್ಮ ಹಂಗಿನಲ್ಲಿ ಇರಬೇಕಾದ್ದಿಲ್ಲ. ಅವಳಿಗೂ ಸುಖ, ನಮಗೂ ನೆಮ್ಮದಿ. ಹೌದೋ, ಅಲ್ಲವೋ ? " ಎಂದು ಸುಬ್ಬಸ್ವಾಮಿ ಮರುಸವಾಲು ಹಾಕಿದ.

" ಅದಕ್ಕೇನು ಕಷ್ಟ, ಸ್ವಾಮಿ ನಾಳೆಯ ದಿನವೇ ಅವಳನ್ನ ಮನೆ ಬಿಟ್ಟು ಓಡಿಸಿಬಿಡಿ. ನಾನು ಮುಂದು ತಾನು ಮುಂದು ಅಂತ ಜನ ಅವಳ ಸೆರಗಿಗೆ ಸವರನ್ನ ಕಟ್ಟಿ ಹೋಗುತ್ತಾರೆ. ಇದೂ ಸಂಪಾದನೇನೇ ತಾನೆ ? ಹೆಣ್ಣನ್ನ— ನಿನ್ನ ಪಾಡು ನೀನು ನೋಡಿಕೋ ಅಂತ ಬಿಟ್ಟರೆ ನಾಯಿಪಾಡಾಗುತ್ತೆ, ಸ್ವಾಮಿ. ನಾಯಿ ಅಂದರೆ ಹೆಣ್ಣುನಾಯಿ ! ಥೂ ಥೂ, ಅವರ ಜನ್ಮ ಬೇಡ...."

" ಛೆ ಛೇ, ಹಾಗೆ ಮಾಡಬೇಕು ಅಂದೆನೆ ನಾನು ? "

" ಇಲ್ಲ, ತಲೆ ಬೋಳಿಸಿ ಮೆಣಸಿನಪುಡಿ ಕುಟ್ಟಿ ಹುರಿಗಾಳು ಮಾರಿ ಕೊಂಡು ಇರುಹೋಗು ಅಂತಲೋ, ನಿಮ್ಮ ಇರಾದೆ ? "

" ಖಂಡಿತ ಅಲ್ಲ, ರಾಯರೇ. ಅಂಥ ಕಟುಕ ಅಂತ ತಿಳಿದಿದ್ದೀರಾ ನನ್ನನ್ನ ? ನನಗೆ ತೋರದೆ ಇದ್ದದ್ದರಿಂದ ಅಲ್ಲವೆ ನಿಮ್ಮನ್ನ ಕೇಳಿದ್ದು ? ಎಷ್ಟೋ ಜನ ಸ್ಕೂಲು ಮೇಡಮ್ಮುಗಳಾಗಿಲ್ಲವೆ ? ಹಾಗೆ ಏನಾದರೂ ಗೌರವವಾದ ಸಂಪಾದನೆಯ ಮಾರ್ಗ ಕಲ್ಪಿಸಿಕೊಡುವುದರಲ್ಲಿ ತಪ್ಪೇನು ? "

" ಹಾಗೆ ಬನ್ನಿ, ದಾರೀಗೆ. ಆದರೆ ಒಂದು ವಿಚಾರ ನೋಡಿ. ನಿಮ್ಮ ಸೀತೆಯಂಥ ಹೆಂಗಸು—ಹೆಂಗಸೇನು, ಇನ್ನೂ ಹುಡುಗಿಯೇ—ಸ್ಕೂಲು ಮೇಡಮ್ಮಲ್ಲದಿದ್ದರೆ ಕಾಲೇಜು ಮೇಡಮ್ಮಾಗಲಿ, ಬೇಡ ಅಂದವರು ಯಾರು. ಆದರೆ ಗಂಡ ಅನ್ನುವ ಪೂಜ್ಯ ವಸ್ತು ಹೋದಮೇಲೆ, ಆಕೆ ಹುಡುಗಿಯೇ ಆಗಿರಲಿ ಮುದುಕಿಯೇ ಆಗಿರಲಿ, ತಂದೆಯೋ ಅಣ್ಣನೋ ತಮ್ಮನೋ ಮಾವನೋ ಭಾವನೋ ಯಾರಾದರೂ ಒಬ್ಬ ಹತ್ತಿರದ ಬಂಧುವಿನ ಆಶ್ರಯ ದಲ್ಲಿ ಇದ್ದರೇ ಮರ್ಯಾದೆ. ಅವರಿಗೂ ಕ್ಷೇಮ, ಲೋಕಕ್ಕೂ ಕ್ಷೇಮ. ಮನೆ ತಪ್ಪಿದ ಹೆಣ್ಣಿಗೆ ಗಂಡ ಯಾವ ಆಸ್ತಿಯನ್ನೂ ಬಿಡಬೇಕಾಗಿಲ್ಲ; ವಂಶದ ಕುಡಿ ಒಂದನ್ನ ಬಿಟ್ಟುಹೋಗಿದ್ದರೆ, ಆ ಕುಡಿ ಕೈಗೆ ಬರುವವರೆಗೆ ಯಾರಾದರೂ ಕಾಪಾಡಿದರೆ ಸಾಕು. ಮುಂದೆ ಮಗ ತಾಯನ್ನ ಸಂರಕ್ಷಣೆ ಮಾಡ್ತಾನೆ. ಆದರೆ ನಿಮ್ಮ ಸೀತೆಯಂಥ...." ಭೀಮರಾಯರ ಕೊರಳು ಕಟ್ಟಿತು; ಕಣ್ಣಿಂದ ನೀರು

ಹೊನಲಿಟ್ಟಿತು ; ಬಹು ಹೊತ್ತು ಮೂಕರೋದನ ನಿಲ್ಲಲಿಲ್ಲ.

ಈ ಕಥೆಯನ್ನೆಲ್ಲಾ ಕೇಳುತ್ತಾ ಕೇಳುತ್ತಾ ಜಟಕಾ ಹೊಡೆಯುವ ಇಬ್ರಾಹಿಮನ ಕೈಯ ಲಗಾಮು ಸಡಿಲವಾಗಿತ್ತು ; ರಾಯರ ಕಡೆಯ ಮಾತಿಗೆ " ಸಚ್ ಹೈ " ಎನ್ನುವಷ್ಟರಲ್ಲಿ, ಅವರ ರೋದನ ಕೇಳಿತು ; ಏನೆಂದು ಗೊತ್ತಾಗ ಲಿಲ್ಲ. ಆದರೆ ಅವನಿಗೆ ಸೀತೆಯ ಪರಿಚಯವಾಗಿತ್ತಷ್ಟೆ.

ಸ್ವಲ್ಪ ದುಃಖಶಮನವಾದಮೇಲೆ ಭೀಮರಾಯರು ಮುಂದುವರಿಸಿದರು : "....ನಿಮ್ಮ ಸೀತೆಯಂಥ, ನಮ್ಮ ಪದ್ಮುವಿನಂಥ ಹೆಣ್ಣುಮಕ್ಕಳನ್ನ ಯಾವ ಜ್ಜೀವವೂ ಯಾರಾದರೂ ಒಬ್ಬರು ತಮ್ಮ ಕಣ್ಣಂಕೆಯಲ್ಲಿ ಇಟ್ಟುಕೊಂಡು ಸಲಹಬೇಕು. ಏನೋ ವಿಧವಾ ವಿವಾಹ, ಅದು ಇದು, ಅಂತ ಭಾಷಣ ಮಾಡ್ತಾರೆ, ಬರೀತಾ ಇದಾರೆಯೇ ಹೊರತು, ಎಲ್ಲೂ ಆದದ್ದು ಕಂಡಿಲ್ಲ. ಸರಿಯಾದ ಹೆಣ್ಣುಗಳಿಗೇ ವರ ಸಿಕ್ಕೋದು ಕಷ್ಟ, ಇನ್ನು ವಿಧವೆಯನ್ನ ಕೇಳೋರು ಯಾರು, ಸ್ವಾಮಿ ? ಆದ್ದರಿಂದಲೇ ನಾನು ಹೇಳೋದು, ಅವರ ಸಂರಕ್ಷಣೆ ಭಾರ ನಮ್ಮದು ಅಂತ. ಅವರು ಸಂಪಾದನೆ ಮಾಡಲಿ, ಮನೆಗೆ ನೆರವಾಗಲಿ—ನಾನು ಬೇಡ ಅನ್ನೋದಿಲ್ಲ. ಹೆಣ್ಣು ಎಮ್ಮೆ(M A )ಗಳಾ ಗಲಿ, ನಾಯಿಗಳಾಗೋದು ಬೇಡ. ನಮ್ಮ ಪದ್ಮೂನ ನಾನು ಓದಿಸಬೇಕೂ ಅಂತ ಮಾಡಿಕೊಂಡಿದ್ದೀನಿ. ಏನೇ ಆಗಲಿ, ಹೆಣ್ಣು ಸಂಪಾದನೆ ಮಾಡ್ತಾಳೆ ಅಂತ ಮೇಲುಸಂಪಾದನೇಗೆ ಅವಕಾಶ ಮಾಡಿಕೊಡಬಾರದು, ಸ್ವಾಮಿ. ಮನೆ ತಪ್ಪಿದ ಹೆಣ್ಣಿಗೆ ಇನ್ನೊಂದು ಮನೆಯೇ ಸರಿಯಾದ ಸ್ಥಳ ; ಹಸುವಿಗೆ ಗೂಟ–ಹಗ್ಗ ಇದ್ದಹಾಗೆ. ಆದರೆ ಒಂದೇ ವ್ಯತ್ಯಾಸ : ಹಸು ಹಗ್ಗ ಕಿತ್ತುಕೊಂಡು ಹೋದರೆ ಹಿಡಕೊಂಡುಬಂದು ಕಟ್ಟಿಹಾಕ್ತೇವೆ. ಅಂಥ ಹೆಣ್ಣು ಯಾರ ಬೆನ್ನ ಹಿಂದಾದರೂ ತಾನೇ ಇಷ್ಟಪಟ್ಟು ಓಡಿಹೋದರೆ, ಆ ಮಾತು ಬೇರೆ. ಅದಕ್ಕೆ ನಾವು ಹೊಣೆಯಲ್ಲ. ಅಂಥವರಿಗೆ ಕಾವಲೂ ಇಲ್ಲ, ಕಾನೂನೂ ಇಲ್ಲ, ಕಟ್ಟಳೆಯೂ ಇಲ್ಲ. ಸರಿಯಾಗಿ ನೋಡಿಕೊಂಡರೆ, ಓಡಿಹೋಗೋದೂ ಇಲ್ಲ. ಇರಲಿ, ಆ ವಿಚಾರ ಬೇರೆ. ಪ್ರಕೃತ, ನಿಮ್ಮ ಸೀತೆಯ ವಿಚಾರ ಏನೂ ? ಕನ್ನಡ ಲೋವರ್ ಸೆಕಂಡರಿಗೆ ಕಟ್ಟಿದ್ದಾಳಂತೆ. ಮತ್ತೆ ಓದಿಸಬಹುದಲ್ಲ ? "

" ಅಷ್ಟಕ್ಕೆಲ್ಲ ನನಗೆಲ್ಲಿ ಶಕ್ತಿ ಇದೆ, ಸ್ವಾಮಿ ? ನೀವೇ ಕಂಡಿದ್ದೀರಲ್ಲಾ ? "

" ಫ್ರೀಷಿಪ್ಪು ಕೊಡುತ್ತಾರಂತೆ ? ಬೇಕಾದರೆ ಪ್ರಯತ್ನಪಟ್ಟು ಸ್ಕಾಲರ್ ಷಿಪ್ಪೂ ಕೊಡಿಸೋಣ."

" ಅವಳು ಒಪ್ಪೋದಿಲ್ಲ. ಅವಳು ನಮ್ಮ ಮನೆಯಲ್ಲೇ ಇರೋದಾದರೆ, ಸಂಸಾರಕ್ಕೆ ನೆರವಾಗಲಿ ಅಂತ ಅವಳ ಇಷ್ಟ."

" ಈವಾಗ ದುಡೀತಾ ಇದ್ದಾಳಲ್ಲಾ, ಸ್ವಾಮಿ? ಅವಳ ಅನ್ನ ಅವಳು ಹುಟ್ಟಿಸಿಕೊಂಡಹಾಗಾಯಿತೋ ಇಲ್ಲವೋ? "

" ಮೊದಲು ನಾನೇ ಎಲ್ಲಾ ಮಾಡಿಕೊಳ್ಳುತ್ತಾ ಇರಲಿಲ್ಲವೆ, ಈಗಲೂ ಮಾಡಿಕೊಳ್ಳುತ್ತೇನೆ. ಈಗ ಅವಳ ಖರ್ಚು ಹೆಚ್ಚಾಯಿತೋ ಇಲ್ಲವೋ? —ಅಂತಾಳೆ ಅವಳು...."

" ನಿಮ್ಮ ರಾಣೀಸಾಹೇಬರು ಹಾಗಂತಾರೋ.... ಇರಲಿ, ನೋಡೋಣ. ನಾನೂ ಅಲ್ಲಿ ಇಲ್ಲಿ ವಿಚಾರಿಸಿ, ಏನಾದರೂ ದಾರಿ ಇದೆಯೋ ನೋಡ್ತೀನಿ."

" ನಿಮ್ಮನ್ನ ನಾನು ಕೇಳಬೇಕು ಅಂತ ಬಂದದ್ದೂ ಅಷ್ಟೇ. ಈಗ ನನ್ನ ಮನಸ್ಸಿಗೆ ನೆಮ್ಮದಿಯಾಯಿತು."

ಈ ಮಾತು ಅಲ್ಲಿಗೇ ಮುಗಿಯಿತು. ಆದರೆ ಸುಬ್ಬಸ್ವಾಮಿ ಭೀಮರಾಯರ ಜೊತೆ ಮಲ್ಲೇಶ್ವರಕ್ಕೆ ಹೋಗಿಬಿಟ್ಟಿದ್ದ. ಊಟವಿಲ್ಲದೆಯೇ ಕಚೇರಿಗೆ ಹೋಗಬೇಕಾಯಿತು. ಭೀಮರಾಯರೇ ಅವನನ್ನು ಕಚೇರಿಯವರೆಗೆ ಬಿಟ್ಟು ಹಿಂದಿರುಗಿದರು.

೨

ಭೀಮರಾಯರೊಂದಿಗೆ ಆಡಿದ ಮಾತುಕತೆಯನ್ನಾಗಲಿ ತನ್ನ ಮನಸ್ಸಿನ ಆಲೋಚನೆಗಳನ್ನಾಗಲಿ ಸುಬ್ಬಸ್ವಾಮಿ ಹೆಂಡತಿಗೆ ಅರುಹಲಿಲ್ಲ. ಇದೇ ಮೊದಲ ಸಲ, ಅವನು ಹೆಂಡತಿಯೊಂದಿಗೆ ತನ್ನ ಆಲೋಚನೆಗಳನ್ನು ಪಾಲುಗೊಳ್ಳದೆ ಇದ್ದದ್ದು.

" ಸೀತೆಯ ವಿಚಾರ ಏನು ಆಲೋಚನೆ ಮಾಡಿದಿರಿ? ಅದೇನು ಅವಳಿಗೆ ನೀವು ಒಬ್ಬರೇ ಹೊಣೆಯೇ? ಅವಳ ಚಿಕ್ಕಮ್ಮ ತುಂಬ ಅನುಕೂಲಸ್ಥರಂತಲ್ಲ? ಅವರ ಮನೆಗೆ ಹೋಗು ಅನ್ನಿ. ಅವಳ ಭಾವನ ಮನೆಗೆ ಹೋಗಲಿ " ಎಂದು, ಸರೋಜಮ್ಮ ಗಂಡನಿಗೆ ದಿನಕ್ಕೊಂದು ಸೂಚನೆ ಕೊಡುತ್ತಿದ್ದಳು. ಗಂಡ ಮನೆಯಲ್ಲಿ ಇಲ್ಲದಿದ್ದಾಗ ಸೀತೆಯ ಮೇಲೆ ಅವಳ ಅಂಕೆಯ ಅಂಕುಶ ಬಗೆ ಬಗೆಯಲ್ಲಿ ಆಡುತ್ತಲೇ ಇದ್ದಿತು.

ಸೀತೆಗೆ ಅತ್ತಿಗೆಯ ಮನೆಯ ಬದುಕು ಅಸಹನೀಯವಾಗುತ್ತ ಬಂದಿತು. ಅಣ್ಣನಿಗೋಸ್ಕರ ಎಲ್ಲವನ್ನೂ ನುಂಗಿಕೊಂಡಿದ್ದಳು. ಅಲ್ಲದೆ, ಅಣ್ಣನ ಮನೆ ಬೇಡವೆಂದರೂ, ಎಲ್ಲಿಗೆ ಹೋಗಬೇಕು, ಏನು ಮಾಡಬೇಕು ಎಂಬ ಪ್ರಶ್ನೆಗಳು ಉರುಳಾಗಿ ಕೊರಳಿಗೆ ಸುತ್ತಿಕೊಳ್ಳುತ್ತಿದ್ದುವು.

'ಸುಬ್ಬಸ್ವಾಮಿ ನಿಜವಾಗಿ ಎಷ್ಟು ಒಳ್ಳೆಯವನು! ಹೆಂಡತಿಯನ್ನು ಮೆರೆಸುವುದಕ್ಕೆ ಸಾಲಗಾರನಾಗಿದಾನೆ, ಪಾಪ. ಎಷ್ಟು ಸೀರೆ, ಎಷ್ಟು ಕುಪ್ಪಸ, ಎಷ್ಟು ಸೋಪು, ಎಷ್ಟು ಪೌಡರು, ಎಷ್ಟು ಸ್ನೋ! ಮಕ್ಕಳಿಗಿಲ್ಲದ ಹಾಲು ಹಣ್ಣು ಇವಳಿಗಾಗಬೇಕು. ಎಂಥ ತಾಯಿ ಇವಳು? ಮಕ್ಕಳೇ ಹೀಗಾದ ಮೇಲೆ ನನ್ನ ಮೇಲೆ ಹೇಗೆ ಅಕ್ಕರೆ ಇದ್ದೀತು?....ಅಕ್ಕನ ಮನೆಯಲ್ಲಿ ಮುಪ್ಪಿನ ತಾಯಿ ಇದ್ದಾಳೆ. ಬಡ ಸ್ಕೂಲುಮೇಷ್ಟ್ರು ಭಾವ. ಅವರಿಗೆ ಹೇಗೆ ಭಾರವಾಗಲಿ? ಯಾಕೋ ಅಲ್ಲಿಂದಲೂ ಕಾಗದ ಇಲ್ಲ. ಈಗ ಅವರಿಗೆ ಯಾವ ಊರಿಗೆ ವರ್ಗವಾಗಿದೆಯೋ ಏನೋ, ಅದೂ ತಿಳಿಯದು. ರಾಮಸ್ವಾಮಿ—ಸತ್ತನೋ ಕೆಟ್ಟನೋ—ದೇವರೇ ಬಲ್ಲ....' ಹೀಗೆ ತನ್ನಿಂದ ತೊಡಗಿ, ಒಂದು ದಿನವೆಲ್ಲಾ ಬಂಧುಗಳ ವಿಚಾರದಲ್ಲಿ ತೊಳಲುವಳು ಸೀತೆ.

ಇನ್ನೊಮ್ಮೆ ಚಿಕ್ಕಮ್ಮನ ನೆನಪಾಗುವುದು; ಅಲ್ಲಿನ ಸುಖದ ದಿನಗಳ ನೆನಪಾಗುವುದು; ಸಹಜವಾಗಿಯೇ ಕೃಷ್ಣಮೂರ್ತಿ ಬಗೆಗಣ್ಣ ಮುಂದೆ ಬಂದು ನಿಲ್ಲುವನು.

'....ಈಗ ಮನೆಮಾಡಿ ಶಾರದೆಯನ್ನ ಮನೆಗೆ ಕರೆದುಕೊಂಡು ಬಂದಿರ ಬಹುದು. ಮನೆ ಎಲ್ಲಿ ಅಂತ ಗೊತ್ತಿದ್ದರೆ, ಹೋಗಿಯಾದರೂ ಬರಬಹು ದಾಗಿತ್ತು. ಅವನೂ ಈ ಕಡೆ ಬರಲಿಲ್ಲ. ಹೆಂಡತಿ ಮನೆಗೆ ಬಂದಮೇಲೆ ಬದಲಾಯಿಸಿಬಿಟ್ಟಿರಬಹುದು—ಹೊಸ ನೀರು ಬಂದು ಹಳೆಯ ನೀರನ್ನು ಕೊಚ್ಚಿಕೊಂಡು ಹೋಗುತ್ತೆ. ಅದು ನ್ಯಾಯವೇ. ನಾನೇ ಅವನನ್ನು ಮರೆಯು ವುದು ಒಳ್ಳೆಯದು. ಅಲ್ಲದೆ, ಶಾರದೆ ನನಗಿಂತ ಚಿಕ್ಕವಳು, ಚೆಲುವೆ; ಪಟ್ಟಣದಲ್ಲಿ ಹುಟ್ಟಿ ಬೆಳೆದವಳು. ನಾನೋ, ಹಳ್ಳಿಯ ಮುಕ್ಕ. ಆದರೆ ಅತ್ತಿಗಮ್ಮನ ಹಾಗಾಗುವುದಾದರೆ, ಹಳ್ಳಿಯ ಮುಕ್ಕನಾಗಿರುವುದೇ ಮೇಲು. ಶಾರದೆ ಅಂಥವಳಲ್ಲ....'

'........ಭೀಮರಾಯರ ಮನೆಗೆ ಹೊರಟುಹೋಗಲೋ? ಅವ್ರೊತ್ತು

ಪದ್ಮಮ್ಮನೇ 'ನಮ್ಮ ಮನೆಗೇ ಬಂದು ಇದ್ದುಬಿಡು, ಸೀತೆ. ಅಪ್ಪನನ್ನ ನಾನು ಒಪ್ಪಿಸುತ್ತೀನಿ' ಎಂದಿದ್ದಳು. ನೋಡಿದವರು ಏನು ಅಂದುಕೊಳ್ಳು ತ್ತಾರೋ. ಅನ್ನುವವರು ಸಮಯಕ್ಕೆ ಆಗುತ್ತಾರೆಯೇ?....ಅವರ ಮನೆ ಯಲ್ಲೂ ಬೇರೆ ಯಾರೂ ಇಲ್ಲ—ಜೊತೆಗೆ ಪದ್ಮಮ್ಮನೇ ಇರುತ್ತಾಳಲ್ಲ, ಅವರು ಇವರು ಅಂದು ಆಡಲು ಅವಕಾಶ ಇರುವುದಿಲ್ಲ—'

* * * *

ಪದ್ಮ ಹೇಳಿದ್ದಳು: 'ನಮ್ಮ ಮನೆಗೇ ಬಂದುಬಿಡು, ಸೀತಮ್ಮ. ನನಗೂ ಜೊತೆ ಆಗುತ್ತೆ. ಅಂದರೆ, ನಾನು ಸ್ಕೂಲಿಗೆ ಹೋದಾಗ ಒಬ್ಬಳೇ ಮನೆಯಲ್ಲಿ ಇರಬೇಕಾಗುತ್ತೆ....'

'ನಿನ್ನನ್ನ ಮತ್ತೆ ಸ್ಕೂಲಿಗೆ ಕಳಿಸಬೇಕು ಅಂತ ಮಾಡಿಕೊಂಡಿದ್ದಾ ರೇನು, ನಿಮ್ಮ ತಂದೆ?'

'ಏನೋ ಹಾಗಂದುಕೊಂಡಿದ್ದಾರೆ. ಇನ್ನೂ ಸರಿಯಾಗಿ ಗೊತ್ತಿಲ್ಲ. ಅಂದಹಾಗೆ, ನೀನು ಎಲ್ಲಿಯವರೆಗೆ ಓದಿದ್ದೀ, ಸೀತಮ್ಮ?'

'ಕನ್ನಡ ಲೋವರ್ ಸೆಕಂಡರೀಗೆ ಕಟ್ಟಿದ್ದೆ. ಫೇಲಾಯ್ತು. ಪ್ಯಾಸಾಗಿ ಮುಂದಕ್ಕೆ ಓದಿದ್ದರೆ ಚೆನ್ನಾಗಿತ್ತು ಅನ್ನಿಸುತ್ತೆ, ಈಗ. ನೀನು ಮಾತ್ರ, ಸ್ಕೂಲಿಗೆ ಸೇರಿದರೆ ಚೆನ್ನಾಗಿ ಓದಿ ಪ್ಯಾಸು ಮಾಡಬೇಕಮ್ಮ.'

'ಸೇರಿದ ಕಾಲಕ್ಕೆ ನೋಡೋಣ....ನೀನು ಅತ್ತೆಯ ಮನೆಗೆ ಹೋಗಿರ ಲಿಲ್ಲವೆ, ಸೀತಮ್ಮ?'

'ಇಲ್ಲ, ಪದ್ಮಮ್ಮ.'

'ಓ! ನನ್ನ ಹಾಗೇ ಆಯ್ತು. ನಾನು ಅತ್ತೆಮನೆಗೆ ಹೋದಮೇಲೆ ನಮ್ಮ ಅಪ್ಪ ಇನ್ನೊಂದು ಮದುವೆ ಮಾಡಿಕೊಳ್ಳಬೇಕೂ ಅಂತ ಇದ್ದರು. ಅವರಿಗೆ ಗಂಡುಮಕ್ಕಳೇ ಇಲ್ಲ. ನಮ್ಮ ತಾಯಿಗೆ ನಾನೊಬ್ಬಳೇ ಮಗಳು....'

'ನಿಮ್ಮ ತಾಯಿ ನಿಮ್ಮ ತಂದೆಗೆ ಎರಡನೆ ಹೆಂಡತಿಯೇನು, ಹಾಗಾದರೆ?'

'ಹೌದು! ನಿನಗೆ ಗೊತ್ತಿರಲಿಲ್ಲವೆ? ಮೊದಲನೆಯ ಹೆಂಡತಿ ಮದುವೆ ಯಾದ ಎರಡು ವರ್ಷಕ್ಕೇ ಗಂಡು ಮಗು ಹೆತ್ತು ಸತ್ತುಹೋದರಂತೆ. ಮಗುವೂ ಮೂರು ತಿಂಗಳು ಇದ್ದು ಸತ್ತುಹೋಯಿತು. ಎರಡು ವರ್ಷ ಮತ್ತೆ ಮದುವೆ ಮಾಡಿಕೊಳ್ಳಲೇ ಇಲ್ಲ. ಆಮೇಲೆ ನಮ್ಮ ತಾಯಿಯನ್ನು ಮದುವೆ ಮಾಡಿ

ಕೊಂಡರು. ನನ್ನ ಹಿಂದೆ ಇಬ್ಬರು ಹೆಣ್ಣುಮಕ್ಕಳು ಹೋದವಂತೆ. ನಾನು ಮೂರನೆಯವಳು. ನಮ್ಮ ತಮ್ಮ ಹುಟ್ಟಿದಾಗ, ನಮ್ಮ ತಾಯಿ ಬಾಣಂತಿ ಕ್ಷಯದಲ್ಲಿ ತೀರಿಹೋದರು. ಒಂದು ವರ್ಷದ ತಮ್ಮ ತೀರಿಹೋದ. ಇದ್ದಿದ್ದರೆ ಅವನಿಗೂ ಈಗ ಹನ್ನೆರಡು ಹದಿನ್ಮೂರು ವರ್ಷ.... ನಮ್ಮ ಮನೆಗೆ ಬರುತ್ತಾರಲ್ಲ, ಆಚಾರ್ರು, ಯಾವ ಯಾವುದೋ ಹೆಣ್ಣು ಕರೆದುಕೊಂಡು ಬಂದಿದ್ದರು. ನಮ್ಮ ಅಪ್ಪ ಒಪ್ಪಲಿಲ್ಲ. ನನ್ನ ಮದುವೆಯಾಗುವ ವರೆಗೂ ಮದುವೆಯಾಗೋದಿಲ್ಲ ಅಂತ ಶಪಥಮಾಡಿಬಿಟ್ಟರು. ಅವರ ದುರದೃಷ್ಟಕ್ಕೆ ನನ್ನ ಅದೃಷ್ಟವೂ ಹೀಗಾಯಿತು. 'ದೇವರ ದಯದಿಂದ ಒಂದು ಗಂಡುಕೂಸಾಗಲಿ, ವಂಶ ಉದ್ಧಾರವಾಗಲಿ, ಆಸ್ತಿಗೆಲ್ಲ ಹಕ್ಕುದಾರನಾಗಲಿ. ಬೇಗ ಮದುವೆ ಮಾಡಿಕೊಂಡುಬಿಡಿ' ಅಂತ ಅವರು ಉಪದೇಶ ಮಾಡುತಾನೆ ಇದಾರೆ. ನಮ್ಮ ತಂದೆ, ನೋಡೋಣ ನೋಡೋಣ ಅಂತಲೇ ಇದಾರೆ.'

'ಮಾಡಿಕೊಳ್ಳಬಹುದು ಅಂತ ಕಾಣುತ್ತೆ, ನನಗೇನೋ. ಮಕ್ಕಳುಮರಿ ಇದ್ದರೆ ಅದರ ಮಾತು ಬೇರೆ. ಬಡವರ ಮನೆಯ ಹೆಣ್ಣು ಯಾವದನ್ನಾದರೂ ತಂದುಕೊಂಡರೆ ಆದೀತು, ಆ ಹೆಣ್ಣೂ ಬದುಕಿಹೋಗುತ್ತೆ.'

'ಆಚಾರ್ರು ಹೇಳೋದೂ ಅದೇ. ನನ್ನನ್ನ ಮಲತಾಯಿಯ ಕೈಕೆಳಗೆ ಹಾಕೋದಕ್ಕೆ ಇಷ್ಟಪಡೋದಿಲ್ಲ ಅವರು.'

'ನಿಮ್ಮ ಜನದ ಹೆಣ್ಣೇ ಆಗಬೇಕೇನೋ—'

'ನಮ್ಮ ತಂದೆ ಅದರಲ್ಲೆಲ್ಲಾ ಕಟ್ಟುನಿಟ್ಟು. ಸ್ನಾನ ಸಂಧ್ಯಾವಂದನೆ ಮಾಡದೆ ಕಾಫಿ ಕೂಡ ಕುಡಿಯೋದಿಲ್ಲ. ದೇವರ ಪೂಜೆಗೆ ಆಚಾರ್ರು ಎಂದಾದರೂ ತಪ್ಪಿಸಿಕೊಂಡರೂ ಅಂದ್ರೆ ಅವರೇ ಪೂಜೇನೂ ಮಾಡಿಬಿಡುತ್ತಾರೆ, ದೇವರ ಪೂಜೆ ನಿಲ್ಲಕೂಡದು ಅಂತ....'

'ಅಡಿಗೆಯಾಕೆ ಮುದುಕಿ, ಪಾಪ. ಬೇರೆಯವರನ್ನ ಇಟ್ಟುಕೊಳ್ಳಿ.'

'ಅವರೇ ನನ್ನ ಕೈಲಾಗೋದಿಲ್ಲ ಅನ್ನೋವರೆಗೂ ಬಿಡಿಸೋದಿಲ್ಲವಂತೆ. ನಾನು ಹುಟ್ಟಿದಾಗ ಅವರನ್ನ ಇಟ್ಟುಕೊಂಡಿದ್ದು.'

* * * *

'ಭೀಮರಾಯರು ಧಾರಾಳ ಬುದ್ಧಿಯವರೇ. ಪದ್ಮಮ್ಮನ ಜೊತೆಗೆ ಕೆಲವು ಕಾಲ ಇರುತ್ತೇನೆ, ಬೇರೆ ಏರ್ಪಾಡು ಮಾಡಿಕೊಳ್ಳುವ ವರೆಗೆ ಅಂದರೆ

ಬೇಡ ಅನ್ನಲಾರರು. ಆದರೆ ಏನೇ ಆಗಲಿ, ನಾನಾಗಿ ಕಾಲ್ತೆಗೆಯುವುದಿಲ್ಲ. ಅಣ್ಣನಿಗೆ ಕೆಟ್ಟ ಹೆಸರು ಬರಬಾರದು. ಬಂದ ಕಷ್ಟ ಅನುಭವಿಸಿಬಿಡೋದು....'

ಸೀತೆಯ ಆಲೋಚನೆಗೆ ನಿಲುಗಡೆಯೇ ಇರಲಿಲ್ಲ. ಆದರೆ ಆಲೋಚನೆ ಯೇನೋ ಒಂದೇ: ತನ್ನ ಭವಿಷ್ಯ ವಿಚಾರ.

೩

ಭೀಮರಾಯರು ಸುಬ್ಬಸ್ವಾಮಿಗೆ ಮಾತು ಕೊಟ್ಟ ಮೇರೆ ತಮ್ಮ ಪ್ರಭಾವವನ್ನು ಉಪಯೋಗಿಸುವುದರಲ್ಲಿ ಯಶಸ್ವಿಯಾದರು. ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಆರು ತಿಂಗಳ ಕಾಲ ದಾದಿಯ ವೃತ್ತಿಯಲ್ಲಿ ಶಿಕ್ಷಣ ಪಡೆಯುವ ಅವಕಾಶವನ್ನು ಸೀತೆಗಾಗಿ ದೊರಕಿಸಿಕೊಂಡು ಬಂದಿದ್ದರು; ತಿಂಗಳಿಗೆ ಹದಿನೈದು ರೂಪಾಯಿ ವೇತನ ಬರುವುದಾಗಿಯೂ ಹೇಳಿದ್ದರು. ಅದು ಭೀಮರಾಯರೇ ಸ್ವಂತವಾಗಿ ಕೊಡುವ ಖಾಸಗಿ ವೇತನವೆಂದು ಮಾತ್ರ ಸುಬ್ಬ ಸ್ವಾಮಿಗಾಗಲಿ ಸೀತೆಗಾಗಲಿ ತಿಳಿಯಬರಲಿಲ್ಲ.

ಸುಬ್ಬಸ್ವಾಮಿ ಈ ಸಂತೋಷದ ಸುದ್ದಿಯನ್ನು ಹೆಂಡತಿಗೆ ತಿಳಿಸಿ, ಆರು ತಿಂಗಳ ಕಾಲವಾದರೂ ಸಹಿಸಿಕೊಂಡಿರಬೇಕೆಂದೂ ಬಳಿಕ ಏನಾದರೂ ಏರ್ಪಾಡು ಮಾಡಿ, ಸೀತೆಯನ್ನು ಬೇರೆಯ ಕಡೆ ಇರುವಂತೆ ಮಾಡುವು ದಾಗಿಯೂ ಹೇಳಿ, ಅವಳನ್ನು ಒಪ್ಪಿಸಿದ.

ಸೀತೆಯ ದಾದಿಯ ಶಿಕ್ಷಣ ಪ್ರಾರಂಭವಾಯಿತು. ಪ್ರತಿನಿತ್ಯ ಬೆಳಗ್ಗೆ ಏಳು ಗಂಟೆಯಿಂದ ಹನ್ನೆರಡು ಗಂಟೆಯವರೆಗೆ ಕೆಲಸ. ಮಧ್ಯಾಹ್ನದ ಮೇಲೆ ಬಿಡುವು.

ಸೀತೆಗೆ ಅವಶ್ಯವಾಗಿದ್ದ ಬಿಳಿಯ ಸೀರೆ ಕುಪ್ಪಸ ಇವನ್ನೆಲ್ಲಾ ಭೀಮ ರಾಯರೇ ತಂದುಕೊಟ್ಟರು. "ನಿನಗೆ ಸಂಬಳ ಆದಮೇಲೆ ಸಾಲ ತೀರಿಸು ವಂತೆಯಮ್ಮ" ಎಂದು ನಗುತ್ತ ಹೇಳಿದರು: "ನಿಮ್ಮ ಅಣ್ಣನಿಗೆ ಸಾಲ ಕೊಡಬಹುದು, ನಿನಗೆ ಕೊಡಬಾರದೆ?"

ಈ ಹೊಸ ಸನ್ನಿವೇಶದಲ್ಲಿ ಸರೋಜಮ್ಮನ ಅಸಮಾಧಾನ ಹೆಚ್ಚಿತೇ ಹೊರತು ತಗ್ಗಲಿಲ್ಲ. ಅಷ್ಟು ಮಾತ್ರವಲ್ಲ, ಭೀಮರಾಯರೇ ಸೀತೆಗೆ ಸೊಗಸಾದ ಬಿಳಿಯ ಸೀರೆ ಕುಪ್ಪಸಗಳನ್ನು ತಂದುಕೊಟ್ಟದ್ದು ಸರೋಜಮ್ಮನ ಮನಸ್ಸಿನಲ್ಲಿ

ಸಂಶಯದ ಬೀಜವನ್ನು ಬಿತ್ತಿತು. ಈ ಹಿಂದೆ ಸೀತೆ ಕೆಲವು ಸಲ ಒಬ್ಬೊಂಟಿಗಳಾಗಿ ಭೀಮರಾಯರ ಜೊತೆ ಪದ್ದಮ್ಮನನ್ನು ಮಾತನಾಡಿಸಿಕೊಂಡು ಬರಲೆಂದು ಹೋಗಿದ್ದ ಸಂದರ್ಭಗಳಲ್ಲಿ ಸರೋಜಮ್ಮನಿಗೆ ವಿಶೇಷ ಸಂಗತಿ ಕಾಣತೊಡಗಿತು.

ಈಗ ಬೆಳಗಿನ ಅಡುಗೆ ಮುಂತಾದ ಎಲ್ಲ ಗೃಹಕೃತ್ಯಗಳೂ ಸಂಪೂರ್ಣವಾಗಿ ಸರೋಜಮ್ಮನ ಮೇಲೆ ಬಿದ್ದುದರಿಂದ ಅವಳ ಅಸಮಾಧಾನದ ಅಗ್ನಿಗೆ ಆಜ್ಯವೆರೆದಂತಾಯಿತು.

" ನೀವೇನೋ ಆರು ತಿಂಗಳ ಕಾಲ ಹೇಗೋ ಸಹಿಸಿಕೊಂಡಿರು ಎನ್ನುತ್ತೀರಿ. ನನ್ನ ಕೈಲಾಗುವುದಿಲ್ಲ. ನಾನು ಅವಳಿಗೆ ಮಾಡಿ ತೋಡಬೇಕು, ಅವಳು ತೆಳ್ಳನೆ ಬೆಳ್ಳನೆ ಸೀರೆ ಉಟ್ಟುಕೊಂಡು, ನಾಯಕಸಾನಿಯ ಹಾಗೆ ನಲಿಯುತ್ತ ಆಡಿಕೊಂಡು ಇರಬೇಕು, ಅಲ್ಲವೆ? ನನ್ನ ಅಲಂಕಾರ ಹೆಚ್ಚು ಅಂತ ಮುಖ ಸಿಂಡರಿಸಿಕೊಳ್ಳುತ್ತಿದ್ದಳಲ್ಲ, ಈಗ ಅವಳ ಅಲಂಕಾರ ನೋಡಿದಿರಾ? ಅಬ್ಬ! ಒಂದು ತಿಂಗಳಲ್ಲಿ ಅದೆಷ್ಟು 'ಫ್ಯಾಷನ್' ಕಲಿತುಬಿಟ್ಟಿದ್ದಾಳೆ! ಎತ್ತಿ ತುರುಬು ಕಟ್ಟಿಕೊಳ್ಳೋದೇನು! 'ಹೇರ್‌ಪಿನ್'ಗಳನ್ನು ಸಿಕ್ಕಿಸಿಕೊಳ್ಳೋದೇನು! ಸೋಪು ಸೆಂಟು ಎಲ್ಲ ಬಂದುಬಿಟ್ಟಿದೆ! ತುರುಬಿಗೆ ಹೂವು, ಹಣೆಗೆ ಕುಂಕುಮ—ಎರಡೇ ಬಾಕಿ. ಯಾರನ್ನ ಮೆಚ್ಚಿಸೋಕೆ ಈ ಅಲಂಕಾರವೆಲ್ಲ? ನೀವು ಬೆಪ್ಪರ ಹಾಗೆ ಸೂಳೇನ ಸಾಕುತಾ ಇದ್ದೀರಿ. ಸುಖಪಡೋಳು ಸಂಪಾದನೆ ಮಾಡೋಳು ಅವಳು, ಕೆಟ್ಟ ಹೆಸರು ಹೊರೋರು ನಾವು! ಇದ್ಯಾಕೆ, ಬಾಯೇ ಬಿಡೋದಿಲ್ಲ? ತಂಗಿಯ ಮೇಲೆ ಅಷ್ಟು ಮಮತೆ ಇದ್ದರೆ, ನೀವೂ ಬೇಕಾದರೆ ತಿಂಗಳಿಗೆ ಐದು ರೂಪಾಯಿ ಕೊಡಿ, ಅವಳಿಗೆ ಬರೋ ಸ್ಕಾಲರ್‌ಷಿಪ್ಪಿನ ಜೊತೆಗೆ, ಆರು ತಿಂಗಳ ಕಾಲ. ಅವಳೆಲ್ಲಾದರೂ ಒಂದು ರೂಮು ಬಾಡಿಗೆಗೆ ಮಾಡಿಕೊಂಡು ಸುಖವಾಗಿರಲಿ, ಬೇಡ ಅಂದವರು ಯಾರು. ಅವಳಿಗೂ ಅನುಕೂಲ, ಬೇಕಾದವರು ಬಂದುಹೋಗಿ ಮಾಡಬಹುದು, ಯಾವ ಆತಂಕವೂ ಇಲ್ಲದೆ....ನೀವು ನಂಬಿದರೆ ನಂಬಿ, ಬಿಟ್ಟರೆ ಬಿಡಿ. ಬೀದಿಯವರೆಲ್ಲಾ ಸೀತೆಗೂ ಭೀಮರಾಯನಿಗೂ ಗಂಟುಹಾಕಿದ್ದಾರೆ. ಅವಳ ಸಂಪಾದನೆಯಲ್ಲಿ ನಮಗೂ ಪಾಲಿದೆಯಂತೆ, ಅದಕ್ಕೇ ನಾವು ಅವಳನ್ನ ಹೊರಕ್ಕಟ್ಟದೆ ಸುಮ್ಮನಿದ್ದೇವೆಯಂತೆ. ಇವತ್ತು ಹೀಗಂತಾರೆ; ನಾಳೆ, ನಾವೂ

ಸಂಪಾದನೆ ಮಾಡುವುದಕ್ಕೆ ಹೊರಟಿದ್ದೇನೆ ಅಂತಾರೆ. ನಿಮ್ಮ ಸ್ಥಾನಮಾನ ಏನಾಯಿತು ನೀವೇ ಊಹಿಸಿಕೊಳ್ಳಿ. ನಾನು ಯಾಕೆ ಮಾತಾಡಿ ಕೆಟ್ಟವ ಳಾಗಲಿ...."

ನುಂಗಲಾರದೆ ನುಂಗುತ್ತಿದ್ದ ಸುಬ್ಬಸ್ವಾಮಿಯು ತುತ್ತು ತುತ್ತಿಗೂ ಮೆತ್ತಿಕೊಳ್ಳುತ್ತಿತ್ತು, ಸರೋಜಮ್ಮನ ಕಿಡಿನುಡಿಯ ವಿಭ್ರಾಮಕ ವಿಷಲೇಪ. ಆದರೂ ತಂಗಿಯೆಂಬ ಕಾರಣ, ಸುಬ್ಬಸ್ವಾಮಿಯ ಅಂತಃಕರಣವೇನೋ ಆ ವಿಷವನ್ನೂ ಜೀರ್ಣಿಸಿಕೊಂಡಿತು. ಆದರೆ ಅದರ ಪರಿಣಾಮವಾಗಿ, ಮನಸ್ಸು ವಿಚಾರರಹಿತವಾಗಿ ಕೇಳಿದ್ದನ್ನು ನಂಬಿತು; ಎದೆ ಕಲ್ಲಾಯಿತು. ಸರೋಜಮ್ಮ ನಿಗೆ ಸಂಪೂರ್ಣ ಕಾರ್ಯಸ್ವಾತಂತ್ರ್ಯ ಲಭಿಸಿತು.

ಇನ್ನೂ ಮೌನವಾಗಿಯೇ ಊಟ ಮಾಡುತ್ತಿದ್ದ ಸುಬ್ಬಸ್ವಾಮಿಗೆ ತನ್ನ ನಿರ್ಧಾರದ ನುಡಿಯನ್ನು ಬಡಿಸಿದಳು :

"ನಾನು ನಿಮಗೆ ಒಂದು ತಿಂಗಳ 'ನೋಟೀಸ್' ಕೊಟ್ಟಿದೇನೆ. ಅಷ್ಟ ರಲ್ಲಿ ಅದು ಹೇಗೆ ಹೇಳಬೇಕೋ ಹಾಗೆ ಹೇಳಿ ನಿಮ್ಮ ತಂಗಿಯನ್ನ ಕಳಿಸಿಬಿಡಿ. ತಂಗಿ ಅನ್ನುವ ವಾತ್ಸಲ್ಯ ನಿಮ್ಮನ್ನ ಕಾಡಿದರೆ, ನಾನು ನಿಷ್ಠುರವಾಗಿಯೇ ಹೇಳಿಬಿಡುತ್ತೇನೆ. ಆಮೇಲೆ ನನ್ನನ್ನ ನೀವು ದೂರಬೇಡಿ."

ಸುಬ್ಬಸ್ವಾಮಿಯೂ ನಿರ್ಧಾರಮಾಡಿಬಿಟ್ಟಿದ್ದ : ಈ ವಿಷಯದಲ್ಲಿ ತಟಸ್ಥ ನಾಗಿದ್ದು, ನಡೆಯುವುದು ಹೇಗೆ ನಡೆಯಬೇಕೋ ಹಾಗೆ ನಡೆದುಕೊಳ್ಳಲಿ, ಎಂದು.

ಸೀತೆ 'ನರ್ಸ್' ಶಿಕ್ಷಣಕ್ಕೆ ಸೇರಿದ ಮೂರನೆಯ ತಿಂಗಳ ಮೊದಲ ವಾರ ದಲ್ಲಿ, ಸರೋಜಮ್ಮ ಸೀತೆಗೆ ಬಹು ಉದಾರ ಮನಸ್ಸಿನಿಂದ ಒಂದು ತಿಂಗಳ 'ನೋಟೀಸ್' ಕೊಟ್ಟು, ನಿರ್ಗಮನದ ನಿರೂಪವನ್ನು ನಿರ್ದಾಕ್ಷಿಣ್ಯವಾಗಿ ನುಡಿದುಬಿಟ್ಟಳು.

೪

ಸೀತೆ ಈ ಒಂದು ಸಂದರ್ಭವನ್ನು ಮುಂಗಂಡಿದ್ದಳು. ಆದರೆ ತಾನಾಗಿ ಮನೆ ಬಿಟ್ಟು ಹೊರಹೊರಡಲು ಸಿದ್ಧಳಾಗಿರಲಿಲ್ಲ. ಅಣ್ಣನ ಉಭಯಸಂಕಟ ವನ್ನೂ ಅವಳು ಚೆನ್ನಾಗಿ ಅರಿತಿದ್ದಳು. ತನ್ನ ದೆಸೆಯಿಂದ ದಂಪತಿಗಳಲ್ಲಿ

ವಿರಸವುಂಟಾಗಬಾರದೆಂದು ಅವಳ ತುಂಬುಹೃದಯದ ಹಂಬಲ. ಅದಕ್ಕಾಗಿ ಅತ್ತಿಗೆಯ ಆಜ್ಞೆಯನ್ನು ಮರುಮಾತಾಡದೆ ಪಾಲಿಸುವ ಮನಸ್ಸುಮಾಡಿದಳು. ಅದಕ್ಕೆ ಬೇಕಾದ ಪೂರ್ವ ಸಿದ್ಧತೆಯನ್ನೂ ಮಾಡಿಕೊಂಡಳು.

ಮನೆಯನ್ನು ಬಿಡುವ ಮುನ್ನ ಅವಳ ಕರುಳು ಕಿವುಚದೆ ಇರಲಿಲ್ಲ. ಕಷ್ಟವೋ ನಿಷ್ಠುರವೋ, ಅಣ್ಣ ಕೆಲವು ವರ್ಷ ತನ್ನ ಮಾನ-ಪ್ರಾಣಗಳ ಸಂರಕ್ಷಣೆಯ ಹೊಣೆ ಹೊತ್ತಿದ್ದ. ಅವನ ಸುಖ ಸಂತೋಷಗಳಿಗಾಗಿಯೇ ಅವನನ್ನು ಅಗಲಬೇಕಾದದ್ದು ಅನಿವಾರ್ಯವಾಗಿತ್ತು ಈಗ. ಜೊತೆಗೆ ಅಣ್ಣನ ಮನೆಗೆ ಬಂದಂದಿನಿಂದ ರಾಧಾಕೃಷ್ಣ ಅವಳ ಬಾಳಿನ ಒಂದು ಕಿರಿದೆಡೆಯನ್ನು ಆಕ್ರಮಿಸಿದ್ದ. ಆ ಏನೂ ಅರಿಯದ ಹಸುಳೆಯನ್ನು ಬಿಟ್ಟುಹೋಗುವುದು ಬಹು ಕ್ರೂರವೆನಿಸಿತವಳಿಗೆ.

ಅಣ್ಣ, ಮಕ್ಕಳು ಇನ್ನೂ ಮಲಗಿಯೇ ಇದ್ದರು. ಸೀತೆ ಎಂದಿನಂತೆ ಹೊತ್ತಿಗೆ ಮುಂಚೆ ಎದ್ದು, ಕಾಫಿಯ 'ಡಿಕಾಕ್ಷನ್' ಮಾಡಿ, ಮನಸ್ಸನ್ನು ಕಹಿ ಮಾಡಿಕೊಳ್ಳದೆ, ಕಲುಷಿತಗೊಳ್ಳದೆ, ತನ್ನ ಪಾಲಿನ ಕಾಫಿಯನ್ನು ಕುಡಿದಳು. ಸರೋಜಮ್ಮ ಎದ್ದು ಮುಖ ತೊಳೆದುಕೊಂಡು ಬರುವವರೆಗೂ ಕಾದಿದ್ದು, ಅವಳು ಬಂದ ಕೂಡಲೆ ಹೇಳಿದಳು :

"ಕಾಫಿ ಮಾಡಿಟ್ಟಿದ್ದೇನೆ ; ನಾನು ಕುಡಿದಾಯಿತು. ಹೋದ ವಾರವೇ ಹೋಗೋಣ ಅಂತ ಮಾಡಿಕೊಂಡಿದ್ದೆ. ಆದರೆ ಯಾವದೂ ರೂಮು ಸಿಕ್ಕಿರಲಿಲ್ಲ. ವಿಶ್ವೇಶ್ವರಪುರದಲ್ಲಿ ಒಂದು ರೂಮು ಗೊತ್ತುಮಾಡಿದೆ. ಇವೊತ್ತು ನನಗೆ ಅಡಿಗೆ ಮಾಡಬೇಡ, ಅತ್ತಿಗಮ್ಮ. ಮಕ್ಕಳು ಏನಾದರೂ ಕೇಳಿದರೆ...." ಆಗ ಸೀತೆಯ ಕೊರಲು ಕಟ್ಟಿಬಂದಿತು. "....ಆಸ್ಪತ್ರೆಯಲ್ಲೇ ಇರಬೇಕಾಗಿದೆ, ಅಂತ ಹೇಳಿಬಿಡು....ನನ್ನ ಹಾಸಿಗೆ, ಬಟ್ಟೆ ಗಂಟು ಎಲ್ಲ ಸಂಜೆ ತೆಗೆಸಿಕೊಂಡು ಹೋಗುತ್ತೇನೆ. ಮನೆ ಬಿಟ್ಟು ಹೋದೆ ಅಂತ ಮನಸ್ಸಿನಲ್ಲಿ ದೂರ ಹೋದೆ ಅಂತ ಭಾವಿಸಬೇಡಿ. ಆಗಾಗ್ಗೆ ಬಂದು ನೋಡಿಕೊಂಡು ಹೋಗುತ್ತಾ ಇರುತ್ತೇನೆ. ರಾಧಾಕೃಷ್ಣ ಅತ್ತರೆ, ಗದರಿಸಿಕೋಬೇಡ, ಅತ್ತಿಗಮ್ಮ...."

"ಅವರು ಇನ್ನೂ ಎದ್ದಿಲ್ಲ. ಅವರಿಗೆ ಹೇಳಿ ಹೋಗುವುದಿಲ್ಲವೆ ?"

"ಈಗ ಹೇಳೋದು ಬೇಡ. ಹೇಗಿದ್ದರೂ ಗೊತ್ತೇ ಆಗುತ್ತಲ್ಲ. ನಾನೂ ಬರುತ್ತಾ ಇರುತ್ತೇನಲ್ಲ...."

" ಇವೊತ್ತು ಮಧ್ಯಾಹ್ನ ಊಟ ಮಾಡಿಕೊಂಡು ಹೋಗಬಹುದಲ್ಲ. ಉಪವಾಸ ಮನೆ ಬಿಡೋದೇ?...."—ಸರೋಜಮ್ಮನ ದನಿಯಲ್ಲಿ ಹುಸಿ ನಲ್ಮೆಯ ತೋರಿಕೆ ಸ್ಪಷ್ಟವಾಗಿತ್ತು.

" ಊಟ, ತಾಂಬೂಲ, ಅರಿಶಿನ, ಕುಂಕುಮ ಅದೆಲ್ಲಾ ನನಗೆ ಯಾಕೆ? ನನಗೆ ಆ ಭಾಗ್ಯ ಇಲ್ಲದೆ ಇರುವಾಗ, ' ಉಪವಾಸ ಹೊರಟುಹೋದಳು, ಅವಲಕ್ಷಣ ಅಂತ ' ಏನೂ ತಿಳಿದುಕೊಳ್ಳಬೇಡ. ಎಂದಾದರೂ ಊಟಕ್ಕೂ ಬಂದರಾಯಿತು, ಅದಕ್ಕೇನು?.... ನನ್ನಿಂದ ಏನಾದರೂ ತಪ್ಪಾಗಿದ್ದರೆ, ಎಲ್ಲಾ ಮರೆತುಬಿಡು, ಅತ್ತಿಗಮ್ಮ" ಎಂದು, ಇನ್ನು ಹೆಚ್ಚಿನ ಮಾತಿಗೆ ಅವಕಾಶ ಕೊಡದೆ, ನಡೆದುಬಿಟ್ಟಳು.

ಅಂದು ಮಧ್ಯಾಹ್ನದ ಮೇಲೆ, ಸುಬ್ಬಸ್ವಾಮಿಯ ಮನೆಯ ಮುಂದೆ ಭೀಮರಾಯರ ಜಟಕಾಗಾಡಿ ಬಂದು ನಿಂತಿತು. ಗಾಡಿಯ ಇಬ್ರಾಹಿಂ, " ಸೀತಮ್ಮಾವರ ಹಾಸಿಗೆ ಬಟ್ಟೆ ಐತಂತಲ್ಲ, ಕೊಡ್ತೀರ? ರಾಯರು ಹೇಳಿ ಕಳ್ಸವರೆ " ಎಂದು ಸರೋಜಮ್ಮನನ್ನು ಕೇಳಿದಾಗ ಅವಳ ಹುಬ್ಬು ಅಚ್ಚರಿಯಿಂದ ಮೇಲೇರಿತು.

ಭೀಮರಾಯರು ವಿಶ್ವೇಶ್ವರಪುರದಲ್ಲಿನ ತಮ್ಮ ಮನೆಯೊಂದರ ಮುಂದಿನ ಕೊಠಡಿಯನ್ನು ಬಿಡಿಸಿಕೊಂಡು, ಅದನ್ನು ಸೀತೆಯ ವಶಕ್ಕೆ ಕೊಟ್ಟಿದ್ದರು. ತಮ್ಮ ಮನೆಯಲ್ಲಿಯೇ ಇರಬೇಕೆಂಬ ತಂದೆ-ಮಗಳ ಬೇಡಿಕೆಯನ್ನು ಸೀತೆ ಖಡಾಖಂಡಿತವಾಗಿ ನಿರಾಕರಿಸಿಬಿಟ್ಟಿದ್ದಳು. ಸ್ಕಾಲರ್‌ಷಿಪ್ಪಿನ ರಹಸ್ಯ ಅವಳಿಗೆ ಆಗಲೇ ಗೊತ್ತಾಗಿಹೋಗಿತ್ತು; ಭೀಮರಾಯರು ಈಗಾಗಲೇ ತನಗೆ ಎಷ್ಟು ಉಪಕಾರ ಮಾಡಿದ್ದರೆಂಬುದನ್ನೂ ಅವಳು ಬಲ್ಲಳು. ತನ್ನ ಶಿಕ್ಷಣ ಮುಗಿದು ಆಸ್ಪತ್ರೆಯಲ್ಲೇ ದಾದಿಯ ಕೆಲಸ ದೊರೆಯುವ ವರೆಗಾದರೂ ಇನ್ನೂ ಅವರಿಗೆ ಉಪಕೃತಳಾಗಿಯೇ ಇರಬೇಕೆಂಬುದೂ ಅವಳಿಗೆ ಸ್ಪಷ್ಟವಾಗಿತ್ತು. ಉಪಕೃತಳಾಗಿದ್ದೂ ಸ್ವತಂತ್ರಳಂತೆಯೇ ವರ್ತಿಸುತ್ತಿದ್ದ ಅವಳ ರೀತಿ ಭೀಮರಾಯರ ಬಗೆಗೆ ಅರ್ಥವಾಗಲಿಲ್ಲ.

ಪದ್ದಮ್ಮನ ಬಲವಂತಕ್ಕೆ ಕಟ್ಟುಬಿದ್ದು, ಸೀತೆ ಭೀಮರಾಯರ ಮನೆಯಲ್ಲಿಯೇ ಮೂರು ದಿನ ಇದ್ದಳು. ಈ ನಡುವೆಯಲ್ಲಿ ಭೀಮರಾಯರು ವಿಶ್ವೇಶ್ವರಪುರದ ಮನೆಯ ಮುಂದುಗಡೆಯ ಕೋಣೆಯೊಂದನ್ನು ಒಬ್ಬರ

'ಸಂಸಾರ'ಕ್ಕೆ ಬೇಕಾಗುವಷ್ಟು ಪಾತ್ರೆಪರಟೆಗಳಿಂದ ಸಜ್ಜುಗೊಳಿಸಿದ್ದರು; ಕೋಣೆಯ ಮೂಲೆಯಲ್ಲಿ ಸಣ್ಣ ಬಚ್ಚಲುಕಟ್ಟೆ ಕಟ್ಟಿಸಿ, ಸ್ನಾನಕ್ಕೂ ಅಲ್ಲಿಯೇ ಅವಕಾಶ ಕಲ್ಪಿಸಿದ್ದರು.

ಮೂರು ದಿನವಾದಮೇಲೆ, ಹೀಗೆ ಸಜ್ಜಾದ ಕೊಠಡಿಯಲ್ಲಿ ಸೀತೆಯ ಒಂಟಿ ಸಂಸಾರ ಮೊದಲಾಯಿತು. ಅಂದು ಸಂಜೆ ಭೀಮರಾಯರೂ ಪದ್ಮಮ್ಮನೂ ಹೋಗಿ ಸೀತೆಯನ್ನು ಮಾತನಾಡಿಸಿಕೊಂಡು ಬಂದರು.

"ನಮ್ಮನ್ನ ನೋಡಿಕೊಂಡು ಹೋಗುವುದಕ್ಕಾದರೂ ಆಗಾಗ್ಗೆ ನಮ್ಮ ಮನೆಗೆ ಬರುತ್ತಿರುತ್ತೀಯೋ, ಇಲ್ಲ, ನಾವೇ ಇಲ್ಲಿಗೆ ಬರಬೇಕೋ?" ಎಂದು ಭೀಮರಾಯರು, ಸೀತೆ ಕಾಸಿಕೊಟ್ಟ ಕಾಫಿಯನ್ನು ಕುಡಿದು, ಹಿಂದಿರುಗುವಾಗ ಹಸನ್ಮುಖಿಗಳಾಗಿ ಕೇಳಿದರು. ಅವರ 'ರಾಜಾ' ಮೀಸೆ ಅವರ ನಗೆಮೊಗಕ್ಕೆ ಬಹು ಸೊಗಸಾಗಿ ಒಪ್ಪುತ್ತಿತ್ತು.

"ನಾನು ನಿಮ್ಮ ಚರಣದಾಸಿ" ಎಂದುಬಿಟ್ಟಳು ಸೀತೆ! ಬಹುಶಃ ಯಾವುದೋ ಕಥೆಯಲ್ಲಿ ಅವಳು ಎಂದೋ ಓದಿದ್ದ ಮಾತುಗಳು ಅವಳ ಇಂದಿನ ಕೃತಜ್ಞತಾಭಾವಸೂಚನೆಗೆ ದಾಸ್ಯವೇಷಗಲು ಓಡಿಬಂದಿದ್ದುವು. ಪದ್ಮಾವತಿಗೆ ಆ ಮಾತುಗಳಲ್ಲಿ ವಿಶೇಷ ಅರ್ಥವೇನೂ ಕಾಣಬರಲಿಲ್ಲ; ಸೀತೆಯಾದರೂ ಏನನ್ನೂ ಉದ್ದೇಶಪಟ್ಟಿರಲಿಲ್ಲ. ಭೀಮರಾಯರು ಮಾತ್ರ ಅರ್ಥಗ್ರಹಣ ಮಾಡಿದರು; ಅಭಿಮಾನಪೂರ್ವಕವಾಗಿ ಸೀತೆಯನ್ನು ದಿಟ್ಟಿಸಿ ನೋಡಿದರು. ತನ್ನ ಮಾತುಗಳ ಪರಿಣಾಮವನ್ನು ಸೀತೆ ಆ ದೃಷ್ಟಿಯಿಂದ ಗ್ರಹಿಸಿದಳು. ಮಿಂಚಿದ ಮಾತಿಗೆ ಚಿಂತಿಸಿ ಫಲವಿಲ್ಲವೆಂದು ಸುಮ್ಮನಾದಳು.

ಸೀತೆ ಭೀಮರಾಯರ ಮನೆಗೆ ವಾರಕ್ಕೆ ಒಂದೆರಡು ದಿನ ಹೋಗಿಬರುತ್ತಿದ್ದಳು. ಭೀಮರಾಯರೂ ದಿನ ಬಿಟ್ಟು ದಿನ ಸಂಜೆಯ ಹೊತ್ತು ಸೀತೆಯ ಕೊಠಡಿಗೆ ಬಂದು, ಐದು ನಿಮಿಷ ಹತ್ತು ನಿಮಿಷ ಮಾತುಕತೆಯಾಡುತ್ತ ಕುಳಿತಿದ್ದು, ಅವಳಿಗೆ ಬೇಕಾದ ಪದಾರ್ಥಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದರು; ಏನಾದರೂ ಇದ್ದರೆ, ಸಣ್ಣಪುಟ್ಟದಾದರೆ ತಾವೇ ತಂದುಕೊಡುತ್ತಿದ್ದರು; ಇತರವನ್ನು ಇಬ್ರಾಹಿಮನ ಸಂಗಡ ಗಾಡಿಯಲ್ಲಿ ಕಳಿಸಿಕೊಡುತ್ತಿದ್ದರು.

ಸೀತೆ ಸುಬ್ಬಸ್ವಾಮಿಯನ್ನಾಗಲಿ ಅವನ ಕುಟುಂಬವನ್ನಾಗಲಿ ಮರೆತುಬಿಡಲಿಲ್ಲ. ಎಂದಾದರೊಮ್ಮೆ ಬಿಡುವುಮಾಡಿಕೊಂಡು ಅವನ ಮನೆಗೆ ಹೋಗಿ

ಬರುತ್ತಿದ್ದಳು ; ಮಕ್ಕಳ ಕೈಗೆ ಪೆಪ್ಪರಮೆಂಟು ಬಿಸ್ಕತ್ತು ಇಟ್ಟುಬರುತ್ತಿದ್ದಳು.

ಸೀತೆ ಮನೆ ಬಿಟ್ಟು ಹೋದ ಕೆಲವು ಕಾಲವಾದಮೇಲೆ ಸರೋಜಮ್ಮ ಸುಬ್ಬಸ್ವಾಮಿಯೊಂದಿಗೆ ಹೀಗೆ ಹೇಳಿದಳು : " ನಾನು ಹೇಳಿದ್ದು ಸುಳ್ಳಾಯಿತೆ ? ಈಗಲಾದರೂ ನನ್ನ ಮಾತನ್ನ ನಂಬುತ್ತೀರಿ ಅಂತ ಕಾಣುತ್ತೆ. ಅವತ್ತು ನನ್ನ ಮೇಲೆ ಹಾರಾಡಿಬಿಟ್ಟಿರಿ, ಸೀತೆಯನ್ನ ಕತ್ತು ಹಿಡಿದು ನೂಕಿದೆ ಅಂತ. ಈಗಲಾದರೂ ನಿಮಗೆ ಖಂಡಿತವಾಯಿತೋ, ಭೀಮರಾಯರು ಅವಳನ್ನ ಇಟ್ಟುಕೊಂಡಿದ್ದಾರೆ ಅಂತ ? ಆತನೇನು ದಡ್ಡನೆ, ಸುಮ್ಮಸುಮ್ಮನೆ ಕೈಯಿಂದ ದುಡ್ಡು ಖರ್ಚುಮಾಡಿ ಅವಳ ಯೋಗಕ್ಷೇಮ ನೋಡಿಕೊಳ್ಳೋದಕ್ಕೆ ? ಜನ ಕರೆಯೋ ಹಸುವಿಗೆ ಮೇವು ಹಾಕುತ್ತಾರೆ, ಗೊಡ್ಡಿಯನ್ನ ಮುದಿಯನ್ನ ಕಟುಕರಿಗೆ ಮಾರುತ್ತಾರೆ."

ಹೆಂಡತಿಯ ಮಾತು ಸತ್ಯವೆಂದು ಸುಬ್ಬಸ್ವಾಮಿ ಈಗ ನಂಬಿಬಿಟ್ಟ. ತನ್ನ ಪರವಾಗಿ ಅವಳು ಮಾಡಿದ ಕಾರ್ಯ ಒಳ್ಳೆಯದೇ ಆಯಿತೆಂದುಕೊಂಡ.

೫

ಸರೋಜಮ್ಮ ಸುಬ್ಬಸ್ವಾಮಿ ಮಾತ್ರವಲ್ಲ, ವಿಶ್ವೇಶ್ವರಪುರದಲ್ಲಿ ಭೀಮರಾಯರ ಮನೆಯ ಸುತ್ತಮುತ್ತಣ ಜನವೆಲ್ಲ ಅವರು ಸೀತೆಯನ್ನು ಇಟ್ಟುಕೊಂಡಿದ್ದಾರೆಂದೇ ಆಡಿಕೊಳ್ಳತೊಡಗಿದ್ದರು.

ಸೀತೆಯಲ್ಲಿ ಭೀಮರಾಯರ ಒಲವು ದಿನದಿನಕ್ಕೆ ಬಲಗೊಳ್ಳುತ್ತಿತ್ತು ; ಅದು ಈ ವರೆಗೆ ಬಹು ಗುಪ್ತಗಾಮಿನಿಯಾಗಿತ್ತು. ಒಂದೊಂದುವೇಳೆ, ಅವರು ತಮ್ಮನ್ನು ತಾವೇ ಟೀಕಿಸಿಕೊಂಡದ್ದೂ ಉಂಟು : ' ನನಗೂ ಸೀತೆಗೂ ವಯಸ್ಸಿನಲ್ಲಿ ಎಷ್ಟೋ ವ್ಯತ್ಯಾಸವಿದೆ. ಅವಳು ಹೆಚ್ಚುಕಡಮೆ ನಮ್ಮ ಪದ್ದುವಿನ ಹಾಗೆಯೇ. ಇವಳ ವಿಚಾರದಲ್ಲಿ ನಾನು ಈ ಭಾವನೆ ಇಟ್ಟುಕೊಳ್ಳುವುದು ಸರಿಯೆ ?....ತಪ್ಪೇನು ? ನನ್ನ ಅಭಿಲಾಷೆಗೆ ಅವಳ ಸಮ್ಮತಿಯಿರುವ ಹೊತ್ತಿಗೇ ನನ್ನ ಸಹಾಯವನ್ನೆಲ್ಲ ಅವಳು ಪಡೆಯುತ್ತ ಇರುವುದು ? ಅವಳಿಗೆ ಈ ವಿಚಾರದಲ್ಲಿ ನಾಚಿಕೆ. ನಾನೇ ಪ್ರಸ್ತಾಪಮಾಡಬೇಕು....ಆದರೆ ಈ ಭಾವನೆಯಿಂದ ಅವಳಿಗೆ ನಾನು ಮೊದಲು ನೆರವಾದೆನೆ ?—ಇಲ್ಲ. ಆದರೆ ಅದಕ್ಕಿಂತ ಮೊದಲು ?....ಪದ್ದುವಿಗೆ ದುರ್ಗತಿ ಉಂಟಾದಾಗ ಇವಳಿಗೆ ಉಪಕಾರ ಮಾಡ

ಬೇಕು ಎನ್ನಿಸಿತು. ಉಪಕಾರ ಮಾಡಿದಮೇಲೆ, ಹಾಳು ಮನಸ್ಸು—ಈಗ ಪ್ರತ್ಯುಪಕಾರವನ್ನು ಬಯಸುತ್ತಾ ಇದೆ.... ಇದು ನ್ಯಾಯವೆ?....'

'.... ಇವೊತ್ತು ಪ್ರಸ್ತಾಪಿಸುವುದು ಬೇಡ, ನಾಳೆ....'

ಎಷ್ಟೋ ನಾಳೆಗಳು ನಿನ್ನೆಗಳಾದುವು.

ಒಂದು ದಿನ, ಬಹಳ ಔಪಚಾರಿಕ ರೀತಿಯಲ್ಲಿ, ಸೀತೆ ಭೀಮರಾಯರ ಎದುರಿನಲ್ಲಿ ಉಪಕಾರಸ್ಮರಣೆ ಮಾಡಿದಳು :

" ಇದುವರೆಗೆ ನಿಮ್ಮಿಂದ ಬಹಳ ಉಪಕಾರವಾಯಿತು. ದೇವರು ಕಣ್ಣು ಬಿಟ್ಟು ನೋಡಿದ. ಇನ್ನು ನನ್ನ ಕಾಲ ಮೇಲೆ ನಾನು ನಿಲ್ಲಬಹುದು."

ಭೀಮರಾಯರಿಗೆ ಆಶ್ಚರ್ಯವಾಯಿತು ; ಆದರೆ ಏನೂ ಅರ್ಥವಾಗಿರ ಲಿಲ್ಲ ; " ಅಂದರೆ ? ಈ ಕೊಠಡಿ ಬಿಟ್ಟುಬಿಡುತ್ತೀಯ ? " ಎಂದು ಕೇಳಿದರು.

" ಕೊಠಡಿ ಬಿಡುವುದಿಲ್ಲ. ನೀವು ಒಲ್ಲೆ ಎನ್ನದೆ ಹೋದರೆ ಮುಂದಿನ ತಿಂಗಳಿನಿಂದ ಬಾಡಿಗೆ ಕೊಡುತ್ತೇನೆ."

" ಬಾಡಿಗೆ ! ಇದು ಏನು, ನೀನು ಹೇಳುವುದು !—"

" ಇಂದಿಗೆ ನನ್ನ ಶಿಕ್ಷಣ ಮುಗಿಯಿತು ನೀವು ಪರಿಚಯ ಮಾಡಿಸಿ ಕೊಟ್ಟಿರಲ್ಲ, ಡಾ|| ರಮೇಶಂ, ಅವರ ಕೃಪೆಯಿಂದ ನನಗೆ ಆಸ್ಪತ್ರೆಯಲ್ಲಿ ನರ್ಸ್ ಕೆಲಸ ದೊರಕಿದೆ."

" ತುಂಬ ಸಂತೋಷ, ಸೀತಮ್ಮ ! ನಾನು ಹಾರೈಸಿದ್ದೂ ಇದೇಯೆ. ಕಡೆಗೂ ನನ್ನ ಮಾತನ್ನು ನಡಸಿಕೊಟ್ಟರು ಡಾ|| ರಮೇಶಂ. ಆತ ಹೇಗೆ ? ನನಗೇನೊ ತುಂಬ ಉಪಕಾರಿ ಅಂತ ಕಾಣುತ್ತಾನೆ...."

" ಅವರ ಉಪಕಾರ ಅಷ್ಟಿಷ್ಟಲ್ಲ. ಆಸ್ಪತ್ರೆಯಲ್ಲಿ ನರ್ಸುಗಳ ಹಾಗೆಯೇ ಚಿಕ್ಕಪುಟ್ಟ ಡಾಕ್ಟರುಗಳು, ಹೊಸದಾಗಿ ಡಾಕ್ಟರು ಪರೀಕ್ಷೆ ಪ್ಯಾಸು ಮಾಡಿರು ವವರು, ಕೆಲಸ ಕಲಿಯಲು ಬಂದಿರುತ್ತಾರೆ. ಅವರಲ್ಲಿ ಒಳ್ಳೆಯವರೂ ಇರು ತ್ತಾರೆ. ಕೆಲವರಂತೂ, ಕೆಲಸಕ್ಕಿಂತ ಹೆಚ್ಚಾಗಿ ಅವರಿವರ ಮೇಲೆ ಕಣ್ಣು. ಕಡೆ ಎರಡು ತಿಂಗಳು, ಇಲ್ಲಿಗೆ ಬಂದ ಮೇಲೆ, ನನ್ನನ್ನ ' ನೈಟ್ ಷಿಫ್ಟಿಗೂ ' (ರಾತ್ರಿಯ ಸರದಿ) ಹಾಕಿದ್ದರು. ಒಬ್ಬಿಬ್ಬರ ಡಾಕ್ಟರ ನಡತೆ ಸಹಿಸುವುದಕ್ಕೆ ಕಷ್ಟವಾಯಿತು. ಒಬ್ಬ ಡಾಕ್ಟರಂತೂ ಒಂದು ದಿನ ರಾತ್ರೆ ಇಲ್ಲಿಗೆ ಬಂದು ತುಂಬ ಹೀನಾಯವಾಗಿ ನಡೆದುಕೊಂಡ. ' ನಾನು ಕಿರಿಚಿಕೊಂಡುಬಿಡುತ್ತೇನೆ ' ಅಂತ

ಹೆದರಿಸಿದಮೇಲೆ ಬಾಯಿ ಮುಚ್ಚಿಕೊಂಡು ಹೋದ. ನಾನೂ ತಡೆದೂ ತಡೆದೂ ಯತ್ನವಿಲ್ಲದೆ ಡಾ॥ ರಮೇಶಂ ಅವರಲ್ಲಿ ಮೊರೆಯಿಟ್ಟೆ. ಅವರು ಅವರಿಗೆಲ್ಲಾ ಚೆನ್ನಾಗಿ ಛೀಮಾರಿ ಮಾಡಿದರು ಅಂತ ಕಾಣುತ್ತೆ. ಮಾರನೆಯ ದಿನದಿಂದ ಎಲ್ಲ ಸರಿಹೋಯಿತು. ಈಗ ಕೆಲಸ ಕೊಡಿಸುವುದಕ್ಕೂ ಅವ್ರೇ, ತುಂಬ ಒದ್ದಾಡಿದರು. ಯಾವಳೋ ಕ್ರಿಶ್ಚಿಯನ್ನಳಿಗೆ ಮೀಸಲಾಗಿದ್ದ ಕೆಲಸವನ್ನ ನನಗೆ ಕೊಡಿಸಿದ್ದಾರೆ...."

"ತುಂಬ ಸಂತೋಷ, ಸೀತಮ್ಮಾ. ಬಾಡಿಗೆ ಕೊಡುವುದು ಬಿಡುವುದು ಇರಲಿ. ನೀನು ಇದುವರೆಗೆ ಇದ್ದ ಹಾಗೆಯೇ ಇನ್ನುಮುಂದೂ ಇಲ್ಲೇ ಇರಬೇಕು ಅಂತ ನನ್ನ ಇಷ್ಟ. ನಿನಗೆ ಅಗತ್ಯವಾದರೆ ಹೇಳು, ಇದಕ್ಕೆ ಸೇರಿದ ಹಾಗೆ ಇರುವ ಒಳಕೋಣೆಯನ್ನೂ ಮನೆಯವರಿಂದ ಬಿಡಿಸಿಕೊಂಡು ನಿನಗೇ ಬಿಟ್ಟು ಕೊಡುತ್ತೇನೆ. ಇನ್ನುಮೇಲೆ ನೀನು ಕೋಣೆಯಲ್ಲಿ ಇದ್ದೀಯೆ ಎನ್ನುವುದು ಆಗಬಾರದು. 'ನಿನ್ನ ಮನೆ' ಎನ್ನುವ ಹಾಗೆ ಇರಬೇಕು. ಆ ಕೋಣೆಯನ್ನು ಮಲಗುವ ಕೋಣೆ ಮಾಡಿಕೊಂಡು, ಇದನ್ನು ಬಂದು ಹೋಗುವವರೊಡನೆ ಮಾತುಕತೆ ಆಡಲು ಉಪಯೋಗಿಸಿಕೊಳ್ಳಬಹುದು...."

ಈ 'ಬಂದು ಹೋಗುವವರು' ಎಂದ ಮಾತು ಸೀತೆಯ ಕಿವಿಗೆ ಹಿತವಾಗಿ ಕಾಣಲಿಲ್ಲ.

"....ನೀವು ಬಿಟ್ಟು ಇನ್ನು ಬಂದು ಹೋಗುವವರು ಯಾರು ಇದ್ದಾರೆ? ಬಂದರೆ, ನಮ್ಮ ಅಣ್ಣ ಬರಬೇಕು. ಅವರಿಗೆ ಯಾಕೋ ನನ್ನ ಮೇಲೆ ದಯೆ ಬರಲಿಲ್ಲ. ಈಗ ಇರುವಷ್ಟೆ ಸ್ಥಳ ನನಗೆ ಸಾಕು. ಅಗತ್ಯ ಬಿದ್ದರೆ ಹಾಗೆ ಮಾಡಿದರಾಯಿತು, ನಿಧಾನವಾಗಿ...."

"ಹಾಗೆಯೇ ಆಗಲಿ" ಎಂದು ಭೀಮರಾಯರು ಹೊರಡಲನುವಾದರು.

"ಕಾಫಿಗೆ ನೀರಿಟ್ಟಿದ್ದೇನೆ. ಸ್ವಲ್ಪ ಕಾಫಿ ಕುಡಿದುಕೊಂಡು ಹೋಗಬಹುದಲ್ಲ" ಎಂದಳು ಸೀತೆ.

ಭೀಮರಾಯರು ಹಾಗೆಯೆ ಕುಳಿತರು. ತುಸು ಕಾಲ ಮೌನವಿದ್ದು, ಬಗೆಯ ಹೊಯ್ದಾಟಕ್ಕೆ ಸಿಲುಕಿ, ಕಡೆಗೆ ತಮ್ಮ ಮನದ ಇಂಗಿತಕ್ಕೆ ಮಾತು ಗೊಟ್ಟರು :

"ಸೀತಮ್ಮಾ...."

ಅವರ ಮೃದು ಧ್ವನಿಯಲ್ಲಿಯೇ, ದೈನ್ಯ ಸೂಚನೆಯಲ್ಲಿಯೇ, ಅವರು ತನ್ನಿಂದ ಏನೋ ಬಯಸಲಿದ್ದಾರೆ ಎಂದು ಸೂಕ್ಷ್ಮಮತಿಯಾದ, ತಕ್ಕಮಟ್ಟಿಗೆ ಲೋಕವನ್ನು ಕಂಡ ಸೀತೆಗೆ ಹೊಳೆಯಿತು.

" ಏನು ? " ಎಂದು ಕೇಳಿದಳು.

" ನೀನು ಮನಸ್ಸಿಗೆ ನೊಂದುಕೊಳ್ಳದೆಹೋದರೆ, ತಪ್ಪು ತಿಳಿದುಕೊಳ್ಳದೆ ಹೋದರೆ, ನನ್ನದೊಂದು ಕೋರಿಕೆ ಇದೆ...."

" ಏನಾಗಬೇಕು ಹೇಳಿ ? "

" ಏನೂ ಇಲ್ಲ....ಮೊದಲೇ ಹೇಳಿದ ಹಾಗೆ, ನಾನು ಪ್ರತ್ಯುಪಕಾರವಾಗಿ ಸಾಲ ಕೊಟ್ಟವನ ರೀತಿಯಲ್ಲಿ ಏನನ್ನೂ ಕೇಳುವುದಿಲ್ಲ. ನೀನು ನನ್ನ ಹಂಗಿನಲ್ಲಿ ದ್ದೀಯೆ ಎಂದು ಭಾವಿಸಬೇಕಾಗಿಲ್ಲ, ನನ್ನ ಕೋರಿಕೆಯನ್ನು ನಡಸದಿರುವುದಕ್ಕೂ ನೀನು ಸರ್ವಸ್ವತಂತ್ರಳು........ನೀನು, ಅವೊತ್ತು ಒಂದು ಮಾತು ಹೇಳಿದ್ದೆ, ನೆನಪಿದೆಯೆ ?...."

" ಏನು ಹೇಳಿದ್ದೆನೋ ನೆನಪಿಲ್ಲ—" ಸೀತೆಗೆ ಮರೆತಿರಲಿಲ್ಲ ; ತಾನಾಗಿ ಆ ಮಾತನ್ನು ಮತ್ತೆ ಆಡಲು ಇಷ್ಟಪಡಲಿಲ್ಲ.

" ' ನಾನು ನಿಮ್ಮ ಚರಣದಾಸಿ ' ಎಂದಿದ್ದೆ. ನೆನಪಿದೆಯೆ ? "

" ನೆನಪಿದೆ."

" ನೀನು ನನ್ನ ಚರಣದಾಸಿಯಾಗಿರಬೇಕಾಗಿಲ್ಲ."

" ನೀವು ಹಾಗೆ ಹೇಳಿದ್ದು ಬಹು ಸಂತೋಷವಾಯಿತು."

" ಆದರೆ....ನನ್ನ ಪ್ರೇಯಸಿಯಾಗಿರುವೆಯಾ ? ಇದೇ ನನ್ನ ಕೋರಿಕೆ."

ಬಹುಕಾಲದಿಂದ ಅವರ ಹೃದಯವನ್ನು ತುಂಬಿದ್ದ ಭಾವನೆ ಹೊರ ಸೂಸಿತು ; ಅದರಲ್ಲಿನ ಒತ್ತಡ ಕಡಿಮೆಯಾದಂತಾಗಿ, ಅವರು ನಿರಾಳವಾದ ಮನಸ್ಸಿನಿಂದ, ಸರಾಗವಾಗಿ ಉಸಿರು ಬಿಡುತ್ತ, ವಸಂತಾಗಮನವನ್ನು ನಿರೀಕ್ಷಿಸುವ ಕೋಗಿಲೆಯಂತೆ ಮೌನವಾಗಿ ಕುಳಿತರು.

ಸೀತೆಯೂ ತಟ್ಟನೆ ಉತ್ತರ ಕೊಡಲಾರದೆ, ಮೌನದ ಆಶ್ರಯವನ್ನು ಪಡೆದು ಮನಸ್ಸಿನ ಶೋಧನೆಯಲ್ಲಿ ತೊಡಗಿದ್ದಳು.

ಸಹಜವಾಗಿಯೇ, ಅವಳ ಪೂರ್ವ ಚರಿತ್ರೆಯೆಲ್ಲ ಚಿತ್ರಪರಂಪರೆಯಾಗಿ ಸ್ಮೃತಿಪಟಲದ ಮೇಲೆ ಮೂಡಿ ಮಾಯವಾಯಿತು : ತನ್ನ ಮದುವೆ ; ವೈಧವ್ಯ ;

ಸುಬ್ಬಾಭಟ್ಟನ ಆಸೆ, ನಿರಾಶೆ, ಅವನ ತೀರದ ನಿತ್ಯ ಬಯಕೆ; ಪುಟ್ಟಣ್ಣಯ್ಯನ ದೆಸೆಯಿಂದ ಅನಿರೀಕ್ಷಿತ ವಜ್ರಾಘಾತ; ಗೋಪಾಲಯ್ಯನ ಪ್ರಣಯಚೇಷ್ಟೆ; ಭಾವನ ಬಯಕೆಯ ಬಳ್ಳಿ ಹಬ್ಬಿಕೊಂಡದ್ದು, ಅದರಿಂದ ಬಿಡಿಸಿಕೊಂಡದ್ದು. ಕೃಷ್ಣಮೂರ್ತಿಯ ಶುದ್ಧ ಪ್ರೇಮದ ಬೆಳುದಿಂಗಳು; ಅದನ್ನು ಮರೆಮಾಡಿದ ಕರ್ಮೋಡ; ಸುಬ್ಬಾಭಟ್ಟನ ಸಾಹಸ, ತನ್ನ ಕ್ಷಣಿಕ ದೌರ್ಬಲ್ಯ, ಅದರ ಕಹಿಯಾದ ಫಲ, ಯಾವಜ್ಜೀವವೂ ಪುರುಷ ಸಂಪರ್ಕವನ್ನೆ ತ್ಯಾಗಮಾಡ ಬೇಕೆಂಬ ತನ್ನ ನಿರ್ಧಾರ, ಅದರೊಂದಿಗೆ ಹೋರಾಟ—ಈಗ ಆ ನಿರ್ಧಾರ ವನ್ನು ಒರೆಗೆ ಹಚ್ಚಬೇಕಾದ ಪರೀಕ್ಷಾಸಮಯ.... ಭೀಮರಾಯರು ಎಲ್ಲರಂತಲ್ಲ: ಉಪಕಾರಿಗಳು, ಕೋಮಲಮನಸ್ಸಿನವರು, ನಡತೆಯಲ್ಲಿ ಸಂಯಮವುಳ್ಳವರು: ಒಂದು ದಿನವೂ ಎಚ್ಚರ ತಪ್ಪಿ ನಡೆದವರಲ್ಲ. ಎಷ್ಟು ಕಾಲ ತಡೆದು ತಮ್ಮ ಬಯಕೆಯನ್ನು ಮುಂದಿಟ್ಟಿದ್ದಾರೆ? ಹೆಂಡತಿಯನ್ನು ಕಳೆದುಕೊಂಡು, ಮಗಳ ದುರ್ಗತಿಯನ್ನು ನೋಡುತ್ತ, ಅವರೂ ದುಃಖಿಗಳು. ಅವರ ಸಂಯಮದ ವರ್ತನೆಗೆ ಈ ದುಃಖದ ಅನುಭವವೇ ಕಾರಣವಾಗಿರಬೇಕು. ಹೃದಯವನ್ನು ಎಂದೋ ಕೃಷ್ಣಮೂರ್ತಿಗೆ ಅರ್ಪಿಸಿಯಾಗಿದೆ. ಇವರ ಪ್ರೇಯಸಿಯಾಗಲು ಸಾಧ್ಯವಿಲ್ಲ. ಅಂದು ತಪ್ಪಿ ನುಡಿದ ಮಾತಿಗೆ ಇಂದು ಒಪ್ಪಿಗೆ ಕೊಡಬೇಕಷ್ಟೆ. ಅವರು ತನ್ನಿಂದ ಏನನ್ನೂ ಬಯಸದೆ ಸ್ವತಂತ್ರಳಾಗಿ ಬಿಟ್ಟುಬಿಟ್ಟರೆ, ಪರಮ ಸಂತೋಷ. ಇಲ್ಲದಿದ್ದರೆ, ಕೃತಘ್ನಳಾಗಸಲ್ಲದು. ಉಪಕಾರವಂತಿರಲಿ, ಅವರ ಸೌಜನ್ಯ ತನ್ನನ್ನು ಗೆದ್ದಿದೆ. ತನ್ನ ಮೇಲೆ ಅವರಿಗೆ ಸಂಪೂರ್ಣ ಅಧಿಕಾರವಿದೆ.

ಕಡೆಗೆ ಸೀತೆ ಬಾಯಿ ಬಿಟ್ಟಳು: "ನಾನು ಇಷ್ಟವಿಲ್ಲದೆಯೇ ಈ ಹಿಂದೆ ಕೆಸರಿನ ದಾರಿಯಲ್ಲಿ ನಡೆಯಬೇಕಾಗಿ ಬಂದು, ಅದು ನನ್ನ ಬಾಳಿಗೆ ಮೆತ್ತಿ ಕೊಂಡಿದೆ. ನಾನು ನಿಮ್ಮ ಪ್ರೇಯಸಿಯಾಗಲು ಯೋಗ್ಯಳಲ್ಲ."

"ನಿನ್ನ ಹಿಂದಿನ ಚರಿತ್ರೆ ಕಟ್ಟಿಕೊಂಡೇನು? ಇಂದು ನೀನು ನಿಷ್ಕಳಂಕಳು ಎನ್ನುವುದಕ್ಕೆ ಇದೇ ತಾನೆ ನೀನೇ ಸಾಕ್ಷ್ಯವಿತ್ತಿದ್ದೀಯೆ. ಲೋಕದಲ್ಲಿ, ಪೂರ್ಣ ನಿಷ್ಕಳಂಕರು ಯಾರು? ಆದರೆ.... ಮೊದಲೇ ಮಾತುಕೊಟ್ಟಿದ್ದೇನೆ: ನಾನು ಬಲಾತ್ಕಾರಮಾಡುವುದಿಲ್ಲ. ಕಳಿತು ತಾನಾಗಿ ಕೆಳಕ್ಕೆ ಬಿದ್ದ ಹಣ್ಣಿನ ರುಚಿ ಮಾಗುವ ಮುನ್ನ ಕಿತ್ತ ಹಣ್ಣಿಗೆ ಎಲ್ಲಾದರೂ ಬಂದೀತೆ.... ನನ್ನ ಇಷ್ಟ ನಿನ್ನ ಇಷ್ಟವೂ ಆದರೆ ಸಂತೋಷ. ಇಲ್ಲವಾದರೆ, ಬೇಡ...."

"ನನ್ನ ಇಷ್ಟ ಇದು: ನೀವು, ಸಾಧ್ಯವಾದರೆ, ನಿಮ್ಮ ಪದ್ದಮ್ಮನಿಗೆ ಮತ್ತೆ ಮದುವೆ ಮಾಡಬೇಕು. ಆಮೇಲೆ, ನೀವು ಮದುವೆಯಾಗುವುದು."

"ನಾನು ಮದುವೆಯಾದರೂ ಆಗಬಹುದು, ಅದೇನು ಕಷ್ಟದ ಮಾತಲ್ಲ. ಆದರೆ ಪದ್ದುವಿನ ಮದುವೆ! ನಾನೇನೋ ಶಾಸ್ತ್ರ ಸಂಪ್ರದಾಯ ಎಲ್ಲ ಮೀರುವುದಕ್ಕೆ ಸಿದ್ಧ. ಆದರೆ ಅವಳನ್ನ ಮದುವೆಮಾಡಿಕೊಳ್ಳುವ ವರನನ್ನ ಎಲ್ಲಮ್ಮ ತರುವುದು?"

"ಕಷ್ಟ. ನಾನೂ ಒಪ್ಪಿಕೊಳ್ಳುತ್ತೇನೆ. ಕಷ್ಟದಲ್ಲಿರುವ ಯಾವ ವಿದ್ಯಾರ್ಥಿಗಾದರೂ ಸಹಾಯಮಾಡಿದರೆ, ಆತ ಒಪ್ಪಿಕೊಳ್ಳಬಹುದು."

"ಇದೆಲ್ಲಾ ಬಹುದೂರದ ಮಾತು. ನೋಡೋಣ. ನಿನ್ನ ಇಷ್ಟ ಏನು ಎನ್ನುವುದು ತಿಳಿಯಿತು. ನನ್ನ ಹಿತ ಕೋರುವ ನೀನು ನನ್ನ ಪ್ರಿಯಳಲ್ಲ ಎಂದು ಹೇಗೆ ಹೇಳಲಿ? ನಾನು ಹಾಗೆ ಹೇಳಿದರೆ, ನೀನು ನಿರಾಕರಿಸುತ್ತೀಯೋ?" ಎಂದು ನಗುತ್ತ, ಭೀಮರಾಯರು ಮೇಲೆದ್ದು ಹೊರಟುನಿಂತರು.

"ನಿಮ್ಮಿಂದ ಉಪಕಾರಹೊಂದಿ, ನಿಮ್ಮ ಹಿತ ಕೋರುವುದಲ್ಲದೆ ಬೇರೆ ರೀತಿ ನಾನು ನಿಮ್ಮ ಋಣವನ್ನು ತೀರಿಸಲಾರೆ."

"ಅಂತೂ, ಜನವೇನೋ ನನ್ನ ನಿನ್ನ ವಿಚಾರ ಆಡಿಕೊಳ್ಳುತ್ತಾ ಇದ್ದಾರೆ."

"ಜನಕ್ಕೆ ಹೆದರುವ ಕಾಲ ಆಗಿಹೋಯಿತು. ನಮ್ಮ ಮನಸ್ಸಾಕ್ಷಿಗೆ ಅನುಗುಣವಾಗಿ ನಡೆದುಕೊಂಡರಾಯಿತು."

"ಸೀತಾ!....ಹಾಗೆ ಕೂಗಬಹುದು ತಾನೆ?"

"ಅಗತ್ಯವಾಗಿ...."

"ನಿನ್ನ ಮನಸ್ಸು ಪ್ರೇರಿಸಿದಂತೆ ನಡೆದುಕೋ. ನನ್ನ ಅಡ್ಡಿಯಿಲ್ಲ, ಒತ್ತಾಯವಿಲ್ಲ."

ಭೀಮರಾಯರು ಹೊರಕ್ಕೆ ಬಂದು 'ಇಬ್ರಾಹಿಂ!' ಎಂದು ಕೂಗಿದರು; ಅವನು ಗಾಡಿಯಲ್ಲೇ ಮಲಗಿ ನಿದ್ದೆಹೋಗುತ್ತಿದ್ದ.

ಸಾಧಾರಣವಾಗಿ ಪ್ರತಿನಿತ್ಯ, ಇಲ್ಲವೆ ದಿನ ಬಿಟ್ಟು ದಿನ, ಸೀತೆಯನ್ನು ನೋಡಿಕೊಂಡು ಹೋಗಲು ಬರುತ್ತಿದ್ದ ಭೀಮರಾಯರು ಇದ್ದಕ್ಕಿದ್ದ ಹಾಗೆ ಬರುವುದನ್ನು ನಿಲ್ಲಿಸಿಬಿಟ್ಟರು. ಇದರಿಂದ ಸೀತೆಗೆ ಸ್ವಲ್ಪ ಆತಂಕವಾಯಿತು. ಅವರು ತನ್ನಲ್ಲಿ ಅಸಮಾಧಾನಗೊಂಡಿರಬೇಕು, ಇಲ್ಲವೆ ಅವರ ಇಷ್ಟಾರ್ಥ ಸಲ್ಲಿಸುವ ವಿಷಯ ಆಲೋಚನೆಮಾಡಲು ತನಗೆ ಕಾಲಾವಕಾಶಕೊಟ್ಟಿರಬೇಕು ಎಂದು ಅವಳು ಬಗೆದಳು. ಹೇಗಿದ್ದರೂ ಪದ್ಮಮ್ಮನನ್ನು ನೋಡಿಕೊಂಡು ಬರಲು ಒಂದು ದಿನ ಹೋಗಬೇಕು, ಸದ್ಯದಲ್ಲಿಯೇ ಭೀಮರಾಯರ ಮನೆಗೆ ತಾನೇ ಹೋಗಿ ಅವರು ತನ್ನಲ್ಲಿ ಅಸಮಾಧಾನಗೊಂಡಿಲ್ಲವೆಂಬುದನ್ನು ಖಚಿತ ಪಡಿಸಿಕೊಳ್ಳುವುದು ಮೇಲು ಎಂದು ನಿಶ್ಚಯಿಸಿಕೊಂಡಳು.

ಈ ನಡುವೆ, ಒಂದು ದಿನ ಡಾ|| ರಮೇಶಂ ಡ್ಯೂಟಿಯ ಮೇಲಿದ್ದ ಸೀತೆಯ ಬಳಿಗೆ ಬಂದರು; "ಮಿಸ್ ಸೀತಾದೇವಿ (ನರ್ಸಾಗಿ ಸೇರಿದ್ದ ಸೀತೆಗೆ ಆ ಹೆಸರನ್ನು ಎಲ್ಲರೂ ಸೇರಿ ಇಟ್ಟುಬಿಟ್ಟಿದ್ದರು), ನೀವು ವಾಸಮಾಡುವುದೆಲ್ಲಿ?" ಎಂದು ಪ್ರಶ್ನಿಸಿದರು. ಸೀತೆ ತಟ್ಟನೆ ಉತ್ತರ ಹೇಳದಿರಲು, "ನಮ್ಮ ಭೀಮ ರಾಯರ ಮನೆಯಲ್ಲಿ ತಾನೆ?" ಎಂದು ಅರ್ಥಪೂರ್ಣ ನಗೆಯನ್ನು ನಕ್ಕು ನುಡಿದರು. ಈಗಲೀಗ ಸೀತೆ ಉತ್ತರ ಹೇಳಬೇಕಾಯಿತು. "ಇಲ್ಲ, ವಿಶ್ವೇಶ್ವರ ಪುರದಲ್ಲಿ" ಎಂದಳು ಸೀತೆ. "Will you let me have your address, please? (ದಯವಿಟ್ಟು ನಿಮ್ಮ ವಿಳಾಸ ತಿಳಿಸುವಿರಾ?)" ಎಂದು ರಮೇಶಂ ಕೇಳಿದರು. ಸೀತೆಗೆ ಇಂಗ್ಲಿಷಿನಲ್ಲಿ ಮಾತನಾಡಲು ಬರದಿದ್ದರೂ, ಸಾಮಾನ್ಯ ಸಂಭಾಷಣೆಯ ಇಂಗ್ಲೀಷು ಅರ್ಥವಾಗುತ್ತಿತ್ತು. ಸೀತೆಯೂ ಧೈರ್ಯಮಾಡಿ, ತನ್ನ ವಿಳಾಸವನ್ನು ಹೇಳಿಬಿಟ್ಟಳು. ಅದನ್ನು ರಮೇಶಂ ತಮ್ಮ ನೋಟ್ ಪುಸ್ತಕದಲ್ಲಿ ಗುರುತು ಹಾಕಿಕೊಂಡರು.

ಅಂದು ರಾತ್ರಿ ಸೀತೆ ಊಟಮಾಡಿ, ಹಾಸಿಗೆಯ ಮೇಲೆ ಮಲಗಿ, ಯಾವುದೋ ಒಂದು ಕಥೆಯ ಪುಸ್ತಕವನ್ನು ಓದುತ್ತಿದ್ದಳು. ಯಾರೋ ಮೆಲ್ಲನೆ 'ಟಕ್ ಟಕ್' ಎಂದು ಬಾಗಿಲು ತಟ್ಟಿದ್ದು ಕೇಳಿಸಿತು. ಭೀಮರಾಯರಿರ ಬಹುದೇ ಎಂದು ಊಹಿಸಿದಳು; ಆದರೆ ಅವರು ಎಂದೂ ಹೀಗೆ ಅವೇಳೆಯಲ್ಲಿ ಬಂದುದಿಲ್ಲ. ಅವಳಿಗೆ ಇದ್ದಕ್ಕಿದ್ದ ಹಾಗೆಯೇ ಕೃಷ್ಣಮೂರ್ತಿಯ ನೆನಪಾಯಿತು.

'ಅಯ್ಯೋ, ಭ್ರಾಂತಿ' ಎಂದು ನೆನಪಿಗಾಗಿ ಮರುಗಿದಳು. ಅವಳ ಈ ಊಹಾಲಹರಿ ಎರಡು ನಿಮಿಷಗಳನ್ನು ನುಂಗಿತು. ಮತ್ತೆ 'ಟಕ್ ಟಕ್' ಸದ್ದಾಯಿತು. ಬೆಳಗ್ಗೆ ಡಾ|| ರಮೇಶಂ ತನ್ನ ವಿಳಾಸವನ್ನು ಕೇಳಿ ತಿಳಿದುಕೊಂಡಿದ್ದರು. ಅವರಾದರೆ, ಪರಿಚಯಸ್ಥರೆ; ಸಂಭಾವಿತರೆ; ಧೈರ್ಯವಾಗಿರಬಹುದು. ಆದರೆ ಅವರು ಹೌದೋ ಅಲ್ಲವೋ? ಬಾಗಿಲು ತೆಗೆದ ಕೂಡಲೆ ಬಾಯಿಗೆ ಬಟ್ಟೆ ತುರುಕಿ....ಸೀತೆ ಥರಥರನೆ ನಡುಗಿದಳು. "ಯಾರು?" ಎಂದಳು, ಸ್ವಲ್ಪ ಗಟ್ಟಿಯಾಗಿಯೇ. "ನಾನು, ಮಿಸ್ ಸೀತಾದೇವಿ"—ಡಾ|| ರಮೇಶಂ ಅವರ ಧ್ವನಿ ಯಾವ ಸಂದೇಹಕ್ಕೂ ಅವಕಾಶ ಕೊಡಲಿಲ್ಲ. ಸೀತೆ ಧೈರ್ಯದಿಂದ ಬಾಗಿಲು ತೆಗೆದಳು.

ಡಾ|| ರಮೇಶಂ ಒಳಕ್ಕೆ ಬಂದು, ಅಲ್ಲಿಯೇ ಬಳಿಯಿದ್ದ ಕುರ್ಚಿಯ ಮೇಲೆ ಕುಳಿತರು. "ನೀವು ಹೇಳುವುದಕ್ಕೆ ಮುಂಚೆಯೇ ಕುಳಿತುಬಿಟ್ಟೆ, ಕ್ಷಮಿಸಬೇಕು" ಎಂದರು. ಸೀತೆ ಹಾಸಿಗೆಯನ್ನು ಸುತ್ತಹೋದಾಗ, "ಇರಲಿ ಬಿಡಿ, ಆದರ ಮೇಲೇ ಕುಳಿತುಕೊಳ್ಳಿ" ಎಂದು ತಡೆದರು. "ಛೆ ಛೆ, ಅದು ನಿಮಗೆ ಅವಮರ್ಯಾದೆ ಮಾಡಿದಹಾಗೆ" ಎಂದು ಸೀತೆ ಹಾಸಿಗೆಯನ್ನು ಸುತ್ತಿ, ಅದರ ಸುರುಳಿಯ ಮೇಲೆಯೇ ಕುಳಿತಳು.

"ಮರ್ಯಾದೆ ಮಾಡುವುದು ಇಷ್ಟರಲ್ಲಿಯೇ ಮುಗಿದ ಹಾಗೆ ಕಾಣುತ್ತೆ."

ಸೀತೆ ಏನೋ ಅರ್ಥಮಾಡಿಕೊಂಡಳು; ಅದಕ್ಕೆ ಅನುಗುಣವಾದ ಉತ್ತರ ಕೊಟ್ಟಳು:

"ಭೀಮರಾಯರು ನಾನೂ ಅದನ್ನೇ ಆಲೋಚನೆ ಮಾಡಿದೆವು. ನೀವು ನನಗೆ ಮಾಡಿರುವ ಉಪಕಾರಕ್ಕೆ ಯಾವ ರೀತಿ ಮರ್ಯಾದೆ ಮಾಡುವುದು ಎಂದು ನಮಗೆ ತೋರಲಿಲ್ಲ. ಆಲೋಚನೆಯಲ್ಲೇ ಕಾಲ ಕಳೆಯಿತು. ನೀವು ತಪ್ಪು ಅರ್ಥ ತಿಳಿದುಕೊಂಡೀರಿ ಎಂದೂ ಹೆದರಿಕೆಯಾಯಿತು. ಈಗ ನಿಮ್ಮಿಂದ ಕೇಳಿಸಿಕೊಳ್ಳುವ ಹಾಗಾಯಿತು. ದಯವಿಟ್ಟು ಕ್ಷಮಿಸಬೇಕು."

"ಇದಕ್ಕೂ ಭೀಮರಾಯರಿಗೂ ಏನು ಸಂಬಂಧ? It's purely a matter between ourselves. (ಇದು ನಮನಮಗೆ ಮಾತ್ರ ಸಂಬಂಧಪಟ್ಟ ವಿಷಯ)."

ಮಾತಿನ ಜಾಡು ಯಾವ ಕಡೆಗಿದೆ ಎಂಬುದು ಸೀತೆಗೆ ಹೊಳೆಯದೆ

ಹೋಗಲಿಲ್ಲ. ಡಾ|| ರಮೇಶಂ ಅವರು ತನಗೆ ಸಹಾಯಮಾಡಿದ್ದು ಕೀಳಾದ ಸ್ವಾರ್ಥ ಬುದ್ಧಿಯಿಂದ; ಇತರರಿಂದ ತನ್ನನ್ನು ಪಾರುಮಾಡಿದ್ದು ತನ್ನ ಒಂದು ಕೃತಜ್ಞತೆಯನ್ನು ಗಳಿಸುವ ಉದ್ದೇಶದಿಂದ; ಈಗ ಬಂದಿರುವುದಾದರೂ ಆ ದುರುದ್ದೇಶ ಸಾಧನೆಗಾಗಿ.

"ಅದು ಸರಿಯೆ. ಆದರೂ, ನಾನು ಅವರ ಪೋಷಣೆಯಲ್ಲೇ ಇರುವುದರಿಂದ, ಅವರನ್ನು ಕೇಳದೆ ಏನೂ ಮಾಡುವಹಾಗಿಲ್ಲ."

"But you can be independent, now. (ಆದರೆ ಈಗ ನೀನು ಸ್ವತಂತ್ರಳಾಗಿರಬಹುದು.) ಆ independence ದೊರಕಿಸಿ ಕೊಟ್ಟದ್ದಕ್ಕೆ, ನಾನು ಬಯಸುವುದು...." ಎಂದ ಡಾ|| ರಮೇಶಂ ಅವರ ಕೈ ಅಗುಳಿಯ ಮೇಲೆ ಹೋಯಿತು; ಬಾಗಿಲು ಭದ್ರವಾಯಿತು.

ಹಳ್ಳಿಯ ಸುಬ್ಬಾಭಟ್ಟನಿಗೂ, ನಗರದ ನಾಗರಿಕ ಡಾಕ್ಟರಿಗೂ ಏನು ವ್ಯತ್ಯಾಸ ಎನ್ನಿಸಿತು ಸೀತೆಗೆ. ಆದರೆ ಅವಳು ಭೀತಳಾಗಲಿಲ್ಲ.

"ನೀವು ಒಂದು ಹೆಜ್ಜೆ ಮುಂದೆ ಬಂದರೆ, ನಿಮ್ಮ ಗೌರವ ಉಳಿಯುವುದಿಲ್ಲ, ಎಚ್ಚರಿಕೆ. ನಿಮಗಿನ್ನೂ ಚಿಕ್ಕ ವಯಸ್ಸು; ನಿಮ್ಮ ಖ್ಯಾತಿಗೆ ಕಳಂಕ ತಂದುಕೊಂಡು, ನಿಮ್ಮ ಭವಿಷ್ಯವನ್ನು ಹಾಳುಮಾಡಿಕೊಳ್ಳಬೇಡಿ. ದಯವಿಟ್ಟು ಗಲಭೆಗೆ ಅವಕಾಶ ಕೊಡದೆ ಹೊರಟುಹೋಗಿ. ನಿಮ್ಮ ಉಪಕಾರಕ್ಕೆ ನಾನು ನಿಜವಾಗಿ ಕೃತಜ್ಞಳಾಗಿದ್ದೇನೆ. ಉಚಿತ ಸಂದರ್ಭದಲ್ಲಿ ಮರ್ಯಾದೆ ಮಾಡಿಯೂ ಮಾಡುತ್ತೇವೆ. ದಯವಿಟ್ಟು ಹೊರಟುಹೋಗಿ. ನನ್ನ ಮಾನ ಇರಲಿ, ನಿಮ್ಮ ಮಾನ ಮರ್ಯಾದೆಗೆ ಕುಂದುಕ ತಂದುಕೊಳ್ಳಬೇಡಿ. ಪ್ಲೀಸ್, ಡಾಕ್ಟರ್...."

"ಮಾನ ಮರ್ಯಾದೆಯ ಮಾತು ನಮ್ಮಿಬ್ಬರಿಗೂ ಅನ್ವಯಿಸುವುದಿಲ್ಲ, ಸೀತಾದೇವಿ. You are a widow, and I am a bachelor. We both have nothing to lose, nothing in stake. (ನೀನು ವಿಧವೆ, ನಾನು ಮದುವೆಯಾಗಿಲ್ಲದವನು. ಕಳೆದುಕೊಳ್ಳಲು ನನಗೂ ನಿನಗೂ ಏನೂ ಇಲ್ಲ.)"

"ವಿಧವೆಗೆ ಮಾನ ಇಲ್ಲ ಎಂದು ತಿಳಿದಿದ್ದೀರೋ? ನಿಮ್ಮಂಥವರು ಈ ಲೋಕದಲ್ಲಿ ಹೆಚ್ಚಾಗಿರುವುದರಿಂದಲೇ ನನ್ನಂಥವರ ಬದುಕು ಸುರಕ್ಷಿತವಾಗಿಲ್ಲದಿರುವುದು...."

" ನಾನು ಪ್ರೇಮಭಿಕ್ಷೆ ಬೇಡುತ್ತಿದ್ದೇನೆ. ಅದನ್ನು ನೀನು ನೀಡಿದರೆ, ನಿನ್ನ ಬದುಕು, it's safe in my care (ನನ್ನ ವಶದಲ್ಲಿ ಸುರಕ್ಷಿತ)."

" ಯಾವುದು ಪ್ರೇಮ, ಯಾವುದು ಅಲ್ಲ ಎಂಬುದು ನನಗೆ ಚೆನ್ನಾಗಿ ಗೊತ್ತು. ನಾನು ಭೀಮರಾಯರ ರಕ್ಷಣೆಯಲ್ಲಿರುವ ವರೆಗೆ ಬೇರೆ ಯಾರ ರಕ್ಷಣೆಯೂ ಬೇಡ. ದಯವಿಟ್ಟು ಹೊರಡಿ, ನಮಸ್ಕಾರ."

" ಓ, ನನ್ನ ಊಹೆ ಸರಿಯಾಯಿತು, ಹಾಗಾದರೆ. ಆ ಮುದುಕನಿಗಿಂತ ನಾನು ಮೇಲಲ್ಲವೆ ? "

" ಅವರ ವಿಚಾರದಲ್ಲಿ ಹಾಗೆಲ್ಲ ಮಾತಾಡಬೇಡಿ. ಅವರು ನನ್ನ ಭಾಗದ ದೇವರು. ದಯವಿಟ್ಟು ಹೊರಟುಹೋಗಿ."

" ಆಗಲಿ, ಹೋಗುತ್ತೇನೆ. I am neither a knave nor a fool (ನಾನು ದುಷ್ಟನೂ ಅಲ್ಲ, ಅವಿವೇಕಿಯೂ ಅಲ್ಲ). ಆದರೆ ಇತರರಿಂದ ತೊಂದರೆಯಾಗುತ್ತಿದೆ ಎಂದು ನನ್ನಲ್ಲಿ ನಾಳೆಯಿಂದ ದೂರಕೂಡದು, ಸೀತಾ ದೇವಿ. ತಿಳಿಯಿತೋ ? "

" ಆಗಬಹುದು."

" Now, I will take farewell of you, good-night, Miss Seetha Devi (ಇನ್ನು ಹೋಗಿಬರುತ್ತೇನೆ, ನಮಸ್ಕಾರ, ಮಿಸ್ ಸೀತಾದೇವಿ)"—ಎಂದು ಡಾ|| ರಮೇಶಂ ಮಿಂಚಿನ ವೇಗದಲ್ಲಿ ಮುಂದೆ ಬಾಗಿ, ಸೀತೆಯನ್ನು ಬರಸೆಳೆದು, ಅವಳನ್ನು ಬಲವಾಗಿ ಚುಂಬಿಸಿದರು.

ಸೀತೆ ಸೆಟೆದು ನಿಂತಳು. " ಇನ್ನಾದರೂ ಹೊರಡುತ್ತೀರೋ, ಇಲ್ಲ, ಮನೆಯವರನ್ನು ಕೂಗಲೋ ? " ಎಂದಳು ಸೀತೆ.

" ಇದೋ, ಹೊರಟೆ " ಎಂದು ರಮೇಶಂ ಅಗುಳಿಯನ್ನು ತೆಗೆದು ಹೊರ ಹೊರಟರು.

" ಇನ್ನು ಇಲ್ಲಿಗೆ ಕಾಲಿಟ್ಟೀರಿ, ಜೋಕೆ " ಎಂದು ಸೀತೆ ಕೊನೆಯ ಎಚ್ಚರಿಕೆಯನ್ನು ಎಸೆದಳು.

" ಅಪ್ಪಣೆ " ಎಂದು ಡಾ|| ರಮೇಶಂ ನಗುನಗುತ್ತ ನುಡಿದು, ಹೊರಟು ಹೋದರು.

ಸೀತೆ ಸೀರೆಯ ಸೆರಗಿನಿಂದ ತುಟಿಯನ್ನು ಚೆನ್ನಾಗಿ ಒರಸಿಕೊಂಡಳು.

ಮತ್ತೆ ಹಾಸಿಗೆಯನ್ನು ಬಿಚ್ಚಿ, ದೀಪ ಆರಿಸಿ, ಅಗುಳಿ ಹಾಕಿಕೊಂಡು ಮಲಗಿದಳು. ಅವಳ ಅಸಹಾಯಸ್ಥಿತಿ ಅವಳನ್ನು ಅಣಕಿಸತೊಡಗಿತು; ನೆನಪಿನ ಮೇಲೆ ನೆನಪು ಬಂದು ಹೃದಯವನ್ನು ಕೆದಕಿತು, ದುಃಖವನ್ನು ಉಕ್ಕಿಸಿತು. ದಿಂಬಿನ ಮೇಲೆ ಮುಖ ಮಾಡಿ ಮಗುವಿನಂತೆ ಅಳತೊಡಗಿದಳು. ಅವಳನ್ನು ಸಮಾಧಾನ ಮಾಡಲು ಬಹು ತಡವಾಗಿ ಬಳಿಗೆ ಬಂದ ನಿದ್ರಾದೇವಿಯಲ್ಲದೆ ಬೇರೆ ಯಾರೂ ಜೊತೆಗಿರಲಿಲ್ಲ.

# ಪ್ರಕರಣ ಹದಿಮೂರು

೧

ಹಿಂದಿನ ರಾತ್ರಿಯ ದುರ್ಘಟನೆಯನ್ನು ಮಾರನೆಯ ದಿನ ಸೀತೆ ಸೂಚ್ಯ ವಾಗಿ ಭೀಮರಾಯರಿಗೆ ಅರುಹಿದಳು. ಇದರಿಂದ ಸೀತೆಯ ಮೇಲಣ ಅವರ ಅಭಿಮಾನ ಹೆಚ್ಚಿತೇ ಹೊರತು ಕುಗ್ಗಲಿಲ್ಲ. " ಹೊಟ್ಟೆಯ ಪಾಡಿಗಾಗಿ ಕೆಲಸ. ಅದರ ಯೋಚನೆ ನಿನಗೆ ಬೇಕಿಲ್ಲ. ಕೆಲಸಕ್ಕೆ ಬೇಕಾದರೆ ರಾಜೀನಾಮೆ ಕೊಟ್ಟು ಬಿಡು. ನಮ್ಮ ಮನೆಯಲ್ಲೆ ಬಂದು ಇದ್ದುಬಿಡು ಎಂದರೆ ನೀನು ಕೇಳುವುದಿಲ್ಲ. ಈಗಲೂ ಬಾ. ನಿನಗೂ ಕ್ಷೇಮ; ಪದ್ದುವಿಗೂ ಜೊತೆಯಾಗುತ್ತೆ " ಎಂದು ಭೀಮರಾಯರು ಸಲಹೆ ಮಾಡಿದರು. " ಇಲ್ಲ, ಸದ್ಯಕ್ಕಂತೂ ಕೆಲಸಕ್ಕೆ ರಾಜೀನಾಮೆ ಕೊಡುವುದಿಲ್ಲ. ನನಗೆ ಧೈರ್ಯವಾಗಿದೆ, ಈಗ. ನೂರು ಜನ ಗಂಡಸರನ್ನಾದರೂ ದೂರವಿಡಬಲ್ಲೆ " ಎಂದು ಸೀತೆ ಗಟ್ಟಿ ಮನಸ್ಸಿನ ಗಡಸು ದನಿಯಲ್ಲಿ ಹೇಳಿದಳು. " ಹಾಗಾದರೆ, ನನ್ನನ್ನೂ ದೂರವಿಡುತ್ತೀಯೋ? ಈಗಲೇ ಹೇಳಿಬಿಡು, ನಾನು ಇಲ್ಲಿಗೆ ಬರುವುದೇ ಇಲ್ಲ " ಎಂದು ಭೀಮ ರಾಯರು ನಗುತ್ತ ಕೇಳಿದರು. " ನೀವು ನನ್ನನ್ನು ಕೈಬಿಟ್ಟಂದು, ನನ್ನ ಈ ಧೈರ್ಯವೆಲ್ಲ ಹೋಗಿಬಿಡುತ್ತೆ " ಎಂದು ಸೀತೆ ನಿಸ್ಸಹಾಯಕಳಾಗಿ ನುಡಿದಾಗ, ಭೀಮರಾಯರ ಅಂತಃಕರಣ ಕಲಕಿಹೋಯಿತು. ಅವರು ಸೀತೆಯ ಎರಡು ಕೈಮೊಗ್ಗುಗಳನ್ನೂ ತಮ್ಮ ಸೇರಿಗೈಯಲ್ಲಿ ಹಿಡಿದು, " ನನ್ನ ಜೀವವಿರುವ ವರೆಗೂ ನಿನ್ನ ಕೈಬಿಡುವುದಿಲ್ಲ, ಸೀತೆ. ಇನ್ನುಮೇಲೆ ನೀನು ನನ್ನ ಕುಟುಂಬಕ್ಕೆ ಸೇರಿದವಳು. ನನ್ನ ಪ್ರೇಮವನ್ನು ಪದ್ದುವಿಗೂ ನಿನಗೂ ಹಂಚಿಬಿಟ್ಟಿದ್ದೇನೆ. ಅದಕ್ಕೇ ನಾನು ಹೇಳುವುದು, ನಮ್ಮ ಮನೆಗೆ ನೀನು ಬಂದು ಇದ್ದುಬಿಡು " ಎಂದು ಭೀಮರಾಯರು ತಮ್ಮ ಕರುಣೆಯನ್ನೆಲ್ಲಾ ಕೆಲ ಮಾತುಗಳಲ್ಲಿ ಬಸಿದು ಬಿಟ್ಟರು. ಸೀತೆಯ ಕಣ್ಣು ಸಂತೋಷದಿಂದ ಹಸಿಗೂಡಿತು. ಭೀಮರಾಯರ ಈ ಮೊದಲ ಕೈಸೋಂಕು ಅವಳನ್ನು ಪುಲಕಿತಳನ್ನಾಗಿ ಮಾಡದಿದ್ದರೂ ಅಹಿತವೆನ್ನಿಸಲಿಲ್ಲ. " ಆಗಲಿ, ನೋಡೋಣ. ಸದ್ಯಕ್ಕೆ ಹೀಗೆಯೇ ನಡೆದು ಕೊಂಡು ಹೋಗುತ್ತಾ ಇರಲಿ. ನೀವು ನನ್ನ ಮೇಲೆ ಅಸಮಾಧಾನಗೊಳ್ಳದೆ

ಇದ್ದರೆ, ಸರಿ" ಎಂದಳು. "ನಾನು ಅಸಮಾಧಾನಗೊಂಡ ದಿನ, ನಿನ್ನನ್ನು ಮದುವೆ ಮಾಡಿಕೊಂಡುಬಿಡುತ್ತೇನೆ" ಎಂದು ಭೀಮರಾಯರು ನುಡಿದು ನಕ್ಕರು. "ನೀವು ಸಮಾಧಾನವಾಗಿರುವಾಗಲೇ ನಿಮಗೆ ಬೇರೆ ಮದುವೆ ಮಾಡಿಸಿಬಿಡುತ್ತೇನೆ, ನೋಡುತ್ತ ಇರಿ" ಎಂದು ಸೀತೆ ಅವರ ನಗೆಹೊನಲಿನಲ್ಲಿ ತಾನೂ ಈಸಿದಳು.

ಸೀತೆ ತನ್ನ ಕೆಲಸಕ್ಕೆ ರಾಜೀನಾಮೆಯನ್ನು ಕೊಡಲಿಲ್ಲ. ಸೀತಾದೇವಿ ಎಂದರೆ ಆಸ್ಪತ್ರೆಯ ಇತರ ನರ್ಸುಗಳಲ್ಲಿಯೂ ಡಾಕ್ಟರುಗಳಲ್ಲಿಯೂ ಗೌರವ ಭಾವನೆ ಹುಟ್ಟಿಸುವ ಹೆಸರಾಗಿತ್ತು. ಅವಳ ವ್ಯಕ್ತಿತ್ವ, ನಡೆನುಡಿ, ಸಹೋದ್ಯೋಗಿಗಳಿಗೆ ಮಾರ್ಗದರ್ಶಕವಾಗುತ್ತ ಬಂದುವು. ಅವಳ ಕಾರ್ಯದಕ್ಷತೆ ಅಧಿಕಾರಿವೈದ್ಯರ ಮೆಚ್ಚುಗೆಗೆ ಪಾತ್ರವಾಗತೊಡಗಿತು. ಡಾ|| ರಮೇಶಂ ಅವರು ಕೂಡ ತಮ್ಮ ಹಿಂದಿನ ವಕ್ರಗಮನವನ್ನು ಮರೆತು, ಸೀತೆಯಲ್ಲಿ ನಿಜವಾದ ಅಭಿಮಾನ ತಳೆಯುತ್ತ ಬಂದರು. ಸೀತೆಯ ಸ್ವಾಭಿಮಾನದ ಕೆಚ್ಚು ಅವಳ ಮಾನವನ್ನು ಕಾಪಾಡಿ, ಅವಳಿಗೊಂದು ಗಣ್ಯ ಸ್ಥಾನವನ್ನು ದೊರಕಿಸಿ ಕೊಟ್ಟಿತ್ತು, ವೈದ್ಯಶಾಲೆಯ ವಾತಾವರಣದಲ್ಲಿ; ರೋಗಿಗಳಿಗಂತೂ, ಸೀತೆಯ ಪರಿಚರ್ಯೆಯೆಂದರೆ ಅಮೃತಲೇಪ.

ತನ್ನ ಬಾಳು ಸಾರ್ಥಕವಾಗುತ್ತಿದೆಯೆಂಬ ಭಾವನೆಯೊಂದಿಗೆ, ಸೀತೆ ಸುಖದ ದಿನಗಳನ್ನು ಕಳೆಯುತ್ತಿದ್ದಳು. ಒಂದು ಸಂಜೆ, ಅವಳು ನೈಟ್ ಡ್ಯೂಟಿಗೆ ಹೊರಡುವುದರಲ್ಲಿದ್ದಾಗ, ಮುಗಿಲಿನಿಂದ ಇಳಿದುಬಂದಂತೆ ಕೃಷ್ಣ ಮೂರ್ತಿ ಕಾಣಿಸಿಕೊಂಡ.

"ನೀನು ನನ್ನನ್ನ ಮರೆತುಬಿಟ್ಟೆ ಅಂತಿದ್ದೆ, ಮೂರ್ತಿ. ಅದು ಹೋಗಲಿ. ಶಾರದೆ ಕ್ಷೇಮ ತಾನೆ?" ಎಂದು ಆದರಪೂರ್ವಕವಾಗಿ ಕುತೂಹಲದಿಂದ ಸೀತೆ ಕೇಳಿದಳು.

"ಮೈಸೂರಿಗೆ ಕಳಿಸಿಕೊಟ್ಟಿದ್ದೀನಿ."

"ಬಸುರಿ ಅಂತ ಕಾಣುತ್ತೆ. ಎಷ್ಟು ತಿಂಗಳು?"

"ಏಳೋ ಎಂಟೋ ಇರಬೇಕು."

"ತುಂಬ ಸಂತೋಷ, ಮೂರ್ತಿ. ಗಂಡು ಮಗು ಆಗಲಿ....ನಾನು ಇರುವ ಮನೆ ಹೇಗೆ ಗೊತ್ತಾಯಿತು?"

"ನಿನ್ನನ್ನು ನೋಡುವುದಿಲ್ಲ ಅಂತಲೇ ಮಾಡಿಕೊಂಡಿದ್ದೆ. ಆವೊತ್ತು ನಿನ್ನ ಅತ್ತಿಗೆ ನನ್ನನ್ನ ಅಷ್ಟು ಅವಮಾನ ಮಾಡಿ ಕಳಿಸಿಬಿಟ್ಟಿದ್ದಳು. ಅವಳನ್ನ ಊರಿಗೆ ಕಳಿಸಿದಮೇಲೆ, ನನ್ನ ಮನಸ್ಸು ತಡೆಯಲಿಲ್ಲ. ಆದದ್ದು ಆಗಲಿ ಅಂತ ನಿಮ್ಮ ಅಣ್ಣನ ಮನೆಗೆ ಹೋದೆ, ಒಂದು ಭಾನುವಾರ. ನಿಮ್ಮ ಅಣ್ಣ ಮನೆಯಲ್ಲಿ ಇರಲಿಲ್ಲ. ಧೈರ್ಯಮಾಡಿ ನಿಮ್ಮ ಅತ್ತಿಗಮ್ಮನನ್ನೇ ವಿಚಾರಿಸಿದೆ. 'ಸೀತೆ ಇದಾಳೆಯೇ' ಅಂತ ಕೇಳಿದೆ. 'ಬಡ್ಡಿ ಭೀಮರಾಯನ ಹಿಂದೆ ಓಡಿಹೋದಳು. ಈಗೇನು, ಯಾರು ಬೇಕಾದರೂ ಅವಳನ್ನ ನೋಡಬಹುದು. ಅದೆಲ್ಲೋ ವಿಶ್ವೇಶ್ವರಪುರದಲ್ಲಿ ಇದಾಳಂತೆ' ಅಂತ ತಿರಸ್ಕಾರವಾಗಿ ಮಾತ ನಾಡಿದಳು. ಆಕೆಯೊಂದಿಗೆ ಮಾತಾಡಿ ಪ್ರಯೋಜನವಿಲ್ಲ ಅಂತ ಕಚೇರಿಯಲ್ಲಿ ನಿಮ್ಮ ಅಣ್ಣನನ್ನೇ ಹುಡುಕಿಕೊಂಡು ಹೋಗಿ ವಿಚಾರಿಸಿದೆ...."

"ನಮ್ಮ ಅಣ್ಣ ಇತ್ತ ಕಡೆ ಸುಳಿದೇ ಇಲ್ಲ. ನಾನೇ ಬೇಕಾದಾಗ ಅವರ ಮನೆಗೆ ಹೋಗಿಬಂದು ಮಾಡುತ್ತೇನೆ. ಅದೂ ಬಹಳ ಅಪರೂಪ. ಮನೆ ಹೇಗೆ ಗೊತ್ತಾಯಿತು? ನಾನು ಅಷ್ಟು ಪ್ರಸಿದ್ಧಳಾಗಿಬಿಟ್ಟಿದ್ದೇನೆಯೆ?" ಒಂದು ತುಂಟ ಮೆಲುನಗೆ ಅವಳ ತುಟಿಯ ಒಂದು ಕೊನೆಯನ್ನು ಬಾಗಿಸಿತು.

"ಭೀಮರಾಯರೇ ಹೇಳಿದರು, ಇಲ್ಲಿದೆ ಅಂತ. ನಿಮ್ಮ ಅತ್ತಿಗಮ್ಮ ಹೇಳಿದ್ದನ್ನೇ ನಿಮ್ಮ ಅಣ್ಣ ಸ್ವಲ್ಪ ಗಂಭೀರವಾದ ರೀತಿಯಲ್ಲಿ ಹೇಳಿದ. ನೀನು ನರ್ಸಾಗಿದ್ದೀ ಅಂತ ಅವನಿಂದಲೇ ತಿಳಿಯಿತು. ಆಸ್ಪತ್ರೆಯಲ್ಲಿ ಬೇಕಾದರೂ ನೋಡಬಹುದು ಅಂತಲೂ ಹೇಳಿದ. ಅಲ್ಲಿ ನಿನ್ನನ್ನು ಕಾಣಲು ಇಷ್ಟವಾಗಲಿಲ್ಲ. ಭೀಮರಾಯರ ಮನೆಯ ಗುರುತೂ ನಿಮ್ಮ ಅಣ್ಣನಿಂದಲೇ ತಿಳಿಯಿತು. ಅಲ್ಲಿಗೆ ಹೋಗಿ ಅವರನ್ನು ಕಂಡೆ. ನಿನ್ನ ಚಿಕ್ಕಮ್ಮನ ಅಳಿಯ ಅಂತ ಪರಿಚಯ ಹೇಳಿದೆ, ಯೋಗಕ್ಷೇಮ ವಿಚಾರಿಸಿ ನನ್ನ ಹೆಂಡತಿಗೆ ಕಾಗದ ಬರೆಯಬೇಕು ಅಂತ ಹೇಳಿದೆ. ಅವರೇ ಈಗ ನನ್ನನ್ನ ತಮ್ಮ ಗಾಡಿಯ ಮೇಲೆ ಕಳಿಸಿ ಕೊಟ್ಟರು. ಬಂದೆ."

"ಈಗ ನೈಟ್ ಡ್ಯೂಟಿಗೆ ಹೋಗಬೇಕು. ಪುರಸತ್ತಾಗಿ ಬಾ. ತುಂಬ ಮಾತಾಡಬೇಕು."

"ಈ ನೈಟ್ ಡ್ಯೂಟಿ ಇನ್ನೂ ಎಷ್ಟು ದಿನ?"

"ಈ ತಿಂಗಳ ಪೂರ್ತಿ ಇದೆ. ಆಮೇಲೆ ಇನ್ನು ಎರಡು ಮೂರು ತಿಂಗಳು ಬಹುಶಃ ಇರುವುದಿಲ್ಲ."

"ಸರಿ, ಹಾಗಿದ್ದರೆ. ನಾಳೆ ಬೆಳಗ್ಗೆ ಬರುತ್ತೇನೆ."

ಕೃಷ್ಣಮೂರ್ತಿ ಕೊಠಡಿಯಿಂದ ಹೊರಕ್ಕೆ ಬಂದ. ಸೀತೆಯೂ ಹೊರ ಬಂದು, ಬಾಗಿಲ ಬೀಗ ಹಾಕಿಕೊಂಡು, ಆಸ್ಪತ್ರೆಯ ದಾರಿಯನ್ನು ಹಿಡಿದಳು. ಅವನೂ ಜೊತೆಯಲ್ಲಿಯೇ ನಡೆದ.

"ನಿನಗೆ ಕಾಫಿ ಕಾಯಿಸಿ ಕೊಡುವುದಕ್ಕೂ ಆಗಲಿಲ್ಲ."

"ಅದಕ್ಕೇನು, ನಾಳೆಯಿಂದ ನಿತ್ಯ ಬೆಳಗ್ಗೆ ಕಾಫಿಯ ಹೊತ್ತಿಗೇ ಹಾಜರಾಗಿಬಿಡುತ್ತೇನೆ" ಎಂದು ಕೃಷ್ಣಮೂರ್ತಿ ನಕ್ಕ.

"ನನ್ನ ಕಾಫಿಗೆ ಬಂದರೆ, ನೀನು ಬೆಳಗ್ಗೆ ಒಂಬತ್ತರವರೆಗೂ ಕಾಯ ಬೇಕಾಗುತ್ತೆ."

"ನಿನ್ನ ಕೈಯಿನ ಕಾಫಿ ಕುಡಿಯುವುದಕ್ಕೆ, ಒಂಬತ್ತರವರೆಗೆ ಯಾಕೆ, ದಿನ ಪೂರ್ತಿ ಬೇಕಾದರೂ ಕಾದಿರುತ್ತೇನೆ."

ಬೀದಿಯಲ್ಲಿ ಆಪ್ತವಾದ ಮಾತುಕತೆ ನಡಸುವುದು ಸೀತೆಗೆ ಮುಜುಗರ ವಾಗಿ ಕಂಡಿತು. ಅವಳು ಮಾತನ್ನು ಬೇರೆಯ ಕಡೆ ತಿರುಗಿಸಿದಳು: "ಈಗ ನಿನಗೆ ಸಂಬಳ ಎಷ್ಟು ?"; "೪೦–೮೦ರ ಗ್ರೇಡಿನಲ್ಲಿ ೫೦."; "ಮನೆಯೋ, ಹೋಟಲೋ ?"; "ಇನ್ನು ಮನೆ ಯಾಕೆ? ಅವಳನ್ನ ಕಳಿಸಿಕೊಟ್ಟ ಮಾರನೆಯ ದಿನದಿಂದಲೇ ಮನೆ ಬಿಟ್ಟುಬಿಟ್ಟೆ. ಇಲ್ಲೆ ಶಂಕರಪುರದ ಯಜ್ಞಪ್ಪನ ಹೋಟೆಲಿನಲ್ಲಿ ಊಟ; ಹತ್ತಿರದಲ್ಲಿ ಒಂದು ರೂಮೂ ಸಿಕ್ಕಿದೆ"; "ಓ! ಇಲ್ಲಿಗೂ ತುಂಬ ಹತ್ತಿರವೇ ಆಯಿತು"....

ಆಸ್ಪತ್ರೆಯ ಬಳಿ ಕೃಷ್ಣಮೂರ್ತಿ ಸೀತೆಯನ್ನು ಬೀಳ್ಕೊಂಡು, ಮಾರ್ಕೆಟ್ ಕಡೆ ನಡೆದ.

೨

ಕೃಷ್ಣಮೂರ್ತಿ ಸೀತೆಯ ಬೆಳಗ್ಗಿನ ಕಾಫಿಗೆ ನಿತ್ಯ ಅತಿಥಿಯಾಗಿದ್ದ. ಕಾಫಿಯ ರುಚಿಗಿಂತ ಸೀತೆಯ ಮಾತಿನ ಸವಿ ಅವನನ್ನು ಹಾಗೆ ಸೆಳೆದಿತ್ತು; ಮಾತಿನ ಸವಿಗಿಂತ ಹೆಚ್ಚಾಗಿ ಅವಳ ಧೀರ ಮೋಹನಾಕೃತಿ ಅವನ ಮೇಲೆ ಹೊಸ ಮಾಯೆಯನ್ನು ಬೀಸಿತ್ತು. ಸೀತೆಯನ್ನು ಮೊದಲ ನೋಟದಲ್ಲಿ ಕಂಡವನಂತೆ ಅವಳಲ್ಲಿ ಮಾರುಹೋದ.

ಅವನು ಬಾಯಿಬಿಟ್ಟು ಏನನ್ನೂ ಹೆಚ್ಚಾಗಿ ಆಡದಿದ್ದರೂ, ಅವನು ಹೇಳಬೇಕಾದ್ದನ್ನೆಲ್ಲ ಅವನ ಕಣ್ಣು ನುಡಿಯುತ್ತಿತ್ತು; ಸೀತೆಯ ಕಣ್ಣೂ ಅದನ್ನು ಅರ್ಥಮಾಡಿಕೊಳ್ಳುತ್ತಿತ್ತು; ಉತ್ತರ ಕೊಟ್ಟೂ ಕೊಡದಂತಿತ್ತು.

ಇಬ್ಬರೂ ಬಹು ಹತ್ತಿರವಿದ್ದರು; ಆದರೂ ನಡುವೆ ಯಾವುದೋ ಕಡಲೊಂದು ಅಡ್ಡಿಯಾದಂತಿತ್ತು.

"ಸೀತೆ, ಮೊದಲು ನಿನಗೆ ಹಸುರು ಸೀರೆ, ಕಪ್ಪು ಸೀರೆ ಹೇಗೆ ಚೆನ್ನಾಗಿ ಒಪ್ಪುತ್ತಿತ್ತೊ, ಹಾಗೆ ಈಗ ಬಿಳಿಯ ಸೀರೆ ಚೆನ್ನಾಗಿ ಒಪ್ಪುತ್ತೆ."

ಈ ಮಾತಿನಿಂದ ತನಗಾದ ಸಂತುಷ್ಟಿಯನ್ನು ಸೀತೆ ಮೆಲುನಗೆಯೊಂದರಲ್ಲಿ ಹನಿಸಿದಳು.

"ಆಗ ನೀನು ಹಳ್ಳಿಯ ಕಾಡಿನ ಹಸುರು ಗಿಣಿ. ಈಗ...."

"ಪಂಜರದ ಗಿಣಿಯೋ?"

"ಅಲ್ಲ. ರಾಜೋದ್ಯಾನದ ಕೊಳದ ರಾಜಹಂಸೆ."

"ಈ ಮಾತನ್ನೆಲ್ಲ ಶಾರದೆ ಕಲಿಸಿರಬೇಕು, ಅಲ್ಲವೆ? ಅವಳಿಗೆ ಹೇಳಬೇಕಾದ ಮಾತನ್ನು ನನಗೆ ಹೇಳುತ್ತಿದ್ದೀಯೆ."

"ಸೀತೆ, ನಿನ್ನಲ್ಲಿ ಮುಚ್ಚುಮರೆಯೇಕೆ. ಅನ್ನದ ಋಣ ತೀರಿಸುವುದಕ್ಕಾಗಿ ನಾನು ಶಾರದೆಯನ್ನು ಮದುವೆಯಾದೆ, ಅಷ್ಟೆ."

"ಹಾಗಾದರೆ, ನೀನು ಅವಳನ್ನು ಪ್ರೀತಿಸುವುದಿಲ್ಲವೆ?"

"ಪ್ರೀತಿಸುವುದಿಲ್ಲ ಎಂತ ಹೇಳಲಾರೆ. ಆದರೆ ನಿನ್ನನ್ನು ಪ್ರೀತಿಸುವ ಹಾಗೆ ಅವಳನ್ನು ಪ್ರೀತಿಸಲಾರೆ. ಚಾಮುಂಡಿಬೆಟ್ಟದ ಪವಿತ್ರ ಸನ್ನಿವೇಶದಲ್ಲಿ ನನ್ನ ಹೃದಯವನ್ನು ನಿನಗೆ ಸೋತೆ. ಅದನ್ನು ಬೇರೆ ಯಾರೂ ಗೆಲ್ಲಲಾರರು."

"ಆದರೆ ಆಗ ನಿನಗೆ ಮದುವೆಯಾಗಿರಲಿಲ್ಲ, ಮೂರ್ತಿ. ಮದುವೆಯಾದ ನೀನು ಈಗ ಹಾಗೆ ಭಾವಿಸಬಾರದು. ನನ್ನನ್ನು ಸಂಪೂರ್ಣವಾಗಿ ಮರೆತರೂ ಚಿಂತೆಯಿಲ್ಲ. ಶಾರದೆಗೆ ಮಾತ್ರ ದ್ರೋಹ ಬಗೆಯಬೇಡ."

"ಅದೇ ನನಗೆ ಈಗ ಉಂಟಾಗಿರುವ ಇಕ್ಕಟ್ಟು. ನಿನ್ನನ್ನು ಮರೆಯಲಾರೆ. ಮಾತ್ರವಲ್ಲ, ಇನ್ನುಮೇಲೆ ನಿನ್ನನ್ನು ನೋಡದೆಯೂ ಇರಲಾರೆ."

"ನನ್ನನ್ನ ನೋಡಲು ಅಡ್ಡಿಯಿಲ್ಲ. ಆದರೂ...."

"ಭೀಮರಾಯರು ಆಕ್ಷೇಪಿಸುವರೆಂದೆ?"

"ಆಕ್ಷೇಪಿಸಬಹುದು, ಆಕ್ಷೇಪಿಸದೆ ಇರಬಹುದು. ಅದು ಮುಖ್ಯವಲ್ಲ. ಆತ್ಮಹತ್ಯೆಯೊಂದೇ ನನಗೆ ದಾರಿಯಾಗಿದ್ದಾಗ, ಆ ದಾರಿಯೊಂದು ಇರುವದೆಂಬ ಕಲ್ಪನೆಗೂ ಅವಕಾಶ ಕೊಡದೆ, ನನ್ನನ್ನು ಕಾಪಾಡಿದ್ದಾರೆ...."

ಕೃಷ್ಣಮೂರ್ತಿಯ ಎದೆ ಕಳಕ್ಕೆಂದಿತು; ತನ್ನಿಂದ ತುಸು ಕರ್ತವ್ಯ ಲೋಪವಾಗಿದೆಯೆಂಬ ಭಾವನೆ ಬಂದಿತು.

"ಹೌದು, ಸೀತೆ. ನಾನು ಮಾಡಬೇಕಾಗಿದ್ದ ಸಹಾಯವನ್ನು ಅವರು ಮಾಡಿದ್ದಾರೆ. ಆದರೆ ನನಗೆ ಸಂದರ್ಭ ತಿಳಿಯಲು ಅವಕಾಶವೇ ಇರಲಿಲ್ಲ. ಆಗಲೂ, ಈಗಲೂ, ಸದಾ ನನ್ನ ಮನೆಯ ಬಾಗಿಲು ನಿನಗಾಗಿ ತೆರೆದೇ ಇದೆ...."

"ಭೀಮರಾಯರೂ ನನ್ನನ್ನ ತಮ್ಮ ಮನೆಯಲ್ಲೇ ಇರು ಎಂದರು. ನಾನು ಒಪ್ಪಲಿಲ್ಲ. ಈಗ ನನ್ನ ಕಾಲಮೇಲೆ ನಾನು ನಿಂತಿದ್ದೇನೆ ಎಂದು ಅವರ ಉಪಕಾರವನ್ನು ಮರೆಯಲಾರೆ, ಅವರಿಗೆ ಎರಡು ಬಗೆಯಲಾರೆ...."

"ಸೀತೆ, ಇನ್ನೊಂದು ವಿಷಯ....ಕೇಳಬಹುದೋ?"

"ಅಗತ್ಯವಾಗಿ. ನಿನ್ನಿಂದ ಬಚ್ಚಿಟ್ಟುಕೊಳ್ಳಬೇಕಾದ್ದು ನನ್ನಲ್ಲಿ ಏನೂ ಇಲ್ಲ. ಏನು ಬೇಕಾದರೂ ಕೇಳು, ಹೇಳುತ್ತೇನೆ."

"ನಿನ್ನ–ಭೀಮರಾಯರ ವಿಚಾರದಲ್ಲಿ ನಿಮ್ಮ ಅಣ್ಣ, ಅತ್ತಿಗೆ ಹೇಳಿದ್ದು ನಿಜವೆ?"

"ನಿಜವೇ ಆಗಿದ್ದರೆ, ನನ್ನನ್ನು ದೂರುತ್ತೀಯೋ?"

"ಇದುವರೆಗೂ ಇಲ್ಲ, ಖಂಡಿತ ಇಲ್ಲ...."

"ಅವರು ಬಹು ಗೌರವವಾಗಿ ನನ್ನನ್ನು ನಡಸಿಕೊಳ್ಳುತ್ತಾ ಇದ್ದಾರೆ. ಜನ ಸಾವಿರ ಆಡಿಕೊಳ್ಳಲಿ. ನಾನು ಜನವನ್ನ ಮೆಚ್ಚಿಸಬೇಕಾಗಿಲ್ಲ."

"ಹಾಗಾದರೆ, ನೀನು ಅವರನ್ನು ಪ್ರೀತಿಸುವುದಿಲ್ಲ?"

"ಇಲ್ಲಾ ಇಲ್ಲ; ಖಂಡಿತ ಇಲ್ಲ. ನಿನ್ನನ್ನು ಪ್ರೀತಿಸುವ ಹಾಗೆ ಅವರನ್ನು ಎಂದಿಗೂ ಪ್ರೀತಿಸಲಾರೆ."

ಕೃಷ್ಣಮೂರ್ತಿಗೆ ಅತ್ಯಾನಂದವಾಯಿತು. ಸೀತೆಯ ಮೃದು ಕಪೋಲಗಳನ್ನು ತನ್ನ ಬೊಗಸೆಯಲ್ಲಿ ತುಂಬಿಕೊಂಡು, ಅವಳ ಹಣೆಯ ಮೇಲೊಂದು ಹೂಮುತ್ತನ್ನು ಒತ್ತಿದ. ಸೀತೆ ಮೌನದ ಸಮ್ಮತಿಯನ್ನಿತ್ತಿದ್ದಳು.

"ಮರೆತುಬಿಟ್ಟೆ, ಸೀತಾ. ನಿನ್ನ ಹಣೆಗೆ ಅಳಿಸದ ಕುಂಕುಮ ಇಡಬೇಕು

ಅಲ್ಲವೆ ?" ಎಂದು ಅವಳ ತುಟಿಗಳನ್ನು ಬಹು ಮೆಲ್ಲನೆ ಮುತ್ತಿಟ್ಟು, ಮತ್ತೆ ತನ್ನ ತುಟಿಯನ್ನು ಅವಳ ಹಣೆಯ ಮೇಲೆ ಒತ್ತಿದ.

ತುಸು ಹೊತ್ತಾದಮೇಲೆ, ಸೀತೆ ತುಟಿ ತೆರೆದಳು :

"ಮೂರ್ತಿ, ನೀನು ಅಂದು ಇಟ್ಟ ಕುಂಕುಮ ಅಳಿಸಿಲ್ಲ; ಅಳಿಸುವುದಿಲ್ಲ. ಮತ್ತೆ ಮತ್ತೆ ಈ ಆಟವೇಕೆ? ನೀನು ನೊಂದುಕೊಳ್ಳುತ್ತೀ ಎಂದು ನಾನು ಸುಮ್ಮನಿದ್ದೆ. ನನ್ನದು ಎಂಜಲು ಮೈ, ಎಂಜಲು ತುಟಿ. ನೀನು ಅವುಗಳನ್ನು ಮುಟ್ಟಿ ಶಾರದೆಯನ್ನು ಅಪವಿತ್ರಮಾಡಬೇಡ. ನೀನು ಹೀಗೆ ನಿತ್ಯ ಬರುವುದೂ ಸರಿಯಿಲ್ಲ. ಭೀಮರಾಯರಿಗೆ ತಿಳಿದರೆ, ಅವರೂ ಮನಸ್ಸಿನಲ್ಲಿ ನೊಂದುಕೊಳ್ಳಬಹುದು...."

"ಹಾಗೇ ಆಗಲಿ. ಆಗಾಗ್ಗೆ ಬರುತ್ತಿರಬಹುದಲ್ಲ?"

"ಅಗತ್ಯವಾಗಿ ಬಾ."

ಈಗ ಸೀತೆಯ ರಾತ್ರಿಯ ಸರದಿ ನಿಂತುಹೋಗಿತ್ತು. ಕೃಷ್ಣಮೂರ್ತಿ ಕಚೇರಿಯಿಂದ ಹೊರಟು, ಆಗತಾನೆ ಕಟ್ಟಿ ಮುಗಿಯುವುದರಲ್ಲಿದ್ದ ಪುಟ್ಟಣ್ಣ ಶೆಟ್ಟರ ಟೌನ್‌ಹಾಲಿನ ಮುಂದಿನಿಂದ ವಿಶ್ವೇಶ್ವರಪುರಕ್ಕೆ ಮಾಡಿದ ಹೊಸ ರಸ್ತೆಯ ಮೂಲಕ ಬಂದು, ಸೀತೆಯನ್ನು ನೋಡಿಕೊಂಡೇ ತನ್ನ ಕೊಠಡಿಗೆ ಹೋಗುತ್ತಿದ್ದ. "ಹೀಗೆ ನಿತ್ಯ ಬರುವುದು ಬೇಡ" ಎಂದು ಸೀತೆ ಮತ್ತೆ ಎಚ್ಚರಿಕೆ ಕೊಟ್ಟಳು. ಅದರಂತೆ, ಕೃಷ್ಣಮೂರ್ತಿ ವಾರಕ್ಕೆ ಒಂದು ದಿನ ಎರಡು ದಿನ ಬಂದುಹೋಗುತ್ತಿದ್ದ. ಒಂದು ದಿನ, ಭೀಮರಾಯರು ಸಂಜೆ ಬಂದು ಹೋಗಿದ್ದಮೇಲೆ, ಕೃಷ್ಣಮೂರ್ತಿ ಸೀತೆಯ ಕೊಠಡಿಗೆ ಬಂದು ರಾತ್ರಿ ಒಂಬತ್ತರ ವರೆಗೂ ಕುಳಿತ. "ದೀಪ ಆರಿತು. ಒಂಬತ್ತು ಗಂಟೆ. ಹೋಟೆಲಿನಲ್ಲಿ ಅನ್ನ ಇಟ್ಟಿರುತ್ತಾರೆಯೋ?" ಎಂದು ಕೇಳಿದಳು ಸೀತೆ. "ಇವೊತ್ತು ಇಲ್ಲಿಯೇ ಊಟಮಾಡಿಬಿಡುತ್ತೇನೆ" ಎಂದ ಕೃಷ್ಣಮೂರ್ತಿ. ಅದಕ್ಕೆ "ಆಗಬಹುದು. ಮೊದಲೇ ಹೇಳಿದ್ದರೆ, ಇನ್ನಷ್ಟು ಅಕ್ಕಿ ಹಾಕಿಬಿಡುತ್ತಿದ್ದೆ. ಹೋಗಲಿ ಬಿಡು. ನನಗೆ ಉಪವಾಸಮಾಡಿಯೂ ಅಭ್ಯಾಸವಿದೆ" ಎಂದಳು ಅವಳು. "ಹಾಗಿದ್ದರೆ ನಾನು ಒಲ್ಲೆ" ಎಂದು ಕೃಷ್ಣಮೂರ್ತಿ ಆಕ್ಷೇಪಿಸಿದ. "ಹಂಚಿಕೊಂಡು ಊಟ ಮಾಡಿಬಿಡೋಣ, ಆಗಬಹುದು ತಾನೆ?" ಎಂದು ಸೂಚಿಸಿದಳು ಸೀತೆ. ಕೃಷ್ಣಮೂರ್ತಿ ಒಪ್ಪಿದ. ಇಬ್ಬರೂ ಹಾಗೆಯೆ ಊಟಮಾಡಿದರು.

ಊಟವಾದಮೇಲೆ ಕೃಷ್ಣಮೂರ್ತಿ ತಾನು ತಂದಿದ್ದ ಹಣ್ಣುಗಳ ಕಾಗದದ ಚೀಲವನ್ನು ಮುಂದಿಟ್ಟ. ಇಬ್ಬರೂ ಹಣ್ಣು ತಿಂದಾಯಿತು. ಸೀತೆ ತನ್ನ ಪಾಲಿನ ಬಟ್ಟಲು ಹಾಲನ್ನು ಕೃಷ್ಣಮೂರ್ತಿಗೇ ಕೊಟ್ಟಳು.

ಹತ್ತು ಗಂಟೆಯ ಸುಮಾರಾದರೂ ಕೃಷ್ಣಮೂರ್ತಿ ಎದ್ದು ಹೊರಡುವ ಸೂಚನೆಯೇ ಕಾಣಲಿಲ್ಲ.

ಸೀತೆ ಎದ್ದು, ಕೃಷ್ಣಮೂರ್ತಿಯ ಕೂದಲು ನೇವರಿಸಿ—"ಏಳು ಮೂರ್ತಿ, ಹೊತ್ತಾಯಿತು. ನಾಳೆಯೋ ನಾಡಿದ್ದೋ ಊರಿನಿಂದ ಕಾಗದ ಬರುತ್ತೆ, ನನಗೆ ಗೊತ್ತು, ಶಾರದೆ ಗಂಡುಮಗುವನ್ನು ಹಡೆದಿರುತ್ತಾಳೆ. ನೀನು ಅವಳ ಸ್ಮರಣೆಯಲ್ಲಿ ಇರಬೇಕೇ ಹೊರತು, ಹೀಗೆ ಅವಳನ್ನು ಮರೆಯುವುದು ಸರಿಯಲ್ಲ, ಹೋಗು" ಎಂದು ಮಗುವಿಗೆ ಹೇಳುವ ಹಾಗೆ ಹೇಳಿದಳು.

ಮನಸ್ಸಿಲ್ಲದ ಮನಸ್ಸಿನಿಂದ ಕೃಷ್ಣಮೂರ್ತಿ ಮೇಲಕ್ಕೆದ್ದ.

"ಕುಂಕುಮ ಇಟ್ಟುಹೋಗಲು ಅಡ್ಡಿಯಿಲ್ಲವಲ್ಲ?" ಎಂದು ಅವನು ನಕ್ಕ. ಸೀತೆಯೂ ನಕ್ಕಳು.

ಕೃಷ್ಣಮೂರ್ತಿ ಹೋಟೆಲಿಗೆ ಹಿಂದಿರುಗುವ ಹೊತ್ತಿಗೆ ಅವನಿಗಾಗಿ ಒಂದು ಟೆಲಿಗ್ರಾಂ ಕಾದಿತ್ತು. ಶಾರದೆಯನ್ನು ಆಸ್ಪತ್ರೆಯಲ್ಲಿ ಬಿಟ್ಟಿರುವುದಾಗಿಯೂ, ಅವಳ ಸ್ಥಿತಿ ಚಿಂತಾಜನಕವಾಗಿದೆಯೆಂದೂ, ಕೂಡಲೆ ಹೊರಟುಬರಬೇಕೆಂದೂ ತಂತಿಯ ಸುದ್ದಿ ತಿಳಿಸಿತು. ಕೃಷ್ಣಮೂರ್ತಿಗೆ ಏನು ಮಾಡುವುದೆಂದು ಆ ಕ್ಷಣ ದಿಕ್ಕೇ ತೋರಲಿಲ್ಲ. ಆಗಿನ ರೈಲಿಗೆ ಹೊರಡಲು ಕಾಲ ಮೀರಿಹೋಗಿತ್ತು. ನಿದ್ದೆಯಿಲ್ಲದ ಇರುಳನ್ನು ಹೇಗೋ ಕಳೆದು ಬೆಳಗ್ಗೆಯ ರೈಲಿನಲ್ಲಿ ಮೈಸೂರಿಗೆ ಹೊರಟ.

ಈಗ ಎರಡು ದಿನಕ್ಕೆ ಮೂರು ದಿನಕ್ಕೆ ಒಮ್ಮೆ ಬರುತ್ತಿದ್ದ ಕೃಷ್ಣಮೂರ್ತಿ ಒಟ್ಟಿಗೆ ಎಂಟು ಹತ್ತು ದಿನಗಳವರೆಗೆ ಈ ಕಡೆ ಬಾರದಿದ್ದುದನ್ನು ಕಂಡು, ಅವನ ಕ್ಷೇಮದ ಬಗ್ಗೆ ಸೀತೆಗೆ ಕಳವಳವಾಯಿತು. ಇವೊತ್ತು ಬಂದಾನು, ನಾಳೆ ಬಂದಾನು ಎಂದು ದಿನಗಳನ್ನು ತಳ್ಳಿದಳು.

ಅವಳು ಯಾವುದನ್ನೂ ಮುಚ್ಚುಮರೆಮಾಡದೆ, ಕೃಷ್ಣಮೂರ್ತಿ ಬರುವ ವಿಚಾರವನ್ನು ಭೀಮರಾಯರಿಗೆ ತಿಳಿಸಿದ್ದಳು. ಅವರೂ ಕೂಡ ಇಲ್ಲದ ಸಂಶಯ ವನ್ನು ತಲೆಗೆ ಹತ್ತಿಸಿಕೊಂಡು, ತಲೆ ಕೆಡಿಸಿಕೊಂಡಿರಲಿಲ್ಲ. ಕೃಷ್ಣಮೂರ್ತಿ

ಸೀತೆಯ ಬಂಧುವೆಂಬ ಕಾರಣದಿಂದ, ಸಂಶಯಕ್ಕೆ ಅವಕಾಶವೂ ಇರಲಿಲ್ಲ. ಅವರೇ ಒಂದು ದಿನ ಹೋಟೆಲಿಗೆ ಹೋಗಿ ವಿಚಾರಿಸಿ, ಕೃಷ್ಣಮೂರ್ತಿ ಮೈಸೂರಿಗೆ ಹೋಗಿರುವ ಸುದ್ದಿಯನ್ನು ತಂದರು ; ಟೆಲಿಗ್ರಾಂ ಬಂದಿದ್ದ ಸಮಾಚಾರವನ್ನೂ ತಿಳಿಸಿದರು.

ಸೀತೆಯ ಅಶುಭಶಂಕೆ ನಿಜವಾಯಿತು. ಕೃಷ್ಣಮೂರ್ತಿ ಹೆಂಡತಿಯನ್ನು ಕಡೆಯ ಸಲ ಬೀಳ್ಕೊಂಡು, ಗಂಡುಮಗುವಿನ ತಂದೆಯಾಗಿ, ದುಗುಡದ ಹೊರೆಯನ್ನು ಇಳಿಸಿಕೊಳ್ಳಲು ಸೀತೆಯ ಬಳಿಗೆ ಬಂದಿದ್ದ.

ಕೃಷ್ಣಮೂರ್ತಿಯ ಮುಖವೇ ಸಾರುತ್ತಿತ್ತು, ಅವನ ಪತ್ನೀವಿಯೋಗದ ಸಂಕಟದ ಸುದ್ದಿಯನ್ನು. ಬಂದವನೇ ಮುಖ ಮುಚ್ಚಿಕೊಂಡು ಬಿಕ್ಕಿಬಿಕ್ಕಿ ಅಳತೊಡಗಿದ. ಸೀತೆ ತಾಯಿಯಾಗಿ, ತಂಗಿಯಾಗಿ, ಇನಿಯಳಾಗಿ, ಅವನನ್ನು ಬಗೆಬಗೆಯಲ್ಲಿ ಸಂತೈಸಿದಳು.

"....ಶಾರದೆಯಲ್ಲಿ ನಿನಗೆ ಪ್ರೀತಿ ಇರಲಿಲ್ಲವೆ ? ನೀನು ಇರಲಿಲ್ಲ ಎಂದರೂ ನಾನು ನಂಬಲೇ ಇಲ್ಲ. ಪ್ರೀತಿ ಗೊತ್ತಾಗುವುದು ಅಗಲಿದಾಗ....ಇನ್ನು ಶೋಕಿಸಿ ಪ್ರಯೋಜನವೇನು ? ತನ್ನ ಗುರುತಾಗಿ ಮಗುವನ್ನು ನಿನಗೆ ಬಿಟ್ಟು ಹೋಗಿದ್ದಾಳೆ. ಇನ್ನೇನಿಲ್ಲದಿದ್ದರೂ, ಮುತ್ತೈದೆಯಾಗಿ ಕಣ್ಣುಮುಚ್ಚಿದಳು. ಅವಳೇ ಪುಣ್ಯವಂತೆ...."

"....ನಾನು ತಬ್ಬಲಿಯಾಗಿದ್ದೆ ಎಂದು ಮಗುವೂ ತಬ್ಬಲಿಯಾಗಬೇಕೆ ? "

" ದೇವರು ಅದಕ್ಕೆ ಆಯುಸ್ಸು ಕೊಟ್ಟು ಅಜ್ಜನ ಮನೆಯಲ್ಲಿ ಬೆಳೆಯಲಿ. ಅದರ ಭವಿಷ್ಯ ಕಂಡವರು ಯಾರು ? "

" ಸೀತೆ, ಅವಳು ಹೋದಮೇಲೆ ನನಗೆ ಈಗ ಅವಳಿಲ್ಲದ್ದು ಗೊತ್ತಾಗುತ್ತ ಇದೆ. ಬದುಕು ಬರಿದಾದಂತಿದೆ."

" ಇದೇ ನಿಜವಾದ ಪ್ರೀತಿ."

" ಇನ್ನು ಆ ಮಾತೇಕೆ ? ನನ್ನ ಬರಿದಾದ ಬಾಳನ್ನು ಇನ್ನುಮೇಲೆ ನೀನು ತುಂಬಬೇಕು, ಸೀತೆ."

" ಆಗಲಿ, ನೋಡೋಣ. ಇದು ಎಲ್ಲರಿಗೂ ಪರೀಕ್ಷೆಯ ಕಾಲ."

ಸೀತೆಯ ಮಾತಿನ ಅರ್ಥ ಕೃಷ್ಣಮೂರ್ತಿಗೆ ಅರಿವಾಗಲಿಲ್ಲ.

ಮಾರನೆಯ ದಿನ, ಕೃಷ್ಣಮೂರ್ತಿಯ ದುಃಖ ಶಮನವಾದಮೇಲೆ, ಸೀತೆ ಕೇಳಿದಳು :

" ಶಾರದೆಗೆ ದಿನ ತುಂಬಿರಲಿಲ್ಲವೆ ? "

" ದಿನ ತುಂಬಿತ್ತು. ಆದರೂ ಹೆರಿಗೆ ಕಷ್ಟವಾಯಿತು. ಮೂರು ದಿ
ಕಷ್ಟಪಟ್ಟಳು, ಯಮಯಾತನೆ ಅನುಭವಿಸಿದಳು. ' ಮಗುವನ್ನು ಉಳಿ
ವುದಕ್ಕಾಗುವುದಿಲ್ಲವೆ ? ' ಎಂದು ಡಾಕ್ಟರನ್ನು ಕೇಳಿದಳಂತೆ. ಅವರು ' ಮ
ಉಳಿದರೆ ನೀನು ಉಳಿಯುವುದಿಲ್ಲವಲ್ಲೆ, ತಾಯಿ ' ಎಂದರಂತೆ ಡಾಕ್ಟರ
' ಅದರ ಭಾಗ್ಯ ಕಂಡವರು ಯಾರು ? ನೀವು ಮಗುವನ್ನೇ ಉಳಿಸಿ. ನಾನ
ಯಾಕೆ ಬದುಕಬಾರದು ? ನಾನು ಬದುಕಿ ನನ್ನ ಮಗುವನ್ನು ಖಂಡಿತ ಕೊ
ಗೊಡಿಸುವುದಿಲ್ಲ ' ಎಂದಳಂತೆ...."

ಸೀತೆಯ ಕಣ್ಣುಗಳಲ್ಲಿ ಧಾರಾಕಾರವಾಗಿ ನೀರು ಹೊನಲು ಹರಿಯ
ತ್ತಿತ್ತು.

" ಮಗು ಬದುಕಿತು. ಬದುಕಿದ ಮಗುವನ್ನು ಕಣ್ಣುತುಂಬ ನೋ
ಆಮೇಲೆ ಕಣ್ಣುಮುಚ್ಚಿದಳು. ತುಂಬ ಅಪಾಯಕಾರಿಯಾದ ' ಆಪರೇಷನ್
ಮಗುವನ್ನು ಬದುಕಿಸಿ, ತಾಯನ್ನು ಕೊಂದಿತು."

" ಹೌದು, ತಾಯಿ ತಾನು ಸತ್ತು ಮಗುವನ್ನು ಬದುಕಿಸಿಕೊಂಡಳ
ನನ್ನ ಅನುಭವದಲ್ಲಿ ಇಂಥ ತಾಯನ್ನು ನಾನು ಕಂಡಿಲ್ಲ. ನಿನ್ನ ಶಾರದೆ ಘ
ವಾದ ವ್ಯಕ್ತಿ, ಮೂರ್ತಿ."

ಇಬ್ಬರೂ ಮೌನವಾಗಿ ಮಡಿದ ವ್ಯಕ್ತಿಗೆ ಕಂಬನಿಯ ಕಾಣಿಕೆಯನ
ಸಲ್ಲಿಸಿದರು.

೩

ತಿಂಗಳುಗಳು ಉರುಳಿದುವು ; ಶಾರದೆ ಸತ್ತು ವರ್ಷವಾಯಿತು.

ಸೀತೆ ಒಂದು ದಿನ ಇದ್ದಕ್ಕಿದ್ದಹಾಗೆ, " ಈಗ, ನಿಮ್ಮ ಮನೆಗೇ ಬಂದ
ಇದ್ದುಬಿಡುತ್ತೇನೆ, ನೀವು ಅಪ್ಪಣೆ ಕೊಟ್ಟರೆ " ಎಂದು ತಿಳಿಸಿದಾಗ ಭೀಮ
ರಾಯರಿಗೆ ಸಂತೋಷದ ಆಚ್ಚರಿಯಾಯಿತು. " ಆದರೆ, ಒಂದು ಷರತ್ತು....
ಎಂದು ಅವಳು ಹೇಳಲು " ಏನು ? " ಎಂದು ಬೆರಗಾಗಿ ಕೇಳಿದರು. " ಕೃಷ್ಣ
ಮೂರ್ತಿ ಬಂದುಹೋಗಲು ಅವಕಾಶವಿರಬೇಕು " ಎಂದಳು. " ಇಷ್ಟೇ ತಾನೆ
ಅಗತ್ಯವಾಗಿ ಆಗಲಿ " ಎಂದು ಭೀಮರಾಯರು ಒಪ್ಪಿಕೊಂಡರು.

ಈ ಹೊಸ ಏರ್ಪಾಡನ್ನು ಕೃಷ್ಣಮೂರ್ತಿಗೂ ತಿಳಿಸಿದಳು. ಕೃಷ್ಣ ಮೂರ್ತಿಗೆ ಏನೆಂದು ಅರ್ಥವಾಗದಿದ್ದರೂ ಆಕ್ಷೇಪಿಸಲು ಕಾರಣವಿರಲಿಲ್ಲ.

ಸೀತೆಯ ಸಾಮಾನುಗಳನ್ನೆಲ್ಲ ಅವಳ ವಿಶ್ವೇಶ್ವರಪುರದ ನಿವಾಸದಿಂದ ಭೀಮರಾಯರ ಮನೆಗೇ ಸಾಗಿಸಿದ್ದಾಯಿತು. ತಾವು 'ಇಟ್ಟುಕೊಂಡಿದ್ದ' ನರ್ಸನ್ನು ಮನೆಗೇ ಕರೆಸಿಕೊಂಡ ಭೀಮರಾಯರ ದಿಟ್ಟತನ ಕಂಡು ಬೀದಿಯ ಜನ ಬಾಯಿಯ ಮೇಲೆ ಬೆರಳಿಟ್ಟರು. ಸೀತೆ ಇದನ್ನು ಅರಿತೇ ಇದ್ದಳು. ಆದರೆ ತನ್ನ ಹೊಸ ಹೊಂಗನಸು ನನಸಾಗಲು ಅವಳು ಎಲ್ಲ ಬಗೆಯ ತ್ಯಾಗಕ್ಕೂ ಸಿದ್ಧಳಾಗಿದ್ದಳು ; ಸಾಹಸ ಪ್ರಯತ್ನವೊಂದಕ್ಕೆ ಕೈಯಿಕ್ಕಿದ್ದಳು.

ಭೀಮರಾಯರು ಸೀತೆಯ ವೆಚ್ಚವನ್ನೆಲ್ಲ ವಹಿಸಿಕೊಂಡು ಬಿಟ್ಟಿದ್ದರು. ಅವಳಿಗೆ ಕೆಲಸವಾದಮೇಲೆ, ಅವಳ ಸಂಬಳವೆಲ್ಲಾ ಒಂದು ಪುಟ್ಟ ಗಂಟಾಗಿತ್ತು; ಭೀಮರಾಯರು ಅದನ್ನು ಬಡ್ಡಿಗೆ ಹಾಕಿ ಬೆಳಸುತ್ತಿದ್ದರು.

ಒಂದು ದಿನ ಅವರು ಸೀತೆಗೆ, ಹಿಂತೆಗೆದು ಹಿಂತೆಗೆದು ಹೇಳಿದರು : "ನಿನ್ನ ಅಪ್ಪಣೆ ಕೇಳದೆ ನಾನು ಒಂದು ಕೆಲಸ ಮಾಡಿಬಿಟ್ಟಿದ್ದೇನೆ." ಸೀತೆ, "ಏನು ?" ಎಂದು ಕೇಳಿದಳು. "ನಿನ್ನ ಹಣಕ್ಕೆ ನನ್ನದೂ ಸ್ವಲ್ಪ ಸೇರಿಸಿ ಸೇರಿಸಿ, ಹೊಸದಾಗಿ ಟೌನ್‌ಹಾಲ್ ರಸ್ತೆ ಆಗಿದೆಯಲ್ಲಾ, ಅಲ್ಲಿ ಎರಡು ಸೈಟು ; ಲಾಲ್‌ಬಾಗ್ ಹತ್ತಿರ ಕನಕಪಾಳ್ಯದ ಬಳಿ ಎರಡು ಎಕರೆ ಹೊಲ ; ಬಸವನ ಗುಡಿ ಆಚೆ ಎರಡು ಎಕರೆ ಹೊಲ—ಇಷ್ಟನ್ನು ನಿನ್ನ ಹೆಸರಿನಲ್ಲಿ ಕೊಂಡುಬಿಟ್ಟಿದ್ದೇನೆ. ಎಲ್ಲಾ 'ರೆವಿನ್ಯೂ' ಜಾಗ. ಈಗ ಮಾತ್ರ ಹಣವನ್ನ ಹೂತಿಟ್ಟಂತೆ, ಬಡ್ಡಿ ಇಲ್ಲ; ಬೆಳೆಯೂ ಬೆಳೆಯುವ ಹಾಗಿಲ್ಲ. ಮುಂದೆ ಅವು ಮನೆ ಸೈಟುಗಳಾಗುತ್ತವೆ ಅಂತ ನನ್ನ ದೀಡು. ಇದಕ್ಕೆ ನಿನ್ನ ಒಪ್ಪಿಗೆ ಇದೆಯಷ್ಟೆ ?"

"ಇದಕ್ಕೆ ನಾನು ಒಪ್ಪಿಗೆ ಕೊಡಬೇಕಾದರೆ, ನಾನು ಮಾಡಿರುವ ಸಾಹಸದ ಪ್ರಯತ್ನಕ್ಕೂ ನಿಮ್ಮ ಒಪ್ಪಿಗೆ ಕೊಡಬೇಕು. ಕೊಡುತ್ತೀರೋ ?"

"ಅಂಥ ಸಾಹಸದ ಕೆಲಸವೇ ?"

"ಹೌದು."

"ಏನದು, ಅಂಥ ಸಾಹಸದ್ದು ?"

"ವಿಧವಾವಿವಾಹ...."

"ಏನಂದೆ ! ವಿಧವಾವಿವಾಹ ! ನಿನ್ನನ್ನು ಮದುವೆ ಮಾಡಿಕೊಳ್ಳುವುದು !

ನನಗೆ ಆ ಯೋಚನೆ ಬಂದಿಲ್ಲ ಅಂತ ಮಾಡಿಕೊಂಡೆಯಾ? ನನ್ನ ಮಗಳು ಹಾಗಿರುವುದನ್ನ ನೋಡಿಕೊಂಡೂ ನಾನು ನಿನ್ನನ್ನು ಮದುವೆಯಾಗಲೇ? ನಿನ್ನ ಮಾತು ಹಾಗಿರಲಿ, ಯಾವ ಹೆಣ್ಣನ್ನೂ ಮದುವೆ ಮಾಡಿಕೊಳ್ಳುವುದಿಲ್ಲ ಅಂತ ಎಂದೋ ನಿಶ್ಚಯಿಸಿಬಿಟ್ಟಿದ್ದೇನೆ."

"ನನ್ನನ್ನು ನೀವು ಮದುವೆಯಾಗುವುದಲ್ಲ; ಮದುವೆಯಾಗಲೂ ಬೇಕಾಗಿಲ್ಲ. ಕೃಷ್ಣಮೂರ್ತಿ ನಿಮ್ಮ ಪದ್ಮುವನ್ನು ಮದುವೆಯಾಗುವುದಾದರೆ ನೀವು ಅದಕ್ಕೆ ಒಪ್ಪುತ್ತೀರೋ?"

"ನನ್ನ ಒಪ್ಪಿಗೆ ಹಾಗಿರಲಿ, ವಿಧವೆಯನ್ನು ಮದುವೆಯಾಗಲು ಆತ ಒಪ್ಪಬೇಕಲ್ಲ?"

"ಇಬ್ಬರೂ ಒಬ್ಬರನ್ನೊಬ್ಬರು ಒಪ್ಪಿಕೊಂಡಿದ್ದಾರೆ. ನಿಮ್ಮ ಒಪ್ಪಿಗೆಯ ಹರಕೆಗಾಗಿ ಕಾದಿದ್ದಾರೆ. ಮೊನ್ನೆ ಕೃಷ್ಣಮೂರ್ತಿ ಏನಂದ, ಗೊತ್ತೆ?"

"ಏನು ಹೇಳಿದ?"

"ನನಗಿಂತ ಪದ್ಮಮ್ಮ ಎಳಕಂತೆ, ನನಗಿಂತ ಸಾಧುವಂತೆ, ಮಾತಾಳಿ ಯಲ್ಲವಂತೆ. ನನಗೆ ಹಾಡಲು ಬರುವುದಿಲ್ಲ, ಅವಳು ಚೆನ್ನಾಗಿ ಹಾಡುತ್ತಾಳಂತೆ."

"ಇದೆಲ್ಲಾ ಹೇಗೆ ಸಾಧ್ಯವಾಯಿತು, ಈ ಪವಾಡ?"

"ನಾನು ಒಂಟಿ ವಾಸ ಬಿಟ್ಟು ಇಲ್ಲಿಗೆ ಬಂದದ್ದು ಏಕೆ ಮತ್ತೆ? ಎರಡು ಅದೃಷ್ಟಹೀನ ಹೃದಯಗಳನ್ನು ಒಂದುಗೂಡಿಸುವುದಕ್ಕೆ. ಅವರ ಬಾಳು ವ್ಯರ್ಥವಾಗದಂತೆ ಸಾರ್ಥಕಗೊಳಿಸುವುದಕ್ಕೆ....ನನ್ನ ಈ ಬೇಡಿಕೆಗೆ ನಿಮ್ಮ ಒಪ್ಪಿಗೆ ಇದೆಯೋ?"

"ತಕ್ಷಣ ಹೇಗೆ ಹೇಳಲಿ, ಸೀತಾ. ಯೋಚಿಸಿ ಹೇಳುತ್ತೇನೆ."

ಎರಡು ಮೂರು ದಿನ ಬಿಟ್ಟು, ಭೀಮರಾಯರು ಕೃಷ್ಣಮೂರ್ತಿ ಮತ್ತು ಪದ್ಮಾವತಿ ಇಬ್ಬರ ಪುನರ್ವಿವಾಹಕ್ಕೆ ತಮ್ಮ ಒಪ್ಪಿಗೆ ಕೊಟ್ಟರು. ಮನೆಯ ಆಚಾರ್ರು ತಮ್ಮ ತೀವ್ರ ಅಸಮ್ಮತಿಯನ್ನು ವ್ಯಕ್ತಪಡಿಸಲು, "ಅವರ ಮದುವೆಗೆ ನಿಮ್ಮ ಬಾಯಲ್ಲಿ ವೇದಮಂತ್ರ ಹೇಳಿಸಿ ಅಪವಿತ್ರಗೊಳಿಸುವುದಿಲ್ಲ. ಅವರ ಮದುವೆ ಆರ್ಯಸಮಾಜದಲ್ಲಿ ನಡೆಯುತ್ತೆ. ಮನೆ ಮುಂದೆ ಚಪ್ಪರ ಕೂಡ ಹಾಕುವುದಿಲ್ಲ, ನೀವೇನೂ ಯೋಚನೆ ಮಾಡಬೇಡಿ" ಎಂದು ಅವರನ್ನು ಭೀಮರಾಯರು ಸಮಾಧಾನಪಡಿಸಿದರು.

ಆರ್ಯಸಮಾಜದ ಕಟ್ಟಳೆಯ ಮೇರೆಗೆ ಕೃಷ್ಣಮೂರ್ತಿ-ಪದ್ಮಾವತಿಯರ ಮದುವೆ ನಡೆಯಿತು. ಮದುವೆಯ ಉಡುಗೊರೆಯಾಗಿ, ಕುಂಕುಮ ತುಂಬಿದ್ದ ಬೆಳ್ಳಿಯ ಭರಣಿಯನ್ನು ಸೀತೆ ವಧುವಿಗೆ ಒದಿಸಿದಳು.

ಮತ್ತೊಮ್ಮೆ ಕುಂಕುಮಶೋಭಿತೆಯಾದ ಪದ್ಮಾವತಿಯನ್ನು ಕಂಡು ಸೀತೆಗೆ ಆದ ಹರ್ಷ ಅಷ್ಟಿಷ್ಟಲ್ಲ.

ಈಗ ಕೃಷ್ಣಮೂರ್ತಿ ಭೀಮರಾಯರ ಅಳಿಯ; ಅವರ ಮನೆಯಲ್ಲಿಯೇ ಬಿಡಾರ ಮಾಡಿದ. "ಇನ್ನು ನನ್ನ ಆಸೆ ನೆರವೇರಿತು. ನಾನು ಮೊದಲಿದ್ದ ಕೊಠಡಿಗೆ ಹೋಗುತ್ತೇನೆ. ನಾನು ಇಲ್ಲಿ ಇರುವುದು ಅಷ್ಟು ಹಿತಕರವಲ್ಲ—" ಎಂದು ಸೀತೆ ಭೀಮರಾಯರಿಗೆ ಸೂಚಿಸಿದಳು. ಅವರೇನೋ ಅಡ್ಡಿಪಡಿಸಲಿಲ್ಲ. ಆದರೆ ಕೃಷ್ಣಮೂರ್ತಿಯೂ ಪದ್ಮಾವತಿಯೂ ಸೀತೆಯ ಸೂಚನೆಯನ್ನು ಬಲವಾಗಿ ವಿರೋಧಿಸಿದರು. ಆದರೆ ಅವಳ ನಿರ್ಧಾರ ಕದಲಲಿಲ್ಲ.

ಸೀತೆ ಮೊದಲಿನಂತೆ ಬಂದು ಕೊಠಡಿಯಲ್ಲಿ ವಾಸವಾಗಿರುವುದು ಭೀಮರಾಯರಿಗೆ ಸರಿತೋರಲಿಲ್ಲ. ವಿಶ್ವೇಶ್ವರಪುರದ ಮನೆಯಲ್ಲಿದ್ದವರನ್ನು ಬಿಡಿಸಿಬಿಟ್ಟು, ಅದನ್ನು ಸಂಪೂರ್ಣವಾಗಿ ಸೀತೆಗಾಗಿ ಬಿಟ್ಟುಕೊಟ್ಟರು. ಭೀಮರಾಯರ ಈ ಏರ್ಪಾಡು ನಿಜವಾಗಿ ಅನವಶ್ಯಕವಾಗಿದ್ದರೂ ಸೀತೆ ಅದಕ್ಕೆ ತನ್ನ ಅಸಮ್ಮತಿಯನ್ನು ಸೂಚಿಸಲಿಲ್ಲ. ಅವರ ಇಷ್ಟವನ್ನೆಲ್ಲ ತನ್ನ ಇಷ್ಟವನ್ನಾಗಿ ಮಾಡಿಕೊಳ್ಳುವುದಾಗಿ ಅವಳು ಸಂಕಲ್ಪಿಸಿದಳು.

ಆ ಗೃಹ, ಅವಳು ನಿರೀಕ್ಷಿಸಿದ್ದಕ್ಕಿಂತ ಹೆಚ್ಚಾಗಿ ಸುಖಭೋಗಸಾಮಗ್ರಿಗಳಿಂದ ಸುಸಜ್ಜಿತವಾಯಿತು; ಅವಿರಳವಾಗಿ ಅಲಂಕೃತವಾಯಿತು. ಮನೆಯ ಮುಂದೆ ಕೈತೋಟ ಬೆಳಸುವುದಕ್ಕಾಗಿ ಒಬ್ಬ ಮಾಲಿಯ ನೇಮಕವಾಯಿತು. ಸುತ್ತಮುತ್ತಿನ ಕೆಲಸಕ್ಕಾಗಿ ಒಕ್ಕಲಗಿತ್ತಿಯನ್ನು ಗೊತ್ತುಮಾಡಿದರು.

"ಒಬ್ಬ ಅಡುಗೆಯಾಕೆಯನ್ನು ಗೊತ್ತುಮಾಡಿಬಿಡಿ" ಎಂದು ಸೀತೆ ನಗುತ್ತ ಹೇಳಿದಳು. "ನಿಜವಾಗಿ ನಿನಗೆ ಅಗತ್ಯವೆನಿಸಿದರೆ, ಹೇಳು, ಗೊತ್ತು ಮಾಡುತ್ತೇನೆ" ಎಂದರು ಭೀಮರಾಯರು. "ಅಲ್ಲ, ನನ್ನೊಬ್ಬಳಿಗಾಗಿ ಇಷ್ಟೆಲ್ಲ ಯಾಕೆ ವೈಭವ? ಬಿಳಿಯ ಸೀರೆಯ ನರ್ಸಿನ ಯೋಗ್ಯತೆಗೆ ಮೀರಿದ್ದು, ಈ ಅಟ್ಟಹಾಸ" ಎಂದು ಸೀತೆ ತನ್ನ ಅಸಮಾಧಾನವನ್ನು ಮೃದುವಾಗಿ ಸೂಚಿಸಿದಳು.

"ನೀನು ಇನ್ನುಮೇಲೆ ಬಿಳಿಯ ಸೀರೆಯ ನರ್ಸಲ್ಲ, ಸೀತೆ."

" ಹಾಗಾದರೆ ಏನೆಂದು, ನಿಮ್ಮ ತಿಳಿವಳಿಕೆ ? "

" ಮದುವೆಗಿದುವೆ ಎನ್ನುವ ಮಾತಿನಲ್ಲಿ ನನಗೆ ನಂಬಿಕೆಯಿಲ್ಲ, ಸೀತೆ. ಮದುವೆಯಾಗದಿದ್ದರೂ ನೀನು ನನ್ನ ಮಡದಿ, ಈ ಮನೆಯ ಒಡತಿ."

" ಅಂದರೆ, ನೀವು ನನ್ನ ಯಜಮಾನರು ಅಂದಹಾಗಾಯಿತು. ಕೃಷ್ಣ ಮೂರ್ತಿ–ಪದ್ಮಾವತಿಯ ಮದುವೆಗೇ ಜನ ಆಡಿಕೊಳ್ಳುತ್ತಿದೆ. ನಮ್ಮ ಸಂಬಂಧ ವಲ್ಲದ ಈ ಸಂಬಂಧ ಕಂಡು ಇನ್ನೇನು ಅಂದುಕೊಳ್ಳುವುದೋ ? "

" ಜನದ ದೃಷ್ಟಿಯಲ್ಲಿ ನನ್ನ ನಿನ್ನ ಸಂಬಂಧ ಎಂದೋ ಮೊದಲಾಯಿತು. ನಮ್ಮ ದೃಷ್ಟಿಯಲ್ಲಿ, ನೀನು ಒಪ್ಪಿದರೆ ಮಾತ್ರ, ಇನ್ನುಮುಂದೆ...."

" ನಾನು ನಿಮ್ಮ ಚರಣದಾಸಿ."

ಸೀತೆ ಭೀಮರಾಯರ ನಲ್ಮೆಯ ಅಪ್ಪುಗೆಯಲ್ಲಿ ಬಂದಿಯಾದಳು. ತನಗೆ ಇಷ್ಟವಿಲ್ಲದ ಸಂಬಂಧದ ಸ್ವರ್ಣಶೃಂಖಲೆಯನ್ನು ತೊಟ್ಟಳು. ಕಷ್ಟ ಕಾಲದಲ್ಲಿ ಕಾಪಾಡಿದ ಅನ್ನದಾತನಿಗೆ ತನ್ನನ್ನು, ಬಹು ಕಾಲ ತಡೆದಮೇಲೆ ಈಗ, ಒಪ್ಪಿಸಿ ಕೊಂಡಳು. ಹಿಂದಿನಂತಲ್ಲದೆ ಇಂದು ಕೃಷ್ಣಮೂರ್ತಿ ತನ್ನ ವಿಚಾರದಲ್ಲಿ ಅಸಮಾಧಾನಗೊಳ್ಳನೆಂದು ನಿಶ್ಚಿಂತೆಯಿಂದಿದ್ದಳು.

ಈಗ ಭೀಮರಾಯರು ಹೆಸರಿಗೆ ಮಗಳು ಅಳಿಯನೊಂದಿಗೆ ತಮ್ಮ ಬಸವನಗುಡಿಯ ಮನೆಯಲ್ಲಿ ಇದ್ದರು. ದಿನದ ಬಹುಭಾಗವನ್ನೆಲ್ಲಾ ಸೀತೆಯ ಮನೆಯಲ್ಲಿಯೇ ಕಳೆಯುತ್ತಿದ್ದರು. ಸೀತೆ ಈಗ ಭೀಮರಾಯರ ಜಟಕಾಗಾಡಿ ಯಲ್ಲಿಯೇ ಆಸ್ಪತ್ರೆಗೆ ಹೋಗಿ ಬರುತ್ತಿದ್ದಳು. ಭೀಮರಾಯರ ಶ್ರೀಮಂತ ಕೃಪಾಛತ್ರದಡಿಯಲ್ಲಿ ಅವಳ ಬದುಕು ಸುರಕ್ಷಿತವಾಗಿತ್ತು. ಜನಾಪವಾದದ ಬಿಸಿಲು ಬಿದ್ದೂ ಅವಳಿಗೆ ದೊರೆತ ನೆರಳನ್ನು ಮಾತ್ರ ಅದು ತೊಡೆಯಲು ಸಮರ್ಥವಾಗಿರಲಿಲ್ಲ. ಭೀಮರಾಯರ ಬಿಂಕದ ರಾಣಿ, ವಿಶ್ವೇಶ್ವರಪುರದ ನಿತ್ಯಸುಮಂಗಲಿ ಎಂದು ಮಹಾಜನರು ಅವಳಿಗೆ ಬಿರುದನ್ನು ಕೊಟ್ಟಿದ್ದರೂ, ಅವಳು ಮಾತ್ರ ಹಣೆಗೆ ಕುಂಕುಮವಿಡಲಿಲ್ಲ; ಹೂವು ಮುಡಿಯಲಿಲ್ಲ. ಅವಳ ಮೇಲೆ ಕೆಟ್ಟ ಕಣ್ಣು ನಟ್ಟ ಜನ ಎಷ್ಟೋ ಮಂದಿ; ಆದರೆ ಅವಳ ಬಳಿ ಸುಳಿ ಯಲು ಯಾರಿಗೂ ಕೆಚ್ಚಿರಲಿಲ್ಲ.

೪

ಭೀಮರಾಯರು ಪುತ್ರಸಂತಾನ ಪಡೆಯುವುದಕ್ಕಾದರೂ ಮತ್ತೊಮ್ಮೆ ಮದುವೆಮಾಡಿಕೊಳ್ಳಬೇಕೆಂದು ಸೀತೆ ಅನೇಕ ಸಲ ಅವರನ್ನು ಒತ್ತಾಯಮಾಡಿದಳು. ಈ ವಿಷಯಕ್ಕೆ ಮೊದಮೊದಲು ಮನಸ್ಸನ್ನು ಇಳಿಯಬಿಟ್ಟಿದ್ದ ಅವರು ಈಗ ಆ ವಿಚಾರದಲ್ಲಿ ತೀರ ವಿಮುಖರಾಗಿದ್ದರು. "ನನಗೆ ಯಾವುದಕ್ಕೆ ಕೊರತೆಯಾಗಿದೆ, ಸೀತೆ? ಪದ್ದುವಿನ ವೈಧವ್ಯವನ್ನು ನೀನು ಹೋಗಲಾಡಿಸಿದೆ. ನನ್ನ ಬದುಕನ್ನು ಸುಖಮಯವಾಗಿ ಮಾಡಿದ್ದೀಯೆ; ನನಗೆ ಹೆಂಡತಿ ಇಲ್ಲ ಎನ್ನಿಸಿಲ್ಲ. ಕೇವಲ ಪುತ್ರಸಂತಾನಕ್ಕೋಸ್ಕರ ನನ್ನ ಈ ವಯಸ್ಸಿನಲ್ಲಿ ಚಿಕ್ಕ ಪುಟ್ಟ ಹುಡುಗಿಯನ್ನು ಮದುವೆಯಾಗಿ, ಅವಳಿಗೆ ವೈಧವ್ಯದ ಪಟ್ಟ ಕಟ್ಟಿ ಹೋಗಲೆ? ಪದ್ದುವಿಗೆ ಗಂಡುಮಗುವಾದರೆ, ಮೊಮ್ಮಗನನ್ನೇ ದತ್ತುಮಾಡಿಕೊಳ್ಳುತ್ತೇನೆ."—ಭೀಮರಾಯರ ಈ ಅಭಿಪ್ರಾಯ ಸೀತೆಗೆ ಒಪ್ಪಿತವಾಯಿತು. ಭೀಮರಾಯರ ಒಳ್ಳೆಯ ನಿರ್ಧಾರಕ್ಕಾಗಿ ಅವಳು ಸಂತೋಷಪಟ್ಟಳು.

ವಿಶೇಷ ಘಟನೆ ಯಾವುದೂ ಇಲ್ಲದೆ, ಸೀತೆಯ ಬದುಕು ಮೂರು ನಾಲ್ಕು ವರ್ಷ ಸುಖಮಯವಾಗಿ ಸಾಗಿತು.

ಹೆರಿಗೆಯ ಆಸ್ಪತ್ರೆಯ ವರಾಂಡದಲ್ಲಿ ಒಮ್ಮೆ ಸೀತೆ ಬಿಳಿಯ ಹಂಸೆಯಂತೆ ತೇಲಿಹೋಗುತ್ತಿದ್ದಾಗ, ಇಪ್ಪತ್ತೆರಡು ಇಪ್ಪತ್ತುಮೂರು ವಯಸ್ಸಿನ ಯುವಕನೊಬ್ಬ ತನ್ನನ್ನು ದಿಟ್ಟಿಸಿ ನೋಡಿದಂತೆ ಅವಳಿಗೆ ಭಾಸವಾಯಿತು. ಇದೇನು ಅವಳಿಗೆ ಹೊಸದಲ್ಲ. ಗುರುತು ಕಾಣದವರು ಹಾಗೆ ನೋಡಿದಾಗ ಅದು ಸ್ವಾಭಾವಿಕವೆಂದೇ ಅವಳು ತಿಳಿದಿದ್ದಳು. ಆದರೆ ಈ ಯುವಕನ ನೋಟ ಬಯಕೆಯ ನೋಟವಾಗಿರದೆ, ಮರೆತ ಗುರುತನ್ನು ನೆನೆಯುವ ನೋಟವಾಗಿತ್ತು. ಆದರೆ ಅವನು ಯಾರೆಂದು ಇವಳಿಗೆ ಗುರುತು ಸಿಕ್ಕಲಿಲ್ಲ; ಇವಳು ಯಾರೆಂದು ಅವನ ನೆನಪಿಗೆ ಬರಲಿಲ್ಲ.

ಆ ಯುವಕ ವರಾಂಡದಲ್ಲಿಯೇ ನಿಂತು, ಆಸ್ಪತ್ರೆಯ ಮುಂಬಯಲಿನಲ್ಲಿ ಹೋಗುತ್ತಿದ್ದ ವ್ಯಕ್ತಿಯನ್ನು ಸಂಬೋಧಿಸಿ, "ಗೌರೀ" ಎಂದು ಕೂಗಿದ. ಸೀತೆಯ ಕಿವಿ ನೆಟ್ಟಗಾಯಿತು. ಯಾವುದೋ ವಾರ್ಡಿಗೆ ಪಟಪಟನೆ ನಡೆದು ಹೋಗುತ್ತಿದ್ದವಳು, ತಟ್ಟನೆ ನಿಂತಳು; ಆ ವ್ಯಕ್ತಿಯ ಕಡೆ ತಾನೂ ತಿರುಗಿ ನೋಡಿದಳು. ಸಂಶಯವೇ ಇಲ್ಲ: ಗೌರಿ! ಇವನು ಗೌರಿಯ ತಮ್ಮ.

ಹೆಸರೇನೋ ನೆನಪಿಗೆ ಬರಲಿಲ್ಲ.

ಗೌರಿ ಸುಬ್ಬರಾಮುವಿನ ಹತ್ತಿರಕ್ಕೆ ಬಂದಳು.

" ನೀನು ಬರುವಾಗ ನನ್ನ ಇನ್ನೊಂದು ಕೋಟಿನ ಜೇಬಿನಲ್ಲಿ ಐದು ರೂಪಾಯಿದೆ, ತೆಗೆದುಕೊಂಡು ಬಾ" ಎಂದ ಸುಬ್ಬರಾಮು.

ಸೀತೆ ಯುವಕನ ಪಕ್ಕಕ್ಕೇ ಬಂದು ನಿಂತಳು.

" ಗೌರಮ್ಮ, ನಾನು ಯಾರು ಗೊತ್ತಾಗಲಿಲ್ಲವೆ ? "

" ಗೊತ್ತಾಗದೆ ಏನು ? ಸೀತೆ ಅಲ್ಲವೆ ? "

" ಹೌದು."

" ನೀನು ಇಲ್ಲಿರುವುದು ನನಗೆ ಗೊತ್ತೇ ಇಲ್ಲ ! "

" ಇದೇನು ಈಗ ಇಲ್ಲಿಗೆ ಬಂದದ್ದು ? ಈತ ನಿನ್ನ...."

"....ನನ್ನ ತಮ್ಮ, ಸುಬ್ಬರಾಮು. ಅವನ ಹೆಂಡತಿಯನ್ನ ಇದೇ ತಾನೇ ಕರೆದುಕೊಂಡುಬಂದು ಬಿಟ್ಟೆವು. ನನಗಿನ್ನೂ ಊಟ ಆಗಿಲ್ಲ. ನಾನು ಊಟ ಮಾಡಿಕೊಂಡು ಬಂದು ಅವನನ್ನ ಕಳಿಸಿಕೊಡಬೇಕು."

" ಓ ! ಯಾವ ವಾರ್ಡು ? " ಸೀತೆ ಸಂತಸದ ಅಚ್ಚರಿಯ ಪ್ರಶ್ನೆಯನ್ನು ಸುಬ್ಬರಾಮುವಿನ ಕಡೆ ತಿರುಗಿ ಕೇಳಿದಳು. ಸುಬ್ಬರಾಮು ಲಜ್ಜೆಯಿಂದ ಬೇರೆಯ ಕಡೆ ಮುಖ ತಿರುಗಿಸಿದ.

" ತೋರಿಸುತ್ತಾನೆ ಅವನೇ. ನಾಚಿಕೆ ಬೇರೆ " ಎಂದು ಗೌರಿ ನಕ್ಕಳು.

" ನೀನು ಹೋಗು ಗೌರಮ್ಮ, ನಾನು ಎಲ್ಲ ನೋಡಿಕೊಳ್ಳುತ್ತೇನೆ " ಎಂದು ಸೀತೆ ಆಶ್ವಾಸನವಿತ್ತಮೇಲೆ, " ಹಾಗಾದರೆ ಬರ್ತೇನೆ. ಇಲ್ಲೇ ಸಿಕ್ಕುತ್ತೀಯಲ್ಲ, ಹೇಗಿದ್ದರೂ " ಎಂದು ಗೌರಿ ಮನೆಗೆ ಹೊರಟಳು.

ಸೀತೆ ಸಂಬಂಧಪಟ್ಟ ಡಾಕ್ಟರಿಗೆ ಹೇಳಿ, ಸುಬ್ಬರಾಮುವಿನ ಹೆಂಡತಿಯಿದ್ದ ವಾರ್ಡಿಗೆ ತನ್ನ ಡ್ಯೂಟಿಯನ್ನು ವರ್ಗಾಯಿಸಿಕೊಂಡಳು. ಗೌರಿಯ ತಮ್ಮನ ಹೆಂಡತಿಗೆ ತಾನು ನೆರವಾಗುವುದು ಮಾತ್ರವಲ್ಲದೆ, ಅವಳು ಆಸ್ಪತ್ರೆಯಲ್ಲಿರುವಷ್ಟು ಕಾಲವೂ ತಾನು ಗೌರಿಯನ್ನು ಕಾಣುತ್ತಿರಬಹುದೆಂದು ಅವಳ ಹಂಬಲ.

ಸೀತೆ, ಗೌರಿಯನ್ನು ಕಂಡಾಗಲೆಲ್ಲ ಶಾಮಣ್ಣನವರ ಸಂಸಾರದ ವಿಚಾರ ಆಗೊಂದು ಈಗೊಂದು ಪ್ರಶ್ನೆ ಹಾಕಿ ತಿಳಿದುಕೊಂಡಳು. ಸುಬ್ಬರಾಮು ಬಿ.ಎ., ಬಿ.ಟಿ. ಮಾಡಿಕೊಂಡು ಮದುವೆಯಾದಮೇಲೆ ಅವನಿಗೆ ಬೆಂಗಳೂರಿನಲ್ಲಿ

ಹೈಸ್ಕೂಲು ಉಪಾಧ್ಯಾಯನ ಉದ್ಯೋಗ ದೊರಕಿತ್ತು. ಅವನ ಹೆಂಡತಿ ಕಮಲಾಕ್ಷಿಯ ತಾಯಿ ತೀರಿಹೋಗಿದ್ದರಿಂದ, ಅವಳ ಬಾಣಂತಿತನ ಬೆಂಗಳೂರಿನಲ್ಲಿಯೇ ನಡೆಯಬೇಕಾಗಿತ್ತು. ಮೈಸೂರಿನಲ್ಲಿ ನರಸಮ್ಮನವರು ವಾತರೋಗದಿಂದ ಸಂಪೂರ್ಣವಾಗಿ ಸೊಂಟ ಬಾಗಿ ಹಾಸಿಗೆಹಿಡಿದು ನಿತ್ಯರೋಗಿಯಾಗಿದ್ದರು. ಗೌರಿ ಯತ್ನವಿಲ್ಲದೆ ತಾಯಿಯನ್ನು ಬಿಟ್ಟು, ಎರಡು ಮೂರು ತಿಂಗಳವುಟ್ಟಿಗೆ ತಮ್ಮನ ಹೆಂಡತಿಯ ಬಾಣಂತಿತನಕ್ಕಾಗಿ ಬೆಂಗಳೂರಿಗೆ ಬಂದಿದ್ದಳು.

" ಗೌರಿ, ನಮ್ಮಿಬ್ಬರ ಗತಿಯೂ ಒಂದೇ ಆದರೂ ನಾನು ಹೆಚ್ಚು ಪಾಪಿಷ್ಠೆ ಎಂದು ಕಾಣುತ್ತೆ. ನಿಮ್ಮ ಮನೆಗೆ ನೀನು ನಂದಾದೀಪವಾಗಿದ್ದೀಯೆ, ಗೌರಿ. ನಿನ್ನ ಬದುಕು ಪವಿತ್ರವಾದ್ದು ; ಸೇವೆಯಲ್ಲಿ ದೇಹ ಸವೆಸುತ್ತಿದ್ದೀಯೆ."

" ನೀನು ಸೇವೆ ಮಾಡುತ್ತಿಲ್ಲವೆ, ಅಮ್ಮಾ. ನಾನು ಒಬ್ಬಿಬ್ಬರ ಸೇವೆ ಮಾಡುತ್ತೇನೆ ; ಅವರೂ ನಮ್ಮವರು. ನೀನು ಅವರು ಇವರು ಎನ್ನದೆ ನೂರಾರು ಜನರ ಸೇವೆ ಮಾಡುತ್ತೀಯಲ್ಲೇ, ತಾಯಿ. ಪ್ರತಿ ಮಗುವಿನ ತಾಯಿಯೂ ಸೀತಾದೇವಿಯ ಕೈಗುಣದಿಂದ ನಮ್ಮ ಮಗು ಉಳಿದಿದೆ ಎಂದು ಹೊಗಳುತ್ತಾ ಇದಾಳಲ್ಲೆ ? ನಮ್ಮ ಕಮಲಾಕ್ಷಿಯಂತೂ, ನೀನು ಯಾರೆಂದು ತಿಳಿದಮೇಲೆ, ಹಿಗ್ಗುತ್ತಿದಾಳೆ. ಒಂದು ದಿನ ಮನೆಗೆ ಕರೆದುಕೊಂಡು ಹೋಗಬೇಕು ಅಂತ ಮಾಡಿಕೊಂಡಿದಾಳೆ...."

" ನಿಜವಾಗಿ ಹೇಳುತ್ತೇನೆ, ಗೌರಿ. ನರ್ಸಾದ ಮೇಲೆ ನನಗೂ ಬದುಕಿನಲ್ಲಿ ಒಂದು ನೆಲೆ ಸಿಕ್ಕಿದಹಾಗಾಯಿತು. ಇಲ್ಲದಿದ್ದರೆ ಏನಾಗುತ್ತಿದ್ದೆನೋ.... ಆದರೂ, ನನಗೆ ಪೂರ್ತಿ ತೃಪ್ತಿಯಿಲ್ಲ. ಎಷ್ಟೇ ಸೇವೆಯೆಂದುಕೊಂಡರೂ, ಹೊಟ್ಟೆಯಪಾಡಿಗಾಗಿ ಮಾಡುವ ಕೆಲಸ...."

ಗೌರಿ ನಕ್ಕಳು. " ನಾನೂ ಹೊಟ್ಟೆಯ ಪಾಡಿಗಾಗಿ ತಾನೇ ನಮ್ಮ ತಂದೆಯ ಮನೆಯಲ್ಲಿ, ತಮ್ಮನ ಮನೆಯಲ್ಲಿ ಕೆಲಸಮಾಡುವುದು ? "

* * * *

" ನೀನು ಹೋಗುವುದರೊಳಗಾಗಿ ನಮ್ಮ ಮನೆಗೆ ಒಂದು ದಿನ ಬಾ, ಗೌರಿ."

" ನಿಮ್ಮ ಅಣ್ಣ ಅತ್ತಿಗೆ ಎಲ್ಲ ಕ್ಷೇಮ ತಾನೆ ? "

" ಅವರ ಮುಖ ನೋಡಿ ಎಷ್ಟೋ ವರ್ಷವಾಯಿತು."

"ಓ, ನನಗೆ ಗೊತ್ತಿರಲಿಲ್ಲ. ಹಾಗಾದರೆ...."

"ಬೇರೆ ಮನೆ ಮಾಡಿಕೊಂಡಿದ್ದೇನೆ, ವಿಶ್ವೇಶ್ವರಪುರದಲ್ಲಿ. ಸಜ್ಜನ ರಾಯರ ದೇವಸ್ಥಾನದಿಂದ ನೇರ ಎದುರು ಪೂರ್ವಕ್ಕೆ ಬಂದರೆ...." ಎಂದು ಮನೆಯ ವಿಳಾಸ ತಿಳಿಸಿದಳು.

"ನೋಡೋಣ. ಹೇಗಿದ್ದರೂ ನೀನೇ ನಮ್ಮ ಸುಬ್ಬರಾಮು ಮನೆಗೆ ಬರುತ್ತೀಯಲ್ಲ. ಹೇಗಾದರೇನು."

"ಅದೂ ಸರಿಯೆ. ನಮ್ಮ ಮನೆಗೆ ಬಂದರೆ ನೀನು ನನ್ನ ಕೈಲಿ ಒಂದು ಲೋಟ ಕಾಫಿ ಕುಡಿಯುವ ಹಾಗೂ ಇಲ್ಲ...."

"ಹಾಗೇನೂ ಭಾವಿಸಬೇಡ, ಸೀತೆ. ವಿಶ್ವಾಸ ಕಾಫಿಯಲ್ಲಿ ಕೂತಿಲ್ಲ."

* * * *

ಕಮಲಾಕ್ಷಿಯ ಆಸ್ಪತ್ರೆಯ ದಿನಗಳು ಸುಖವಾಗಿ ಕಳೆದುವು. ಅವಳ ಬಲಾತ್ಕಾರಕ್ಕೆ ಒಳಗಾಗಿ ಸೀತೆ ಅವಳ ಮನೆಗೆ ಹೋಗಿ, ಗೌರಿಯ ಕೈಯ ಔತಣದೂಟವನ್ನು ಭುಂಜಿಸಿ ಬರಲೇ ಬೇಕಾಯಿತು. "ಇನ್ನು ನಮ್ಮ ಮನೆಗೆ ನೀನು ಬರುವುದು ಬಾಕಿ ಇದೆ, ಗೌರಕ್ಕ" ಎಂದು ಸೀತೆ ನೆನಪು ಕೊಟ್ಟಳು. "ಆಗಲಿ, ಬರುತ್ತೇನೆ" ಎಂದು ಗೌರಿ ಒಪ್ಪಿಕೊಂಡು, ಒಂದು ದಿನ ಗೌರಿ ಸೀತೆಯ ಮನೆಯನ್ನು ಹುಡುಕಿಕೊಂಡು ಸುಬ್ಬರಾಮುವಿನ ಜೊತೆ ಹೊರಟಳು. ಬೀದಿ ಸಿಕ್ಕುವುದು ಕಷ್ಟವಾಗಲಿಲ್ಲ. ಆದರೆ ಮನೆ ಮಾತ್ರ ಬೇಗ ಸಿಕ್ಕಲಿಲ್ಲ. "ಸೀತಮ್ಮನವರ ಮನೆ ಯಾವುದು ?" ಎಂದು ಕೇಳಿದರೆ, ಯಾರಿಂದಲೂ ಸರಿಯಾದ ಉತ್ತರ ದೊರೆಯಲಿಲ್ಲ. ಗೊತ್ತಿದ್ದ ಒಬ್ಬರು, "ಯಾರು, ಆ ಭೀಮರಾಯರ ಮನೆಯಲ್ಲಿದ್ದಾರಲ್ಲ, ಭೀಮರಾಯರ....ಹೆಂಡ ತಿಯೋ ಪಂಡತಿಯೋ" ಎಂದು ತಮ್ಮ ಅಭಿಪ್ರಾಯವನ್ನು ಗಂಭೀರ ಭಾಷೆ ಯಲ್ಲಿ ನುಡಿದರು. ಸೀತೆ ಗೌರಿಯೊಂದಿಗೆ ಮಾತನಾಡಿದಾಗ ಯಾವಾಗಲೂ ಭೀಮರಾಯರ ಹೆಸರನ್ನು ಎತ್ತಿರಲಿಲ್ಲ. ಸುಬ್ಬರಾಮು, "ಇಲ್ಲ, ಅವರಿಗೆ ಗಂಡ ಇಲ್ಲ; ಒಬ್ಬರೇ ಇದಾರೆ" ಎಂದು ವಿವರಣೆಯಿತ್ತ. "ಅವರೇ ಅವರೇ, ನಾವು ಹೇಳಿದ್ದೂ ಅವರೇ. ಆಸ್ಪತ್ರೆಯಲ್ಲಿ ನರ್ಸಾಗಿದ್ದಾರಲ್ಲ, ಅವರು ತಾನೆ ?" ಆ ಬೇರೆಯ ಮನೆಯ ಗಂಡಸರು ದೊರೆತ ವಿವರಣೆಯನ್ನು ಪುಷ್ಟೀಕರಿಸಿದರು. "ಹೌದು, ಹೌದು, ಅವರೇ" ಎಂದು ಸುಬ್ಬರಾಮು ಖಚಿತಪಡಿಸಲು, ಆ

ಗಂಡಸರು ಮನೆ ತೋರಿಸಿದರು.

" ಈಗ ಕೇಳಿದ್ದನ್ನು ನೋಡಿದರೆ, ಭೀಮರಾಯರು ಅನ್ನುವವರು ಸೀತೆಯನ್ನ ಇಟ್ಟುಕೊಂಡಿರುವ ಹಾಗೆ ಕಾಣುತ್ತೆ. ಸೀತೆಯನ್ನು ನೀನು ನೋಡಿಕೊಂಡು ಬರಲೇಬೇಕೆ ? " ಎಂದು ಸುಬ್ಬರಾಮು ಪ್ರಶ್ನೆ ಹಾಕಿದ. ಗೌರಿ ಕ್ಷಣಕಾಲ ಮೌನವಾಗಿದ್ದಳು. " ಅವಳನ್ನ ಭೀಮರಾಯರಾದರೂ ಇಟ್ಟುಕೊಂಡಿರಲಿ ಶಾಮರಾಯರಾದರೂ ಇಟ್ಟುಕೊಂಡಿರಲಿ, ಅದೆಲ್ಲಾ ಕಟ್ಟಿಕೊಂಡು ನಮಗೇನು ? ಅವಳೂ ನಾನೂ ಒಂದೇ ಮನೆ ಸೇರಿದವರು. ಅವಳ ಕತೆ ಹಾಗೆ ; ನನ್ನ ಕತೆ ಹೀಗೆ. ಅವಳು ಪಟ್ಟ ಪಾಡು ನನಗೂ ಸ್ವಲ್ಪ ತಿಳಿದಿದೆ. ಅವಳಿದ್ದ ಸ್ಥಿತಿಯಲ್ಲಿ ನಾನೂ ಹಾಗೇ ಇರಬೇಕಾಗಿತ್ತೋ ಏನೋ, ಯಾರು ಬಲ್ಲರು ? ಅವಳು ನನಗೇನೂ ಬಾಯಿಬಿಟ್ಟು ಹೇಳಿಲ್ಲ. ಕಷ್ಟಕಾಲದಲ್ಲಿ ಆ ಭೀಮರಾಯರು ಇವಳನ್ನ ಕಾಪಾಡಿದ್ದಾರೆ ಅಂತ ಕಾಣುತ್ತೆ. ಇವಳು ಅವರಲ್ಲಿ ನಿಷ್ಠೆಯಿಂದ ಇದ್ದರೆ ತಪ್ಪೇನು ? ಸೂಳೆಯಾಗಿ ಬಾಳೋದಕ್ಕಿಂತ ಹೀಗಿರುವುದು ಎಷ್ಟೋ ಮೇಲು " ಎಂದಳು ಗೌರಿ. ಅಕ್ಕನ ಮಾತು ಸತ್ಯ ಎನ್ನಿಸಿತು ಸುಬ್ಬರಾಮುವಿಗೆ.

ಇವರಿಬ್ಬರೂ ಹೋದಾಗ, ಭೀಮರಾಯರು ಮನೆಯಲ್ಲಿ ಇರಲಿಲ್ಲ. ಸೀತೆ ಸುಬ್ಬರಾಮುವಿಗೆ ಹೋಟೆಲಿಂದ ತಂದಿದ್ದ ತಿಂಡಿ ಕೊಟ್ಟು, ಕಾಫಿ ಮಾಡಿ ಕೊಟ್ಟಳು ; ಗೌರಿಗೆ ಬಗೆಬಗೆಯ ಹಣ್ಣುಗಳನ್ನೂ ಹಾಲನ್ನೂ ಕೊಟ್ಟಳು. " ಏನೂ ತಿಳಿದುಕೊಳ್ಳಬೇಡ, ಸೀತೆ. ಉಟ್ಟ ವೈಲಿಗೆಯಲ್ಲಿ ನಾನು ಏನೂ ತಿನ್ನುವುದಿಲ್ಲ. ನಮ್ಮಂಥವರು ಹಾಲು ಕುಡಿಯಬಾರದು. ಹಣ್ಣು ಎರಡನ್ನು ತೆಗೆದುಕೊಂಡು, ನೀನು ಪ್ರೀತಿಯಿಂದ ಕೊಟ್ಟದ್ದು ಅಂತ ರಾತ್ರಿ ಫಲಾಹಾರ ಮಾಡುತ್ತೇನೆ " ಎಂದು ಎರಡು ಬಾಳೆಯ ಹಣ್ಣನ್ನೂ ಒಂದು ಕಿತ್ತಳೆ ಹಣ್ಣನ್ನೂ ಬೇರೆಯಾಗಿ ತೆಗೆದಿಟ್ಟುಕೊಂಡಳು.

ಗೌರಿ, ಸುಬ್ಬರಾಮು ಇಬ್ಬರೂ ಸುಸಜ್ಜಿತವಾದ ಅಲಂಕಾರ ರಂಜಿತವಾದ ಶ್ರೀಮಂತ ಸದನದ ಸುತ್ತ ಆಗೊಮ್ಮೆ ಈಗೊಮ್ಮೆ ನೋಡುತ್ತಿದ್ದಾಗ, ಸೀತೆಗೆ ತಾನು ಏನೋ ಅಪರಾಧ ಮಾಡಿದಂತೆ, ಏನೋ ಘೋರ ಪಾಪ ಮಾಡಿದಂತೆ ಬೋಧೆಯಾಗತೊಡಗಿತು. ಗೌರಿಯ ಮನಸ್ಸಿನಲ್ಲಿ ಇಲ್ಲದ್ದು ಸೀತೆಯ ಮನಸ್ಸಿಗೆ ಹೊಕ್ಕಿತು.

"ಸಂಬಳಕ್ಕೆ ದುಡಿಯುವ ನರ್ಸಿಗೆ ಈ ಅಟ್ಟಹಾಸ ಎಲ್ಲಿಂದ ಬಂತು ಅಂತ ನಿನಗೆ ಆಶ್ಚರ್ಯವಾಗಿರಬೇಕು, ಅಲ್ಲವೆ ಗೌರಿ? ಇವೊತ್ತು ನೀನು ನನ್ನ ಮನೆಗೆ ಬಂದು ನನಗೆ ತುಂಬ ಉಪಕಾರ ಮಾಡಿದ್ದೀಯೆ, ಗೌರಿ. ತ್ಯಾಗ ಜೀವನ ನಿನ್ನದಾಯಿತು; ಭೋಗಜೀವನ ನನ್ನ ಪಾಲಿಗೆ ಬಂತು. ನೀನು ವರ್ಷಗಳ ಹಿಂದೆ ಹೇಳಿದ ಮಾತು ನನಗೆ ಇಂದು ನೆನಪಾಗುತ್ತಿದೆ. ಬೇಕಾದಷ್ಟು ಅಪಥ್ಯಮಾಡಿಯಾಯಿತು; ಇನ್ನಾದರೂ ಪಥ್ಯವನ್ನು ಆಚರಿಸಬೇಕು. ಭೋಗದಿಂದ ದೊರಕುವ ಸುಖ ಕ್ಷಣಿಕ, ಗೌರಿ; ತ್ಯಾಗದಿಂದ ದೊರಕುವ ಆನಂದ ನಿತ್ಯವಾದ್ದು. ನಾನೂ ನಿನ್ನ ಹಾಗೆ ಆಗಿಬಿಡುತ್ತೇನೆ, ಗೌರಿ...."

"ಅಂದರೆ...."

"ನನಗಾಗಿ ಜೀವಿಸುವುದನ್ನು ನಿಲ್ಲಿಸಿ, ಇತರರಿಗಾಗಿ ಬದುಕುವುದನ್ನು ಕಲಿಯತೊಡಗುತ್ತೇನೆ" ಎಂದು, ಸೀತೆ ಕಂಬನಿದುಂಬಿದಳು. ಸೀತೆಯ ಮನಸ್ಸಿನ ಭಾವ ಗೌರಿಗೆ ಅರಿವಾಗದೆ ಹೋಗಲಿಲ್ಲ. ಸೀತೆಯೊಂದಿಗೆ ಅವಳೂ ಕಣ್ಣೊರಸಿಕೊಂಡಳು.

೫

ಎರಡನೆಯ ಮಹಾಯುದ್ಧ ಪ್ರಾರಂಭವಾಗಿ ಹುಣಿಸೆಬೀಜದಿಂದ ಹಿಡಿದು ಹೊನ್ನಿನವರೆಗೆ ಎಲ್ಲ ಪದಾರ್ಥಗಳ ಬೆಲೆಯೂ ಏರುತ್ತಿತ್ತು. ಭೀಮರಾಯರು ಸೀತೆಗೆಂದು ಕೊಂಡಿದ್ದ 'ರೆವಿನ್ಯೂ' ಭೂಮಿಯನ್ನೆಲ್ಲ ಮನೆಯ ನಿವೇಶನಗಳನ್ನಾಗಿ ಮಾಡಿ, ಒಟ್ಟು ಹತ್ತು ಸಾವಿರ ರೂಪಾಯಿಗಳನ್ನು ಸೀತೆಯ ಹೆಸರಿನಲ್ಲಿ ಬ್ಯಾಂಕಿನಲ್ಲಿಟ್ಟು, 'ಫಿಕ್ಸೆಡ್ ಡಿಪಾಸಿಟ್' ರಸೀತಿಗಳನ್ನು ಸೀತೆಯ ವಶಕ್ಕೆ ಕೊಟ್ಟರು; ಅವಳು ವಾಸವಾಗಿದ್ದ ಮನೆಯನ್ನೂ ಅವಳ ಹೆಸರಿಗೇ ಮಾಡಿ, ರಿಜಿಸ್ಟರಾದ ಪತ್ರವನ್ನೂ ಅವಳ ವಶಕ್ಕೆ ಕೊಟ್ಟುಬಿಟ್ಟರು. ಸೀತೆ ಮನಸ್ಸಿನಲ್ಲಿಯೇ ಭೀಮರಾಯರ ಪಾದಗಳನ್ನು ಮುಟ್ಟಿ ಕಣ್ಣಿಗೊತ್ತಿಕೊಂಡಳು. ತಾನು ಮನಸ್ಸಿನಲ್ಲಿ ಮಾಡಿಕೊಂಡಿದ್ದ ನಿರ್ಧಾರವನ್ನು ಕೆಲವು ಕಾಲ ಮುಂದಕ್ಕೆ ಹಾಕಿದಳು.

ಒಂದು ದಿನ, ಸೀತೆ ಭೀಮರಾಯರನ್ನು ಕಟುವಾಗಿ ಆಕ್ಷೇಪಿಸಿ ನುಡಿದಳು: "ಅಲ್ಲ, ಇದೇನು, ನನಗೆ ತಿಳಿಸದೆ ಈ ಕೆಲಸ ಮಾಡಿಬಿಟ್ಟಿದ್ದೀರಿ?"

ಎಂದು ಕೇಳಿದಳು. "ಏನು ?" ಎಂದು ಕೇಳಿದರು ಭೀಮರಾಯರು. "ನಮ್ಮ ಅಣ್ಣನ ಮೇಲೆ ದಾವಾ ಹಾಕಿರುತ್ತೀರಂತೆ, ಕೋರ್ಟಿನಲ್ಲಿ ? ನಿನ್ನೆ ಸಂಜೆ ಬಂದು ನಿಜವಾಗಿ ನನ್ನ ಕಾಲ ಬಳಿ ಹೊರಳಾಡಿ ಬೇಡಿಕೊಂಡ. ಬಡ್ಡಿಯನ್ನೆಲ್ಲಾ ಬಿಟ್ಟು ಹೊಸ ಪತ್ರ ಮಾಡಿಕೊಟ್ಟರೆ ಕಂತುಕಂತಾಗಿ ಸಾಲ ತೀರಿಸುತ್ತಾನಂತೆ. ಈಚೆಗೆ, ಮೂರು ಮಕ್ಕಳಾಗಿವೆಯಂತೆ. ಮಕ್ಕಳೊಂದಿಗ, ಬದುಕಿಕೊಳ್ಳುತ್ತಾನೆ" ಎಂದು ಮರುಕ ಹುಟ್ಟುವ ರೀತಿ ಮಾತಾಡಿದಳು. "ನಿನ್ನನ್ನ ಅವನ ಹೆಂಡತಿ ಮನೆ ಬಿಟ್ಟು ಓಡಿಸಿದಾಗ ಅವನ ಬುದ್ಧಿ ಎಲ್ಲಿಗೆ ಹೋಗಿತ್ತಂತೆ? ನಿರಪರಾಧಿ ಹೆಣ್ಣನ್ನ ಬೀದಿಪಾಲು ಮಾಡಿದ್ದಕ್ಕೆ ತಕ್ಕ ಶಿಕ್ಷೆಮಾಡಿದ್ದೇನೆ. ಅನುಭವಿಸಲಿ" ಎಂದು ರೇಗಿ ನುಡಿದರು ಭೀಮರಾಯರು. "ನನಗೋಸ್ಕರ ತಾನೆ, ನೀವು ಹಾಗೆ ಮಾಡಿದ್ದು ?" ಎಂದು ಸೀತೆ ಕೇಳಿದಳು. "ಹೌದು" ಎಂದು ಭೀಮರಾಯರು ಒಪ್ಪಿಕೊಂಡರು. "ಹಾಗಾದರೆ, ನನಗೋಸ್ಕರ ನಮ್ಮ ಅಣ್ಣನ ಪ್ರಾರ್ಥನೆ ನಡಸಿಕೊಡಿ, ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ" ಎಂದು ದೀನಳಾಗಿ ಬೇಡಿದಳು ಸೀತೆ. "ಹ್ಞೂ, ಬದುಕಿಕೊಳ್ಳಲಿ, ಕತ್ತೆ ರ್ಯಾಸ್‌ಕಲ್" ಎಂದು, ಸಾಲಪತ್ರವನ್ನು ಲಾಯರಿಂದ ಹಿಂತಿರುಗಿ ತಂದು ಸೀತೆಯ ವಶಕ್ಕೆ ಒಪ್ಪಿಸಿದರು ; "ನೀನೇ ಹಣ ವಸೂಲು ಮಾಡಿಕೋ, ಇಲ್ಲ ಅದನ್ನ ಹರಿದು ಬಿಡು" ಎಂದರು. 'ಇಂಥವರ ಮನಸ್ಸನ್ನು ಹೇಗೆ ನೋಯಿಸಲಿ' ಎಂದು ಕುದ್ದುಕೊಳ್ಳತೊಡಗಿದಳು ಸೀತೆ.

ಸುಬ್ಬಸ್ವಾಮಿಯ ವಶಕ್ಕೆ ಸೀತೆ ಆ ಪತ್ರವನ್ನು ಕೊಟ್ಟುಬಿಟ್ಟಳು. ಆನಂದದ ಭರದಲ್ಲಿ ಅವನು ಮೂಕನಾಗಿಹೋದ ; ಕೃತಜ್ಞತಾಭಾವದಲ್ಲಿ ಮುಳುಗಿಹೋದ. "ಎಲ್ಲವನ್ನೂ ಮರೆತು ನನ್ನನ್ನು ಕ್ಷಮಿಸು, ಸೀತೆ" ಎಂದು ಕ್ಷಮೆ ಬೇಡಿ, "ನಮ್ಮ ಮನೆಗೆ ಒಂದು ದಿನದ ಮಟ್ಟಿಗಾದರೂ ಬಾ, ಸೀತೆ. ಅವಳನ್ನ ಕಟ್ಟಿಕೊಂಡೇನು" ಎಂದು ಕರೆದ. "ಆಗಲಪ್ಪ, ಒರುತ್ತೇನೆ" ಎಂದು ಒಪ್ಪಿಕೊಂಡು, ಒಂದು ಸಂಜೆ ಅವನ ಮನೆಗೆ ಸೀತೆ ಹೋಗಿಬಂದಳು.

* * * *

ಈಗ ಕೃಷ್ಣಮೂರ್ತಿ ತನ್ನ ಐದು ವರ್ಷದ ಮೊದಲ ಹೆಂಡತಿಯ ಮಗ ಸುಂದರಕೃಷ್ಣನನ್ನು ಮೈಸೂರಿನಿಂದ ಕರಸಿಕೊಂಡು, ಮನೆಯಲ್ಲಿಯೇ ಇರಿಸಿಕೊಂಡು, ಶಾಲೆಗೆ ಸೇರಿಸಬೇಕೆಂದು ಯೋಚಿಸುತ್ತಿದ್ದ.

ಒಂದು ದಿನ ಸೀತೆ, ಭೀಮರಾಯರನ್ನು ಅನುನಯಪೂರ್ವಕವಾಗಿ ಕೇಳಿದಳು :

" ನಿಮ್ಮ ಆಸ್ತಿಯನ್ನೆಲ್ಲಾ ಮಗಳ ಹೆಸರಿಗೆ ಮಾಡಿದ್ದೀರಿ ಅಂತ ಕೃಷ್ಣ ಮೂರ್ತಿ ಹೇಳಿದ."

" ಹೌದು."

" ನನ್ನ ಆಸ್ತಿಯನ್ನು ಏನು ಮಾಡಲಿ ? "

" ಅದೂ ಯೋಚನೆಮಾಡಬೇಕಾದ್ದೇ " ಎಂದು ಭೀಮರಾಯರು ತಲೆ ತೂಗಿದರು.

" ಕೃಷ್ಣಮೂರ್ತಿಯ ಮಗ ಸುಂದರೂಗೆ ಚೌಲ ಆಗಬೇಕಲ್ಲವೆ ? "

" ಹೌದು, ಆಗಬೇಕು."

" ಆಗ, ಆ ಹುಡುಗನನ್ನು ನಾನು ದತ್ತು ತೆಗೆದುಕೊಳ್ಳಬೇಕೆಂದು ಮಾಡಿದ್ದೇನೆ. ಕೃಷ್ಣಮೂರ್ತಿಯ ಒಬ್ಬ ಮಗ ಆಸ್ತಿವಂತನಾಗಿ, ಇನ್ನೊಬ್ಬ ಭಿಕಾರಿಯಾಗುವುದೆ ? "

" ಕೃಷ್ಣಮೂರ್ತಿ ಒಪ್ಪಿದ್ದಾನೆಯೋ ? "

" ಒಪ್ಪಿಸಿಕೊಂಡಿದ್ದೇನೆ. ಸುಂದರ ಹೇಗೂ ನನ್ನ ತಂಗಿಯ ಮಗ. ನನಗೂ ಮಗ ತಾನೆ ? "

" ನಿನ್ನ ಯೋಚನೆ ಒಳ್ಳೆಯದೆ. ಅಗತ್ಯವಾಗಿ ಆಗಬಹುದು " ಎಂದು ಭೀಮರಾಯರು ಸೀತೆಯ ಕೋರಿಕೆಗೆ ತಮ್ಮ ಅಂಗೀಕಾರದ ಮುದ್ರೆಯೊತ್ತಿದರು.

೬

ಸುಂದರಕೃಷ್ಣನಿಗೆ ಸೀತೆ ಈಗಾಗಲೇ ಪರಿಚಿತ ವ್ಯಕ್ತಿಯಾದದ್ದರಿಂದ, ಚೂಡಾಕರ್ಮವಾದಮೇಲೆ ಅವನು ಸೀತೆಯ ಮನೆಗೆ ಹೋಗಲು ಒಲ್ಲೆ ಎನ್ನಲಿಲ್ಲ. ಚೂಡಾಕರ್ಮ ಭೀಮರಾಯರ ಸ್ವಗೃಹದಲ್ಲಿ ವಿಜೃಂಭಣೆಯಿಂದ ನೆರವೇರಿತು ; ಅದರೊಂದಿಗೆ ಶಾಸ್ತ್ರೋಕ್ತವಾಗಿ ದತ್ತಸ್ವೀಕಾರವೂ ನಡೆಯಿತು.

ಸೀತೆಯ ಭಾವನೆಯಲ್ಲಿ ಈಗ ಮನೆ ತುಂಬಿದಂತಿತ್ತು ; ಸುಂದರಕೃಷ್ಣ ತನ್ನ ಚಿಕ್ಕಮ್ಮನ ಮಗಳು ಶಾರದೆಯ ಹಾಗೂ ಕೃಷ್ಣಮೂರ್ತಿಯ ಮಗ ಎಂಬ ಕಾರಣದಿಂದ ಅವಳಿಗೆ ತುಂಬ ಹಿಗ್ಗು. ಈಗಲಂತೂ ತಾನೇ ಅವನ ತಾಯಿ ಎಂಬ ಹೆಚ್ಚಿನ ಹಿಗ್ಗು.

"ಈಗ ನೀವು ಬರುತ್ತಿರುವುದು ಸುಂದರಕೃಷ್ಣನ ಮನೆಗೆ, ಸೀತೆಯ ಮನೆಗಲ್ಲ" ಎಂದು ಅವಳು ಪದೇ ಪದೇ ಭೀಮರಾಯರಿಗೂ ಕೃಷ್ಣಮೂರ್ತಿಗೂ ಹೇಳುತ್ತ ಬಂದಳು. ಮನೆಯಲ್ಲಿನ ಹೆಚ್ಚಿನ ಅಲಂಕಾರ ಸಾಮುಗ್ರಿಗಳನ್ನೆಲ್ಲ ತೆಗೆಯಿಸಿ, ವಾತಾವರಣವನ್ನು ಸರಳಸುಂದರವಾಗಿ ಮಾಡಿದಳು; ತನ್ನ 'ಮಗ' ಭೋಗಜೀವನದ ವಾತಾವರಣದಲ್ಲಿ ಬೆಳೆಯಕೂಡದೆಂದು ಸಂಕಲ್ಪಿಸಿದಳು.

ಸೀತೆಯ ಜೀವನದಲ್ಲಿ ಯಾವುದೋ ಮಹತ್ವದ ಮಾರ್ಪಾಟಿಗೆ ಇದು ಪೂರ್ವಸೂಚನೆಯೆಂಬುದು ಕೃಷ್ಣಮೂರ್ತಿಗಾಗಲಿ ಭೀಮರಾಯರಿಗಾಗಲಿ ಹೊಳೆಯಲಿಲ್ಲ. "ಇನ್ನು ನೀವು ಸೀತೆಯನ್ನು ಮರೆಯಬೇಕು" ಎಂದು ಇಬ್ಬರಿಗೂ ಬೇರೆ ಬೇರೆಯಾಗಿ ಸಂದರ್ಭ ಸಿಕ್ಕಿದಾಗಲೆಲ್ಲ ಹೇಳುತ್ತ ಬಂದಳು. ಎಲ್ಲೋ ಸೀತೆ ಸತ್ತುಹೋಗುತ್ತಾಳೆ, ತಮ್ಮ ಗಮನಕ್ಕೆ ಬಾರದ ಯಾವುದೋ ಒಳರೋಗ ಅವಳನ್ನು ಬಾಧಿಸುತ್ತಿದೆ, ತನ್ನ ಸಾವಿನ ಮುನ್‌ಸೂಚನೆಯನ್ನು ತಾನು ಅರಿತಿದ್ದಾಳೆ ಎಂದು ಭೀಮರಾಯರು ಆತಂಕಗೊಂಡರು. ವಾಸ್ತವವಾಗಿ, ಸೀತೆಯೂ ಸ್ವಲ್ಪ ಕೃಶಳಾಗಿದ್ದಳು. "ಏನಾದರೂ ಔಷಧಿ ತೆಗೆದುಕೊಳ್ಳಬೇಕು, ಸೀತಾ. ಹೀಗೇ ಬಿಡಬಾರದು" ಎಂದು ಅವರು ಸಲಹೆಯನ್ನೂ ನೀಡಿದರು. ಆದರೆ ತನಗೆ ಏನೂ ಆಗಿಲ್ಲವೆಂದು ಸೀತೆಗೆ ಚೆನ್ನಾಗಿ ಗೊತ್ತಿತ್ತು.

ಒಂದು ದಿನ ಕೃಷ್ಣಮೂರ್ತಿ ಸೀತೆಯ ಮನೆಯಲ್ಲಿ ಆಗಿದ್ದ ಇನ್ನೂ ಹೆಚ್ಚಿನ ಮಾರ್ಪಾಟನ್ನು ಕಂಡು ಬೆರಗಾಗಿಹೋದ. ಗೋಡೆಯನ್ನು ಅಲಂಕರಿಸಿದ್ದ, ಕೆಲಸಕ್ಕೆ ಬಾರದ ಸುಂದರಿಯರ ಚಿತ್ರಗಳೆಲ್ಲಾ ಮಾಯವಾಗಿದ್ದುವು; ದೇವರ ಚಿತ್ರಗಳೆಲ್ಲಾ ಹಾಗೆಯೇ ಉಳಿದಿದ್ದುವು. ಜೊತೆಗೆ, ಮಹಾತ್ಮಗಾಂಧಿ, ನೆಹರೂ ಮೊದಲಾದ ದೇಶನಾಯಕರ ಚಿತ್ರಗಳೂ ಕಂಗೊಳಿಸುತ್ತಿದ್ದುವು. ಹೊಚ್ಚ ಹೊಸದಾದ ಭೀಮರಾಯರ ಭಾವಚಿತ್ರವೊಂದು ಪ್ರಮುಖ ಸ್ಥಳದಲ್ಲಿ ಮೆರೆಯುತ್ತಿತ್ತು.

ಸುಂದರಕೃಷ್ಣ ಚಾಪೆಯ ಮೇಲೆ ಸ್ಲೇಟು ಬಳಪ ಹಿಡಿದು ಬರೆಯುತ್ತಿದ್ದ. ಕೆಲವು ಚಿತ್ರದ ಪುಸ್ತಕಗಳು ತೆರೆದು ಬಿದ್ದಿದ್ದುವು.

ಕೃಷ್ಣಮೂರ್ತಿ ಒಳಕ್ಕೆ ಬಂದ ಕೂಡಲೆ "ಅಣ್ಣಾ" ಎಂದು ಓಡಿಹೋಗಿ ಅವನ ಕಾಲುಗಳನ್ನು ತಬ್ಬಿ ನಿಂತ; ಕೃಷ್ಣಮೂರ್ತಿ ಅವನನ್ನು ಎತ್ತಿಕೊಂಡು ನಿಂತ.

" ಅಮ್ಮಾ ಎಲ್ಲೋ ? "

" ಒಳಗಿದ್ದಾಳೆ, ಅಡಿಗೆಮನೇಲಿ, ದೇವರ ಪಟಕ್ಕೆ ಪೂಜೆ ಮಾಡ್ತಾ."

" ಓಹೋ, ಅಮ್ಮ ಪೂಜೆ ಬೇರೆ ಮಾಡ್ತಾಳೋ! ಮಂತ್ರ ಗಿಂತ್ರ ಹೇಳ್ತಾಳೇನೋ."

" ಇಲ್ಲ. ಕಣ್ಮುಚ್ಚಿಕೊಂಡು ಸುಮ್ಮನೆ ಕೂತಿರುತಾಳೆ. ದೇವರ ಮುಂದೆ ಹಾಲು ಇಡುತಾಳೆ. ಅದನ್ನ ನನಗೂ ಕೊಟ್ಟು ಅವಳೂ ಕುಡೀತಾಳೆ."

" ಹಾಗಾದರೆ ಕಾಫಿ ಕುಡಿಯೋದಿಲ್ಲವೇನೋ ? "

" ಕಾಫಿ ಕೆಟ್ಟದಂತೆ. ಅದಕ್ಕೋಸ್ಕರ ಹಾಲೇ ಕೊಡುತಾಳೆ."

ಇವರು ಹೀಗೆ ಮಾತನಾಡುತ್ತಿದ್ದಾಗ, ಸೀತೆ ಒಳಗಿನಿಂದ ಬಂದಳು. ಕೃಷ್ಣಮೂರ್ತಿ ತನ್ನ ಕಣ್ಣನ್ನು ತಾನು ನಂಬಲಾರದೆ ಹೋದ.

" ಇದೇನು ಸೀತೆ, ಮನೆಯಲ್ಲೇಕೆ ಈ ನರ್ಸಿನ ವೇಷ—ಬಿಳಿಯ ಸೀರೆ, ಬಿಳಿಯ ಕುಪ್ಪಸ....ಮತ್ತೆ....ಇದೇನು, ಚಿನ್ನದ ಬಳೆ, ಚಿನ್ನದ ಸರ....ಒಂದೂ ಇಲ್ಲ—ನಿನಗೇನು ಬುದ್ಧಿ ಸರಿಯಾಗಿದೆಯೋ ಇಲ್ಲವೊ ? ಇದೇನು ಸೀತೆ, ಇದು ! ನರ್ಸಿನ ಕೆಲಸಕ್ಕೆ ರಾಜೀನಾಮೆ ಕೊಟ್ಟು ಸನ್ಯಾಸಿನಿ ಆಗಿರುವಹಾಗಿದೆ ಯಲ್ಲಾ !...." ಕೃಷ್ಣಮೂರ್ತಿ ಬಿಟ್ಟ ಬಾಯಿ ಬಿಟ್ಟ ಕಣ್ಣಿನಿಂದ ಸೀತೆಯನ್ನು ದಿಟ್ಟಿಸುತ್ತ ನಿಂತ.

" ನರ್ಸ್ ಕೆಲಸಕ್ಕೆ ರಾಜೀನಾಮೆ ಕೊಟ್ಟಿಲ್ಲ, ಕೃಷ್ಣಮೂರ್ತಿ. ನನ್ನ ಅನ್ನ ನಾನು ದುಡಿಯುವ ಅವಕಾಶ ಕಳೆದುಕೊಳ್ಳಲೆ ? ಇದು ಮನೆಯಲ್ಲಿ ಇರುವಾಗಿನ ವೇಷ. ಇನ್ನುಮೇಲೆ, ಈ ವೇಷಕ್ಕೆ ನೀವು ಗೌರವ ಕೊಟ್ಟು ಅದಕ್ಕೆ ತಕ್ಕಂತೆ ನಡೆದುಕೊಳ್ಳಲು ಅವಕಾಶ ಕೊಡಬೇಕು."

ಕೃಷ್ಣಮೂರ್ತಿ ಮೌನವಾಗಿಯೇ ಇದ್ದ.

" ಅದು ಹಾಗಿರಲಿ, ನಿಮ್ಮ ಮಾವನವರಿಗೆ ಹೇಗಿದೆ ? ಜ್ವರ ನಿಂತಿದೆ ತಾನೆ ? "

" ಸ್ವಲ್ಪ ವಾಸಿ ಅಂತ ಕಾಣುತ್ತೆ. ನಿನ್ನೆ ಸಂಜೆ ಜ್ವರ ಬರಲಿಲ್ಲ."

"ಆಸ್ಪತ್ರೆಯಿಂದ ಬರುವಾಗ ಮನೆಯ ಕಡೆ ಬರುತ್ತೇನೆ. ಈಗ ಹೊತ್ತಾಗಿ ಹೋಯಿತು. ಕುಳಿತುಕೋ, ಒಂದು ಲೋಟ ಕಾಫಿ ಮಾಡಿಕೊಡುತ್ತೇನೆ."

" ಈಗ ಕಾಫಿ ಕಾಸುವುದಿಲ್ಲವಂತೆ ? "

" ಸರಿ ಸರಿ, ಸುಂದರು ಹೇಳಿದನೊ ! ಅವನ ಜೊತೆಗೆ ಬಂದವರಿಗೂ ಪಥ್ಯ ವಿಧಿಸುವುದಕ್ಕೆ ಆಗುತ್ತೆಯೇ " ಎಂದು ಒಳಕ್ಕೆ ಹೋಗಿ, ಕಾಫಿಗೆ ನೀರಿಟ್ಟು, ಮರಳಿ ಹೊರಕ್ಕೆ ಬಂದಳು.

ನಿತ್ಯ ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತಿದ್ದ ಕೃಷ್ಣಮೂರ್ತಿ ಈ ದಿನ ಚಾಪೆಯ ಮೇಲೆ ಕುಳಿತ.

ತುಸು ಹೊತ್ತು ಒಬ್ಬರ ಮುಖವನ್ನು ಒಬ್ಬರು ದೃಷ್ಟಿಸಿ ನೋಡುತ್ತ ಕುಳಿತಿದ್ದರು.

" ಬರಿಯ ಹಣೆಯ ಜೊತೆಗೆ ಈ ಸರಳ ವೇಷ ನಿನಗೆ ಒಪ್ಪುವುದಿಲ್ಲ, ಸೀತೆ."

" ಒಪ್ಪಿದರೆಷ್ಟು, ಬಿಟ್ಟರೆಷ್ಟು ? ನಾನು ನಡಸಬೇಕೆಂದಿರುವ ಸೇವಾ ಜೀವನಕ್ಕೆ ಇದೇ ತಕ್ಕ ಗುರುತು."

" ನನ್ನ ಬಯಕೆ ಒಂದಿತ್ತು, ಸೀತೆ."

" ಏನು ? "

" ಎಂದಾದರೂ ನಿನ್ನ ಹಣೆಯಲ್ಲಿ ಕುಂಕುಮ ಇಟ್ಟದ್ದು ನೋಡಬೇಕು, ಅಂತ."

" ಕುಂಕುಮದ ಬೊಟ್ಟು ಇಲ್ಲ ಅಂತ ಹೇಗೆ ಹೇಳುತ್ತಿ ? ನೀನು ಇಟ್ಟ ಅಳಿಸದ ಕುಂಕುವ ಇಲ್ಲವೆ ? "—ನೋವಿನ ನಗೆ ನಕ್ಕಳು ಸೀತೆ.

ಸುಂದರಕೃಷ್ಣ ' ಅಣ್ಣ 'ನ ತೊಡೆಯನ್ನು ಬಿಟ್ಟು ' ಅಮ್ಮ 'ನ ತೊಡೆಯ ಮೇಲೆ ಏರಿ ಕುಳಿತ.

" ನೋಡಮ್ಮ, ಆಗ ಪದ್ದಮ್ಮನ್ನೆ ಅಮ್ಮಾ ಅನ್ನೂ ಅಂತ ಹೇಳಿಕೊಟ್ಟಿದ್ದ ಅಣ್ಣ. ಆಮೇಲೆ ನಿನ್ನೇ ಅಮ್ಮಾ ಅನ್ನೂ ಅಂದ. ಯಾರಮ್ಮ ನಮ್ಮಮ್ಮ ? " —ಮುಗ್ಧ ಬಾಲಕನ ಈ ಮಾತು ಕೇಳಿ ಇಬ್ಬರಿಗೂ ನಗು ಬಂದಿತು. ಅದರ ಆಳದಾಳದಲ್ಲಿ ನೋವಿನ ಸೆಲೆ ಇಲ್ಲದಿರಲಿಲ್ಲ.

೭

ಭೀಮರಾಯರಿಗೆ ಇದ್ದಕ್ಕಿದ್ದ ಹಾಗೆ ಜ್ವರ ಏರುತ್ತ ಬಂತು. ಸೀತೆಗೆ ಕಳವಳವಾಯಿತು.

ವೈದ್ಯಪರೀಕ್ಷೆಯಿಂದ ಭೀಮರಾಯರ ಜ್ವರ 'ಟೈಫಾಯ್ಡ್' ಎಂದು ಖಚಿತಪಟ್ಟಿತು. ಅವರನ್ನು ವಿಕ್ಟೋರಿಯಾ ಆಸ್ಪತ್ರೆಗೆ ಸೇರಿಸಬೇಕೆಂದು ವೈದ್ಯರು ಸಲಹೆ ಮಾಡಿದರು. ಏನಾದರೂ ಅದಕ್ಕೆ ಅವರು ಒಪ್ಪಲಿಲ್ಲ. ಸ್ವಗೃಹದಲ್ಲಿಯೇ ಸಾಯುವುದಾಗಿ ಅವರು ಹಟ ಹಿಡಿದರು. ಕಡೆಗೆ, ಸೀತೆಯ ಸಲಹೆಯಂತೆ, ಕೃಷ್ಣಮೂರ್ತಿ ಪದ್ಮ ಇಬ್ಬರೂ ಭೀಮರಾಯರನ್ನು ಅವಳ ಮನೆಗೆ ಕರೆತಂದುಬಿಟ್ಟರು.

ವಿಷಮಶೀತಜ್ವರಕ್ಕೆ ಔಷಧೋಪಚಾರಕ್ಕಿಂತ ಹೆಚ್ಚಾಗಿ ಪಥ್ಯೋಪಚಾರ ಮುಖ್ಯವೆಂಬ ವಿಚಾರವನ್ನು ಸೀತೆ ಚೆನ್ನಾಗಿ ಬಲ್ಲಳು. ತನ್ನ ದಾದಿವೃತ್ತಿಯ ಅನುಭವದಿಂದ ಅವರನ್ನು ಉಳಿಸಿಕೊಳ್ಳುವೆನೆಂಬ ನಂಬುಗೆ ಅವಳಿಗಿತ್ತು. ವಿಶ್ವೇಶ್ವರಪುರದಲ್ಲಿಯೇ ಇದ್ದ ಪ್ರಸಿದ್ಧ ವೈದ್ಯರು ಕೂಡ, "ನನ್ನ ಔಷಧ ನೆಪಮಾತ್ರಕ್ಕೆ. ನಿಮ್ಮ ಉಪಚಾರದಿಂದ ಅವರು ಬದುಕಿಕೊಳ್ಳಬೇಕು" ಎಂದು ನುಡಿದಿದ್ದರು.

ಈಗ ಕೃಷ್ಣಮೂರ್ತಿ ಪದ್ಮ ಕೂಡ ಇಲ್ಲಿಯೇ ಬಂದು ಇದ್ದುಬಿಟ್ಟರು. ಸೀತೆ ತಿಂಗಳು ಪೂರ್ತ ರಜಾ ಪಡೆದು, ರೋಗಿಯ ಉಪಚಾರಕ್ಕೆ ಸೊಂಟ ಕಟ್ಟಿ ನಿಂತಳು. ಪದ್ಮ ಅಡಿಗೆಯ ಕೆಲಸವನ್ನು ನೋಡಿಕೊಳ್ಳುತ್ತಿದ್ದಳು.

ಹಾಸಿಗೆ ಬಿಟ್ಟು ಏಳಕೂಡದೆಂದು ವೈದ್ಯರು ಕಟ್ಟಪ್ಪಣೆ ಮಾಡಿದ್ದರು. ಸೀತೆ ಭೀಮರಾಯರ ಜಲಮಲಗಳನ್ನೆಲ್ಲಾ ತಾನೇ ಎತ್ತುತ್ತಿದ್ದಳು. ರೋಗಿಯ ಆರೈಕೆಯ ವಿಚಾರದಲ್ಲಿ ಅವಳಿಗೆ ವೈದ್ಯರೇ ಏನೂ ತಿಳಿವಳಿಕೆ ಕೊಡುತ್ತಿರಲಿಲ್ಲ. "ಎಲ್ಲಾ ನಿಮಗೇ ಗೊತ್ತಲ್ಲ" ಎಂದುಬಿಡುತ್ತಿದ್ದರು.

ರೋಗ ತೀರ ಪ್ರಬಲವಾಗಲಿಲ್ಲ. ಎಲ್ಲೋ ಒಂದು ದಿನ ಮಾತ್ರ ಭೀಮರಾಯರು ಏರಿದ ಜ್ವರದಲ್ಲಿ ಸ್ವಲ್ಪ ಸನ್ನಿಯಾದವರಂತೆ ಬಡಬಡಿಸಿದರು. ಅದರ ಮಾರನೆಯ ದಿನದಿಂದಲೇ ಜ್ವರ ಇಳಿಮುಖವಾಗಿ, ಆ ವಾರ ಕಳೆಯುವುದರಲ್ಲಿ ಸಂಪೂರ್ಣವಾಗಿ ಬಿಟ್ಟುಬಿಟ್ಟಿತು.

ಜ್ವರ ಪೂರ್ತಿ ನಿಂತಮೇಲೆ, ಚೇತರಿಸಿಕೊಳ್ಳುವ ಕಾಲದಲ್ಲಿ, ಒಂದು ಸಂಜೆ ಭೀಮರಾಯರು ಸೀತೆಯನ್ನು ಬಳಿಗೆ ಕರೆದರು. ಅವಳು ಹೋಗಿ ಪಕ್ಕದಲ್ಲಿ ನಿಂತಳು. "ಬಾ, ಕುಳಿತುಕೋ" ಎಂದು ಪ್ರೀತಿಯಿಂದ ನುಡಿದರು.

"ಹಿಂದೆ ನನಗೊಂದು ಸಲ ನ್ಯುಮೋನಿಯಾ ಆಗಿತ್ತು, ಸೀತೆ" ಎಂದರು

ಭೀಮರಾಯರು. ಸೀತೆ ಮೌನವಾಗಿದ್ದಳು.

"ಆಗ ನನ್ನ ಹೆಂಡತಿ ಕೂಡ ಹೀಗೆ ಉಪಚಾರ ಮಾಡಲಿಲ್ಲ."

ಸೀತೆ ನಕ್ಕು ನುಡಿದಳು: "ನಿಮ್ಮ ಹೆಂಡತಿ ನರ್ಸಾಗಿರಲಿಲ್ಲವಲ್ಲ! ಯಾರಾಗಿದ್ದರೂ ನಾನು ಹೀಗೇ ಉಪಚಾರ ಮಾಡುತ್ತಿದ್ದೆ. ಇದರಲ್ಲಿ ಹೆಚ್ಚುಗಾರಿಕೆ ಏನು ಬಂತು?"

"ಆದರೆ ನಾನು ನಿನ್ನನ್ನ ನರ್ಸು ಅಂತ ತಿಳಿದಿರಲಿಲ್ಲವಲ್ಲ. ಹೆಂಡತಿ ಅಂತಲೇ ಭಾವಿಸಿಕೊಂಡಿದ್ದೆ. ನಿನ್ನ ಮುಖ ನೋಡಿದಾಗಲೆಲ್ಲ ನಿನ್ನ ಬಿಕೋ ಅನ್ನುವ ಹಣೆ ಕಂಡು ನನಗೆ ದುಃಖವಾಗುತ್ತ ಇತ್ತು. ಈಗ ನೀನು ನನ್ನನ್ನು ಬದುಕಿಸಿಕೊಂಡಿದ್ದಿ—ಹೌದೋ, ಅಲ್ಲವೋ?"

"ಅಲ್ಲ ಅಂದರೆ ಆಗುತ್ತೆಯೆ? ದೇವರು ಉಳಿಸಿಕೊಟ್ಟ."

"ನನ್ನದೊಂದು ಕೋರಿಕೆ ಇದೆ, ನಡಸಿಕೊಡುತ್ತೀಯಾ?"

"ಏನು?"

"ಮಾತುಕೊಟ್ಟರೆ ಹೇಳುತ್ತೇನೆ...."

"ನಾನು ನಿಮ್ಮ ದಾಸಿ. ಏನು ಹೇಳಿದರೂ ನಡಸುತ್ತೇನೆ."

"ನಾನು ಕೇಳುವುದು ಬಹು ಶ್ರಮಸಾಧ್ಯವಾದ ಕೆಲಸ, ಸಾಹಸದ ಕೆಲಸ. ದೊಡ್ಡ ಹೊರೆ ಹೊರಬೇಕು."

"ಏನು ಹೇಳಿ. ಹೊರಲಾಗದ ಹೊರೆಯಾದರೆ ನಿಮ್ಮ ಸಹಾಯ ಕೇಳಿದರಾಯಿತು."

"ಹಾಗಿದ್ದರೆ ಸರಿ" ಎಂದು ಭೀಮರಾಯರು ಮಗಳನ್ನು ಕೂಗಿ ಕರೆದರು. ಅಡುಗೆಯ ಮನೆಯಲ್ಲಿ ಅದೇ ತಾನೆ ಕಾಫಿ ಕಾಸಿ ಮುಗಿಸಿದ್ದ ಪದ್ಮ ಇಬ್ಬರಿಗೂ ಕಾಫಿಯನ್ನು ತಂದಳು.

"ಪದ್ಮೂ, ಸ್ವಲ್ಪ ಕುಂಕುಮದ ಭರಣಿ ತಗೊಂಡು ಬಾರಮ್ಮ" ಎಂದರು ಭೀಮರಾಯರು.

ಸೀತೆ ತನಗೆ ಓದಿಸಿದ್ದ ಕುಂಕುಮದ ಭರಣಿಯನ್ನು ಪದ್ಮ ತಂದಳು.

"ಸೀತೆಗೆ ಕೊಡು" ಎಂದರು ಭೀಮರಾಯರು.

ಸೀತೆಗೆ ಹೆಚ್ಚಿನ ವಿವರಣೆ ಬೇಕಿರಲಿಲ್ಲ. ಭೀಮರಾಯರ ಇಂಗಿತ ಅವಳಿಗೆ ಅರ್ಥವಾಯಿತು. ಭರಣಿಯಿಂದ ಕುಂಕುಮ ತೆಗೆದುಕೊಂಡು ಇಟ್ಟು

ಕೊಂಡಳು. ಆದರೆ ಆ ಗಳಿಗೆಯಲ್ಲಿ, ಸೀತೆಯ ಮನೋನಯನದ ಮುಂದೆ ಸುಳಿದ ಚಿತ್ರ, 'ವಿರಾಗಿಣಿಯಾದ ಸೀತೆ'ಯ ಚಿತ್ರ. ಆದರೆ ಭೀಮರಾಯರ ಸಂತೋಷಾರ್ಥವಾಗಿ ಅವಳು ಕುಂಕುಮ ಇಟ್ಟುಕೊಳ್ಳಲು ನಿರಾಕರಿಸಲಿಲ್ಲ. 'ಆಗಲಿ, ಈಗ ಇವರ ಇಷ್ಟ ನಡಸುವುದೂ ನನ್ನ ಧರ್ಮವೆ' ಎಂದುಕೊಂಡಳು.

ಸಂಜೆ, ಕಚೇರಿಯಿಂದ ಹಿಂದಿರುಗಿದ ಕೃಷ್ಣಮೂರ್ತಿ, ಸೀತೆಯ ಹಣೆಯಲ್ಲಿ ಕುಂಕುಮ ಕಂಡು ಆಚ್ಚರಿಗೊಂಡ; ಸಂತಸಗೊಂಡ.

ಆಗ ಭೀಮರಾಯರು ಬಚ್ಚಲಮನೆಗೆ ಹೋಗಿದ್ದರು. ಪದ್ಮ ಅಡುಗೆಯ ಮನೆಯಲ್ಲಿದ್ದಳು.

"ಬೇಡ ಬೇಡ ಅಂದರೂ ನಿನ್ನ ಹಣೆಗೆ ಕುಂಕುಮ ಬಂತು, ಕಡೆಗೂ. ನಿನ್ನ ಹಣೆಗೆ ಚೆನ್ನಾಗಿ ಒಪ್ಪುತ್ತೆ, ಸೀತೆ. ನೀನೆಲ್ಲಿ ಇಟ್ಟುಕೊಳ್ಳುತ್ತಿದ್ದೆ, ಭೀಮರಾಯರು ಇಟ್ಟರು ಅಂತ ಕಾಣುತ್ತೆ" ಎಂದ ಕೃಷ್ಣಮೂರ್ತಿ, ಮೆಲುದನಿಯಲ್ಲಿ, ಹೇಳಲಾಗದ ನಿರಾಶೆಯ ಕಹಿ ನೆನಪಿಗೆ ಹೂಗುಳುನಗೆಯ ಸವಿ ಬೆರಸಿ.

"ಅಲ್ಲ, **ನೀನು**" ಎಂದಳು ಸೀತೆ.

ಪ್ರೇಮಗರ್ಭಿತವಾದ ಪವಿತ್ರ ಸಂಯಮ ಇಬ್ಬರ ಮುಖಗಳನ್ನೂ ಬೆಳಗುತ್ತಿತ್ತು.

ಸೇವಾದೀಕ್ಷೆಯನ್ನು ಕೈಕೊಳ್ಳುವ ಕಾಲವನ್ನು ಮುಂದಕ್ಕೆ ಹಾಕಿ, 'ಕುಂಕುಮ ಭಾಗ್ಯ'ದ ಕರ್ತವ್ಯಕ್ಕೆ ಸೀತೆ ತಲೆಬಾಗಿದಳು.

---